PUNARAAVARTANE-A social novel by Smt. Padma Shreedhar, 'Chiguru', 1248, 7th B Cross, New town, Yalahanka Upanagara, Bangaloru 560 106 ; Published by M/s Sun Publishers, 229, Bld 167, KHB Sirke Apts., Kengeri Upanagara, Bangalore 560060.

Pp. 376+4=380, Demi 1/8;
Printed on 70 GSM Maplitho paper.

First Edition: 2011



Price: Rs. 240/-

DTP: Smt. Latha

Impression: Annapurna Offset Printers, Mysore.

# ಮುನ್ನುಡಿ

ಆಡುವ ಕಂದನೊಂದು ಮನೆಯಂಗಳದಿ ಇರಲಿ ಎನ್ನುವುದು ಲಕ್ಷ್ಮೀದೇವಮ್ಮನ ಮನದಾಳದ ಬಯಕೆ. ಆದರೆ ಆ ಆಸೆಯನ್ನು ಬಾಯಿಬಿಟ್ಟು ಹೇಳಲಾಗದಷ್ಟೇ ಸ್ವಾಭಿಮಾನ, ದುರಭಿಮಾನದಿಂದ ತನ್ನ ನೇರವಾದ ಮಾತುಗಳಿಂದ ಇತರರನ್ನು ನೋಯಿಸಲು ಹಿಂಜರಿಯುತ್ತಿರಲಿಲ್ಲ. ಸಂಪ್ರದಾಯಸ್ಥಳಾದ ಈಕೆ ಪೂಜೆ ಪುನಸ್ಕಾರ ಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದರೂ, ಕೆಲವೊಮ್ಮೆ ಅಹಿತಕರ ಸನ್ನಿವೇಶಗಳು ಆಕೆಯನ್ನು ಕೆರಳಿಸುತ್ತಿದ್ದವು. ವಠಾರದ ಆರು ಮನೆಗಳ ಮಾಲೀಕಳಾಗಿದ್ದು, ಸುತ್ತಮುತ್ತ ಹತ್ತಾರು ಹೂ ಕಾಯಿಗಳನ್ನು ಬಿಡುವ ಗಿಡಗಳಿದ್ದರೂ, ಆಕೆ ಒಳಗೊಳಗೇ ತಾನು ಒಂಟಿ ಎಂದು ಕೊರಗುತ್ತಿದ್ದಳು. ಸ್ಫುರದ್ರೂಪಿಯಾದ ಆಕೆ, ನೋಡಿದವರು ಗೌರವ ಹುಟ್ಟಿಸುವಂತಿದ್ದಳು. ಆದರೆ ಹೃದಯವಂತಿಕೆ ಇರಲಿಲ್ಲ. ಜಿಪುಣತನದಿಂದ, ಒರಟು ಮಾತುಗಳಿಂದ ಎಲ್ಲರನ್ನೂ ದೂರವಿಡುತ್ತಿದ್ದ ಹೆಂಗಸು. ಎಲ್ಲರೂ ತನಗೆ ಬಾಗಿ ನಡೆಯಲಿ ಎಂದು ಬಯಸುವವಳು. ಗಂಡ ಗೋಪಾಲರಾಯ ಹೆಂಡತಿಯನ್ನು ಅನುಸರಿಸಿಕೊಂಡು ಹೋಗುವವನು. ಮಗ ಚಂದ್ರಮೌಳಿ, ದೂರವಾಗಿಯೇ ಇದ್ದವನು. ತಾಯಿ ಮಗನ ಅನುಬಂಧ ಬೆಳೆಯದೇ ಅಂತರ ಹೆಚ್ಚಾಗಿಯೇ ಹೋಯಿತು. ಮುಂದುವರೆದು, ಕಾದಂಬರಿಯ ಮುಕ್ತಾಯದವರೆಗೂ, ಹಾಗೆಯೇ ಉಳಿಯಿತೇ?

ಇದು ಕಾದಂಬರಿಯ ಕಥಾವಸ್ತು. ವಠಾರದ ಉಳಿದ ಮನೆಗಳಲ್ಲಿ ವಾಸವಾಗಿ ದ್ದವರು, ಕಾದಂಬರಿಯಲ್ಲಿ ಪೂರಕ ಪಾತ್ರಗಳಾಗಿ ರಚಿತಗೊಂಡಿದ್ದಾರೆ. ಕಾದಂಬರಿಯ ಮುಖ್ಯ ಪಾತ್ರ ಲಕ್ಷ್ಮೀದೇವಮ್ಮನೇ?

ಲಕ್ಷ್ಮೀದೇವಮ್ಮನ ಮನದಾಳದ ಮಾತು ಆಕೆ ನಂಬಿದ ದೇವಿಯನ್ನು ತಲುಪಿತೇ? ಆಕೆಯ ಪೂಜಾಫಲ ಈಡೇರಿತೇ? ಇದು ಕಾದಂಬರಿಯಲ್ಲಿ ರಚಿತಗೊಂಡ ಚಿತ್ರಣ. ಓದುಗರಿಗೆ ಇಷ್ಟವಾಗಲಿ ಎನ್ನುವ ಆಸೆ ನನ್ನದು.

ಪ್ರಕಾಶಕ ಬಳಗವರೆಲ್ಲರಿಗೂ ನನ್ನ ಧನ್ಯವಾದಗಳು.

೧-೧೧-೧೧ — *ಪದ್ಮಾ ಶ್ರೀಧರ್*

ಬೆಂಗಳೂರು

# ಪುನರಾವರ್ತನೆ

ಶ್ರೀ ತುಳಸಿ ಜಯ ತುಳಸಿ ಜಯ ಜಯ ತುಳಸೀ ।
ಶ್ರೀ ರಾಮರ ತುಳಸಿ ಶ್ರೀ ವರ ಕೃಷ್ಣ ತುಳಸೀ ॥

ಎಂದು ಎಲ್ಲರಿಗೂ ಕೇಳುವಂತೆ ಹೇಳಿಕೊಂಡು ತುಳಸೀ ಪೂಜೆಯನ್ನು ಮಾಡಲೆಂದು ಹೊರಬಂದಳು ಲಕ್ಷ್ಮೀದೇವಮ್ಮ. ಮನೆಯ ಮುಂದಿನ ಎರಡು ಮೆಟ್ಟಿಲುಗಳನ್ನಿಳಿದು, ಬಲಭಾಗದಲ್ಲಿದ್ದ ತುಳಸೀ ಕಟ್ಟೆಯ ಬಳಿಗೆ ಬಂದು ಸುತ್ತಲೂ ಕಣ್ಣು ಹಾಯಿಸಿದಳು. ದೃಷ್ಟಿ ಪಕ್ಕದಲ್ಲಿದ್ದ ಮನೆಯ ಜಗುಲಿಯ ಮೇಲಿನ ಕಂಬವ್ನು ಹಿಡಿದು ನಿಂತಿದ್ದ ಪುಟ್ಟ ಬಾಲಕನ ಮೇಲೆ ಹರಿಯಿತು. ಮುದ್ದಾದ ಮಗುವಿನ ಮುಖವನ್ನು ನೋಡಿ, ಮುಖದಲ್ಲಿ ಮಂದಹಾಸ ಮಿನುಗಿತು. ಫಳಫಳನೆ ಹೊಳೆಯುವ ಬೆಳ್ಳಿಯ ಅರಿಶಿನ ಕುಂಕುಮದ ತಟ್ಟೆಯನ್ನು ಕೆಳಗೆ ಇಟ್ಟಳು.

ಅಗಲವಾಗಿ ಎತ್ತರವಾಗಿದ್ದ ತುಳಸೀ ಕಟ್ಟೆಯ ಸುತ್ತ ಬೆಳಿಗ್ಗೆಯೇ ಗುಡಿಸಿ ಸಾರಿಸಿ, ರಂಗೋಲಿಯನ್ನೆಳೆದಿದ್ದಳು. ತುಳಸಿ ತಟ್ಟೆಯ ಮುಂದೆ ನಂದಾದೀಪಗಳನ್ನು ಬೆಳಗಿಸಿ, ತುಳಸಿಗೆ ನೀರೆರೆದು, ಕಟ್ಟೆಗೆ ಅರಿಶಿನ ಕುಂಕುಮಗಳನ್ನು ಹಚ್ಚಿ, ಮಂತ್ರಾಕ್ಷತೆ, ಹೂವುಗಳನ್ನಿಟ್ಟು ಮತ್ತೊಮ್ಮೆ ಆ ಮಗುವಿನ ಕಡೆ ನೋಡಿದಳು. ಆ ಮಗು ಅವಳ ಪೂಜೆಯನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿತ್ತು.

ಊದಿನ ಕಡ್ಡಿಯನ್ನು ಹಚ್ಚಿ, ಧೂಪಾರತಿಯನ್ನು ಎತ್ತಿ, ಪಂಚಪಾತ್ರೆಯಲ್ಲಿದ್ದ ನೀರನ್ನು ನೆಲದ ಮೇಲೆ ಚುಮುಕಿಸಿ ಮಂಡಲ ಮಾಡಿದಳು. ತುಳಸಿಯ ನೈವೇದ್ಯಕ್ಕೆಂದು ತಂದಿದ್ದ, ಸಕ್ಕರೆ ಬೆರೆಸಿದ ಹಾಲನ್ನೂ, ಹಾಗೂ ಒಣದ್ರಾಕ್ಷಿಯನ್ನು ತಟ್ಟೆಯಲ್ಲಿಟ್ಟು, ನೀರು ಚುಮುಕಿಸಿ, ದೇವಿಗೆ ಅರ್ಪಿಸಿದಳು.

ತುಪ್ಪದ ದೀಪಗಳನ್ನು ಹಚ್ಚಿ, ಆರತಿಯನ್ನೆತ್ತಿ, ಕಟ್ಟೆಯ ಸುತ್ತ ಮೂರು

ಪ್ರದಕ್ಷಿಣೆಗಳನ್ನು ಬಂದು, ಕೈ ಮುಗಿದು ಪ್ರಾರ್ಥಿಸಿ ನಮಸ್ಕರಿಸಿದಳು. ಮತ್ತೊಮ್ಮೆ ತುಳಸಿಗೆ ಅರ್ಘ್ಯವನ್ನು ಬಿಟ್ಟು, ತಲೆಯೆತ್ತಿ ಆಕಾಶದ ಕಡೆಗೆ ಮುಖ ಮಾಡಿ, ಬೆರಳುಗಳ ಸಂದಿನಿಂದ ಸೂರ್ಯ ದೇವರನ್ನು ನೋಡಿ ಕೈ ಮುಗಿದು ಪ್ರಾರ್ಥಿಸಿ, ಪೂಜೆಯನ್ನು ಮುಗಿಸಿದಳು.

ನಿಗಿ ನಿಗಿ ಹೊಳೆಯುವ ಪುಟ್ಟ ಬೆಳ್ಳಿಯ ಥಾಲಿಯಲ್ಲಿದ್ದ ಹಾಲು, ಹಾಗೂ ದ್ರಾಕ್ಷಿಯನ್ನು ಎತ್ತಿ ತಟ್ಟೆಯೊಳಗೆ ಇಡುವ ಮುನ್ನ ಮತ್ತೊಮ್ಮೆ ದೃಷ್ಟಿ ಅತ್ತ ತಿರುಗಿತು. ಆ ಪುಟ್ಟ ಬಾಲಕ ಅದೇ ಭಂಗಿಯಲ್ಲಿ, ಕಂಬವನ್ನು ಹಿಡಿದು ಅವರನ್ನೇ ನೋಡುತ್ತಿತ್ತು. ತಲೆ ತುಂಬಾ ಗುಂಗುರು ಗುಂಗುರಾಗಿ ಹರಡಿದ್ದ ಕಪ್ಪನೆಯ ಹೊಳೆಯುವ ಕೂದಲು, ಮುದ್ದಾದ, ಎಳಸಾದ ಮುಖ, ತೊಟ್ಟಿದ್ದ ಹಳದಿ ಬಣ್ಣದ ಸಿಲ್ಕಿನ ಜುಬ್ಬಾ, ಅದರ ಕೆಳಗೆ ತೊಟ್ಟಿದ್ದ ನೀಲಿ ಬಣ್ಣದ ನಿಕ್ಕರ್ರು... ಮಗು ಗಂಡು ಎಂದು ಅವಳಿಗೆ ಖಚಿತ ವಾಯಿತು.

ಸಾಕ್ಷಾತ್ ಬಾಲಕೃಷ್ಣನೇ, ತನ್ನ ತುಳಸೀ ಪೂಜೆಯನ್ನು ನೋಡಲು ಬಂದಿರುವನೆಂದು ಭಾಸವಾಯಿತು. ಬಗ್ಗಿಸಿದ್ದ ಸೊಂಟವನ್ನೆತ್ತಿ ನೆಟ್ಟಗೆ ನಿಂತು, ಆ ಮಗುವಿನತ್ತ ಕೈ ಮಾಡಿ, ಸಂಜ್ಞೆಯಲ್ಲಿ ಬಾ... ಎಂದು ಕರೆದಳು. ಅವಳ ಕರೆಗೇ ಕಾಯುತ್ತಿದ್ದನೇನೋ ಎನ್ನುವಂತೆ ಆ ಪುಟ್ಟ ಬಾಲಕ, ಜಗುಲಿಯಿಂದ ಕೆಳಗೆ ಇಳಿದು ಇವಳ ಕಡೆಗೆ ಬಂದಿತು. ಹತ್ತಿರ ಬರುತ್ತಿದ್ದಂತೆ, ಅವಳು ಸೀರೆಯನ್ನು ಮುದುರಿ ಎರಡು ಹೆಜ್ಜೆ ಹಿಂದೆ ಸರಿದು "ಅಲ್ಲೇ ನಿಂತ್ಕೋ...." ಎಂದಳು. ಬಾಲಕ ನಿಂತನು. 'ಆ ಎನ್ನು' ಎಂದು ಹೇಳಿ ಬಾಯನ್ನು ತೆರೆಸಿ, ಬಾಯಿಗೆ ಒಂದೆರಡು ಉದ್ಧರಣೆಯಷ್ಟು ಸಿಹಿ ಹಾಲನ್ನು ಹಾಕಿದಳು. .... ವಿಳ್ಳೇದೆಲೆಯ ಮೇಲೆ ಇಟ್ಟುಕೊಂಡಿದ್ದ ಒಣದ್ರಾಕ್ಷಿಯನ್ನು ಎಣಿಸಿ, ಎತ್ತಿ, ಎರಡೂ ಕೈಯನ್ನು ಹೀಗೆ ಹಿಡಿ ಎಂದು ಹೇಳಿಕೊಟ್ಟು, ಮೇಲಿನಿಂದ ಮಗುವಿನ ಕೈಗೆ ಹಾಕಿದಳು. ತಿನ್ನು ಎಂದಳು. ಆ ಹುಡುಗ ಒಂದೊಂದನ್ನೇ ಎತ್ತಿಕೊಂಡು ಬಾಯಿಗೆ ಹಾಕಿಕೊಂಡಿತು. ಲಕ್ಷ್ಮೀದೇವಮ್ಮ ತೃಪ್ತಿಯಿಂದ ಆ ದೃಶ್ಯವನ್ನೇ ನೋಡಿದಳು. ಕಣ್ಣುಗಳ ಅಂಚು ತೇವವಾಗಿತ್ತು...'ಶ್ರೀ ಕೃಷ್ಣಾರ್ಪಣಮಸ್ತು" ಎಂದು ಹೇಳಿ, ತಟ್ಟೆ ಬಟ್ಟಲು ಗಳನ್ನೆತ್ತಿಕೊಂಡು, ತಮ್ಮ ಮನೆಯ ಮುಂಬಾಗಿಲಿಗೆ ಬಂದಳು. ಹೊಸಲಿಗೆ ಅರಿಶಿನ ಕುಂಕುಮವನ್ನಿಟ್ಟು ಪೂಜಿಸಿ, ಭಕ್ತಿಯಿಂದ ಕಣ್ಣಿಗೊತ್ತಿಕೊಂಡು, ಮತ್ತೊಮ್ಮೆ ದೃಷ್ಟಿ ಯನ್ನು ಇತ್ತತಿರುಗಿಸಿದಳು. ಆ ಬಾಲಕ, ಈ ಮೊದಲು ತಾನು ನಿಂತಿದ್ದ ಜಾಗಕ್ಕೆ ಹೋಗಿ, ಕಂಬವನ್ನು ಬಳಸಿ ನಿಂತಿದ್ದ.... ಅದೇ ಭಂಗಿಯಲ್ಲಿ.

ಎಂಥಾ ಮುದ್ದಾಗಿರುವ ಮಗು ! ಒಮ್ಮೆ ಮೈಲಿಗೆಯಲ್ಲಿರುವಾಗ ಮಗುವನ್ನು ಎತ್ತಿ ಮುದ್ದಾಡಬೇಕೆಂದುಕೊಂಡು ಮನೆಯೊಳಗೆ ನಡೆದಳು. ದೊಡ್ಡಮನೆ. ಬಿಕೋ ಬಿಕೋ ಎನ್ನುತ್ತಿದೆ. ಅತ್ತಿಂದಿತ್ತ ಓಡಾಡುವ ಕಂದಮ್ಮಗಳಿಲ್ಲ, ಎಲ್ಲೆಂದರಲ್ಲಿ

ಬಿಸಾಡಿರುವ ಆಟದ ಸಾಮಾನುಗಳಿಲ್ಲ. ರಚ್ಚೆ ರಗಳೆಗಳಿಲ್ಲ. ಹಠವಿಲ್ಲ. ಚೇಷ್ಟೆ ಇಲ್ಲ.... ಕಾಲಿಗೆ ನೇತು ಬೀಳುವುದಿಲ್ಲ. ಕತ್ತಿಗೆ ಜೋತು ಬೀಳುವುದಿಲ್ಲ. ಒಳಗೆ ಅಡಿಗೆ ಮನೆಯಲ್ಲಿ ಪಾತ್ರೆ ಬಿದ್ದ ಸದ್ದು ಕೇಳಿಸಿತು. ದರಿದ್ರ ಬೆಕ್ಕು.... ಹಾಲಿನ ಪಾತ್ರೆಯನ್ನು ಬೀಳಿಸಿತೇನೋ ಎಂದುಕೊಂಡು ಅಡಿಗೆ ಮನೆಗೆ ಧಾವಿಸಿದಳು. ಒಲೆಯ ಬಳಿ ಗಂಡ ನಿಂತಿದ್ದನ್ನು ಕಂಡಳು. ಮುಖ ಅಸಹನೆಯಿಂದ ಉಬ್ಬಿತು... "ನೀವಾ! ಇಲ್ಲಿ ಏನ್ಮಾಡ್ತಿದ್ದೀರಿ !..... ಬೆಕ್ಕೇನೋ ಅಂತ ಅಂದ್ಕೊಂಡೆ..."

"ನನ್ನ ಮನೇಲಿ ನಾನು ಕದ್ದು ಮುಚ್ಚಿ ಬೆಕ್ಕಿನಂತೆ ಅಡಿಗೆ ಮನೆಗೆ ಬರಬೇಕಾಗಿದೆ. ನನ್ನ ಕರ್ಮ...' ಗೋಪಾಲಯ್ಯ ಗೊಣಗಿದ.

"ಈಗ ಏನಾಗ್ಬೇಕಿತ್ತು?"

"ಕಾಫಿ ಮಿಕ್ಕಿದೆಯೇನೋ ಅಂತ ಬಂದೆ.... ನಿನ್ನ ಮಡಿ, ಪೂಜೆ ಮುಗಿದಿದ್ರೆ ಕಾಫಿ ಬೆರೆಸ್ಕೊಡು ತಲೆ ನೋಯ್ತಿದೆ."

"ಈಗಾಗ್ಲೇ ಎರಡು ಸಲ ಕಾಫಿ ಕುಡಿದಿದ್ದಾಗಿದೆ. ಪಿತ್ತ ಹೆಚ್ಚಾಗುತ್ತೆ. ತಲೆನೋವು ಅಂತ ಬೇರೆ ಅಂತೀರಿ... ನಿಂಬೆಹಣ್ಣನ್ನು ಕುಯ್ಕೊಂಡು ಬನ್ನಿ. ಬೆಲ್ಲ ಹಾಕಿ ಶರಬತ್ತು ಮಾಡಿಕೊಡ್ತೀನಿ."

"ನಿಂಬೆ ಹಣ್ಣು ಇನ್ನು ಹೀಚು... ಬಣ್ಣ ಬಂದಿಲ್ಲ... ನಂಗೆ ಏನೂ ಬೇಡ... ನಾನು ಮಲಗಿರ್ತೀನಿ. ಹೋಗ್ಲಿ... ತುಳಸೀ ನೇವೇದ್ಯಕ್ಕೆ ದ್ರಾಕ್ಷಿ ಇಟ್ಕೊಂಡಿದ್ಯಲ್ಲ. ಅದನ್ನಾದ್ರೂ ಕೊಡು ಬಾಯಿಗೆ ಹಾಕ್ಕೊಂಡು ಚಪ್ಪರಿಸ್ತೀನಿ.

"ಅದನ್ನು ಇವತ್ತು ಮುದ್ದು ಕೃಷ್ಣಂಗೆ ಕೊಟ್ಬಿಟ್ಟೆ..."

"ಮುದ್ದು ಕೃಷ್ಣ ! ಯಾರೇ ಅವನು ! ಎಲ್ಲಿಂದ ಬಂದ ?.."

"ಯಾಕ್ರೀ ನಿಮಗೆ ಗೊತ್ತಿಲ್ವಾ ! ಆ ಸಂಗೀತ ಮೇಷ್ಟ್ರು ಇದ್ದ ಮನೆಗೆ ಹೊಸ ಸಂಸಾರ ಬಂದಿದೆಯಲ್ಲ. ಅವರ ಮನೇಲಿ ಒಂದು ಮಗು ಇದೆ. ಥೇಟ್ ಬಾಲಕೃಷ್ಣ. ಅದು ನನ್ನ ಕೈಯನ್ನೇ ನೋಡ್ತಿತ್ತು. ಕೊಟ್ಬಿಟ್ಟೆ... ತಿಂತಾ ತಿಂತಾ ಮನೆಗೆ ಹೋಯ್ತು... ಅಂಥಾ ಒಂದು ಮುದ್ದು ಕಂದ ನಮ್ಮ ಮನೇಲೂ ಇದ್ದಿದ್ರೆ.... ಅವಳ ಮಾತು ಮುಗಿಯುವ ಮೊದಲೇ ಗೋಪಾಲಯ್ಯ ಅಲ್ಲಿಂದ ಸರಿದಿದ್ದ. ಸದ್ದು ಮಾಡದೇ ಮುಂಬಾಗಿಲನ್ನು ತೆರೆದು, ಹೊರಬಂದು, ಪಕ್ಕದ ಮನೆಯತ್ತ ಬಾಗಿ ನೋಡಿದ. ಅಲ್ಲಿ ಯಾವ ಕಂದನೂ ಕಾಣಲಿಲ್ಲ. ಬಾಲಕೃಷ್ಣನೂ ಇರಲಿಲ್ಲ. "ಇವಳಿಗೆಲ್ಲೋ ಭ್ರಮೆ. ದ್ರಾಕ್ಷೀನ ತಾನೇ ತಿಂದು ಬಿಟ್ಟು ಸುಳ್ಳು ಹೇಳಿದ್ದಾಳೆ.... ವಯಸ್ಸಾಗ್ತಾ ಆಗ್ತಾ ಇವಳಿಗೂ ಬಾಯಿ ಚಪಲ. ಬೆಳಗ್ಗಿಂದ ಉಪವಾಸ ಇರ್ತಾಳೆ... ಹೊಟ್ಟೆ ಕದಿತ್ತೇನೋ... ನನಗೂ ಹೊಟ್ಟೆ ಹಸೀತಿದೆ... ಇನ್ನು ಒಲೆ ಹಚ್ಚಿಲ್ಲ. ಎಷ್ಟು ಹೊತ್ತಿಗೆ ಅಡಿಗೆ ಮಾಡ್ತಾಳೋ... ಅಕ್ಕಿ ಹುರಿಟ್ಟು ಇದ್ದರೆ ಕಲೆಸಿಕೊಡು ಅಂತ ಕೇಳ್ಬೇಕು...' ಎಂದುಕೊಂಡು ಮತ್ತೆ ಅಡಿಗೆ

ಮನೆಯ ಕಡೆಗೆ ಬಂದ.

"ಎಲ್ಲಿ ಹೊರಟು ಹೋಗಿದ್ರಿ ? ಕರೆದೂ ಕರೆದೂ ಸಾಕಾಯ್ತು... ತಗೊಳ್ಳಿ... ಪುರಿಟ್ಟಿಗೆ ಹಾಲು ಬೆಲ್ಲ ಹಾಕಿ ಕಲೆಸಿಟ್ಟಿದ್ದೀನಿ..." ಅವನ ಮುಖ ಮೊರದಗಲ ವಾಯಿತು.

"ನಾನೇ ಕೇಳೋಣ ಅಂತ ಅಂದ್ಕೊಂಡಿದ್ದೆ ಲಕ್ಷ್ಮೀ... ಇವತ್ಯಾಕೋ ಹೊಟ್ಟೆ ತುಂಬಾ ಹಸೀತಿದೆ. ಅಡಿಗೆ ಎಷ್ಟೊಟ್ಹೊತ್ತಿಗೆ ಆಗುತ್ತೇ....?"

"ಇನ್ನು ಒಲೇನೇ ಹಚ್ಚಿಲ್ಲ.... ಸ್ವಲ್ಪ ಇಜ್ಜಲನ್ನು ತುಂಬಿ ತಂದಿಡಿ... ಹಾಗೇ ಒಲೆ ಹಚ್ಚುಕ್ಕೆ ಒಂದಿಷ್ಟು ಹಳೇ ಪೇಪರ್‍ರು... ಬೇಕು."

"ಪೇಪರ್‍ರು ಎಲ್ಲಿದೆಯೇ ?..... ಸಾಮಾನಿನ ಪೊಟ್ಟಣಕ್ಕೆ ಕಟ್ಟಿದ್ದ ದಾರ ಮಾತ್ರ ಇದೆ. ಪೇಪರ್‍ರು ಇಲ್ಲ."

"ಹೋಗಿ ಒಂದಿಷ್ಟು ಹುಡಿಕ್ಕೊಂಡು ಬನ್ನಿ...."

"ಇಲ್ಲ. ಲಕ್ಷ್ಮೀ.... ನಂಗೊತ್ತು... ಇದ್ದಿದ್ರೆ ಕಾಣ್ತಿರ್‍ಲಿಲ್ವಾ?"

"ಹಾಗಾದ್ರೆ, ಈ ತಟ್ಟೆ ತಗೊಂಡು ಹೋಗಿ, ಬಚ್ಚಲು ಮನೆಯ ಒಲೆಯಿಂದ ಒಂದೆರಡು ಕೆಂಡ ಕೆದಕಿಕೊಂಡು ತನ್ನಿ..."

"ಇದನ್ನು ತಿಂದ್ಬಿಟ್ಟು ತರ್‍ಲಾ!"

"ತಿನ್ನೋಕ್ಕೆ ಏನು ಅವಸರ ?.... ಅದು ಅಲ್ಲೇ ಇರುತ್ತೆ. ಯಾರು ಮುಟ್ಟುಲ್ಲ ಕೈ ಹಾಕಿ ಬಾಯಿಗೆ ಹಾಕಿಕೊಳ್ಳುವ ಮಕ್ಕಳಿಲ್ಲ. ತಿನ್ನೊಕ್ಕೆ ಕಾಲು ಗಂಟೆ, ಕೈ ಬಾಯಿ ತೊಳ್ಕೋಳುಕ್ಕೆ ಕಾಲು ಗಂಟೆ..... ಮೊದಲು ಕೆಂಡಾನ ತನ್ನಿ. ಆ ಒಲೆಯೂ ಆರಿ ಹೋದ್ರೆ, ಈ ಒಲೆ ಹಚ್ಚುಕ್ಕೆ ಕಷ್ಟವಾಗುತ್ತೆ." ಗೋಪಾಲಯ್ಯ ಅಲ್ಯೂಮಿನಿಯಂನ ತಟ್ಟೆಯನ್ನು ಎತ್ತಿಕೊಂಡು ಬಚ್ಚಲು ಮನೆಗೆ ಬಂದ. ಕಬ್ಬಿಣದ ಸೌಟಿನಿಂದ ಬೂದಿಯನ್ನು ಕೆದಕಿದರೂ ಕಂಡವಿಲ್ಲ. ಉಫ್ ಉಫ್ ಎಂದು ಊದಿ ನೋಡಿದ. ಮುಖಕ್ಕೆ ಬಿಸಿ ಬೂದಿ ಹಾರಿತು. ಥೂ ಎಂದುಕೊಂಡು, ಭುಜದ ಮೇಲಿದ್ದ ಶಲ್ಯದಿಂದ ಒರೆಸಿಕೊಂಡು ಎದ್ದ. ಗೂಡಿನಲ್ಲಿ ಕಂಡ ಹಳೆಯ ಪೇಪರ್‍ರು ಉಂಡೆಗಳನ್ನು ಎತ್ತಿಕೊಂಡು ಅಡಿಗೆ ಮನೆಗೆ ಬಂದ.

"ಒಲೆ ಆರಿ ತಣ್ಣಗಾಗಿದೆ ಲಕ್ಷ್ಮೀ ಈ ಪೇಪರ್ ತಗೋ... ಅಲ್ಲಿತ್ತು..." ಎನ್ನುತ್ತಾ ಅವಳ ಮುಂದೆ ಎಸೆದ.

"ತೆಗೀರಿ... ತೆಗೀರಿ" ಕಿರುಚಿದಳು. " ಮೊದಲು ತೆಗೀರಿ ಇದನ್ನು. ಹರಳೆಣ್ಣೆಯ ಗಬ್ಬು ನಾತ ಒಡೀತಿದೆ... ಇದನ್ನು ಉರಿಸಿದ್ರೆ ಅಡಿಗೆ ಮನೇಲೆಲ್ಲಾ ಕಮಟು ವಾಸನೆ ತುಂಬಿಕೊಳ್ಳುತ್ತೆ... ನಿಮಗೆ ಯಾಕಾದ್ರೂ ಕೆಲಸ ಹೇಳ್ತೀನೋ... ಮೊದ್ಲು ಈ ಪುರಿಟ್ಟನ್ನು ತಿನ್ನಿ.... ನಂಗೊತ್ತು ನಿಮ್ಮ ತಲೆ ಓಡ್ತಿಲ್ಲ. ಆಮೇಲೆ ಹೋಗಿ, ಒದೆರಡು ಒಣಗಿದ ಹಲಸಿನ ಮರದ ಎಲೆಗಳನ್ನು ಆಯ್ಕೊಂಡ್ಬನ್ನಿ.... ನೋಡ್ಕೊಂಡು ತನ್ನಿ...

ಗಲೀಜು ಗಿಲೀಜು ಇದ್ದೀತು...

"ನೀನೂ ಒಂಚೂರು ತಿನ್ನೇ ಲಕ್ಷ್ಮೀ.... ನಂಗೆ ಇಷ್ಟು ಜಾಸ್ತಿ..."

"ಆ ಹ ಹಾ... ಸಾಕು ನಿಮ್ಮ ಪ್ರೀತಿ... ಒಂದು ನಿಂಬೆಹಣ್ಣಿನ ಗಾತ್ರ ಇದೆ. ಅದರಲ್ಲಿ ಎರಡು ಪಾಲು... ನಂಗೇನೂ ಬೇಡ... ತುಳಸೀ ನೇವೈದ್ಯಕ್ಕಿಟ್ಟ ಹಾಲು ಇದೆ. ಅದನ್ನು ಕುಡಿದಿರ್ತೀನಿ..." ಎನ್ನುತ್ತಾ ಎದ್ದವಳು ಮತ್ತೆ ಕೂತಳು. ಅಯ್ಯೋ ನನ್ನ ಮರೆವಿಗಿಷ್ಟು ಬೆಂಕಿ ಹಾಕ... ಥಾಲಿಲಿದ್ದ ಹಾಲನ್ನು ಆ ಮಗುವಿನ ಬಾಯಿಗೆ ಹುಯ್ದುಬಿಟ್ಟೆ... ಚಪ್ಪರಿಸ್ಕೊಂಡು ಕುಡೀತು..." ಸಂತಸದಿಂದ ಹೇಳಿದಳು.

ಹಾಲಿಗೆ ತುಂಬಾ ಸಕ್ಕರೆ ಹಾಕಿ ಬಿಟ್ಟಿದ್ದೋ ಏನೋ, ... ಆದರೆ ಈ ಹುರಿಟ್ಟಿಗೆ ರುಚಿಯೇ ಇಲ್ಲ. ಸಕ್ಕರೆ ಹಾಕುವುದನ್ನು ಮರೆತಿರಬೇಕು ನೀನು..."

"ಬೆಲ್ಲ ಹಾಕಿದ್ದೀನಿ... ಸಕ್ಕರೆ ಅಲ್ಲ, ಒಂಚೂರು ಸಿಹಿ ಕಡಿಮೆ ಆದ್ರೇನಂತೆ... ಸುಮ್ಮನೇ ತಿನ್ನಿ.... ಈ ನಡುವೆ ನಿಮಗೆ ರುಚಿ, ಚಪಲ ಹೆಚ್ಚಾಗ್ತಿದೆ...."

"ವಯಸ್ಸಾಯ್ತು, ರುಚಿ, ಚಪಲ ಹೆಚ್ಚಾದರೆ ನನ್ನ ತಪ್ಪಾ ?.... ನೀನು ಹೀಗೇ ಸದಾ ಹಂಗಿಸಿ ಅನ್ನುತ್ತಿದ್ರೆ, ನಿನ್ನನ್ನು ಮುಟ್ಟಿ ನಿನ್ನ ಮಡೀನ ಕೆಡಿಸಿಬಿಡ್ತೀನಿ ಅಷ್ಟೇ...." ಹೆದರಿಸಿದ... ವಿಚಿತ್ರವಾಗಿ ನಗುತ್ತಾ.

" ನಾನು ಮೈಲಿಗೇಲಿ ಇರುವಾಗ್ಲೇ ನನ್ನನ್ನು ಮುಟ್ಟುವ ಧೈರ್ಯ ಇಲ್ಲ.... ಇನ್ನು ಮಡೀಲಿರುವಾಗ ಮುಟ್ಟುವ ಧೈರ್ಯ ನಿಮಗೆಲ್ಲಿದೆ" ಎಂದು ಹೇಳಬೇಕೆಂದು ಕೊಂಡವಳು, ಏನನ್ನೋ ಯೋಚಿಸಿ ಸುಮ್ಮನಾದಳು.

ಂ ಂ ಂ

ಹಲಸಿನ ಮರದ ಕೆಳಗೆ ಬಿದ್ದ ಒಣಗಿದ ಎಲೆಗಳನ್ನಾ ಆಯ್ದುಕೊಂಡು ಲಕ್ಷ್ಮಿಯ ಮುಂದೆ ತಂದು ಇಟ್ಟು ಕೇಳಿದ. "ಇಷ್ಟೇ ಸಾಕೋ... ಇನ್ನು ಬೇಕೋ....?"

"ಸಧ್ಯಕ್ಕೆ ಸಾಕು. ಇನ್ನೊಂದಿಷ್ಟು ಆರಿಸಿ ತಂದಿಟ್ಟುರಿ. ಹಾಗೇ ಇದ್ದಲನ್ನು ತುಂಬಿಸಿಡಿ." ಎನ್ನತ್ತಾ ಇದ್ದಿಲು ಒಲೆಯನ್ನು ಹಚ್ಚಲು ಆರಂಭಿಸಿದಳು. ಅವನು ಎದ್ದು ಹೊರಟ. 'ಎಲ್ಲೋ ಹೋಗ್ಬಿಡ್ಬೇಡಿ. ಮುಂಬಾಗಿಲ್ಲಲ್ಲೇ ಕೂತಿರಿ. ಇನ್ನು ಹಾಲಿನವನು ಬಂದಿಲ್ಲ. ಈ ನಡುವೆ ತುಂಬಾ ತಡ ಮಾಡ್ತಾನೆ."

"ನೀನು ಹಾಲಿನವನು ಅಂತ ಅಂದ ಕೂಡ್ಲೆ ನೆನಪಿಗೆ ಬಂತು ನೋಡು ಹೊಸದಾಗಿ ಈ ವಠಾರಕ್ಕೆ ಬಂದಿದಾರಲ್ಲ ಅವರೂ ಹಾಲಿನವನನ್ನು ಗೊತ್ತು ಮಾಡ್ಕೊಡಿ ಅಂತ ಕೇಳಿದ್ರು.... ಬೇರೆ ಯಾರನ್ನಾದ್ರೂ ಗೊತ್ತು ಮಾಡ್ಕೊಂಡಿದಾರೋ ಇಲ್ವೋ ಗೊತ್ತಾಗ್ಲಿಲ್ಲ."

"ಅವನು ಬಂದಾಗ ಹೇಳಿದ್ರಾಯ್ತು. ಅದ್ಯಾವ ದೊಡ್ಡ ವಿಷಯ ? ಅಂದ್ಹಾಗೇ ಅವರ ಮನೇಲಿ ಎಷ್ಟು ಜನ ಇದಾರೋ... ವಿಪರೀತ ಜನ ಇದ್ದರೆ ಬರೀ ಗಲಾಟೆ

ಕಸಿವಿಸಿ... ಕಿರಿಕಿರಿ... ಈಗ ನೋಡಿ ಎದುರುಗಡೆ ಮನೇಲಿ ಅದೇನು ಜನ ? ಯಾವಾಗ ನೋಡಿದ್ರೂ ಎತ್ತರದ ಧ್ವನಿಯಲ್ಲಿ ಮಾತು... ಕೂಗಾಟ... ಏನುಜನವೋ?" ಆಕೆಯ ಮಾತಿಗೆ ಅವನು ಉತ್ತರಿಸಲಿಲ್ಲ. ಹೊರಗೆ ನಡೆದಿದ್ದ. ಅವನು ಮುಂಬಾಗಿಲಿಗೆ ಬರುವ ಹೊತ್ತಿಗೂ ಹಾಲಿನವನು ಬರುವ ಹೊತ್ತಿಗೂ ಸರಿ ಹೋಗಿತ್ತು. 'ಬಂದ್ಯಾ ? ಯಾಕೆ ತಡ?.... ಅಧಿಕಾರದಿಂದ ಕೇಳಿದ.

"ಏನ್ಸಾಮಿ ಹೀಗಂತೀರಿ ! ದಿನಾ ಇಷ್ಟ್ಹೊತ್ತೀಗೇ ಅಲ್ಲವ್ರಾ ಬರೋದು ?.... ಬೇಗ

"ಹಾಲಿನ ಪಾತ್ರೆ ತತ್ತನ್ನಿ ಹೊತ್ತಾಗದೆ..." ಅಲ್ಲಿಯೇ ಮರದ ಬೆಂಚಿನ ಮೇಲೆ ಇಟ್ಟಿದ್ದ ಚಿಕ್ಕ ಡಬರಿಯನ್ನು ಅವನ ಮುಂದೆ ಹಿಡಿದ. ಅವನು ಒಂದು ಪಾವು ಹಾಲನ್ನು ಅಳತೆ ಮಾಡಿ ಪಾತ್ರೆಗೆ ಹಾಕಿ ಮೇಲೆ ಒಂದಿಷ್ಟು ಕೊಸರನ್ನು ಹಾಕಿದ. "ಸಾಕ್ರಾ ? ಇನ್ನು ಬೇಕ್ರಾ?... ವಸಿ ಅಮ್ಮಾವ್ರನ್ನ ಕೇಳ್ಬುಡಿ" ಎಂದ.

"ಸಾಕು ಕಣಯ್ಯಾ.... ಬರೋದೇ ಇಷ್ಟೊತ್ತು... ಉಳಿದ ಹಾಲನ್ನೆಲ್ಲಾ ತಗೊಳ್ಳಿ ಅಂತ ಅಂತೀಯಾ ?..." ಗೇಲಿ ಮಾಡಿದ.

"ಬೇಕಿದ್ರೆ ಹನಿಸ್ಕೊಳ್ಳಿ... ಇಲ್ಬಿದ್ರೆ ಬುಡಿ... ಹಾಲು ಉಳಿದ್ರೆ ನಂಗೇನೂ ನಸ್ಟ ಇಲ್ಲ. ಹೋಟೆಲ್ಲಿಗೆ ಹಾಕ್ತೀವಿ.... ಒಂದಕ್ಕೆರಡು ದುಡ್ಡು ಕೊಡ್ತಾರೆ. ಕೈ ಮೇಲೆ ಕಾಸು ಕೊಡ್ತಾರೆ. ತಿಂಗ್ಳೆಲ್ಲಾ ಕಾಯ್ಬೇಕಾಗಿಲ್ಲ." ಅವನೂ ಮಾತಾಡಿದ.

'ಶಾನೇ ಮಾತಾಡ್ತೀಯಯ್ಯಾ ನೀನು.... ಹೋಗ್ಲಿ ಎಷ್ಟಿವೆ ಕರಾವು?"

"ಅದೆಲ್ಲಾ ನಿಮ್ಗೆ ಅರ್ಥವಾಗಕ್ಕಿಲ್ಲ ಬುಡಿ ಸ್ವಾಮಿ.... ಮಾತಾಡ್ತಾ ನಿಂತ್ರೆ ವ್ಯಾಪಾರ ಆಯ್ತಾದಾ ? ನಾನೊಂಟೇ..." ಎನ್ನುತ್ತಾ ಹಾಲಿನ ಕ್ಯಾನುಗಳನ್ನು ಸೈಕಲ್ಲಿನ ಹ್ಯಾಂಡಲ್ಲಿಗೆ ಸಿಕ್ಕಿಸಿ ಹೊರಟ.

"ಒಂದ್ನಿಮಿಷ ನಿಂತ್ಕೋ ಮಂಜಣ್ಣಾ.... ವಠಾರಕ್ಕೆ ಹೊಸ್ದಾಗಿ ಒಬ್ಬರು ಬಂದಿದ್ದಾರೆ. ಅವರಿಗೂ ಹಾಲನ್ನು ಹಾಕ್ತೀಯಾ ?.... ಪಕ್ಕದ್ದೇ ಮನೆ.... ಹೋಗಿ ಮಾತಾಡು... ಚೆನ್ನಾಗಿರೋ ಹಾಲನ್ನು ಹಾಕು. ನೀರು ಗೀರು ಬೆರೆಸ್ಬೇಡ... ಪಾಪ, ಮನೇಲಿ ಚಿಕ್ಕ ಮಕ್ಳು...." ಮೆಲುನಗೆ ನಕ್ಕು ನುಡಿದಾಗ ಅವನು ಕಿಸಿ ಕಿಸಿ ನಕ್ಕ.

"ನೀರು ಬೆರೆಸ್ದೇ ಹಾಲು ಮಾರುಕ್ಕಾಯ್ತಾದಾ ಸ್ವಾಮಿ... ಅಂಗೂ ನಾನು ಕೊಡೋಷ್ಟು ಗಟ್ಟಿ ಹಾಲನ್ನು ಯಾರೂ ಉಯ್ಯೋದಿಲ್ಲ... ನೀವೇಳಿದ್ರಿ ಅಂತ ಒಗಿ ನೋಡ್ತೀನಿ.. ಇಲ್ಬಿದ್ರೆ ಶಾನೆ ಮನೆಗಳಿವೆ. ಆಲು ಸಾಕಾಗುದಿಲ್ಲ..."ಎನ್ನತ್ತಾ ಪಕ್ಕದ ಮನೆಯತ್ತ ನಡೆದ. ಗೋಪಾಲಯ್ಯ ಒಳ ಬಂದು ಬಾಗಿಲನ್ನು ಭದ್ರಪಡಿಸಿದ.

"ಏನು ಅವಸ್ಸ್ರ ಅಷ್ಟು ಹರಟೆ ! ಎಷ್ಟೋ ಬೇಕೋ ಅಷ್ಟರಲ್ಲಿ ಇಟ್ಕೊಂಡಿರ್ಬೇಕು ಅವರನ್ನ ಹಾಲಿನ ಪಾತ್ರೇನ ಇತ್ತ ಇಡಿ. " ಉರಿಯುತ್ತಿದ್ದ ಸೀಮೆಎಣ್ಣೆಯ ಬತ್ತಿ

ಸ್ಟೌವ್ ಮೇಲೆ ಹಾಲನ್ನಾ ಕಾಯಿಸಲು ಇಟ್ಟಳು. ಗೋಪಾಲಯ್ಯ ಹಿಂಬಾಗಿಲಿಗೆ ಬಂದು ಹಿತ್ತಿಲ ಬಾಗಿಲ ಕಡೆಯಿಂದ ಹೊರಬಂದು ಪಕ್ಕದ ಮನೆಯತ್ತ ಹೆಜ್ಜೆ ಹಾಕಿದ. ಹಾಲಿನವನು ಅವರ ಮನೆಯ ಮುಂದೆ ಸೈಕಲನ್ನು ನಿಲ್ಲಿಸಿ, ಜಗುಲಿಯ ಮೇಲೆ ನಿಂತಿದ್ದ.

"ಬೆಳಿಗ್ಗೆ ಅರ್ಧಸೇರು , ರಾತ್ರಿ ಅರ್ಧಸೇರು ಹಾಲು ಹಾಕ್ಕಿಡಪ್ಪಾ.... ನೀನ್ಹೇಳೋ ಬೆಲೆ ಜಾಸ್ತಿಯಾಯ್ತು. ಸ್ವಲ್ಪ ಕಡಿಮೆ ಮಾಡ್ಕೋ...."ಮನೆಯ ಯಜಮಾನ ರಾಮರಾಯ ಹೇಳುತ್ತಿದ್ದ.

"ಎನ್ಸಾಮಿ ಇಂಗಂತೀರಿ ?ನಾನು ಹೇಳಿರೋದೇ ಕಮ್ಮಿ ಬೆಲೆ. ಇನ್ನೂ ಎಷ್ಟು ಕಮ್ಮಿ ಮಾಡ್ಕೋಣಕ್ಕಾಯ್ತದೆ ! ....ಕಳ್ಳಿ ಆಲು ಇದ್ದಂಗಿದೆ ನಾನು ಆಕೋ ಆಲು.... ಬೇಕಾದ್ರೆ ವಸಿ ಕಮ್ಮೀನೇ ಉಯಿಸ್ಕೊಳ್ಳಿ.... ರಾತ್ರಿ ನಾಗೇ ಒಂದು ಪಾವು ಆಕಿಸ್ಕೊಳ್ಳಿ....."

"ಮನೇಲಿ ಚಿಕ್ಕ ಮಕ್ಕಳಿವೆ. ರಾತ್ರಿ ಹಾಲು ಕುಡಿದು ಮಲಗುತ್ವೆ ಅಷ್ಟು ಬೇಕು."

"ಇದುವರ್ಗೂ ಯಾರತ್ರ ತಗೊಂತಿದ್ರಿ ? ...."

"ಯಾರನ್ನು ಗೊತ್ತು ಮಾಡ್ಕೊಂಡಿರ್ಲಿಲ್ಲ. ನಾನೇ ಹೋಗಿ ತರ್ತಿದ್ದೆ. ಈಗ ಹಾಲಿದ್ರೆ ಕೊಟ್ಹೋಗು.... ಇವತ್ನಿಂದ್ಲೇ ಲೆಖ್ಖ ಇಟ್ಕೋ....."

"ಪಾತ್ರೆ ತತ್ತನ್ನಿ, ಮನೇಲಿ ಚಿಕ್ಕ ಮಕ್ಳು ಅಂತೀರಾ.... ಹಾಲಿಲ್ಲ ಅಂತ ಅನ್ನಕ್ಕೆ ಆಯ್ತದಾ....?....."ಸೈಕಲ್ಲಿಗೆ ಸಿಕ್ಕಿಸಿದ್ದ ಹಾಲಿನ ಕ್ಯಾನನ್ನು ಅಳತೆಯ ಪಾವನ್ನು ತೆಗೆದುಕೊಂಡು ಜಗುಲಿಗೆ ಬಂದ. ಗೋಪಾಲಯ್ಯ ನಿಂತಲ್ಲಿಂದಲೇ ಮಾತಾಡಿದ.

"ಅಂತೂ ಇನ್ನು ಒಂದು ಮನೆ ಸಿಕ್ತು ನಿಂಗೆ .... ಶ್ರೀಮಂತ ಕಣಯ್ಯ ನೀನು ಎರಡೆರಡು ಕೈಯಲ್ಲಿ ಸಂಪಾದಿಸ್ತೀಯ... "

"ಇಷ್ಟು ಸಂಪಾದ್ನೆ ಮಾಡೋಕೆ ಎಷ್ಟು ಕಷ್ಟ ಪಡ್ಬೇಕು ಅಂತ ನಿಮ್ಗೇನು ಗೊತ್ತು ಸಾಮೀ ಅಸಾ, ಎಮ್ಮೆ ಸಾಕೋದು ಅಂದ್ರೆ ಸುಮ್ನೆ ಆಯ್ತದಾ ?..." ಗೋಣಗ್ನಾಡಿಸಿದ.

ಸರಿ ಸರಿ ಹಸು ಎಮ್ಮೆ ಸಾಕೋ ಕೆಲಸ ನಿಂಗೇ ಇರ್ಲಿ ನಾಳೆ ಬೆಳಿಗ್ಗೆ ಬೇಣ್ಣೆ ತಂದ್ಕೊಡು ಕೈ ಮೇಲೆ ಕಾಸು ಕೊಡ್ತೀನಿ. ಎಂದು ಹೇಳಿ ಅಲ್ಲೇ ನಿಂತ ಮನೆ ಯಜಮಾನ ಒಳಗಿನಿಂದ ಪಾತ್ರೆಯನ್ನು ತಗೊಂಡು ಬಂದ ಅವನ ಹಿಂದೆಯೇ ಬಂದ ಅವನ ಮಗಳು ಮಂಗಳ ಗೋಪಾಲಯ್ಯನನ್ನು ನೋಡಿ ಹಾಗೇ ನಿಂತಳು.

"ನಮಸ್ಕಾರ ಮನೆ ಮಾಲೀಕರಿಗೆ ...." ರಾಮರಾಯ ಕೈ ಮುಗಿದ.

"ಹಾಲಿನವನಿಗೆ ನಿಮ್ಮ ಪರಿಚಯ ಮಾಡಿಸೋಣ ಅಂತ ಬಂದೆ ಕಾಫಿ ತಿಂಡಿ ಆಯ್ತಾ ನಿಮ್ಮದು...." ಹಾಲಿನವನು ಅಳತೆ ಮಾಡಿ ಪಾತ್ರೆಗೆ ಹಾಲನ್ನು ಸುರಿದ

"ಒಂದ್ಸಲದ್ದು ಆಯ್ತು. ಒಳಗ್ಬನ್ನಿ ಕಾಫಿ ಕುಡಿಯೋರಂತೆ.... ಮಂಗಳಾ ಹಾಲನ್ನು ಕಾಯಿಸಿ, ಕಾಫಿ ಮಾಡಿ ತಗೊಂಡ್ಬಾ, ಎಂದು ಹೇಳಿ ಹಾಲಿನ ಪಾತ್ರೆಯನ್ನು ಅವಳ

ಕೈಗಿತ್ತ, ಇಬ್ಬರೂ ಅಲ್ಲೇ ಜಗುಲಿಯ ಮೇಲೆ ಕುಳಿತರು.

"ಮಗಳೇನು ! ಇನ್ನಾ ಮದುವೆ ಆಗಿಲ್ಲ ಅಂತ ಕಾಣುತ್ತೆ....."

'ಮದುವೆ ಗೊತ್ತಾಗಿದೆ."

'ಹುಡುಗ ನಮ್ಮವನೇ ನಮ್ಮ ಸಂಬಂಧದವನೇ ಮೈಸೂರ್ನಲ್ಲಿ ಕೆಲಸದಲ್ಲಿದಾನೆ ಇನ್ನು ಎರಡು ಮೂರು ತಿಂಗಳಿಗೆ ಮದುವೆ..."

"ಓ ಹಾಗಾದ್ರೆ ಇನ್ನು ಮುಂದೆ ತಯಾರಿ ಪ್ರಾರಂಭ ಮಾಡ್ಬೇಕು. "

"ಏನು ತಯಾರಿ ಮಾಡ್ತಿವೋ... ಆತಂಕವಾಗ್ತಿದೆ ನನ್ನಾಕೆಯ ಮೇಲೆ ಗೋಡೆ ಕುಸಿದು ಬಿದ್ದು, ಸೊಂಟದ ಮೂಳೆ ಮುರಿದಿದೆ ಎದ್ದು ಓಡಾಡುಕ್ಕೆ ಇನ್ನೂ ನಾಲ್ಕೈದು ತಿಂಗಳಾದ್ರು ಬೇಕು. ಸಹಾಯಕರು ಯಾರೂ ಇಲ್ಲ. "

'ಛೆ . ಛೆ..... ಯಾಕೆ ಹೀಗಾಯ್ತೊ ....ಸಂಗೀತದ ಮೇಷ್ಟ್ರು ಹೇಳಿದ್ರು.... ನೀವು ಬಹಳ ಆತುರದಲ್ಲಿದೀರಿ ಅಂತ... ಅದಕ್ಕೆ ಅವರ ಕೈಯಲ್ಲಿ ಬೀಗದ ಕೈ ಕೊಟ್ಟು ಊರಿಗೆ ಹೋಗಿದ್ವೆವು. ನೆನ್ನೆ ಮಧ್ಯಾಹ್ನ ಬಂದೆವು ಬಂದು ವಿಚಾರಿಸ್ಲಿಲ್ಲ ಏನೂ ತೊಂದರೆ ಇಲ್ಲ ತಾನೇ....?....

"ಎಲ್ಲಾ ಸರಿ ಮಾಡ್ಕೊಂಡ್ರೆ ಆಯ್ತು ಬಿಡಿ " ಅಷ್ಟರಲ್ಲಿ ಮಂಗಳಾ ಬಿಸಿ ಬಿಸಿ ಕಾಫಿಯನ್ನು ತಂದಿತ್ತಳು.

"ಎಷ್ಟು ಬೇಗ ಮಾಡಿ ತಂದ್ಯಲ್ಲಮ್ಮ ಭಾಳ ಚುರುಕಾಗಿದೀಯ. ಅದ್ಸರಿ ನಿಮ್ಮ ಮನೇಲಿ ಒಂದು ಪುಟ್ಟ ಮಗು ಓಡಾಡ್ತಿತ್ತು ಎಲ್ಲಿ ಕಾಣ್ತಿಲ್ಲವಲ್ಲ.

"ಮಲಗಿದಾನೆ ..." ಒಳಗಿನಿಂದ ಮಂಗಳಾ ನುಡಿದಳು.

"ಎಷ್ಟು ಮಕ್ಕಳು ?" ಕುತೂಹಲ ತುಂಬಿಕೊಂಡು, ಅಳುಕಿನಿಂದ ಕೇಳಿದ

"ಎಂಟು ಜನ....ಐದು ಹೆಣ್ಣು ಮೂರು ಗಂಡು....."

"ಓ... ಭಾರೀ ಸಂಸಾರವೇ... ಬೇರೆ ಮಕ್ಕಳು ಯಾರು ಕಾಣ್ತಿಲ್ಲ...."

"ದೊಡ್ಡ ಮಗಳಿಗೆ ಮದುವೆ ಆಗಿದೆ. ಇವಳು ಎರಡನೆಯವಳು ಉಳಿದವರು ನನ್ನ ತಮ್ಮನ ಮನೆಗೆ ಹೋಗಿದಾರೆ. .. ಕೈ ಮಗು ಇಲ್ಲಿದೆ... " ಪ್ರಶ್ನೆಗಳನ್ನು ಕೇಳಿ ಉತ್ತರವನ್ನು ಪಡೆದಿದ್ದರೂ , ಮನಸ್ಸಿಗೆ ಹಿತವೆನಿಸಿರಲಿಲ್ಲ.

"ನಾನಿನ್ನು ಬರ್ತೀವಿ... ಕಾಫಿ ತುಂಬಾ ಚೆನ್ನಾಗಿತ್ತಮ್ಮ... ಈ ಕಾಫಿಗೇ ಅಂತ್ಲೇ ಮತ್ತೆ ಮತ್ತೆ ಬರ್ತೀನಿ ತಪ್ಪು ಭಾವಿಸುಲ್ಲ ತಾನೇ !' ನಗುತ್ತಾ ಕೇಳಿದ.

"ಛೆ. ಛೆ ಎಲ್ಲಾದ್ರೂ ಉಂಟೆ ? ಇದು ನಿಮ್ಮದೇ ಮನೆ ಸಮಯದಲ್ಲಿ ಮನೆ ಕೊಟ್ಟು ಉಪಕಾರ ಮಾಡಿದೀರಿ... ಇದಕ್ಕಿಂತ ಬೇರೆ ಸಹಾಯ ಬೇಕಾ ?...."

"ನಿಮಗೆ ಏನಾದ್ರೂ ಬೇಕಾದ್ರೆ ಕೇಳಿ ರಾಮರಾಯರೇ ಮನೆ ಅನುಕೂಲವಾಗಿದೆ ಅಂತ ಅನ್ನಿಸಿದ್ರೆ ಸಾಕು.... ಅಂದ್ಹಾಗೇ ನಿಮ್ಮ ಶ್ರೀಮತಿ ಈಗ ಹೇಗಿದಾರೆ ?...."

"ಮೂಳೆ ಮುರಿದ ಜಾಗಕ್ಕೆ ಪ್ಲಾಸ್ಟರ್ ಹಾಕಿದಾರೆ. ಅಲ್ಲಾಡುವಂತಿಲ್ಲ... ಸಧ್ಯಕ್ಕೆ ಆಸ್ಪತ್ರೆಯಲ್ಲಿ ಇರ್ತಾಳೆ .... ಏನ್ಮಾಡೋರು ಎಲ್ಲಾ ಗ್ರಹಚಾರ ....."ಹಣೆಯ ಮೇಲೆ ಬೆರಳನ್ನಾಡಿಸಿಕೊಂಡ.

"ಈ ದುರಂತ ಹೇಗಾಯ್ತೋ....?"

"ಮಳೆಗಾಲದಲ್ಲಿ ಗೋಡೆ ನೆಂದು, ಬಿರುಕು ಬಿಟ್ಟಿತ್ತು... ಇವಳು ಬಟ್ಟೆ ಹರವುಕ್ಕೆ ಅಂತ ಹೋಗಿದ್ಲು. ಗೋಡೆಯ ನೆರಳಿನಲ್ಲಿ ನಿಂತು ಒದ್ದೆ ಬಟ್ಟೆಗಳನ್ನು ಹಿಂಡುತ್ತಿದ್ದಳು. ಹಸೀಗೋಡೆ ಕುಸಿದು ಬಿತ್ತು. ಗೋಡೆಗೆ ಆನಿಸಿದ್ದ ಮರದ ತೊಲೆ ಸೊಂಟದ ಮೇಲೆ ಬಿತ್ತು.... ತಕ್ಷಣವೇ ಟ್ಯಾಕ್ಸಿ ಮಾಡ್ಕೊಂಡು ಆಸ್ಪತ್ರೆಗೆ ಕರೆದ್ಕೊಂಡು ಬಂದೆವು.... ಹತ್ತು ದಿನಗಳಾದವು .... ಆಸ್ಪತ್ರೆಗೂ ಮನೆಗೂ ಓಡಾಟವಾಗಿದೆ.... ಇಲ್ಲಿ ಈ ಹುಡುಗೀದೇ ಕಾರುಬಾರು... ಇನ್ನೂ ಆ ಮನೆಯಿಂದ ಸಾಮಾನುಗಳನ್ನು ಪೂರ್ತಿ ಸಾಗಿಸಿಲ್ಲ ... ಅಲ್ಪಸ್ವಲ್ಪ ಬೆಲೆ ಬಾಳುವ ಸಾಮಾನುಗಳನ್ನು ನನ್ನ ತಮ್ಮನ ಮನೇಲಿ ಇಟ್ಟಿದೀವಿ... ಒಟ್ನಲ್ಲಿ ಗ್ರಹಚಾರ ಕಾಡ್ತಾ ಇದೆ....

"ಚಿಂತೆ ಮಾಡ್ಬೇಡಿ ರಾಮರಾಯರೇ ಎಲ್ಲಾ ಸರಿ ಹೋಗುತ್ತೆ. ನಮ್ಮ ಮನೆಗೆ ಬಂದೋರಿಗೆಲ್ಲಾ ಒಳೇದಾಗಿದೆ... ನಿಮ್ಮ ಶ್ರೀಮತಿಯವರು ಬೇಗ ಹುಶಾರಾಗ್ತಾರೆ ನೋಡ್ತಿರಿ."

'ಎಲ್ಲಾ ನಿಮ್ಮ ಬಾಯಿ ಹರಕೆಯಂತೆ ಆಗಲಿ ಯಜಮಾನ್ರೇ...ನಾನು ಬಡವ ಮಕ್ಕಳೊಂದಿಗೆ.... ಸ್ವಲ್ಪ ಬಾಡಿಗೆ ಕಡಿಮೆ ಮಾಡ್ಕೊಂಡಿದ್ರೆ.... ಅನುಕೂಲವಾಗ್ತಿತ್ತು. ರಾಮರಾಯ ಹಲ್ಲು ಗಿಂಜಿದ.

"ಇದು ನನ್ನ ಕೈಯ್ಯಲ್ಲಿಲ್ಲ ರಾಮರಾಯರೇ... ನನ್ನ ಶ್ರೀಮತಿ ಒಪ್ಪಿಕೊಂಡರೆ, ಹಿಂದಿನವರು ಕೊಡುತ್ತಿದ್ದಷ್ಟೇ ಬಾಡಿಗೆಯನ್ನು ಕೊಡಿ. ನಾನು ಮಾತಾಡಿ ತಿಳಿಸ್ತೀನಿ."

"ಹಾಗೆ ಮಾಡಿದ್ರೆ ತುಂಬಾ ಉಪಕಾರವಾಗುತ್ತೆ. ಖರ್ಚು ಜಾಸ್ತಿ ಆಗಿದೆ. ಇಲ್ದಿದ್ರೆ ನಾನು ಖಂಡಿತಾ ಕೇಳ್ತಿರ್ಲಿಲ್ಲ. "ಕೈ ಕೈ ಹಿಸುಕಿ ಸಂಕೋಚದಿಂದ ಹೇಳಿದ.

'ನನಗೂ ನಿಮ್ಮ ಕಷ್ಟ ಅರ್ಥ ಆಗುತ್ತೇ ರಾಯರೇ.... ಆದರೆ ಯಜಮಾನಿತಿ ಅವಳು... ಈ ಮನೆಗಳು ನನ್ನ ಮಾವನವರದು. ಒಡತಿ ನನ್ನ ಹೆಂಡತಿ... 'ಆತ ಮುಜುಗರ ಸಂಕೋಚಗಳಿಂದ ನುಡಿದಾಗ ಇವನು ಮೌನಿಯಾದ ಆತ ಸರಸರನ , ಮರಗಳ ಸಂದಿಯಲ್ಲಿ ನಡೆದು ತನ್ನ ಮನೆಯ ಹಿಂಬಾಗಿಲಿನಿಂದ ಒಳಕ್ಕೆ ಹೋಗಿ ಬಾಗಿಲನ್ನು ಹಾಕಿಕೊಂಡ ಹೆಂಡತಿ ಒಲೆಯ ಮುಂದೆ ಕುಳಿತು ತರಕಾರಿ ಹೆಚ್ಚುತ್ತಿದ್ದುದನ್ನು ಕಂಡ. ತಪ್ಪಲೆಯಲ್ಲಿ ಬೇಯುಕ್ಕೆ ಇಟ್ಟಿದ್ದ ಅನ್ನ ಕೊತ ಕೊತನ್ನೆ ಕುದಿಯುತ್ತಿತ್ತು. ಸ್ಟವ್ ಮೇಲಿದ್ದ ಪಾತ್ರೆಯ ನೀರು ಕುದಿಯುತ್ತಿತ್ತು. ರಾಮ ಚರಿತ್ರೆಯನ್ನು ಹೇಳಿಕೊಳ್ಳುತ್ತಾ ಕುಳಿತ್ತಿದ್ದ ಲಕ್ಷ್ಮೀದೇವಿ, ಹೆಜ್ಜೆಯ ಸದ್ದು ಕೇಳಿದೊಡನೆ ಪ್ರಶ್ನಿಸಿದಳು....

"ಎಲ್ಲಿಗೆ ಹೋಗಿದ್ರಿ ! ಸದ್ದೇ ಇರ್ಲಿಲ್ಲ... "

"ಹಿತ್ತಲ್ಲಿ ಮರದ ಕೆಳಗೆ ಬಿದ್ದಿರುವ ಎಲೆಗಳನ್ನು ಗುಡಿಸ್ತಿದ್ದೆ ಕೈ ತೊಳ್ಕೊಂಡು ಬರ್ತೀನಿ ಎಂದು ಹೇಳಿ ಬಚ್ಚಲು ಮನೆಯ ಕಡೆಗೆ ನಡೆದ.

"ಸುಮ್ನೇ ಧೂಳಿನ ಕಾಲಲ್ಲಿ ಒಳಗೆಲ್ಲಾ ಓಡಾಡ್ಬೇಡಿ. ಹೆಜ್ಜೆ ಹೆಜ್ಜೆ ಬೀಳುತ್ತೆ ಇದಿಷ್ಟನ್ನು ಗುಡಿಸಿ ಒರೆಸಿ ಮಾಡುವಷ್ಟರಲ್ಲಿ ಸೊಂಟ ಬಿದ್ದು ಹೋಗುತೆ "ಹೆಂಡತಿಯ ಗೊಣಗಾಟ ಅವನಿಗೆ ಕೇಳಿಸಲಿಲ್ಲ. ಹಂಡೆಯಲ್ಲಿದ್ದ ಬಿಸಿ ನೀರಿನಿಂದ ಕೈ ಕಾಲುಗಳನ್ನು ತೊಳೆದುಕೊಂಡು, ಹಳೆಯ ಟವೆಲ್ಲಿನಲ್ಲಿ ಒರೆಸಿಕೊಂಡು ಊಟದ ಮನೆಯನ್ನು ಹಾದು ಹಾಲಿಗೆ ಬಂದ. ಅಲ್ಲಿದ್ದ ಈಸಿ ಛೇರ್ ಮೇಲೆ ಕುಳಿತು ತಲೆಯ ಹಿಂಬದಿಗೆ ಕೈಗಳನ್ನು ಕೊಟ್ಟ. ಆತನನ್ನು ನೋಡಿದರೆ ಅಯ್ಯೋ ಅಂತ ಅನ್ನಿಸುತ್ತೆ... ಆದರೆ ಬಾಡಿಗೆ ಕಡಿಮೆ ಮಾಡು ಅಂತ ಹೆಂಡತಿಗೆ ಹೇಗೆ ಹೇಳಲಿ !.... ಮೊದಲೇ ಇವಳಿಗೆ ಧನದ ದಾಹ.... ಜೊತೆಗೆ ಜಿಪುಣತನ... ಎಂದಾದ್ರೂ ಧಾರಳವಾಗಿ ಹಾಲು ಸಕ್ಕರೆ ಹಾಕಿ ಸೊಗಸಾದ ಕಾಫಿಯನ್ನು ಮಾಡಿಕೊಟ್ಟಿದಾಳಾ !... ಎಲ್ಲಾ ಇದ್ದೂ ಬಡತನ ! ಆತ ಬಡವನಲ್ಲ ನಾನು ಬಡವ ಹೆಂಡತಿ ಹೇಳಿದಂತೆ ಕೇಳಿಕೊಂಡು ಬದುಕಿದೀನಿ.... ಮದುವೆಯಾಗಿ ನಲವತ್ತು ವರ್ಷವಾಯಿತು. ಅಂದಿನಿಂದ ಇವಳದೇ ದಬ್ಬಾಳಿಕೆ !ನನಗೆ ಸ್ವಾತಂತ್ರ್ಯವೇ ಇಲ್ಲ ಗುಲಾಮನಂತೆ ಇದೀನಿ. ನಗೆ ಪಾಟಲು. ಎಲ್ಲರೂ ನಾನು ಕೈಲಾಗದವನು, ನನಗೆ ಮಕ್ಕಳಾಗುವುದಿಲ್ಲ ಅಂತ ಭಾವಿಸಿದಾರೆ.... ನಮಗೆ ಮಕ್ಕಳಾಗದಿರುವುದಕ್ಕೆ ಇವಳೇ ಕಾರಣ....

ಮದುವೆಯಾಗಿ, ಮಾವನ ಮನೆ ಸೇರಿದ ಮೇಲೆ ಪ್ರಸ್ಥದ ದಿನ ಮಾವ ಕರೆದು ಆದೇಶ ನೀಡಿದ್ದರು. ನಮಗೆ ಒಬ್ಬಳೇ ಮಗಳು ... ಹೂವಿನಂತೆ ಬೆಳೆಸಿದೀವಿ.... ಅವಳು ನಲುಗಬಾರದು... ಬಾಡಬಾರದು... ಅವಳಿಗೆ ಹಿಂಸೆಯಾಗುವಂತೆ ವರ್ತಿಸಬೇಡ... ಅವಳಿಂದ ದೂರವೇ ಇರು... ಅಂತ ಯಾಕೆ ಹಾಗೆ ಹೇಳಿದರೋ ?

ಆಗ ತನಗೂ ಚಿಕ್ಕ ವಯಸ್ಸು ನಾಚಿಕೆ ಸಂಕೋಚಗಳಿಂದ ತಲೆಯಾಡಿಸಿದ್ದೆ. ಎದುರಾಡುವ ಧೈರ್ಯವಾಗಲೀ, ಮನಸ್ಸಿಗೆ ಬಂದಂತೆ ವರ್ತಿಸುವ ಸ್ವಾತಂತ್ರ್ಯವಾಗಲಿ ತನಗಿರಲಿಲ್ಲ. ಕೋಣೆಯೊಳಗೆ ಕಾಲಿಟ್ಟೆ ಹೊಸ ಹಾಸಿಗೆಯ ಮೇಲೆ ಹೊಸ ಹೆಂಡತಿ ಕುಳಿತಿದ್ದಳು. ಮಂದವಾದ, ಎಣ್ಣೆಯ ದೀಪದ ಬೆಳಕಿನಲ್ಲಿ ಅವಳ ಮುಖ ಕಾಣಲಿಲ್ಲ. ಅವಳ ಬಳಿಗೆ ಸಾರಬೇಕೆಂದೆನಿಸಲಿಲ್ಲ. ಅವಳೂ ಮಾತಾಡಲಿಲ್ಲ. ಏನು ಮಾತಾಡ್ತಾಳೆ!

ಅವಳೂ ಚಿಕ್ಕ ವಯಸ್ಸಿನವಳೇ ಹೂವಿನಂತೆ ಅರೆ ಬಿರಿದಿದ್ದಳು... ಅವಳ ತಂಟೆಗೆ ಹೋದರೆ, ಮಾವ ಎಲ್ಲಿ ಕೋಪಿಸಿಕೊಂಡು ಬಿಡುವರೋ ಎಂದುಕೊಂಡು, ಹೂವನ್ನು ಮುಟ್ಟಲೂ ಇಲ್ಲ ಆ ಹೂವಿಗೆ ತನಗಾಗಿ ಒಂದು ದುಂಬಿ ಮುತ್ತಿಡಲು ಕಾಯುತ್ತಿದೆ ಎಂದು ಅರಿವಾಗಲಿಲ್ಲ ಆಗ ಅವಳ ವಯಸ್ಸು ಹನ್ನೆರಡು ನನ್ನ ವಯಸ್ಸು ಇಪ್ಪತ್ತು

ಈಗ ಇವಳಿಗೆ ಐವತ್ತೆರಡು ನನಗೆ ಅರವತ್ತು.

ಈಗಲೂ ಲಕ್ಷ್ಮೀ ಲಕ್ಷಣವಾಗಿಯೇ ಇದ್ದಾಳೆ.... ಬಿಳಿಯ ಗೌರವರ್ಣ.. ಗುಂಡನೆಯ ಮುಖ ಹೊಳೆವ ಕೆನ್ನೆಗಳು ಚುರುಕಾದ ಕಣ್ಣುಗಳು ಸ್ವಲ್ಪ ಮೊಂಡು ಎನಿಸಬಹುದಾದ ಮೂಗು ಮೆಟ್ಟಿಲು ಮೆಟ್ಟಿಲಾದ ತಲೆಗೂದಲು ... ನೆರಿಗೆ ಇಲ್ಲದ ಸಮತಟ್ಟಾದ ಹಣೆ... ಎಲ್ಲವೂ ಚೆನ್ನವೇ ದಿಟವಾಗಿಯೂ ಸುಂದರಿಯೇ

ಮಧ್ಯಕ್ಕೆ ಬೈತಲೆ ತೆಗೆದು ಮುಂಗೂದಲನ್ನು ತೀಡಿ ತೀಡಿ ಬಾಚಿ, ಬಿಗಿಯಾಗಿ ಜಡೆ ಹೆಣೆಯುತ್ತಾಳೆ. ಮುಡಿಯಲ್ಲಿ ಹೂವನ್ನು ಮುಡಿಯಲೇಬೇಕು. ಬೆಲ್ಲದ ಪುಡಿಯೊಂದಿಗೆ ಕುಂಕುಮವನ್ನು ಕಲೆಸಿ, ಹಣೆಯ ಮಧ್ಯೆ, ಗುಂಡಗೆ ತಿದ್ದಿ ಇಡುವುದೇ ಒಂದು ಸೊಗಸು ... ಎಡ ಮೂಗಿನಲ್ಲಿ ಹೊಳೆವ ವಜ್ರದ ಮೂಗುಬೊಟ್ಟು... ಕಿವಿಯಲ್ಲಿ ವಜ್ರದ ಓಲೆಗಳು.... ಕತ್ತಿನಲ್ಲಿ ನಾಲ್ಕಾರು ಚಿನ್ನದ ಸರಗಳು, ಕರಿಮಣಿಯ ಮಾಂಗಲ್ಯದ ಸರ ... ಬಿಳಿಯ ಕೊರಳಿಗೆ ಶೋಭೆಯನ್ನು ತಂದಿತ್ತು. ಬಿಳಿಯ ಬಣ್ಣದ ಕುಪ್ಪುಸ, ಸ್ವಲ್ಪ ಸ್ಥೂಲವೆನಿಸುವ ದೇಹಕ್ಕೆ ಉಡುವ ಎಂಟುಗಜದ ಸೀರೆ.... ಎಲ್ಲಾ ಸೊಗಸೇ.... ಮುಖದಲ್ಲಿ ಶ್ರೀಮಂತಿಕೆಯ ಕಳೆ ಅಹಂ ತುಂಬಿರುವ ಗಾಂಭೀರ್ಯ... ಎಲ್ಲವೂ ಅವಳ ಅಪ್ಪ ಅಮ್ಮನಿಂದ ಬಂದ ಬಳುವಳಿ.!

ತಂದೆ ತಾಯಿಗೆ ಒಬ್ಬಳೇ ಮಗಳು ಮಗಳಿಗೆ ಮದುವೆ ಮಾಡಿ ಗಂಡನ ಮನೆಗೆ ಕಳಿಸುವ ಬದಲು, ಮನೆ ಅಳಿಯನನ್ನು ಹುಡುಕಿದರು. ನಾನು ಸಿಕ್ಕಿದೆ. ಬ್ರಹ್ಮ ನನಗೂ ಇವಳಿಗೂ ಗಂಟು ಹಾಕಿದ್ದ ಬಡವರ ಮನೆಯಲ್ಲಿ ಸಾಲಾಗಿ ಹುಟ್ಟಿದ ಹತ್ತು ಮಕ್ಕಳ ಪೈಕಿ ಒಬ್ಬನಾಗಿದ್ದ ನನ್ನನ್ನು ಇವರ ಮನೆಗೆ, ಲಕ್ಷ್ಮಿಯ ಗಂಡನಾಗಿ ಕಳಿಸಿದರು. ಅಂದಿನಿಂದ ನಾನು ಈ ಶ್ರೀಮಂತರ ಮನೆಯ ಅಳಿಯ, ಅವರ ಎಲ್ಲಾ ಆಸ್ತಿಗೂ ವಾರಸುದಾರಳಾದ ಏಕೈಕ ಪುತ್ರಿ ಲಕ್ಷ್ಮೀದೇವಿಯ ಪತಿ, ನನಗೆ ಬಂಧನ ! ಆಗ ಅದು ನನಗೆ ಗೊತ್ತಾಗಲೇ ಇಲ್ಲ ಈಗ ಇದನ್ನು ಕಳಚಿ ಹೋಗಲು ಸಾಧ್ಯವಿಲ್ಲ.

"ಧರ್ಮೇಚ ಅರ್ಥೇಚ ನಾತಿ ಚರಾಮಿ 'ಎಂದು ಕೈ ಹಿಡಿದು ಅಗ್ನಿ ಸಾಕ್ಷಿಯಾಗಿ ಸಪ್ತಪದಿ ತುಳಿದ ಮೇಲೆ ನಿಭಾಯಿಸಲೇ ಬೇಕಲ್ಲವೆ?...ನಾನು ಇವಳ ಧರ್ಮಪತಿ ಇವಳ ಸಂಪತ್ತಿಗೆ ಅವಳೇ ಒಡತಿ ಹಾಗೇ ಮೂರನೆಯ ಒಂದು ಪದವೂ ಇದೆ ಕಾಮೇಚ.... ಈ ವಿಷಯದಲ್ಲಿ ನಾನು ಇವಳಿಗೆ ಎಂದೂ ಮೋಸ ಮಾಡಿಲ್ಲ.... ಅವಳ ಇಷ್ಟದಂತೆಯೇ ನಡೆದುಕೊಂಡಿದ್ದೇನೆ. ಹುಣ್ಣಿಮೆ, ಅಮಾವಾಸ್ಯೆ, ಗ್ರಹಣ, ಹಬ್ಬ, ಹರಿದಿನ... ವ್ರತ, ನೋಡಿ ಅಂತ ಮಡಿ ಮಡಿಯಾಗಿದ್ದುಕೊಂಡು, ನನ್ನನ್ನೂ ದೂರ ದೂರವೇ ಇರಿಸಿದ ದಿನ ರಾತ್ರಿಗಳು ಉಂಟು... ಆದರೂ ನಾನೆಂದೂ ಇವಳಿಗೆ ಎರಡು ಬಗೆದಿಲ್ಲ... ನಾನು ಇವಳಿಗೆ ಧರ್ಮಪತಿ ಇವಳನ್ನು ಅರ್ಥಮಾಡಿಕೊಂಡಿರುವ ಪತಿ, ಹಾಗೇ ನಿಷ್ಕಾಮದಿಂದ ಸೇವೆ ಮಾಡುವ ಪತಿ.... ಇವಳಿಗೆ ಇನ್ನೇನು ಬೇಕು.? ಇವಳಿಗೆ

ಮಕ್ಕಳಾಗದಿದ್ದರೆ, ಅದು ಇವಳ ತಪ್ಪು ಆ ಸಂಕಟಕ್ಕೆ ನನ್ನ ಹತ್ತಿರ ಎಷ್ಟು ಮನೆಗೆಲಸ ಮಾಡಿಸುತ್ತಾಳೆ....?

ರಿಟೈರ್ ಆಗುವವರೆಗೂ, ಮನೆಯಲ್ಲಿ ಆಳುಕಾಳುಗಳಿದ್ದರು. ಆಗ ನಾನು ಮನೆಗೆ ಅಳಿಯನಾಗಿದ್ದೆ. ಈಗ ಮನೆಯ ಆಳಾಗಿದ್ದೇನೆ. ಮಡಿ ಮಡಿ ಅಂತ ತಾನು ಕುಳಿತಲ್ಲೇ ಕೂತು ಸುತ್ತಲಿನ ಕೆಲಸವನ್ನೆಲ್ಲಾ ನನ್ನಿಂದ ಮಾಡಿಸುತ್ತಾಳೆ....

ಇಷ್ಟು ದೊಡ್ಡ ನಿವೇಶನವನ್ನು ಇವಳ ಅಪ್ಪ ಇವಳ ಹೆಸರಿಗೆ ಬಿಟ್ಟು ಹೋಗಿದಾರೆ. ಸುಮಾರು ಮೂವತ್ತು ಸಾವಿರ ಚದರ ಅಡಿ ವಿಸ್ತೀರ್ಣ ಇರಬಹುದು. ವಿಶಾಲವಾದ ಬಂಗಲೆಯಂಥ ಮನೆಯ ಮಧ್ಯದಲ್ಲಿ ಸುತ್ತಲ್ಲೂ ಹತ್ತಾರು ಬಗೆಯ ಮರಗಳು ಬೆಳೆದು ನಿಂತಿದೆ ಮೂರು ಹಲಸಿನ ಮರಗಳಿವೆ ಐದು ಸೀಬೆ ಹಣ್ಣಿನ ಮರಗಳಿವೆ. ಎರಡು ಚಕ್ಕೋತನ ಮರ, ನಾಲ್ಕು ಮಾವಿನ ಹಣ್ಣಿನ ಮರಗಳು ಜೊತೆಗೆ ಬಲು ಅಪರೂಪವಾದ ಪಾದರಿ ಹೂವಿನ ಮರ.... ಉಳಿದಂತೆ ಸಂಪಿಗೆ ಮರ, ಮಂದಾರ ಪುಷ್ಪದ ಗಿಡ ಕಾಕಡ ಮಲ್ಲಿಗೆ ಕನಕಾಂಬರ, ತುಳಸೀಗಿಡ, ನಿಂಬೆ ಎಲ್ಲವೂ ಇವೆ... ಎಲ್ಲವೂ ಆಯಾ ಕಾಲದಲ್ಲಿ ಹೂವು ಹಣ್ಣುಗಳನ್ನು ಬಿಡುತ್ತವೆ. ಪಾದರಿ ಹೂವು ರಾಶಿ ರಾಶಿ ಉದುರಿ ಬೀಳುತ್ತವೆ. ಇವಳಿಗೆ ಅಪ್ಪನ ಆಸ್ತಿ... ಅಪ್ಯಾಯಮಾನ ! ನನಗೆ ಕೇವಲ ಕಾಲ ಕಳೆಯುವ ಸಾಧನ !

"ಹೊಟ್ಟೆಗೆ ಸಿಹಿ ಬಿದ್ದ ತಕ್ಷಣ ತೂಕಡಿಕೆ .....ಏಳಿ ಅಡಿಗೆ ಆಗಿದೆ. ಎಲೆ ಹಾಕಿ...." ಕಣ್ಣು ಮುಚ್ಚಿ ಯೋಚಿಸುತ್ತಿದ್ದವನಿಗೆ ಮುಖಕ್ಕೆ ದೂರದಿಂದ ನೀರನ್ನು ಚುಮುಕಿಸಿ ಎಚ್ಚರಿಸಿದಳು.

ಏನ್ ಮಾಡ್ತಿದೀಯಾ ! ಮುಖಕ್ಕೆ ಯಾಕೆ ನೀರನ್ನು ಎರಚಿದೆ ? ನೋಡು ಷರಟೆಲ್ಲಾ ಒದ್ದೆ ಆಯ್ತು" ಗೋಪಾಲ ರೇಗಿದ.

"ಮತ್ತಿನ್ನೇನು! ಕರೆದ್ರೂ ನಿಮಗೆ ಕೇಳಲಿಲ್ಲ, ನಾನು ಮಡೀಲಿದ್ದೆ....."

"ಮಡೀ.... ಮಡೀ... ಸದಾ ಮಡಿ.... ನಾನು ನಿನ್ನ ಗಂಡ ಕಣೇ... ಮುಟ್ಟಿ ಎಚ್ಚರಿಸಿದರೆ, ನಿನಗೆ ಮೈಲಿಗೆ ಆಗುಲ್ಲ, ನಿನ್ನ ವ್ರತ ಭಂಗ ಆಗುಲ್ಲ...." ಹಾಸ್ಯ ಬೆರೆತ ಸಿಟ್ಟಿನಿಂದ ಹೇಳಿದ.

"ಗೊತ್ತೂ, ಗೊತ್ತೂ, ನಡೀರಿ.... ಎಲೆ ಹಾಕಿ, ಬಡಿಸ್ತೀನಿ... "ಉತ್ತರ ಕೊಡುತ್ತಾ ಅವಳು ಒಳಗೆ ಹೋಗಿದ್ದಳು ಇವನು ಎದ್ದು ಕೈಯಲ್ಲೇ ಮುಖವನ್ನು ಒರೆಸಿಕೊಂಡ ಈಸಿ ಛೇರ್ ಕುಯ್ ಎಂದು ಸದ್ದು ಮಾಡಿತು. ಈ ಕುರ್ಚಿಯೂ ಹಳೇದಾಯ್ತು ಸದ್ದು ಮಾಡುತ್ತೆ ಇವಳ ಅಪ್ಪನ್ನ ನೆನೆಪಿಸ್ತಾನೆ ಇರುತ್ತೆ' ಅಂತಂದುಕೊಳ್ಳುತ್ತಾ ಅಡಿಗೆ ಮನೆಗೆ ಬಂದು ಒರೆಸಿ ಇಟ್ಟಿದ್ದ ಎರಡು ಬಾಳೆಯ ಎಲೆಗಳನ್ನು ಹರಡಿದ. ಮಾಡಿದ ಅಡುಗೆಗಳನ್ನು ಬೇರೊಂದು ಪಾತ್ರೆಗೆ ತೋಡಿ, ಬಡಿಸಲು ಸಿದ್ಧವಾಗಿಟ್ಟಿದ್ದಳು.

"ಏನು ಅಡಿಗೆ ಮಾಡಿದೀಯ ! ಲಕ್ಷ್ಮೀ ನೀರಿನ ಲೋಟವನ್ನು ಇಡುತ್ತಾ ಪ್ರಶ್ನಿಸಿದ ಅನ್ನ ಹುಳಿ.... "ಎನ್ನುತ್ತ ಬಡಿಸಿದಳು ಊಟದ ಚಾಪೆಯನ್ನು ಹಾಸಿ ಅದರ ಮೇಲೆ ಕುಳಿತು. ಲೋಟದಲ್ಲಿದ್ದ ನೀರನ್ನು ಕೈಗೆ ಹಾಕಿಕೊಂಡು, ಪರಿಷಿಂಚನೆಯನ್ನು ಮಾಡಿದ. ಅವಳು ಅವನಿಗೆ ಸಾವಧಾನವಾಗಿ ಬಡಿಸಿದಳು. ಇವನು ನಿಧಾನವಾಗಿ ಊಟ ಮಾಡಿದ. ಇಬ್ಬರ ಊಟ ಮೌನವಾಗಿ ಸಾಗಿತು.... ಒಮ್ಮೆಮ್ಮೆ ಅಡಿಗೆ ರುಚಿಯಾಗಿರುತ್ತದೆಂದು ಕೊಂಡ.

ಊಟದ ನಂತರ, ಅವಳು ಪಾತ್ರೆಗಳನ್ನು ತೆಗೆದಿಟ್ಟಳು, ಇವನು, ಉಂಡ ಎಲೆಗಳನ್ನು ಜೋಡಿಸಿ, ಕನ್ಸರ್ವೆನ್ಸಿಗೆ ಎಸೆದು, ಗೋಮೆ ಹಚ್ಚಿ ಒರಸಿದ ಇದು ಇವನ ದಿನ ನಿತ್ಯದ ಕೆಲಸ. ಇಬ್ಬರೂ ಹೊರಬಂದು ಅಂಗಳದಲ್ಲಿ ಕುಳಿತರು.

"ಲಕ್ಷ್ಮೀ ಹೊಸ್ದಾಗಿ ವಠಾರಕ್ಕೆ ಬಂದಿದ್ದಾರಲ್ಲ, ಆತನಿಗೆ ಎಂಟು ಜನ ಮಕ್ಕಳಂತೆ... ಇಲ್ಲಿ ಒಬ್ಬಳು ಮಗಳು ಜತೇಲಿ ಇದಾಳಲ್ಲ ಅವಳನ್ನು ನೋಡಿದೀಯಾ... ಎಷ್ಟು ಚೆನ್ನಾಗಿದ್ದಾಳೆ ಅಂತ...." ಪೀಠಿಕೆ ಹಾಕಿದ.

"ನೀವು ಅವರ ಜನ್ಮ ಕುಂಡಲೀನೆಲ್ಲಾ ವಿಚಾರಿಸಿ ನೋಡಿದ್ದಾಯ್ತಾ... ನಿಮಗೆ, ಆ ಹುಡುಗೀನ ನಿಮ್ಮ ಸೊಸೇನ ಮಾಡ್ಕೋಬೇಕು ಎನ್ನುವ ವಿಚಾರ ಇಲ್ಲತಾನೇ !"

"ಸಾಧ್ಯವಿಲ್ಲ, ಆ ಹುಡುಗೀಗೆ ಮದುವೆ ಗೊತ್ತಾಗಿದೆಯಂತೆ. ಇನ್ನೆರಡು ತಿಂಗಳಿಗೆ ಮದುವೆಯಂತೆ, ಪಾಪ, ಆತನ ಹೆಂಡತಿ ಸೊಂಟ ಮುರಿದ್ಕೊಂಡು ಆಸ್ಪತ್ರೇಲಿ ಮಲಗಿದಾಳಂತೆ..."

"ಪಾಪಾ.... ಆತನ ಹೆಂಡತಿಗೆ ಸೊಂಟ ಮುರಿದಿದೆ... ಅಯ್ಯೋ ಪಾಪ ಅಂತ ನಿಮಗೆ ಅನ್ನಿಸ್ತಿದೆ, ನಾನು ಸೊಂಟ ನೋಯಿಸ್ಕೊಂಡು ಇಷ್ಟು ದೊಡ್ಡ ಮನೆಯ ಕೆಲಸವನ್ನೆಲ್ಲಾ ಮಾಡ್ತೀನಲ್ಲ ನಿಮಗೆ ಅಯ್ಯೋ ಎನಿಸುಲ್ವಾ?'

"ಅನ್ನಸ್ತೆ ಕಣೇ.... ನಿನಗೆ ಕೆಲಸ ಮಾಡಿ ಅಭ್ಯಾಸವಿಲ್ಲ, ಕೆಲಸದವರನ್ನು ಇಟ್ಕೋ ಅಂತ ಎಷ್ಟು ಹೇಳ್ತೀನಿ. ನಿಂಗೆ ಅವರ ಕೆಲಸ ಸರಿ ಹೋಗುಲ್ಲ. ಇವನ್ನೆಲ್ಲಾ ಮಾರ್ಬಿಟ್ಟು ಮೈಸೂರಿಗೇ ಹೊರಟು ಹೋಗೋಣ... ಅಲ್ಲಿ ಒಂದು ಪುಟ್ಟ ಮನೆ ಮಾಡ್ಕೊಂಡು ಇರೋಣ.... ಮನೇಲೇ ಯಾರನ್ನಾದ್ರು ಇಟ್ಕೋಳ್ಳೋಣ ಏನಂತೀಯಾ'

"ಯಾವುದನ್ನು ನಾನು ಮಾರುಲ್ಲ. ಎಲ್ಲಾ ಹೀಗೇ ಇರಬೇಕು. ನಿಮಗೆ ನನ್ನ ಜತೆ ಇರೋಕೆ ಇಷ್ಟವಿದ್ದರೆ ಇರಿ. ಇಲ್ದಿದ್ರೆ ನೀವೊಬ್ಬರೇ ಮೈಸೂರಿಗೇ ಹೋಗಿ... ಅಲ್ಲಿ ನಿಮ್ಮ ಅಪ್ಪನ ಮನೆಯವರ ಜತೆ ಇರಬಹುದು. ಅದೇ ತಾನೇ ನಿಮ್ಮ ಆಸೆ..."

"ಹಾಗೇನಿಲ್ಲ"

"ಕಷ್ಟವೋ... ಸುಖವೋ... ಇದು ನಮ್ಮ ಅಪ್ಪನ ಮನೆ, ಇಲ್ಲೇ ಇರ್ತೀನಿ..."

"ಹಾಗಾದ್ರೆ ಒಂದು ಕೆಲಸ ಮಾಡೋಣ್ವಾ ! ಪಂಕಜ ಟೀಚರ್ ಇದಾರಲ್ಲ... ಆ

ಮನೇನ ಬಿಡಿಸ್ಕೊಂಡು ಅಲ್ಲಿಗೇ ವಾಸಕ್ಕೆ ಹೋಗೋಣ... ಅದು ನಮ್ಮಿಬ್ಬರಿಗೇ ಅಡಕವಾಗಿ ಚೆನ್ನಾಗಿದೆ.... ಮನೆ ಚಿಕ್ಕದಾಗಿದ್ರೆ ಕೆಲಸವೂ ಕಡಿಮೆ ಆಗುತ್ತೆ"

"ಚೆನ್ನಾಗಿದೆ ನಿಮ್ಮ ಮಾತು. ಆ ಮನೇಲಿ ನಾವ್ಯಾಕ್ರೀ ಇರೋಣ.... ಅಪ್ಪ ನನಗೋಸ್ಕರ ಈ ಬಂಗಲೇನ ಕಟ್ಟಿಸಿರೋದು... ನಾನು ಸದಾ ಕಾಲ ಈ ಮನೇಲೇ ಬಾಳಿ ಬದುಕಲಿ ಅಂತ ಅಪ್ಪನ ಆಸೆ ಇತ್ತು ಅದನ್ನು ಬಿಟ್ಟು... ಆ ಕೊಟ್ಟಿಗೇಲಿ ಇರೋದಾ?"

"ಅದೂ ಮನೆಯೇ ಕಣೇ ಲಕ್ಷ್ಮೀ ಕೊಟ್ಟಿಗೆಯಲ್ಲ. ಅಡಿಗೆ ಮನೆ ಬಚ್ಚಲು ಮನೆ ಎಲ್ಲಾ ಇದೆ... ಅಲ್ಲಿ ಆ ಟೀಚರ್ರು ಅವರ ಅಪ್ಪ ಇಬ್ಬರೂ ವಾಸ ಮಾಡ್ತಾ ಇಲ್ವಾ ?'

"ಅದನ್ನ ಮನೆ ಅಂತಾರಾ ?.... ಇದು ಮನೆ.... ಇದು...." ತಾನು ಕುಳಿತಿದ್ದ ಮೆಟ್ಟಿಲ ಮೇಲೆ ಕೈ ಊರಿ ನುಡಿದಳು. ಗೋಪಾಲಯ್ಯ ಸುಮ್ಮನಾದ. ಅವನಿಗೆ ಗೊತ್ತಿಲ್ಲದ ವಿಷಯ ಏನಿರಲಿಲ್ಲ . ಒಂದು ಕಾಲದಲ್ಲಿ ಆ ಟೀಚರ್ರು ಇದ್ದ ಮನೆ ಕೊಟ್ಟಿಗೆಯೇ ಆಗಿತ್ತು. ನಾಲಾರರ ಹಸುಗಳನ್ನು ಕರುಗಳನ್ನು ಕಟ್ಟಲು ಉಪಯೋಗಿಸುತ್ತಿದ್ದ ದನದ ಮನೆಯೇ ಅದು !

"ಬನ್ನಿ ಒಳಗ್ಹೋಗೋಣ.... ಒಂದು ಗಳಿಗೆ ಮಲಗೋಣ"

"ಇವತ್ತು ವಿಳ್ಳೇದೆಲೇನೇ ಹಾಕ್ಕೋಳ್ಳಲಿಲ್ವಲ್ಲ ನೀನು ? ತರ್ಲಾ ? ವಿಳೇದೆಲೆ ಅಡಿಕೆ ಡಬ್ಬಿ ಎಲ್ಲಿದೇ ಹೇಳು ತಂದ್ಕೊಡ್ತೀನಿ."

"ಬೇಡ. ಎಲ್ರೂ ಓಡಾಡೋ ಜಾಗದಲ್ಲಿ ಕೂತು ಎಲೆ ಅಡ್ಕೆ ಹಾಕ್ಕೊಂಡ್ರೆ ಎದೆ ಒತ್ತುತ್ತೆ. ಒಳಗೆ ಹೋಗಿಯೇ ಹಾಕ್ಕೋತೀನಿ... ನಿಮಗೂ ಬೇಕಾ?'ಎನ್ನುತ್ತಾ ಎದ್ದಳು.

"ಬೇಡ ಬಿಡು, ರಾತ್ರಿ ಊಟ ಆದ್ಮೇಲೆ ಹಾಕ್ಕೋತೀನಿ ಸಾಯಂಕಾಲ ಮಾರ್ಕೆಟ್ಟಿಗೆ ಹೋಗ್ತಾರ್ತೀನಿ.... ಎರಡು ಕವಳಿಗೆ ಎಲೆ ತರ್ಲಾ?..."

"ಮೊದಲು ಬೆಲೆ ವಿಚಾರಿಸಿ ಬೆಲೆ ಹೆಚ್ಚಾಗಿದ್ದರೆ ಒಂದು ಕವಳಿಗೆ ತನ್ನಿ ಸಾಕು.... ಭಾನುವಾರ ಸಂತೆಯಿಂದ ತಂದ್ರೆ ಆಯ್ತು. ಎಂದು ಹೇಳಿ ಒಳಗೆ ನಡೆದಳು. ಅವಳ ಹಿಂದೆಯೇ ಬಂದ ಗೋಪಾಲಯ್ಯ ಮುಂಬಾಗಿಲನ್ನು ಭದ್ರಪಡಿಸಿದ. ದೊಡ್ಡ ಚಾಪೆಯನ್ನು ಹಾಸಿ, ದಿಂಬನ್ನು ಹಾಕಿಕೊಂಡು ಅವನು ಅದರ ಮೇಲೆ ಉರುಳಿದ. ಅಡಿಗೆ ಮನೆಗೆ ಹೋಗಿ, ವಿಳ್ಳೇದೆಲೆಯನ್ನಿಡುವ ಹಿತ್ತಾಳೆಯ ಚಿಲುಕದ ಡಬ್ಬಿಯನ್ನು, ಬಣ್ಣ ಕಟ್ಟಿದ ಅಡಿಕೆಯ ಪುಡಿಯನ್ನು ಹಾಕಿಟ್ಟಿದ್ದ ಪುಟ್ಟ ಶೀಷೆಯನ್ನು ಸುಣ್ಣದ ಡಬ್ಬಿಯನ್ನು ಹಿಡಿದು ಬಂದು, ಹಾಲಿನ ಬಾಗಿಲ ಬಳಿ, ನೆಲದ ಮೇಲೆ ಕುಳಿತಳು.

"ಇಲ್ಲೇ ಚಾಪೆ ಮೇಲೆ ಕೂತ್ಕೋ ಬಾರ್ದಾ? ನೆಲದ ಮೇಲೆ ಯಾಕೆ ಕೂತ್ಕೋ ಬೇಕು? ಶೀತ ಆಗುತ್ತೆ." ಗೋಪಾಲಯ್ಯ ಹೆಂಡತಿಗೆ ಹೇಳಿದ.

"ಬರ್ತಾ ಬರ್ತಾ ನಿಮಗೆ ನನ್ನ ಚಿಂತೆ ಜಾಸ್ತಿ ಆಗಿರುವಂತೆ ಕಾಣಿಸ್ತಿದೆ. ನೀವು ನಿದ್ದೆ ಮಾಡಿ." ಎಂದು ಒರಟಾಗಿ ಹೇಳಿ, ಕಾಲು ಚಾಚಿ, ಅಡಿಕೆಪುಡಿಯನ್ನು ಬಾಯಿಗೆ ಸ್ವಲ್ಪ ಹಾಕಿಕೊಂಡು, ಎಲೆಯನ್ನು ಸೀರೆಯಿಂದ ಒರೆಸಿ ಸುಣ್ಣವನ್ನು ಸವರಿ, ಬಾಯಿಗೆ ಹಾಕಿಕೊಂಡು ಜಗಿಯತೊಡಗಿದಳು. ಗಂಡ ನಿದ್ದೆ ಹೋಗಿದ್ದ... ಒಮ್ಮೆ ಅವನ ಕಡೆ ನೋಡಿ, ತನ್ನ ಆಲೋಚನೆಗಳಲ್ಲಿ ಮುಳುಗಿದಳು.

ಅಪ್ಪ ಅಮ್ಮ ಇದ್ದಾಗ.... ಆ ಕಾಲ ಎಷ್ಟು ಚೆನ್ನಾಗಿತ್ತು ! ಬ್ರಿಟೀಷರ ಆಳ್ವಿಕೆಯ ಸಮಯ. ಅಪ್ಪ ಅವರ ಸರ್ಕಾರದ ಕಛೇರಿಯೊಂದರಲ್ಲಿ ಅತಿ ದೊಡ್ಡ ಹುದ್ದೆ ಯಲ್ಲಿದ್ದರು. ಆಗ ತಾನು ಇನ್ನು ಪುಟ್ಟ ಬಾಲಕಿ.... ತಾನು ಒಬ್ಬಳೇ. ತನಗೆ ಅಕ್ಕತಂಗಿ ಯರಿರಲಿಲ್ಲ. ಅಣ್ಣ ತಮ್ಮಂದಿರಿರಲಿಲ್ಲ. ಮನೆಯಲ್ಲಿ ಎಲ್ಲಾ ಅನುಕೂಲವೂ ಇತ್ತು. ಮನೆ ಕೆಲಸಕ್ಕೆ ಆಳುಕಾಲುಗಳಿದ್ದರು. ಅಡಿಗೆಯವರಿದ್ದರು. ದೊಡ್ಡ ಕಾರಿತ್ತು. ಡ್ರೈವರ್ ಇದ್ದ. ಮನೆಯಲ್ಲಿ ದನಕರುಗಳನ್ನು ಸಾಕಿದ್ದರು. ಎಲ್ಲಾ ಇದ್ದೂ ತಾನು ಏಕಾಂಗಿ. ತಾನು ಯಾರೊಂದಿಗೂ ಬೆರೆಯುವಂತಿರಲಿಲ್ಲ, ಸ್ಕೂಲಿಗೆ ಹೋಗಿ ಬರಲು ಒಂದು ಟಾಂಗಾ ಗಾಡಿಯು ಬರುತ್ತಿತ್ತು..... ತಾನೊಬ್ಬಳೇ ಕುಳಿತುಕೊಳ್ಳುತ್ತಿದ್ದುದು. ಬೇರೆ ಯವರು ಹತ್ತುವಂತಿರಲಿಲ್ಲ. ತನ್ನ ಹತ್ತಿರ ಎಂತೆಂಥ ಒಳ್ಳೆಯ, ಬಣ್ಣ ಬಣ್ಣದ ಜರಿಲಂಗ ಗಳಿದ್ದವು! ದಿನಕ್ಕೊಂದು ಜರಿಯ ಲಂಗವನ್ನು ಕುಪ್ಪುಸವನ್ನು ತೊಟ್ಟು, ಟಾಂಗಾದಲ್ಲಿ ಕುಳಿತು ಸ್ಕೂಲಿಗೆ ಹೋಗಿ ಬರುವ ತನ್ನನ್ನೇ ಉಳಿದ ಹುಡುಗಿಯರು ಬೆರಗು ಕಣ್ಣುಗಳಿಂದ ನೋಡುತ್ತಿದ್ದರು. ಸ್ಕೂಲಿನಸೂ ಅಷ್ಟೇ ತನಗೆ ವಿಶೇಷ ಗೌರವ. ಮೊದಲ ಬೆಂಚಿನ ಮೇಲೆ ಒಬ್ಬಳೇ ಕೂತಿರುತ್ತಿದ್ದೆ. ಅಕ್ಕಪಕ್ಕ ಯಾರೂ ಕುಳಿತುಕೊಳ್ಳುವಂತಿರ ಲಿಲ್ಲ. ಊಟದ ಸಮಯದಲ್ಲಿ ಮನೆಗೆ ಊಟಕ್ಕೆ ಬರುತ್ತಿದ್ದೆ. ಓದಿದ್ದು ಐದನೆಯ ತರಗತಿಯ ತನಕ ಮಾತ್ರ. ಮನೆಗೆ ಪಾಠ ಹೇಳಿಕೊಡಲು ಒಬ್ಬರು ಮೇಷ್ಟ್ರು ಬರುತ್ತಿದ್ದರು. ಸಂಗೀತವನ್ನು ಕಲಿಸಿಕೊಡಲು ಒಬ್ಬರು ಮಾಸ್ತರು ಬರುತ್ತಿದ್ದರು. ಹನ್ನೊಂದು ವರ್ಷದ ಹುಡುಗಿಗೆ ಎಲ್ಲವನ್ನು ಕಲಿಯುವ ಬೇರೆಯ ಆಸೆಗಿಂತ, ಎಲ್ಲವನ್ನು ಮಗಳಿಗೆ ಕಲಿಸಬೇಕೆಂಬ ಆಸೆ ಅಪ್ಪನಿಗೆ.

"ಪುಟ್ಟಿ.... ಎಲ್ಲವನ್ನು ಕಲಿತಿರಬೇಕು... ನಮ್ಮ ಮಗಳು ಜಾಣೆ ಅಂತ ಎಲ್ಲರೂ ಹೊಗಳಬೇಕು ಎಂದು ಮುದ್ದಿಸುತ್ತಿದ್ದರು. ಹನ್ನೊಂದು ವರುಷದವಳಾಗಿದ್ದಾಗ ನನ್ನ ಮದುವೆ ಗೊತ್ತಾಯಿತು. ಸ್ಕೂಲಿಗೆ ಕಳಿಸುವುದನ್ನು ನಿಲ್ಲಿಸಿಬಿಟ್ಟರು. ಮನೆಯಲ್ಲೇ ಕುಳಿತಿರುವುದು ಬೇಸರವೆನಿಸಿದರೂ, ಸ್ಕೂಲಿಗೆ ಹೋಗುವುದು ತಪ್ಪಿತಲ್ಲ ಎಂದು ಸಂತಸವಾಗಿತ್ತು.

ಗಂಡಿನ ಮನೆಯವರು ನನ್ನನ್ನು ನೋಡಲೆಂದು ಬಂದ ದಿನ, ನನಗೆ ವಿಶೇಷವಾಗಿ ಅಲಂಕಾರ ಮಾಡಿದ್ದರು. ಬಿಗಿಯಾಗಿ ಹೆಣೆದ ಐದು ಕಾಲಿನ ಜಡೆಗೆ, ಕುಚ್ಚುಕಟ್ಟಿ,

ರಿಬ್ಬನನ್ನು ಸೇರಿಸಿ ಕಟ್ಟಿದ್ದರು. ತಲೆಗೂದಲ ಅಂದವನ್ನು ಹೆಚ್ಚಿಸುವಷ್ಟು ಕಟ್ಟಿದ ಮೊಲ್ಲೆಯ ಹೂವಿನ ದಿಂಡು, ಕೊರಳಲ್ಲಿ ಅಡ್ಡಿಕೆ ಚಿನ್ನದ ಸರ, ಹರಳಿನ ಸರ... ಕಿವಿಗೆ ಹೊಳೆವ ಹರಳಿನ ಓಲೆಗಳು, ಓಲಾಡುವ ಝುಮುಕಿ... ಕೈಗೆ ಕೆಂಪು ಗಾಜಿನ ಬಳೆಗಲು, ಅದರೊಂದಿಗೇ ಚಿನ್ನದ ಬಳೆಗಳು... ಕಾಲಿಗೆ ನಡೆದರೆ ಸದ್ದು ಮಾಡುವ ಗೆಜ್ಜೆಗಳು... ಅಲಂಕಾರಗಳಿಂದ ನನ್ನ ಪುಟ್ಟ ದೇಹ ತುಂಬಿ ಹೋಗಿತ್ತು. ಹಣೆಯ ಕುಂಕುಮ, ಕಣ್ಣಿಗೆ ಹಚ್ಚಿದ ಕಾಡಿಗೆಯಿಂದ ನನ್ನನ್ನು ನಾನೇ ಗುರುತಿಸಿಕೊಳ್ಳಲಾಗದಷ್ಟು ನನ್ನ ರೂಪ ಬದಲಾಗಿತ್ತು.

ಹುಡುಗನ ಮನೆಯವರು ಒಂದು ಎಂಟು ಹತ್ತು ಜನ ಬಂದಿದ್ದರು. ಕೆಲವರು ನನಗಿಂತ ಹಿರಿಯರು, ಕೆಲವರು ನನ್ನ ಓರಗೆಯ ಹುಡುಗಿಯರೂ ಇದ್ದರು. ಅವರುಗಳು ನನ್ನಂತೆ ವಿಶೇಷವಾಗಿ ಅಲಂಕರಿಸಿಕೊಂಡಿರಲಿಲ್ಲ... ನನ್ನ ಬಳಿ ಸಾರಿ, ನನ್ನ ಒಡವೆಗಳನ್ನು ಮುಟ್ಟಿ ಮುಟ್ಟಿ ಆನಂದಿಸುತ್ತಿದ್ದರು ಉಟ್ಟಿದ್ದ ಜರತಾರಿಯ ಸಿರಿಗೆಯ ನೆರಿಗೆಯನ್ನು ಸರಿ ಮಾಡುವ ನೆಪದಲ್ಲಿ ಮುಟ್ಟುತ್ತಿದ್ದರು. ಹೊರಗೆ ಹಾಲಿನಲ್ಲಿ ಗಂಡಸರ ನಡುವೆ ಕುಳಿತಿದ್ದ ಗಂಡಿನ ಬಳಿಗೆ ಹೋಗಿ ಅವನ ಕಿವಿಯಲ್ಲಿ ಏನನ್ನೋ ಉಸುರಿ, ಕಿಸಿ ಕಿಸಿ ನಗುತ್ತಿದ್ದರಂತೆ. ಯಾಕೋ ಕಾಣೆ... ನಾನು ಅವನನ್ನು ನೋಡಲೇ ಇಲ್ಲ. ಅವನು ನನ್ನನ್ನು ನೋಡಿದನೋ ಇಲ್ಲವೋ ಗೊತ್ತಾಗಲಿಲ್ಲ. ಬಂದಿದ್ದವರಿಗೆಲ್ಲ ಭರ್ಜರಿ ಉಪಾಹಾರವಾಗಿತ್ತು... ಕಾಫಿಯ ಘಮ ಘಮ ವಾಸನೆ ಮನೆಯೆಲ್ಲಾ ತುಂಬಿತ್ತು. ಸ್ವಲ್ಪ ಹೊತ್ತು ಇದ್ದು ಅವರೆಲ್ಲಾ ವಾಪಸ್ಸು ಹೊರಟು ಹೋಗಿದ್ದರು. ಮನೆ ಬಿಕೋ ಎನಿಸಿತ್ತು. ಅವರುಗಳು ಇನ್ನು ಸ್ವಲ್ಪ ಹೊತ್ತು ಇರಬಾರದಾಗಿತ್ತೇ ಅಂತ ಅನ್ನಿಸಿತ್ತು. ಸರಸರನೆ, ಮನೆಯನ್ನು ಯಥಾ ಸ್ಥಿತಿಗೆ ತಂದುದಾಗಿತ್ತು... ಜಮಖಾನಗಳನ್ನು ಮಡಿಸಿಟ್ಟರು. ಕುರ್ಚಿಗಳನ್ನು ಹಿಂದಕ್ಕೆ ಜೋಡಿಸಿದರು. ತಿಂಡಿಯ ತಟ್ಟೆಗಳನ್ನು ಕಾಫಿಯ ಬಟ್ಟಲುಗಳನ್ನು ಚೆನ್ನಾಗಿ ತೊಳೆದು, ಒರೆಸಿ ಜೋಡಿಸಿಟ್ಟಿದ್ದಾಯಿತು. ಗಂಡಿನ ಮನೆಯವರು ತಂದಿದ್ದ, ಅರಿಸಿನ ಕುಂಕುಮ, ಹೂವು ಹಣ್ಣುಗಳನ್ನು ಅಡಿಗೆಯವರಿಗೂ, ಕೆಲಸದವರಿಗೂ ಹಂಚಿದರು. ಊರಿನಿಂದ ಬಂದಿದ್ದ ಅಜ್ಜಿ ಗೊಣಗಿತ್ತು.

"ಏನು ಅವಸವಸರವೇ ನಂಜೂ... ದೇವರ ಮುಂದೆ ಒಂದು ದಿನ ಎಲ್ಲಾ ಇರಲಿ ಬಿಡು."

"ಬೇಕಾದಷ್ಟು ಹಣ್ಣು ಹೂವನ್ನು ನಿಮ್ಮ ಮಗನೂ ತಂದಿದ್ದಾರೆ ಅತ್ತೇ.... ಅವರುಗಳಿಗೆ ಕೊಟ್ಟರೆ, ಕಮ್ಮಿ ಏನೂ ಆಗುಲ್ಲ. ಸಂತೋಷ ಪಡ್ತಾರೆ."

"ಕೊಡ್ಬೇಡ ಅಂತ ನಾನೆಲ್ಲಿ ಹೇಳ್ದೆ ಲಕ್ಷಣವಾಗಿ ದೇವರ ಮುಂದೆ ಇದ್ದುದು ಹಾಗೇ ಇದ್ದಿದ್ದರೆ ಚೆನ್ನಾಗಿರ್ತಿತ್ತು ಅಂತ ಅಂದೇ ಪುಟ್ಟೀ ಬಾರೇ ಇಲ್ಲಿ... ನಿನ್ನ ಗಂಡನ್ನ ನೋಡಿದ್ಯೇನೇ?" ಅಜ್ಜಿ ಗಲ್ಲವನ್ನು ಹಿಡಿದು ಕೇಳಿತು. ನಾನು ನಾಚಿದ್ದೆ. ನನ್ನ ಅರಗಿಣಿ...

ಮುಖ ಎಲ್ಲಾ ಹೇಗೆ ಕೆಂಪಾಯ್ತು ನೋಡು... ಆ ಹುಡ್ಗೀರೆಲ್ಲಾ ನಿನ್ನನ್ನ ಮುತ್ತಿ ಕೊಂಡಿದ್ರಲ್ಲ.. ಏನು ಕೇಳಿದ್ರು...?"

"ಏನೂ ಕೇಳ್ಲಿಲ್ಲ. ಒಡವೆಗಳನ್ನು, ಸೀರೆಯನ್ನು ಮುಟ್ಟಿ ಮುಟ್ಟಿ ನೋಡ್ತಿದ್ರು..."

"ಚಿನ್ನದ್ದೋ... ಥಳುಕಿಂದೋ ಅಂತ ನೋಡಿರಬಹುದು... ನಾರಿನ ಸೀರಿಯೋ, ರೇಶ್ಮೆ ಸೀರೆಯೋ ಅಂತ ನೋಡಿರಬಹುದು. ಬಿಡು... ನಿನಗೇನು ಕಡಿಮೆ ಮಾಡಿದ್ದಾನೆ ನಿಮ್ಮಪ್ಪ? ರಾಜಕುಮಾರಿಯ ಥರ ಸಾಕಿದ್ದಾನೆ... ನಿನ್ನನ್ನ ಮದುವೆಯಾಗೋನು ಅದೃಷ್ಟ ಮಾಡಿರಬೇಕು... ಈ ಒಡವೆ ವಸ್ತು, ಆಸ್ತಿಪಾಸ್ತಿ.... ಯಾರಿಗುಂಟು ? ಯಾರಿಗಿಲ್ಲ.... ಇವನ್ನೆಲ್ಲ ಅನುಭವಿಸೋಕೆ, ಇನ್ನೂ ನಾಲ್ಕು ಮಕ್ಕಳಾದ್ರೂ ಇರಬೇಕಾ ಗಿತ್ತು. ... ದೇವರು ಕೊಡೋನು ಕೊಟ್ಟ ಒಂದೇ ಒಂದನ್ನ ಕೊಡೋದೇ....? ಮೈ ನೆರೆದು ಬೇಗ ಗಂಡನ ಮನೆಗೆ ಹೋಗು... ಹತ್ತು ಮಕ್ಕಳ ತಾಯಿಯಾಗು.... ಮನೆ ನಂದಗೋಕುಲವಾಗಿರಲಿ.... ಅಜ್ಜಿ ಆಶೀರ್ವಾದ ಮಾಡಿತು. ನಾನು ಮತ್ತೆ ನಾಚಿ ಕೊಂಡಿದ್ದೆ...

"ಅವರ ಮನೇಲಿ ಹತ್ತು ಮಕ್ಕಳಂತೆ... ಪಾಪ ಅನುಕೂಲವಿಲ್ಲ. ಪೌರೋಹಿತ್ಯ ಮಾಡ್ಕೊಂಡು, ಹತ್ತು ಮಕ್ಕಳನ್ನು ಸಾಕಿದ್ದಾರೆ. ತಕ್ಕ ಮಟ್ಟಿಗೆ ಓದಿಸಿದ್ದಾರೆ... ಸ್ವಲ್ಪ ಬಡತನ ಸಂಪಾದನೆ ಕಡಿಮೆ... ಅದಕ್ಕೇ ಆ ಹುಡುಗನನ್ನು ಮನೆ ಅಳಿಯನನ್ನಾಗಿ ನಮಗೆ ಬಿಟ್ಟುಕೊಡುಕ್ಕೆ ಒಪ್ಕೊಂಡಿದ್ದಾರೆ..." ತಾಯಿ ಹೇಳಿದಳು.

"ಹುಶಾರು ಕಣೇ ನಂಜೂ... ಮನೆ ಅಳಿಯನಾಗಿ ಅವನು... ಅವನ ಜೊತೆ ಅವನ ಗೆಳೆಯ ಅಂತ... ಎಲ್ರೂ ಇಲ್ಲೇ ಬಂದು ವಕ್ರಿಸಿಯಾರು... ನನ್ನ ಮಗ ಸಂಪಾದಿಸಿದ್ದೆಲ್ಲಾ ವರ್ಷದಲ್ಲಿ ಸಪಾಚಟ್ಟು...? ಮೊದಲೇ ಸ್ವಲ್ಪ ಕಟ್ಟುನಿಟ್ಟಾಗಿ ಮಾತಾಡಿ."

"ಹಾಗೇನಿಲ್ಲ ಅತ್ತೇ... ಮೊದಲೇ ಮಾತಾಡಿ, ಒಪ್ಪಿಸಿದ್ದಾಗಿದೆ. ಅವರು ಒಪ್ಪಿಕೊಂಡಿದ್ದಾರೆ. ಸ್ವಭಾವ ನೋಡಿದ್ರೆ ಮರ್ಯಾದೆವಂತರ ಥರ ಕಾಣ್ತಾರೆ... ಬಂದೂ ಹೋಗಿ ಮಾಡ್ಬೇಡಿ ಅಂತ ಹೇಳುಕ್ಕೆ ಆಗುತ್ತಾ ! ಎಷ್ಟಾಗಲೀ, ಅವರು ಅವರ ಮನೆಯ ಮಗ..."

"ಮಗ ಅವರವನು, ಸೊಸೆ ಅವರವಳು... ಈ ಆಸ್ತಿಪಾಸ್ತಿ ಅವರಿಗೆ ಸೇರಿದ್ದು... ಯಾವ ಹುತ್ತದಲ್ಲಿ ಯಾವ ಹಾವಿದೆಯೋ... ಮುಖ ನೋಡಿದ್ರೆ ಗುಣ ಗೊತ್ತಾಗುತ್ಯೇ? ಯಾವುದಕ್ಕೂ ಎಚ್ಚರದಿಂದಿರಬೇಕು... ನಾನೇ ಮಗನ ಹತ್ರ ಮಾತಾಡ್ತೀನಿ..." ಎನ್ನುತ್ತಾ ಮಗನನನ್ನು ಹುಡುಕಿಕೊಂಡು ಹೊರಟಿತು ಅಜ್ಜಿ.

ಅಜ್ಜಿಗೆ ನನ್ನನ್ನ ಕಂಡರೆ ಬಹಳ ಅಕ್ಕರೆ... ಆದರೆ ನನ್ನ ಹಿಂದೆ ಮತ್ತೆ ಮಕ್ಕಳು ಹುಟ್ಟಲಿಲ್ಲವಲ್ಲ ಅನ್ನೂ ಅಸಮಾಧಾನವೂ ಇತ್ತು. ಒಬ್ಬಳೇ ಹುಡುಗಿ... ಅದೇನು

ಚೆನ್ನ ಮನೆ ತುಂಬಾ ಮಕ್ಕಳಿರಬೇಕು. ಅದಕ್ಕೇ ನೋಡು, ವಂಶ ನೋಡಿ ಹೆಣ್ಣು ತರ್ಬೇಕು ಅಂತ ಹೇಳೋದು... ನಿನ್ನ ಮಾವನಿಗೆ ಎಷ್ಟು ಮಕ್ಕಳು ಹುಟ್ಟಿದವೋ... ಉಳಿದೋಳು ಇವಳೊಬ್ಬಳೇ ನಿನ್ಹೆಂಡ್ತಿ... ಇವಳಿಗೋ... ಇದೊಂದೇ ಒಂದು. ಅಂದಕ್ಕೆ ಚಂದಕ್ಕೆ, ವಂಶಕ್ಕೆ ಎಲ್ಲಾ ಇದೊಂದೇ... ಇದಕ್ಕಾದ್ರೂ ಹತ್ತು ಮಕ್ಕಳಾಗ್ಲಿ... ಒಳ್ಳೇ ದಿನ ನೋಡಿ ಧಾರೆ ಎರೆದು ಕೊಡು... ಹಾಗೇ ಪ್ರಸ್ಥಕ್ಕೆ ಒಳ್ಳೇ ಮುಹೂರ್ತ ಇಡಿಸು..." ಅಜ್ಜಿ ಅಪ್ಪನಿಗೆ ಹೇಳಿದ್ದು ಕೇಳಿಸಿತ್ತು. ಆಗ ಪ್ರಸ್ಥ ಅಂದರೇನು ಅಂತ ತಿಳಿಯದ ವಯಸ್ಸು. ಆದರೂ ಮದುವೆಗೆ ಸಂಬಂಧಿಸಿದ್ದು ಅಂತ ತಿಳಿದು ನಾಚಿಕೆ ಆಗಿತ್ತು.

"ಅಮ್ಮಾ, ಅಜ್ಜಿ ಯಾಕೆ ಸದಾ, ಮನೆ ತುಂಬಾ ಮಕ್ಕಳಿಲ್ಲ ಅಂತ ಹೇಳ್ತಾನೇ ಇರ್ತಾರೆ ? ನನಗ್ಯಾಕಮ್ಮ ತಂಗಿ, ತಮ್ಮ ಯಾರೂ ಇಲ್ಲ." ಒಂದು ದಿನ ಕೇಳಿದ್ದಳು.

"ದೇವರು ಕೊಡ್ಲಿಲ್ಲ ಪುಟ್ಟೀ ನಾನೇನ್ಮಾಡ್ಲೀ? ತಾಯಿ ಸಪ್ಪಗೆ ನುಡಿದಿದ್ದಳು. ದೇವರು ಕೊಡುವುದರ ಜೊತೆಗೆ ದಾಂಪತ್ಯವೂ ಚೆನ್ನಾಗಿರ್ಬೇಕು ಅಂತ ಈಗ ಅರ್ಥ ಆಗಿದೆ. ಅಮ್ಮನಿಗೆ ನಾನೊಬ್ಬಳೇ ಮಗಳು. ನನಗೆ ಅದೂ ಇಲ್ಲ. ನೋಡಿ, ವ್ರತ ಹರಕೆ ಕಾಣಿಕೆ ಅಂತ ಎಲ್ಲವನ್ನೂ ಮಾಡಿಸಿದ್ದರು. ಆದರೂ ಫಲ ಮಾತ್ರ ಇಲ್ಲ. ಯಾಕೆ ಹೀಗಾಯ್ತೋ...? ಕಡೆಗೆ ಅಮ್ಮ ಬದುಕಿರುವಾಗಲೇ ಸಲಹೆಯಿತ್ತಿದ್ದಳು... ನಿನ್ನ ಗಂಡಂಗೆ ಹೇಳಿ, ಅವರನ್ನು ಒಪ್ಪಿಸಿ, ಒಂದು ಮಗುವನ್ನು ದತ್ತು ತೆಗೆದುಕೊಳ್ಳಿ... ಇಲ್ಲದಿದ್ದರೆ, ಈ ಪಾಟಿ ಆಸ್ತಿ ಪರರ ಸ್ವತ್ತು ಆಗಿ ಬಿಡುತ್ತೆ ಅಂತ."

"ಮಕ್ಕಳಾಗದಿದ್ದರೆ ಬಿಡಮ್ಮ... ಯಾರದ್ದೋ ಮಗುವನ್ನು ನಾನ್ಯಾಕೆ ಸಾಕಲಿ! ಆಸ್ತಿನೆಲ್ಲಾ ಯಾವುದಾದ್ರೂ ಆಶ್ರಮಕ್ಕೆ ದಾನ ಮಾಡಿದ್ರಾಯ್ತು." ಎಂದಿದ್ದೆ.

"ಛೀ.... ನಿಂಗೆ ಒಂಚೂರೂ ಅರ್ಥವಾಗುಲ್ಲ. ಒಂದು ಮಗೂನ ದತ್ತು ತಗೊಂಡ್ರೆ, ನಿನ್ನ ಗಂಡನಿಗೆ ನಿನ್ನ ಮೇಲಿನ ಪ್ರೀತಿ ಹೆಚ್ಚಾಗುತ್ತೆ. ನಿನಗೇ ಒಂದು ಮಗುವಾದರೂ ಆಗಬಹುದು... ಮಗು ಮನೆಗೆ ಬಂದ ಗಳಿಗೆ ಹೇಗಿರುತ್ತೋ... ಒಳ್ಳೇದಾಗಬಹುದು"

ಅಮ್ಮನ ಮಾತಿಗೆ ಇಲ್ಲ ಎನ್ನಲಾಗದೇ, ಗಂಡನೊಡನೆ ಅಮ್ಮನ ಸಂದೇಶವನ್ನು ಹೇಳಿದ್ದೆ. ಗಂಡ ಮೊದಲಿಗೆ ಒಪ್ಪಲಿಲ್ಲ. "ಬೇಡ ಲಕ್ಷ್ಮೀ... ಬೇರೆಯವರ ಮಗು ನಮ್ಮದಾಗುವುದಿಲ್ಲ... ನಾವಿಬ್ಬರೂ ಹೀಗೆ ಆರಾಮವಾಗಿರೋಣ" ಎಂದಿದ್ದರು.

"ಆಸ್ತಿಯೆಲ್ಲಾ ಪರರ ಪಾಲಾಗುತ್ತೆ ಅಂತ ಅಮ್ಮನಿಗೆ ವ್ಯಥೆ.... ಇವೆಲ್ಲಾ ಅವಳದೇ ಇವೆಲ್ಲಾ ನಮ್ಮ ಮನೆಯಲ್ಲೇ ಉಳಿಯಲಿ ಅಂತ ಅಮ್ಮನ ಆಸೆ..."

"ಸರಿ ನಿಮ್ಮಿಷ್ಟ. ತಾಯಿ ಮಗಳು ಅದೇನು ಮಾಡ್ತೀರೋ... ಮಾಡಿ. ನಾನು ಬೇಡ ಅಂತ ಅನ್ನುಲ್ಲ..." ಎಂದು ಹೇಳಿ ಒಪ್ಪಿಗೆಯನ್ನು ಕೊಟ್ಟಿದ್ದರು.

ಅಮ್ಮ ಹುಡುಕಿ ಹುಡುಕಿ ಕಡು ಬಡವರ ಮನೆಯ ಮಗುವೊಂದನ್ನು ಆಯ್ಕೆ ಮಾಡಿದಳು. ಬಡವರಿಗೆ ಬೇಡ ಅಂತಂದ್ರೂ ಸಾಲಾಗಿ ಮಕ್ಕಳನ್ನು ಕೊಡ್ತಾನೆ ಆ ಪರಮಾತ್ಮ. ಬೇಕು ಅಂತ ಅಂದೋರಿಗೆ ಕೊಡೋಕೆ ಹಿಂದೆಮುಂದೆ ನೋಡ್ತಾನೆ..." ಎಂದು ಕಟುವಾಗಿ ನುಡಿದು, ಅವರುಗಳನ್ನು ಒಪ್ಪಿಸಿದ್ದಳು. ಮುಂದೆ ನಿಮ್ಮ ಮಗ ಶ್ರೀಮಂತನಾಗಿ ಬಾಳಲಿ ಅಂತ ನಿಮಗೆ ಆಸೆ ಇಲ್ಲವೆ ?... ನಿಮ್ಮಗಳಿಗೂ ಅಲ್ಪ ಸ್ವಲ್ಪ ಸಹಾಯ ಮಾಡೋಣ ಅಂತ ಹೇಳಿದ್ದಳು... ವರ್ಷ ತುಂಬುವ ಮೊದಲೇ, ಚಂದ್ರು ನಮ್ಮ ಮನೆಯನ್ನು ಸೇರಿದ್ದ. ಶಾಸ್ತ್ರೋಕ್ತವಾಗಿ ದತ್ತು ತೆಗೆದುಕೊಂಡಿದ್ದಾಗಿತ್ತು. ಆದರೆ ಮಗುವನ್ನು ಸಾಕುವ ಕೆಲಸ ತನಗೆ ಗೊತ್ತಿಲ್ಲದ್ದರಿಂದ, ಅಮ್ಮನಿಗೆ ಆಗುತ್ತಿರಲಿಲ್ಲವಾದುದರಿಂದ, ಚಂದ್ರು, ಹೆಸರಿಗೆ ನಮ್ಮ ಮಗನಾದರೂ, ಬೆಳೆದದ್ದು ಹುಟ್ಟಿದ ಮನೆಯಲ್ಲೇ... ಆಗ ಈಗ ಅವರುಗಳು ಕರೆತಂದು ತೋರಿಸಿ, ಮಾತನ್ನಾಡಿಸಿ ಕರೆದುಕೊಂಡು ಹೋಗುತ್ತಿದ್ದರು. ಅವನಿಗೆ ಅಲ್ಲೇ ಅಭ್ಯಾಸವಾಗಿ ಹೋಗಿತ್ತು. ಸ್ಕೂಲಿಗೆ ಸೇರಿಸಲೆಂದು ಕರೆದುಕೊಂಡು ಬಂದಾಗ ನಮ್ಮಗಳ ಜೊತೆಯಲ್ಲಿ ಇರಲು ಇಷ್ಟಪಡದೇ ಹಠ ಮಾಡಿ ಅತ್ತಿದ್ದ. ಆಗ ನಿಜಕ್ಕೂ ಚಿಂತೆ ಆಗಿತ್ತು. ಹೀಗೇ ಮುಂದುವರೆದರೆ, ಇವನು ಮಗನಾಗುವುದು ಎಂದು ? ಅಂತ.

ಉಳಿದ ಮಕ್ಕಳ ಜೊತೆಯಲ್ಲಿ ಬೆಳೆದು, ಒಂಟಿಯಾಗಿ ಇರಲು ಇಷ್ಟಪಡುವುದಿಲ್ಲವೆಂದು ಯೋಚಿಸಿ, ಇವರ ತಂದೆ ಮನೆಯಲ್ಲಿ ಬಿಟ್ಟು ಓದಿಸುವುದೆಂದು ನಿರ್ಧರಿಸಿದೆವು. ಅವರುಗಳೊಡನೆ ಮಾತನಾಡಿದೆವು. ಅತ್ತೆ ಮಾವ ಒಪ್ಪಿಕೊಂಡಿದ್ದರು. ಖರ್ಚುವೆಚ್ಚ ಎಲ್ಲಾ ನಮ್ಮದೇ... ಅಲ್ಲಿಯ ಸ್ಕೂಲಿಗೆ ಸೇರಿಸಿದ್ದಾಗಿತ್ತು. ಅಣ್ಣ ತಮ್ಮಂದಿರ ಮಕ್ಕಳೊಡನೆ ಹೊಂದಿಕೊಂಡು ಇರತೊಡಗಿದ್ದುದು ಸ್ವಲ್ಪ ಮಟ್ಟಿಗೆ ಸಮಾಧಾನವಾಗಿತ್ತು. ಇವರು ಆಗಾಗ್ಗೆ ಹೋಗಿ ನೋಡಿಕೊಂಡು ಬರುತ್ತಿದ್ದರು. ದತ್ತು ತೆಗೆದುಕೊಂಡರೂ ಅವನು ನನ್ನ ಮಗನಾಗಲಿಲ್ಲ. ದೂರ ದೂರವೇ ಉಳಿದುಬಿಟ್ಟ. ತಾಯಿ ಮಗನ ಬಾಂಧವ್ಯ ಬೆಳೆಯಲಿಲ್ಲ. ನನಗೆ ಸಮಾದಾನವಿರಲಿಲ್ಲ. ಆದರೆ ಅಚ್ಚರಿಯೇನೂ ಆಗಿರಲಿಲ್ಲ.

"ಆದರೆ ಈಗ ? ಗಂಡನಿಗೆ ಅವನ ಮದುವೆಯ ಚಿಂತೆಯೇನೋ ? ಮಗನೇ ನಮಗೆ ಹತ್ತಿರವಾಗಲಿಲ್ಲ. ಇನ್ನುಸೊಸೆ ಹೇಗೆ ನಮ್ಮವಳಾದಾಳು ? ಅವನಿಗೆ ಮದುವೆ ಮಾಡುವ ಆಸೆ, ಸೊಸೆಯನ್ನು ಮನೆ ತುಂಬಿಸಿಕೊಳ್ಳುವ ಆಸೆ ನನಗಂತೂ ಇಲ್ಲ... ಆಗೋ ಕಾಲಕ್ಕೆ ಆಗುತ್ತೆ"| ಎಂದು ಆಕಳಿಸುತ್ತಾ ಹಾಗೇ ನೆಲದ ಮೇಲೆ ಉರುಳಿಕೊಂಡಳು. ಕಣ್ಣೆವೆಗಳು ಮುಚ್ಚಿಕೊಂಡವು.

○ ○ ○

"ಮಂಗಳಾ... ಬಾಗಿಲು ಹಾಕ್ಕೋ.... ಹುಶಾರು... ಮಗೂನ ಹೊರಗೆ ಬಿಡ್ಬೇಡ.

ನಾನು ಆಸ್ಪತ್ರೆಗೆ ಹೋಗಿ ನಿಮ್ಮಮ್ಮನ್ನ ನೋಡ್ಕೊಂಡು ಹಾಗೇ, ರಾಜನ ಮನೆಗೆ ಹೋಗಿ, ಮಕ್ಕಳನ್ನು ಕರ್ಕೊಂಡು ಬರ್ತೀನಿ... ಬೇಗ ಬರ್ತೀನಿ. ಕತ್ತಲಾಗೋದ್ರೊಳ್ಗೆ ಬಂದು ಬಿಡ್ತೀವಿ." ಎಂದು ಮತ್ತೆ ಮತ್ತೆ ಹೇಳಿ, ರಾಮರಾಯ ಚಪ್ಪಲಿಯನ್ನು ಮೆಟ್ಟಿ, ಛತ್ರಿಯನ್ನು ಹಿಡಿದು ಹೊರಟ. ಮಂಗಳಾ ಸ್ವಲ್ಪ ಹೊತ್ತು ಜಗುಲಿಯ ಮೇಲೆ ನಿಂತಿದ್ದು, ಒಳ ಬಂದು ಮುಂಬಾಗಿಲನ್ನು ಭದ್ರಪಡಿಸಿದಳು. ಚಿಕ್ಕ ತಮ್ಮ ಬಾಲಚಂದ್ರ ಮಲಗಿದ್ದ. ಸರಿದಿದ್ದ ಹೊದಿಕೆಯನ್ನು ಸರಿಪಡಿಸಿ, ಕಾಫಿಯ ಪಾತ್ರೆಗಳನ್ನು ಜೋಡಿಸಿಕೊಂಡು ತೊಳೆಯಲೆಂದು ಹಿಂಬಾಗಿಲನ್ನು ತೆಗೆದು ಒಗೆಯುವ ಕಲ್ಲು ಇದ್ದ ಬಳಿಗೆ ಬಂದಳು. ನಲ್ಲಿಯಲ್ಲಿ ಸಣ್ಣಗೆ ದಾರದಂತೆ ನೀರು ಬರುತ್ತಿತ್ತು. ಸ್ವಲ್ಪ ನೀರನ್ನು ತುಂಬಿಟ್ಟುಕೊಂಡು ಬಿಡೋಣ ಎಂದುಕೊಂಡು, ಒಳಗಿನಿಂದ ಬಿಂದಿಗೆಯನ್ನು ತಂದು ನಲ್ಲಿಯ ಕೆಳಗಿಟ್ಟು ಕಾಫಿಯ ಪಾತ್ರೆಯನ್ನು ಉಜ್ಜಿ ತೊಳೆಯಲು ಅನುವಾದಳು. ಅಷ್ಟರಲ್ಲಿ ಉಶ್... ಉಶ್... ಎಂದು ಯಾರೋ ಉಸಿರಿದಂತಾಯಿತು. ಬೆಚ್ಚಿ ದನಿ ಬಂದ ಕಡೆ ಕತ್ತೆತ್ತಿ ನೋಡಿದಳು. ಅವಳಿದ್ದ ಸ್ಥಳದಿಂದ ಎರಡು ಮಾರು ದೂರದಲ್ಲಿ ವ್ಯಕ್ತಿಯೊಬ್ಬ ಬೇಲಿಯಾಚೆ ಆ ಕಡೆ ನಿಂತಿದ್ದ. ಅವನೇ ಶಬ್ಧ ಮಾಡಿದ್ದವನು. ಇವಳು ನೋಡಿದ ಕೂಡಲೇ, ಅತ್ತಿತ್ತ ನೋಡಿ, ಕೈ ಸನ್ನೆ ಮಾಡಿ ಬಾ ಎಂದು ಕರೆದ... ಭೀತಿಯಿಂದ ಇವಳ ಮೈ ನಡುಗಿತು. ಬೆವರಿಳಿಯಿತು. ಎಲ್ಲವನ್ನೂ ಅಲ್ಲೇ ಬಿಟ್ಟು ಓಡಿ, ಒಳಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು. ಗೋಡೆಗೆ ಒರಗಿ ನಿಂತು ಸುಧಾರಿಸಿಕೊಂಡಳು. ಯಾರವನು ! ಅಲ್ಲಿ ಯಾಕೆ ನಿಂತಿದ್ದ ! ಯಾಕೆ ಕರೆದ... ಇದಾನೋ... ಹೋಗಿದಾನೋ... ಎಂದುಕೊಂಡು ಮುಂಬಾಗಿಲಿಗೆ ಬಂದು, ಬಾಗಿಲನ್ನು ತೆರೆದು, ಜಗುಲಿಯ ತುದಿಯಲ್ಲಿ ನಿಂತು, ಮೈ ಮುದುರಿ ನಿಂತು, ತಲೆಯನ್ನು ಮಾತ್ರ ಮುಂದೆ ತಂದು ನೋಡಿದಳು. ಆ ವ್ಯಕ್ತಿ ಅಲ್ಲಿಯೇ ನಿಂತಿದ್ದ. ಸರ್ರನೆ ಹಿಂದಕ್ಕೆ ಬಾಗಿದಳು. ಬಿಂದಿಗೆ ಅಲ್ಲೇ ಇದೆ... ಪಾತ್ರೆಗಳು ಅಲ್ಲಿಯೇ ಇವೆ... ತರುವುದು ಹೇಗೆ ?... ಹೋದರೆ ಅವನು ಮತ್ತೆ ನೋಡಿ ಕರೆದರೆ ?... ದಿಗಿಲಿನಿಂದ ಎದೆ ಹೊಡೆದುಕೊಂಡಿತ್ತು.

ಇವಳು ಜಗುಲಿಯ ಮೇಲೆ ನಿಂತಿದ್ದನ್ನು ಕಂಡು ಎದುರು ಮನೆಯ ಹುಡುಗಿ ಸೀತಾ ಇವಳ ಬಳಿಗೆ ಬಂದಳು "ಅಕ್ಕ ಯಾಕೆ ಒಬ್ರೇ ನಿಂತೀರಿ ? ಯಾರು ಇಲ್ವೇನು?" ಇಲ್ಲ ಎನ್ನುವಂತೆ ತಲೆಯಾಡಿಸಿದಳು.

"ಬರ್‍ರೀ ಮತ್ತೆ ನಮ್ಮನೀಗೆ.... ಚೌಕಾಭಾರ ಆಡೋಣು...."ಕರೆದಳು.

"ಇಲ್ಲ, ನಾನು ಬರುಲ್ಲ. ಮಗು ಮಲಗಿದೆ. ತಂದೆ ಹೊರಗೆ ಹೋಗಿದ್ದಾರೆ..."

"ಸರಿ ಹಂಗಾದ್ರೆ ಇನ್ನೊಂದಿನ ಬರೋರಂತೆ..." ಅವಳು ಹೊರಟಳು. ಇವಳು ಧೈರ್ಯವನ್ನು ಒಟ್ಟುಗೂಡಿಸಿ ಏನಾದರೂ ಕೇಳಬೇಕು ಎಂಬಂತೆ ಕೇಳಿದಳು.

"ನಿನ್ನ ಹೆಸರೇನು...? ಓದ್ತಾ ಇದ್ದೀಯಾ?..."

"ನನ್ಹೆಸ್ರು ಸೀತಾ... ಅಂತ್ರೀ ನಾನು ಎಂಟನೇ ತರಗತೀಲಿ ಓದ್ತಾ ಇದೀನಿ... ನೀವು? ಮನೆ ಮಂದಿ ಎಲ್ಲಿ ಹೋಗ್ಯಾರಾ?" ಒಳಗೆ ಕಣ್ಣು ಹಾಯಿಸಿದಳು.

"ಈಗ ಯಾರೂ ಇಲ್ಲ. ಎಲ್ಲಾ ಹೊರಗೆ ಹೋಗಿದ್ದಾರೆ. ನಂಗೆ ಒಂದು ಸಹಾಯ ಮಾಡ್ತೀಯಾ ?... ಬಿಂದಿಗೆ ತುಂಬಿ ನೀರು ಸುರಿದು ಹೋಗ್ತಿದೆ. ನಲ್ಲೀನ ನಿಲ್ಲಿಸ್ಬಿಡು... ಹಾಂಗೇ ಆ ಪಾತ್ರೆಗಳನ್ನು ತಂದು ಒಳಗೆ ಇಡ್ತೀಯಾ?..."

"ಯಾಕಕ್ಕಾ...? ಒಳಗಿಲ್ಲೇನು?..." ಅವಳು ಮುಗ್ಧತೆಯಿಂದ ಕೇಳಿದಳು...

"ಇಲ್ಲ... ಆ.... ಹೌದು ಎಂದು ತೊದಲಿದಳು.

"ಒಬ್ಬಾಕಿನೇ ಇದೀರಿ ನಂಗೆ ಏನು ಕೆಲ್ಸ ಬೇಕಾದ್ರೂ ಹೇಳ್ರೀ ಮಾಡ್ಕೊಡ್ತೀನಿ."ಎನ್ನುತ್ತಾ, ಹಿತ್ತಲ ನಲ್ಲಿಯ ಬಳಿಗೆ ಹೋಗಿ ನೀರನ್ನು ನಿಲ್ಲಿಸಿ, ತುಂಬಿದ ನೀರಿನ ಬಿಂದಿಗೆಯನ್ನು ಎತ್ತಿ ತಂದು ಜಗುಲಿಯ ಮೇಲಿಟ್ಟಳು.

"ಸೀತಾ... ಬಿಂದಿಗೆ ಭಾರ.. ತರದಿದ್ರೂ ನಡೀತಿತ್ತು..."

"ಪರ್‍ವಾಗಿಲ್ಲ ಬಿಡಕ್ಕ... ನಂಗೆ ಅಭ್ಯಾಸ ಐತಿ. ನಮ್ಮನಿಯಾಗ, ನಾನು ನಮ್ಮಕ್ಕ ನಮ್ಮ ವೈನಿ ಎಲ್ರೂ ಕೆಸ್ಸ ಮಾಡ್ತೇವ್ರೀ..." ಎನ್ನುತ್ತಾ ಕಾಫಿಯ ಪಾತ್ರೆಗಳನ್ನು ತಂದಿತ್ತಳು. ಬೇಲಿಯ ಕಡೆ ನೋಡುತ್ತಾ ನುಡಿದಳು." ಅಲ್ಲೊಬ್ಬ ಹುಚ್ಚ ನಿಂತಾನ್ರೀ... ಹುಡುಗೀರ್‍ನ ಕಂಡ ಕೂಡ್ಲೇ ಕೈ ಬೀಸಿ ಕರೀತಾನ್ರೀ..." ಎಂದು ಕಿಸಿ ಕಿಸಿ ನಕ್ಕಳು. "ಅಕ್ಕ ಕುಡೀಲಿಕ್ಕೆ ನೀರು ಬೇಕಿದ್ರೆ ಕೇಳಿ ಕೊಡ್ತೀನಿ."...

"ಬೇಡ ಈಗ ಬಾಯಾರಿಕೆ ಏನಿಲ್ಲ."

"ನಾನು ಹೋಗ್ಲೋ... ಇಲ್ಲೇ ಕುಂತಿರ್‍ಲೋ..."

"ನಿನ್ನಿಷ್ಟ, ಪಾಠಗೀಠ ಓದೋದು ಏನಿಲ್ವಾ?...

"ಎಲ್ಲಾ ಓದಾಯ್ತುರೀ... ಮತ್ತೆ ಮತ್ತೆ ಓದುಕ್ಕೆ ಏನಿರುತ್ತೆ ?" ಎನ್ನುತ್ತಾ ಜಗುಲಿಯ ಮೇಲೆ ಕುಳಿತಳು. ಕುಳಿತಲ್ಲಿಂದಲೇ ಒಳಗೆ ಬಗ್ಗಿ ನೋಡಿದಳು. ಮಲಗಿದ್ದ ಮಗುವನ್ನು ಕಂಡಳು. "ಕೂಸು ನಿಮ್ಮದೇನ್ರೀ... ಭಾಳ ಛಲೋ ಇದ್ದಾನ್ರೀ..." ಎಂದಳು.

"ಅವನು ನನ್ನ ತಮ್ಮ. ನಂಗಿನ್ನು ಮದುವೆಯಾಗಿಲ್ಲ." ನಾಚಿ ನುಡಿದಳು.

"ಹೌದೇನ್ರೀ... ನಾನು ನಿಮ್ಮದೇ ಕೂಸು ಅಂತ ಮಾಡಿದ್ನಿ ರೀ... ನೀವೊಬ್ಬಾಕೀನೇ ಕಾಣ್ತೇರಿ... ಮನೇಲಿ ಇನ್ಯಾರೂ ಇದ್ದಂಗಿಲ್ಲ... ನಿಮ್ಮಪ್ಪಗೆ ನೀವೊಬ್ರೇ ಮಗಳೇನ್ರೀ?"

"ಇಲ್ಲ ಸೀತಾ -ನಾವು ಎಂಟುಜನ ಮಕ್ಕಳು. ನಮ್ಮ ತಾಯಿಗೆ ಸೊಂಟದ ಮೂಳೆ ಮುರಿದಿದೆ. ಆಸ್ಪತ್ರೇಲಿದ್ದಾರೆ... ನನ್ನಕ್ಕನಿಗೆ ಮದುವೆಯಾಗಿದೆ. ಅತ್ತೆ ಮನೇಲಿದ್ದಾಳೆ...

'ಮತ್ತೆ ಉಳಿದವರು ?" ಎಲ್ಲಿಗೆ ಹೋಗ್ಯಾರಾ?"

"ನಿನಗೆ ಬಹಳ ಅವಸರ ?ಅವರನ್ನೆಲ್ಲಾ ನಮ್ಮ ಚಿಕ್ಕಪ್ಪ ಅವರ ಮನೆಗೆ

ಕರ್ಕೊಂಡು ಹೋಗಿದ್ದಾರೆ. ನಾವು ಈ ಮನೆಗೆ ಬಂದು ಒಂದು ವಾರ ಕೂಡಾ ಆಗಿಲ್ಲ. ನಿನ್ನನ್ನು ನಾನು ಈ ಮುಂಚೆ ನೋಡಿರ್ಲಿಲ್ಲ."

"ನಾನು ನನ್ನಕ್ಕ ಸುಧಾ ಇಬ್ರೂ ಅಜ್ಜಿ ಮನೆಗೆ ಹೋಗಿದ್ವಿ... ನೆನ್ನೆ ರಾತ್ರಿ ನಾನು ವಾಪಸ್ಬಂದೆನ್ರೀ ಅಕ್ಕ ಅಲ್ಲೇ ಅದಾಳ...

"ನಿಮ್ಮ ಮನೇಲಿ ನೀವು ಯಾರ್‍ಯಾರಿದ್ದೀರಿ..."

"ನಾವೂ ಭಾಳ ಮಂದಿ ಇದ್ರೀವ್ರೀ... ನಮ್ಮ ಕಾಕಾ, ಕಕ್ಕಿ, ಅವ್ವ, ಅಪ್ಪ.. ಅಬುಚಿ, ಚಿಗಪ್ಪ... ಅವರು ಬ್ಯಾರೆ ಊರಾಗಿದಾರ್‍ರೀ ಅಣ್ಣ, ವೈನಿ, ಮತ್ತೊಬ್ಬ ಅಣ್ಣ, ಅಕ್ಕ ನಾನು, ತಮ್ಮ ತಂಗಿ ಎಲ್ರೂ ಕೂಡಿಯೇ ಇದೀವ್ರೀ...

"ಹಾಗಾದ್ರೆ ಮನೆ ತುಂಬಾ ಜನ ಅನ್ನು.... ನಾನೂ ಯಾರನ್ನೂ ನೋಡಿಲ್ಲ."

"ನೀವು ಮನಿ ಬಿಟ್ಟು ಹೊರಕ್ಕೆ ಬಂದ್ಹಂಗಿಲ್ಲ... ನಿಮ್ಮಪ್ಪಯ್ಯನ್ನ ಮಾತ್ರ ಕಂಡಿದ್ದು, ನಿಮ್ಮ ಚಿಕ್ಕ ತಮ್ಮನನ್ನು ಇವತ್ತೇ ನೋಡಿದ್ದು..."

"ನಾನು ನನ್ನ ತಮ್ಮ ಆಚೆ ಮೊನ್ನೆ ಬಂದ್ವು... ಅಪ್ಪ ಮಾತ್ರ ಇದ್ದರು. ಇನ್ನೂ ಪೂರ್ತಿ ಸಾಮಾನುಗಳನ್ನು ತಂದಿಲ್ಲ... ಬೇಕಾದಷ್ಟು ಕೆಲಸ ಇದೆ...

"ನಂಗೂ ಏನಾರ ಕೆಲ್ಸ ಹೇಳ್ರೀ ಅಕ್ಕಾ ಮಾಡ್ಕೊಡ್ತೀನಿ..."

"ನಿನ್ನ ಸಹಾಯ ಬೇಕು ಅಂತಂದ್ರೆ ಕರೀತೀನಿ... ಆ ಕಡೆ ಮೂಲೇಲಿರೋ ಮನೇಲಿ ಯಾರಿದ್ದಾರೆ?...

"ಅಲ್ಲಿ ಒಬ್ರು ಟೀಚರ್ ಅದಾರ್‍ರೀ... ಆಕೀ ಹೆಸ್ರು ಪಂಕಜ ಟೀಚರ್ ಅಂತ... ಆಕಿಗೆ ಗಂಡ ಇಲ್ಲ. ಅವರ ಜೊತೆಗೆ ಅವರ ಅಪ್ಪ ಇರ್‍ತಾರ್‍ರೀ... ಬೆಳಗಿನ ಹೊತ್ತು ಟೀಚರ್‍ರು ಇರುಲ್ಲ. ಆ ಹಿರೀ ಮುದುಕ್ರು ಮಾತ್ರ ಇರ್ತಾರ್‍ರೀ..."

"ನಿನಗೆ ಈ ವಠಾರದ ವಿಷಯ ಎಲ್ಲಾ ಗೊತ್ತಾ ?... ಇಲ್ಲಿ ಎಷ್ಟು ಮನೆಗಳಿವೆ?

"ಆರುಮನೆಗಳಿವ್ರೀ...."

"ಹೌದಾ ? ಗೊತ್ತೇ ಇರ್‍ಲಿಲ್ಲ..."

"ಈ ವಠಾರ ಭಾಳ ದೊಡ್ಡು... ಮನೆಗಿಂತ ಹೆಚ್ಚಾಗಿ ಭಾರೀ ಭಾರೀ ಮರಗಳಿವೆ. ಕಾಡು ಇದ್ಹಂಗಿದೆ... ಮಧ್ಯದಲ್ಲಿರುವ ಬಂಗ್ಲೆ ಮಾತ್ರ ದೊಡ್ಡು. ಉಳಿದೆಲ್ಲಾ ಚಿಕ್ಕೋವು. ಒಂದು ಇದ್ಹಂಗೆ ಇನ್ನೊಂದಿಲ್ಲ... ಎರಡು ಮನಿ ಪಾಳು ಬಿದ್ದವೆ.

" ನೀವು ಇಲ್ಲಿಗೆ ಬಂದು ಎಷ್ಟು ವರ್ಷ ಆಯ್ತು?"

"ಮೂರು ವರ್ಷ ಕಳೀತ್ರೀ... ಅವ್ವಾ ಕರೀತಿದ್ದಾಳೆ " ನಾಹೋಗ್ಲಾ?... ಎನ್ನುತ್ತ ಎದ್ದಳು.

"ನಿಮ್ಮವ್ವ ಕರೆದದ್ದು ನಂಗೆ ಕೇಳಿಸ್ಲೇ ಇಲ್ಲ..."

"ಬಾಗ್ಲಲ್ಲಿ ನಿಂತು ಕೈ ಮಾಡಿ ಕರೆದ್ಲು... ಜೋರಾಗಿ ಕರೆಯೋ ಹಂಗಿಲ್ಲ...

ಕಾಕಾ ಬೈತಾನೆ... ಅರಚ್ಕೊಂಡ್ರೆ..."ಅವಳ ಮಾತಿನಿಂದ ಇವಳಿಗೆ ನಗು ಬಂತು." ಯಾಕ್ರೀ ನಗ್ತೀರಿ ಅಕ್ಕ... ನಿಮ್ಮ ಹೆಸ್ರೇ ಕೇಳ್ಲಿಲ್ಲ ನಾನು..."

"ಮಂಗಳಾ ಅಂತ... ಈಗ್ಹೋಗು, ಇಲ್ಲಿದ್ರೆ ನೀನೂ ಬೈಸ್ಕೋತೀಯ."

"ಅಮ್ಯಾಗೆ ನೀವು ಬನ್ನಿ ಮಂಗಳಕ್ಕ... ಅವ್ವನ ಕೂಡೆ ಮಾತಾಡೋರಂತೆ."

'ಹೂಂ' ಎನ್ನುವಂತೆ ತಲೆಯಾಡಿಸಿದಳು. ಸೀತಾ ಹೊರಟು ಹೋದಳು. ಮತ್ತೆ ಕೆಲವೇ ನಿಮಿಷಗಳಲ್ಲಿ ಆ ಹುಡುಗಿ ಕಾಫಿಯ ಲೋಟವನ್ನು ಹಿಡಿದು ಬಂದಳು. "ಅಕ್ಕಾ, ನಿಮ್ಮ ಬಟ್ಟಲನ್ನು ಹಿಡೀರಿ ಅಕ್ಕಾ ಕಾಫಿ ಹಾಕ್ತೀನಿ... ಅಷ್ಟೊಟ್ಹೊತ್ನಿಂದ ಬಾಯೊಣಗಿಸ್ಕೊಂಡು ಮಾತಾಡಿದೀರಿ..."

"ನೀನು ಕುಡಿ ಸೀತಾ... ನಾನು ಆಗ್ಲೇ ಕುಡ್ದಿದ್ದೆ."

"ಅವ್ವಾ ಕೊಟ್ಟಾಳ, ಲಗೂನೇ ಹಿಡೀರಿ..."

"ಇಲ್ಕೊಡು, ಕುಡಿದ್ಬಿಟ್ಟು, ತೊಳೆದು ಕೊಡ್ತೀನಿ." ಕೈ ನೀಡಿದಳು. ಆ ಹುಡುಗಿ ಹಿಂದಕ್ಕೆ ಸರಿದಳು.

"ನೀವು ಹೊರಗ್ಯಾಗಿದೀರಲ್ಲ... ಮುಟ್ಕೊಂಡ್ರೆ ಮೈಲಿಗೆ ಆಗುತ್ತೆ..."

"ಇಲ್ಲ ಸೀತಾ... ಹಾಗೇನೂ ಇಲ್ಲ... ನೀನು ಹಾಗೆ ತಿಳ್ಕಂಡಿದ್ದೀಯ... ನಾನು ಇನ್ನು ಇಪ್ಪತ್ತು ದಿನಗಳು ಆಗೂದಿಲ್ಲ... ಮೊನ್ನೆ ಮೊನ್ನೆ ಕಳೆದಿದೆ..."ಎನ್ನುತ್ತಾ ಕಾಫಿಯ ಬಟ್ಟಲನ್ನು ಎತ್ತಿಕೊಂಡಳು.

"ಸುಳ್ಳು ಹೇಳ್ತಿಲ್ಲ ಅಲ್ವಾ?... ಅಥವಾ ಮನೇಲಿ ಮಾಡೋರು ಯಾರೂ ಇಲ್ಲ ಅಂತ... ಹಂಗೇ ಬೆರೆಸ್ಕೊಂಡಿದ್ರೆ... ವಠಾರದ ಮಾಲಿಕರಿಗೆ ತಿಳಿದ್ರೆ. ಮನೇನ ಬಿಡಿಸ್ಬಿಡ್ತಾರೆ ಅಷ್ಟೇ...." ಭಯ ಹುಟ್ಟಿಸಿದಳು.

"ಸುಳ್ಯಾಕೆ ಹೇಳ್ಲೀ... ನೀನು ವಿಪರೀತ ಮಾತಾಡ್ತೀಯ... ಮಾಲೀಕರ ಹೆಂಡ್ತಿ ವಿಪರೀತ ಮಡಿ ಅಂತ ನಂಗೂ ಗೊತ್ತು." ಎನ್ನುತ್ತಾ ಕಾಫಿಯನ್ನು ಹೀರಿದಳು. ಬೆಲ್ಲ ಹಾಕಿ ತಯಾರಿಸಿದ್ದ ಕಾಫಿ. ಸ್ವಲ್ಪ ಅಡ್ಡ ರುಚಿ ಇತ್ತು... ಬಾಯಿಗೆ ರುಚಿಸದಿದ್ದರೂ, ಮನಸ್ಸಿಗೆ ಮುದವೆನಿಸಿತ್ತು... ಅವಳು ಕುಡಿದು ಮುಗಿಸುವುದನ್ನೇ ಕಾಯುತ್ತಿದ್ದ ಸೀತಾ ಅವಳಿಂದ ಬಟ್ಟಲನ್ನು ಕಿತ್ತುಕೊಂಡು, ನಲ್ಲಿಯ ಬಳಿಗೆ ಓಡಿದಳು. ತೊಟ್ಟಿಯಲ್ಲಿದ್ದ ನೀರನ್ನು ಚೊಂಬಿನಿಂದ ಎತ್ತಿಕೊಂಡು ಬಟ್ಟಲನ್ನು ಗಲಬರಿಸಿ ತಂದಳು.

"ಅಕ್ಕ ನಾನಿನ್ನು ಹೋಗ್ಲಾ... ಮನೆ ಮಂದಿಯೆಲ್ಲಾ ಕೂತು ಭಜನೆ ಮಾಡುವ ವೇಳೆ ಆಯ್ತು... ಭಜನೆಗೆ ಕೂರದಿದ್ರೆ ಕಾಕಾ ಚೀರಾಡ್ತಾನೆ..."

"ದಿನಾ ಭಜನೆ ಮಾಡ್ತೀರಾ?..."

"ಇಲ್ಲಪ್ಪಾ... ವಾರಕ್ಕೊಂದು ದಿನ... ಪ್ರತೀ ಗುರುವಾರ ಮಾತ್ರ..."ಎನ್ನುತ್ತಾ ಅವಸರದಿಂದ ಹೊರಟು ಹೋದಳು. ಮಂಗಳಾ ಒಳಬಂದು, ಹಾಲಿನ ದೀಪವನ್ನು

ಹಾಕಿ, ಮುಂಬಾಗಿಲನ್ನು ಹಾಕಿಕೊಂಡು, ಮಲಗಿದ್ದ ತಮ್ಮನ ಮಗ್ಗುಲಲ್ಲಿ ಕುಳಿತಳು.

ಇನ್ನೆರಡು ತಿಂಗಳ ನಂತರತನ್ನ ಮದುವೆ. ಇವರುಗಳನ್ನೆಲ್ಲಬಿಟ್ಟು ಗಂಡನ ಮನೆಗೆ ಹೊರಟು ಹೋಗ್ತೀನಿ. ಅಲ್ಲಿ ತಾನು ತನ್ನ ಗಂಡ ಇಬ್ಬರೇ. ಅವನ ಅಣ್ಣ ಅತ್ತಿಗೆ ಅಕ್ಕ ಭಾವ ಎಲ್ಲಾ ಬೇರೆ ಬೇರೆ ಊರಿನಲ್ಲಿದ್ದಾರೆ... ಅತ್ತೆ ಮಾವ ಯಾರೂ ಇಲ್ಲ. ಒಂಟಿಯಾಗಿ ಹೇಗೆ ಇರೋದು?... ಸರ್ಕಾರಿ ಕೆಲಸದಲ್ಲಿದ್ದಾನೆ. ಸಂಬಳ ಚೆನ್ನಾಗಿ ಬರುತ್ತೆ. ಎಲ್ಲರೂ ಅವರವರ ಪಾಡಿಗೆ ಅವರುಗಳು ಇದ್ದಾರೆ... ಯಾವ ಜವಾಬ್ದಾರಿಯೂ ಇಲ್ಲ. ಹಾಯಾಗಿರಬಹುದು ಅಂತ ಹೇಳಿ ಅಮ್ಮ ಒಪ್ಪಿಸಿದ್ದಳು. ನೋಡಲು ಸುಂದರನಲ್ಲ. ಸ್ವಲ್ಪ ಪೀಚು ಎನಿಸಿತ್ತು... ಗಂಡಸಿಗೆ ರೂಪ ಮುಖ್ಯ ಅಲ್ಲ ; ಉದ್ಯೋಗ ಮುಖ್ಯ... ಕೈಯಲ್ಲಿ ಹಣ ಇದ್ದರೆ ಎಲ್ಲಾ ಮುಚ್ಚಿ ಹೋಗುತ್ತದೆ ಎಂದಿದ್ದಳು ಅಮ್ಮ. ಅವನ ಗುಣ ಹೇಗೋ, ನಡತೆ ಹೇಗೋ ಒಂದೂ ಗೊತ್ತಿಲ್ಲ. ಮದುವೆ ನಿಶ್ಚಯವಾದ ಮೇಲೆ ಒಂದೆರಡು ಸಾರಿ ಬಂದಿದ್ದ... ಮಾತನಾಡಿಸಿದ್ದ. ಸಮಯ ನೋಡಿ ಕೈ ಹಿಡಿದಿದ್ದ. ಬಿಡಿಸಿಕೊಂಡು ಹೋಗಲಿದ್ದವಳನ್ನು ನಿಲ್ಲಿಸಿದ್ದ.

"ಇನ್ನೆಷ್ಟು ದಿನ ತಪ್ಪಿಸ್ಕೊಂಡು ಹೋಗ್ತೀಯಾ?... ಮದುವೆ ಆದ್ಮೇಲೆ ಒಬ್ಬಳೇ ಸಿಕ್ಕೇ ಸಿಗ್ತೀಯಲ್ಲ. ಆಗ ವಿಚಾರಿಸ್ಕೊಳ್ತೀನಿ" ಎಂದಿದ್ದ. ಮೈ ಜುಮ್ಮೆಂದಿತ್ತು. ಆ ಮಾತುಗಳು ನೆನಪಾಗಿ, ಮೈಯೊಳಗೆ ಏನೋ ಸಂಚಾರವಾದಂತಾಗಿತ್ತು. ಸಿನಿಮಾಗಳಲ್ಲಿ ತೋರಿಸುವಂತೆ, ಹೊಸದಾಗಿ ಮದುವೆಯಾದ ಗಂಡು ಹೆಣ್ಣು, ಕೈ ಕೈ ಹಿಡಿದು, ಮರಗಿಡಗಳನ್ನು ಸುತ್ತುತ್ತಾ ಪಾರ್ಕಿನಲ್ಲಿ ಓಡುತ್ತಾ... ಹಾಡು ಹೇಳುತ್ತಾ... ಒಬ್ಬರನ್ನೊಬ್ಬರು ಹಿಡಿದು ತಬ್ಬಿಕೊಂಡು... ಮುಂದೆ ಆಲೋಚಿಸಲು, ನಾಚಿಕೆ ಅಡ್ಡಿಪಡಿಸಿತ್ತು... ಆದರೆ ? ನಾನೇನೋ ಸಿನಿಮಾ ನಟಿಯಂತೆ ಸುಂದರವಾಗಿದ್ದೀನಿ ಅಂತ ಅವನು ಹೇಳಿದ್ದ... ಆದರೆ ಅವನು... ನನ್ನ ಕನಸಿನಲ್ಲಿ ಕಾಣುವ ಸುಂದರನಂತಿಲ್ಲ... ಅವನೊಡನೆ ಸಂಸಾರ ಮಾಡಬೇಕೆ ? ಅವಳ ಮನಸ್ಸು ಮೌನವಾಗಿ ರೋಧಿಸಿತು. ತಮ್ಮ ಎಚ್ಚರಗೊಂಡು, ಅವಳ ಕಾಲನ್ನು ಮುಟ್ಟಿದ. ಇವಳು ಎಚ್ಚೆತ್ತಳು. "ಎದ್ದ್ಯೇನೋ ಮರೀ... ಹಾಲು ಕುಡೀತೀಯಾ?..." ಎಂದು ಹೇಳಿ ಅವನನ್ನು ಎತ್ತಿಕೊಂಡು ಲೊಚ ಲೊಚನೆ ಮುತ್ತನ್ನಿತ್ತಳು. ಒದ್ದೆಯಾಗಿದ್ದ ಅವನ ಬಟ್ಟೆಗಳನ್ನು ಬಿಚ್ಚಿ ಹಾಕಿ ಒಣಗಿದ ಬಟ್ಟೆಗಳನ್ನು ತೊಡಿಸಿದಳು. ಕಾಯಿಸಿದ್ದ ಹಾಲಿಗೆ ಸಕ್ಕರೆಯನ್ನು ಹಾಕಿ ಆರಿಸಿ, ಸ್ವಲ್ಪ ಸ್ವಲ್ಪವೇ ಬಟ್ಟಲಿಗೆ ಹಾಕಿ ಕುಡಿಯಲು ಕೊಟ್ಟಳು. ಹಾಲನ್ನು ಕುಡಿಯುತ್ತಾ, ಅವನು ತನ್ನ ಪುಟ್ಟ ಕೈಗಳಿಂದ ಚಪ್ಪಾಳೆ ತಟ್ಟತೊಡಗಿದ. ಎದುರುಗಡೆಯಲ್ಲಿ ವಾಸವಾಗಿದ್ದವರ ಮನೆಯಲ್ಲಿ ಭಜನಾ ಕಾರ್ಯಕ್ರಮ ಪ್ರಾರಂಭವಾಗಿತ್ತು. ಹಾಲು ಕುಡಿದ ನಂತರ ತಾನು ಅಲ್ಲಿಗೆ ಹೋಗಬೇಕೆಂದು ಸಂಜ್ಞೆ ಮಾಡಿ ಎದ್ದೆದ್ದು ಕುಣಿಯತೊಡಗಿದ. "ಅಣ್ಣ ಬೈತಾರೆ... ಚುಪ್" ಅಂತ ಹೆದರಿಸಿ, ಎತ್ತಿಕೊಂಡಳು

ಅಡಿಗೆ ಮನೆಗೆ ಎತ್ತಿಕೊಂಡು ಹೋಗಿ, ದೇವರ ಮುಂದೆ ಅವನನ್ನು ಕೂರಿಸಿ, ದೇವರಿಗೆ ದೀಪವನ್ನು ಹಚ್ಚಿ, ಕೈ ಮುಗಿದು ಪ್ರದಕ್ಷಿಣೆ ಹಾಕಿ ನಮಸ್ಕರಿಸಿದಳು. ಅವನನ್ನು ತೊಡೆಯ ಮೇಲೆ ಕೂರಿಸಿಕೊಂಡು ಶ್ಲೋಕಗಳನ್ನು ಹೇಳುತ್ತಾ, ಅವನ ಪುಟ್ಟ ಕೈಗಳಿಂದ ಚಪ್ಪಾಳೆ ಹಾಕಿಸಿದಳು. ಕಲಿತ ಹಾಡುಗಳನ್ನು ಹೇಳಿಕೊಂಡು ಎಷ್ಟು ದಿನಗಳಾದವು. ಬಿಡುವೇ ಆಗುವುದಿಲ್ಲ. ಬಿಡುವು ಸಿಕ್ಕಾಗ ಹೇಳಿಕೊಳ್ಳಬೇಕೆನ್ನಿಸುವುದಿಲ್ಲ. ಮೂರ್ತಿಯ ಕಾಗದ ಬಂದು ವಾರವಾಯಿತು. ಅವನಿಗೆ ಉತ್ತರ ಬರೆದಿಲ್ಲ. ಆ ಮನೆಗೆ ಮತ್ತೆ ಕಾಗದ ಬಂದಿರಬಹುದೋ ಏನೋ... ಬರೆಯ ಬೇಡ ಅಂತ ಹೇಳಿದ್ರೂ ಬರೀತಾನೆ... ಏನು ಪ್ರೀತಿಯೋ...?"

ಮುಂಬಾಗಿಲನ್ನು ಬಡಿದ ಸದ್ದು ಕೇಳಿಸಿತು. ಅವನನ್ನು ಎತ್ತಿಕೊಂಡು ಹೊರಬಂದು ಬಾಗಿಲನ್ನು ತೆರೆದಳು. ಒಬ್ಬ ಹುಡುಗ ನಿಂತಿದ್ದ. ಅವನ ಕೈಯಲ್ಲಿ ಪ್ರಸಾದ ತುಂಬಿದ ದೊನ್ನೆಗಳಿದ್ದವು. "ಪ್ರಸಾದ ರೀ... ಅಕ್ಕ ಕೊಟ್ಬ್ರು ಅಂತಂದ್ಲು." ಎಂದು ಹೇಳಿ ಕೈಗೆ ಕೊಟ್ಟ.

"ನಿನ್ನ ಹೆಸರೇನು ? .... ಏನು ಓದುತ್ತಿದ್ದೀಯಾ?"

"ಮಾರ್ತಾಂಡ ರೀ... ಆರನೇ ತರಗತೀಲಿ ಓದ್ತಾ ಇದ್ದೀನ್ರೀ... ನಾ ಹೋಗ್ತಾ" ಎಂದು ಹೇಳಿ ಓಡಿ ಹೋಗಿದ್ದ. ತಮ್ಮ ಅಷ್ಟರಲ್ಲಿ ದೊನ್ನೆಗೆ ಕೈ ಹಾಕಿದ್ದ.

"ತಡೀ ಕೊಡ್ತೀನಿ ಖಾರ ಇರಬಹುದು 'ಎಂದು ಹೇಳಿ , ತಾನು ರುಚಿ ನೋಡಿ ಒಂದೊಂದೇ ಕಾಳು ಗುಗ್ಗುರಿಯನ್ನಾ ತಿನ್ನಿಸಿದಳು ಮನೆಯ ಮುಂದೆ ಜಟಕಾ ಗಾಡಿ ನಿಂತ ಸದ್ದು ಕೇಳಿಸಿತು. ಜಗುಲಿಗೆ ಬಂದು ನಿಂತಳು. ತಮ್ಮ ತಂಗಿಯರು, ಇಳಿದರು. ತಂದೆ ಕೆಲವು ಪೆಟ್ಟಿಗೆಗಳನ್ನು ಇಳಿಸಿದರು. ಜಟಕಾದವನಿಗೆ ಬಾಡಿಗೆಯ ಹಣವನ್ನು ಕೊಟ್ಟು, ಪೆಟ್ಟಿಗೆಗಳನ್ನು ಚೀಲಗಳನ್ನು ಎತ್ತಿ ತಂದು ಜಗುಲಿಯ ಮೇಲೆ ಇಟ್ಟ.

'ಎಲ್ರೂ ನಿಧಾನವಾಗಿ ಒಂದೊಂದನ್ನೇ ಒಳಕ್ಕೆ ತಗೊಂಡ್ಹೋಗಿ ಇಡಿ 'ಎಂದು ಮಕ್ಕಳಿಗೆ ತಾಕೀತು ಮಾಡಿ, ತಾನು ಪೆಟ್ಟಿಗೆಯನ್ನು ಹೊತ್ತು ಒಳಕ್ಕೆ ತಂದ. ತಂದೆಯನ್ನು ಉಳಿದವರನ್ನು ನೋಡಿ ಚಿಕ್ಕ ತಮ್ಮ ಕೆಳಕ್ಕೆ ಇಳಿದಿದ್ದ ಸಡಗರದಿಂದ ಅವರ ಬಳಿಗೆ ಓಡಿದ ತಂಗಿ ವನಜ ಬಂದು ಎತ್ತಿ ಕೊಂಡಳು.

'ವನಜಾ ಆಮೇಲೆ ಎತ್ಕೋ ಮೊದಲು ಸಾಮಾನುಗಳನ್ನು ಒಳಕ್ಕೆ ತಂದಿಡು' ಮಂಗಳಾ ಹೇಳಿದಳು.

'ಅದೇನದು ಇಬ್ರೂ ತಿಂತಾ ಇರೋದು !" ಶಂಕರ ಕೇಳಿದ

'ಎದುರು ಮನೇಲಿ ಭಜನೆ ಇತ್ತು. ಪ್ರಸಾದಾನ ತಂದ್ಕೊಟ್ಟಿದಾರೆ ಕೈ ತೊಳ್ಕೊಂಡು ಎಲ್ರು ತಿನ್ನೋರಂತೆ 'ಎಂದು ಹೇಳಿ ತಾನೂ ಸಾಮಾನಿನ ಚೀಲಗಳನ್ನು ಎತ್ತಿ ಒಳಕ್ಕೆ ತಂದಿದ್ದಳು.

'ಚಿಕ್ಕಪ್ಪ ಚಿಕ್ಕಮ್ಮ ಅವರ ಮನೆಯವರೆಲ್ಲಾ ಹೇಗಿದಾರ್‍ರ್ಯೇ.... ಏನ್ಕೇಳಿದ್ರು ?

"ಕೇಳಿದ್ರೇ ಕೇಳ್ತಿದ್ರು. ಇವನಂತೂ ಚೇಷ್ಟೆ ಮಾಡಿ ಬೈಸ್ಕೊಂಡ. 'ಜಲಜಾ ಮತ್ತೆ ತಮ್ಮನ ಕಡೆ ಬೊಟ್ಟು ಮಾಡಿ ಹೇಳಿದಳು.

'ಹೌದೇನೋ ಸಚ್ಚೀ.... ಅಲ್ಲಾದ್ರೂ ಗಂಭೀರವಾಗಿರ್‍ಬಾರ್‍ದಾಗಿತ್ತಾ?"

"ನಾನೇನು ಚೇಷ್ಟೆ ಮಾಡಿಲ್ಲ ಇವಳು ಸುಳ್ಳು ಹೇಳ್ತಾದಾಳೆ.... ತುಂಬಾ ಹೊಟ್ಟೆ ಹಸೀತಿದೆ. ತಿನ್ನುಕ್ಕೆ ಏನಾದ್ರೂ ಕೊಡ್ತೀಯಾ ? "

"ಯಾಕೋ-ಚಿಕ್ಕಮ್ಮ ತಿಂಡಿ ಮಾಡ್ಕೊಟ್ಟಿಲ್ವಾ !"

"ಇಲ್ಲ ತಿಂಡಿಯೂ ಇಲ್ಲ ಕಾಫಿಯೂ ಇಲ್ಲ ಹೇಗೂ ನಿಮ್ಮಣ್ಣ ಬಂದು ಕರ್‍ಕೊಂಡು ಹೋಗ್ತರಲ್ಲ ಅಂತ ಹೇಳಿ ಎರಡೆರಡು ಬಿಸ್ಕತ್ತು ಕೊಟ್ಟಿದ್ರು. ಸಾಕೇ ಆಗ್ಲಿಲ್ಲ."

"ಹೌದು ಕಣೇ ಅಕ್ಕ ಸರಿಯಾಗಿ ಊಟ ಕೂಡಾ ಹಾಕ್ತಿರ್‍ಲಿಲ್ಲ. ಕೇಳಿದ್ರೆ ಅನ್ನ ಮುಗಿದು ಹೋಗಿದೆ ಅಂತಿದ್ರು".

" ಯಾರಾದ್ರೂ ಕೇಳ್ತಾರಾ ! ಎಷ್ಟು ಹಾಕ್ತಾರೋ ಅಷ್ಟನ್ನೇ ತಿನ್ಬೇಕು ಕೇಳ್ಬಾರ್‍ದು"

"ನಮ್ಮನೇಲಿ ಕೇಳುಲ್ವಾ ? ಹಾಗೇ ಕೇಳ್ಬೆ ಚಿಕ್ಕಪ್ಪನ ಮನೆಯೂ ನಮ್ಮ ಮನೆ ತರಹ ಅಂತ ಅಣ್ಣ ಹೇಳಿದ್ರು.... ನಾಣಿ, ಸುಬ್ಬ ಪಂಕಿ ಎಲ್ರೂ ನಮ್ಮ ಮನೆಗೆ ಬಂದ್ರೆ ಕೇಳಿ ಕೇಳಿ ಹಾಕಿಸ್ಕೊಂಡು ತಿಂತಿರ್‍ಲಿಲ್ವಾ ? "

"ಬರ್ತಿದ್ದ ಹಾಗೇ ಚಾಡಿ ಹೇಳುಕ್ಕೆ ಶುರು ಮಾಡಿದ್ರಾ ? ಮಂಗಳಾ ನೀನು ಇವರ ಮಾತನ್ನ ಕೇಳ್ಕೊಂಡು ನಿಂತ್ಕೋ ಬೇಡ.... ಒಂದಿಷ್ಟು ತಿಂಡಿ ಮಾಡ್ಕೊಡು.... ಅನ್ನ ಇದ್ರೆ ಕಲೆಸಿ ಕೊಡು ...." ತಂದೆ ಹೇಳಿದಾಗ , ಅವಳಿಗೆ ವ್ಯಥೆಯಾಗಿತ್ತು.

ಅಮ್ಮ ಸೊಂಟ ಮುರಿದುಕೊಂಡು ಆಸ್ಪತ್ರೆಯಲ್ಲಿ ಮಲಗಿರೋದ್ರಿಂದ ಮನೇಲಿ ಎಷ್ಟು ಕಷ್ಟ ? ಚಿಕ್ಕಪ್ಪನ ಮನೆಯರು ಬಡವರು ನಿಜ ಆದರೆ ಅಣ್ಣನ್ನ ಕೇಳಿದ್ರೆ ಅಣ್ಣ ದುಡ್ಡು ಕೊಡ್ತೇ ಇರ್ತಿದ್ರಾ ! ಅಣ್ಣ ಹೋಟೆಲ್ನಿಂದ ತಿಂಡಿ ಕಟ್ಟಿಸಿಕೊಂಡು, ನಮಗೆಲ್ಲ ತಂದು ಕೊಡುವಾಗ, ಅವರುಗಳಿಗೂ ಮರೆಯದೇ ತಂದು ಕೊಡುತ್ತಿದ್ದರು. ಆ ನೆನಪಾದರೂ ಬೇಡವಾ! ಚಿಕ್ಕಮ್ಮನ್ನ ಕೇಳದೇ ಬಿಡುಲ್ಲ ಅಂತ ತನ್ನಲ್ಲೇ ಅಂದುಕೊಂಡು ಅಡಿಗೆ ಮನೆಗೆ ತೆರಳಿದಳು.

ೋ ೋ ೋ

"ಏ..... ಯಾರದು ಸೀಬೆ ಮರ ಹತ್ತಿರೋರು ? ಇಳಿ ಇಳಿ ಕೆಳಗೆ ಇಳಿ ..." ಹಿತ್ತಿಲ ಬಾಗಿಲಲ್ಲಿ ನಿಂತು ಲಕ್ಷ್ಮಿದೇವಮ್ಮ ಜೋರು ಮಾಡಿ ಹೇಳಿದಾಗ, ಸಚ್ಚಿ ಇಳಿದ ಇಲ್ಲಿ ಬಾ ಇಲ್ಲಿ ಆಕೆ ಮತ್ತೆ ಗುಡುಗಿದಳು ಅವನು ಹೆದರುತ್ತಾ ಬಂದು ನಿಂತ .

"ಯಾರೋ ನೀನು... ಎಲ್ಲಿಂದ ಬಂದೆ ! ಈ ಹುಡ್ಗಿ ಯಾರು! ಮರದ ಕೆಳಗೆ

ನಿಂತಿದ್ದ ಹುಡುಗಿಯ ಕಡೆ ಬೆರಳು ತೋರಿ ಕೇಳಿದಳು.

'ಇವಳು ಕುಸುಮ... ನಾನು ಸಚ್ಚಿ..."

"ನೀವು ಯಾರಾದ್ರೆ ನಂಗೇನು ? ಮರ ಹತ್ತಿ ಹಣ್ಣು ಕದೀತೀಯಾ ? ಮಾಡ್ತೀನಿ ತಡೀ ನಿಂಗೆ" ಆಕೆ ತನ್ನ ಕೈಲಿದ್ದ ಬಟ್ಟೆ ಹರವಿ ಹಾಕುವ ಕೋಲನ್ನಾ ಝಳಪಿಸಿದಾಗ ಕುಸುಮ ಹೆದರಿ ಅಳ ತೊಡಗಿದಳು ಸಚ್ಚಿ ಕೈ ಕಟ್ಟಿನಿಂತಿದ್ದ "ಹುಂ ಈಗ ಹೋಗು ಇನ್ನೊಂದ್ಸಾರಿ ಹೀಗೆ ಮಾಡಿದ್ರೆ ಕೈ ಕಾಲು ಕಟ್ಟಿ ಹೊಡೀತೀನಿ" ಹೆದರಿಸಿದಳು ಅಷ್ಟರಲ್ಲಿ ಶಂಕರ ಅಲ್ಲಿಗೆ ಬಂದಿದ್ದ ಕುಸುಮ ಅವನ ಬಳಿಗೆ ಓಡಿದಳು.

"ಏನ್ಮಾಡಿದ್ಯೋ ಸಚ್ಚೀ ? ಇವನು ಏನ್ಮಾಡ್ದ ಅತ್ತೇ!" ಕೇಳಿದ.

"ನೀನ್ಯಾರು ? ನೀನೂ ಹಣ್ಣು ಕದಿಯುಕ್ಕೆ ಬಂದಿದ್ಯಾ?"

"ಇಲ್ಲ ಅತ್ತೇ ನಾವು ಹೊಸ್ದಾಗಿ ಈ ವಠಾರಕ್ಕೆ ಬಂದವರು... ಹಣ್ಣು ಕದಿಯುಕ್ಕೆ ಅಂತ ಬಂದಿಲ್ಲ," ಧೈರ್ಯವಾಗಿ ಹೇಳಿದ.

"ಸಾಕು ನಾಟ್ಕ ನನ್ಮಾತನ್ನ ಸುಳ್ಳು ಮಾಡ್ಬೇಡ... ಇವನು ಮರ ಹತ್ತಿದ್ದನ್ನ ನಾನು ಕಂಡಿದೀನಿ. ಕೇಳು ಆ ಹುಡ್ಗೀನ..... "

"ಹೌದೇನೇ ಕುಸುಮಾ ಸಚ್ಚಿ ಸೀಬೆ ಮರಾನ ಹತ್ತಿದ್ನಾ...."

"ಹೂಂ ಹತ್ತಿದ್ದ" ಗಂಟಲಲ್ಲೇ ದನಿ ಉಳಿದಿತ್ತು....

"ಇವಳು ಹಣ್ಣು ಬೇಕು ಅಂತಂದ್ಲು. ಇವಳಿಗೆ ಕೊಯ್ಕೊಡೋಕೆ ಅಂತ ಹತ್ತಿದ್ದೆ . ನಾನು ಹಣ್ಣನ್ನುಕುಯ್ದಿಲ್ಲ "ಎನ್ನುತ್ತಾ ಖಾಲಿ ಕೈಗಳನ್ನು ತೋರಿದ.

"ಸುಳ್ಳು ಬೊಗಳ್ಬೇಡ ಚಡ್ಡಿ ಜೇಬ್ನಲ್ಲಿ ಹಣ್ಣುಗಳನ್ನಿಟ್ಟು ಕೊಂಡಿದೀಯ"

"ಇಲ್ಲ ಅತ್ತೇ ನಮ್ಮಮ್ಮನ ಆಣೆ ಹಣ್ಣು ಕೊಯ್ದಿಲ್ಲ ನೋಡಿ...."ಎನ್ನುತ್ತಾ ಚಡ್ಡಿ ಜೇಬುಗಳಿಗೆ ಕೈ ಹಾಕಿ , ಖಾಲಿ ಜೇಬನ್ನು ತೋರಿದ.

"ಮನೆಗೆ ಬಾ ನಿನಗೆ ಇದೆ ಇವತ್ತು ಪೂಜೆ"ಶಂಕರ ಬೆರಳು ತೋರಿದ

"ಸರಿ ಸರಿ ಇವತ್ತಿಗೆ ಬಿಟ್ಟಿದೀನಿ. ಇನ್ನೆಂದಾದ್ರೂ ಯಾರಾದ್ರೂ ಮರ ಹತ್ತಿದ್ದನ್ನ ಕಂಡ್ರೆ ನಿನ್ನ ಗತಿ ನೆಟ್ಟಗಿರುಲ್ಲ. ನನ್ನೆದುರಿಗೆ ನಿಂತ್ಕೋ ಬೇಡ .... ಹೋಗು" ಲಕ್ಷ್ಮಿ ದರ್ಪದಿಂದ ಹೇಳಿದಾಗ ಸಚ್ಚಿ ಓಡಿದ ಶಂಕರ ಕುಸುಮನ ಕೈ ಹಿಡಿದು ಕೊಂಡು ದರ ದರನೆ ಎಳೆದುಕೊಂಡು ಹೊರಟ "ನಿಂತ್ಕೋ"ಆಕೆ ಕರೆದಳು ಅವನು ನಿಂತ.

"ನಿನ್ಹೆಸರೇನು ..."

"ಶಂಕರ ಅಂತ...."

"ನಿಮ್ಮಪ್ಪರಿಗೆ ಹೇಳುಕ್ಕೆ ಹೋಗ್ಬೇಡ ನೀನೇ ಅವನಿಗೆ ಬುದ್ಧಿವಾದವನ್ನು ಹೇಳು ಅಷ್ಟೇತ್ತರದಿಂದ ಬಿದ್ದು ಕೈಯೋ ಕಾಲೋ ಮುರಿದುಕೊಂಡರೆ ಏನ್ಗತಿ! ನಿನಗೆ ಮರ ಹತ್ತುಕ್ಕೆ ಬರುತ್ತಾ ? "

"ಹುಂ ಬರುತ್ತೆ....." ಅನುಮಾನಿಸುತ್ತಾ ಹೇಳಿದ.

"ಅಲ್ಲಿ ಮೇಲಿನ ಕೊಂಬೆಯಲ್ಲಿ ನಾಲ್ಕು ಹಣ್ಣುಗಳಿವೆ ಕೊಯ್ಕೊಡ್ತೀಯ! ಶಂಕರ ಅಚ್ಚರಿಯಿಂದ ಆಕೆಯನ್ನು ದಿಟ್ಟಿಸಿದ" ಹೂಂ ನಿಂಗೇ ಹೇಳಿದ್ದು... ಬಣ್ಣ ಬಂದಿದೆ ಅಳಿಲೋ ಗಿಣಿಯೋ ಕಚ್ಚಿ ತಿಂದು ಬಿಡುತ್ತೆ ಕಿತ್ಕೊಡು...." ಎಂದಳು ಶಂಕರ ಸಾವಕಾಶವಾಗಿ ಎಚ್ಚರಿಕೆಯಿಂದ ಮರವನ್ನು ಹತ್ತಿದ. ಆಕೆ ತೋರಿದ ಕೊಂಬೆಯಲ್ಲಿ ಹಣ್ಣಾಗಿದ್ದ ನಾಲ್ಕಾರು ಹಣ್ಣುಗಳನ್ನು ಕಿತ್ತ "ಈ ಕಡೆ ಎಸಿ ಹಿಡ್ಕೋತೀನಿ" ಎಂದು ಲಕ್ಷ್ಮಿ ಸೀರೆಯ ಸೆರಗನ್ನು ಅಗಲ ಮಾಡಿದಳು ಅವನು ಸೆರಗಿನೊಳಗೆ ಸರಿಯಾಗಿ ಹಣ್ಣುಗಳು ಬೀಳುವಂತೆ ಎಸೆದ.

"ಈ ಕಡೆ ಇನ್ನೊಂದ್ನಾಲ್ಕು ಇವೆ. ಕೀಳ್ಲಾ ಅತ್ತೇ" ಅಲ್ಲಿಂದಲೇ ಕೇಳಿದ

"ಹಣ್ಣಾಗಿದ್ದರೆ ಕೀಳು ಇಲ್ದಿದ್ರೆ ಇನ್ನೊಂದೆರಡು ದಿನ ಬಿಟ್ಟು ಕೀಳೂವಂತೆ " ಅವನು ಕೆಳಗಿಳಿದು ಬಂದು ಕೈಗಳಿಂದ ಮೈ ಮೇಲಿನ ಬಟ್ಟೆಯ ಧೂಳನ್ನು ಕೊಡವಿದ. ಆಕೆ ಸೀರೆಯ ಸೆರಗಿನೊಳಗಿಂದ ಹಣ್ಣುಗಳನ್ನು ತೆಗೆದು ನೋಡಿ, ಆರಿಸಿ ಆರಿಸಿ... ಒಂದು ಹಣ್ಣನ್ನು ಅವನ ಮುಂದೆ ಹಿಡಿದಳು "ತಗೋ.. ನಿನ್ನ ತಂಗಿಗೂ ಕೊಟ್ಟು ನೀನೂ ತಿನ್ನು" ಎಂದಳು ಅವನಿಗೆ ನಗು ಒತ್ತಿಕೊಂಡು ಬಂದಿತ್ತು.

"ಪರವಾಗಿಲ್ಲ ಬೇಡ ಅತ್ತೇ" ಎಂದ ನಗುವನ್ನು ಮುಚ್ಚಿಟ್ಟು

"ಸುಮ್ನೇ ಹೇಳಿದಷ್ಟನ್ನು ಕೇಳು ... ತಗೊಳೇ ಹುಡ್ಗೀ... ಲಂಗಾನ ಹಿಡಿ"

ಕುಸುಮ ಹತ್ತಿರ ಬಂದು ಲಂಗವನ್ನು ಸ್ವಲ್ಪ ಎತ್ತಿ ಹಿಡಿದಳು. ಆಕೆ ಒಂದೇ ಒಂದು ಹಣ್ಣನ್ನು ಲಂಗದೊಳಕ್ಕೆ ಹಾಕಿದಳು "ಇನ್ಮೊಂದೆ ಹಣ್ಣು ಬೇಕಾದ್ರೆ ನನ್ನನ್ನು ಕೇಳು ಇದ್ರೆ ಕೋಡ್ತೀವಿ ಹುಂ ಈಗ ಹೊರಡಿ "

"ನಡಿಯೇ" ಎಂದು ಅವಳ ಬೆನ್ನ ಮೇಲೆ ಹಗುರವಾಗಿ ಗುದ್ದಿ ಅವಳನ್ನು ಮನೆಯ ಕಡೆಗೆ ಕರೆದುಕೊಂಡು ನಡೆದ ಆಕೆ ಬಾಗಿಲ ಬಳಿ ನಿಂತು ಮತ್ತೊಮ್ಮೆ ಸುತ್ತಲೂ ನೋಡಿ, ಒಳಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು.

ಶಂಕರ ಎಲ್ಲವನ್ನು ಮಂಗಳನಿಗೆ ವರದಿ ಒಪ್ಪಿಸಿದ "ಎಂಥಾ ಘಾಟಿ ಹೆಂಗ್ಸು ಇವನನ್ನ ಬೈದು ನನ್ಹತ್ರ ಹಣ್ಣನ್ನು ಕೀಳಿಸ್ಕೊಂಡು ಕೊಟ್ಟಿದ್ದು ಒಂದೇ ಒಂದು ಹಣ್ಣು ಎಲ್ಲೇ ಕುಸುಮ ತೋರ್ಸೇ -" ಬಾಯಗಲ ಮಾಡಿ ಹೇಳಿದ.

"ಕುಸುಮ ಹಣ್ಣನ್ನು ತೋರಿಸಿದಳು "ಈ ಪಿಲ್ಲೀ ಹಣ್ಣಿಗೋಸ್ಕರ ಮರಹತ್ತಿ ಆಕೆ ಹತ್ರ ಬೈಸ್ಕೋಂಡ್ಯಾ ! ಅಣ್ಣಂಗೆ ಹೇಳಿದ್ರೆ ಒಂದು ಡಜನ್ ದಿವಿನಾಗಿರುವ ಹಣ್ಣನ್ನು ತಂದು ಕೊಡ್ತಿದ್ರು ... ಇನ್ಮುಂದೆ ನೀನೇನಾದ್ರೂ ಆ ಕಡೆ ಹೋದ್ರೆ ನಾನು ಅಣ್ಣಂಗೆ ಹೇಳಿ, ನಿನ್ನ ಕಾಲನ್ನು ಮುರಿಸ್ತೀನಿ" ಮಂಗಳ ತಮ್ಮನನ್ನು ಹೆದರಿಸಿದಳು.

"ಸಾಕು ಸುಮ್ನಿರಕ್ಕ ನೀನೂ ಬೈಯ ಬೇಡ... ಕುಸುಮ ಕೇಳಿದ್ದಕ್ಕೇ ನಾನು ಮರ

ಹತ್ತಿದ್ಪು. ಅವಳನ್ನು ಬೈಯಿ ನಂಗೆ ದುಡ್ಡು ಕೊಡು ನಾನು ಕೊಂಡ್ಕೊಂಡು ತಿಂತೀನಿ... ಯಾರ್‍ಯಾರಿಗೆ ಬೇಕು ಈಗ್ಲೇ ಹೇಳ್ಬಿಡಿ... ಅಕ್ಕ ದುಡ್ಡು ಕೊಡ್ತಾಳೆ.'

"ನನ್ಹತ್ರ ಎಲ್ಲಿದೆ ದುಡ್ಡು ... ಅಣ್ಣನ್ನ ಕೇಳಿ ಇಸ್ಕೋ ...."

"ಯಾಕೇ ಸುಳ್ಳು ಹೇಳ್ತೀಯ ಅಕ್ಕಾ ಭಾವ ನಿಂಗೆ ದುಡ್ಡು ಕೊಟ್ಟಿದ್ಪನ್ನು ನಾನೇ ನೋಡಿದೀನಿ" ಜಲಜಾ ನುಡಿದಳು ಮಂಗಳಾಳ ಮುಖ ಕೆಂಪಾಗಿತ್ತು.

"ಅದನ್ನು ನಂಗೆ, ಬಳೆ, ರಿಬ್ಬನ್ನೂ ತಗೋ ಅಂತ ಕೊಟ್ಟಿದ್ರು ಖರ್ಚಾಯ್ತು"

"ನಮಗೂ ಬಳೆ ರಿಬ್ಬನ್ನೂ ಕೊಡ್ಸು ಮತ್ತೆ..."

"ಈಗಿಲ್ಲ ಅಂತ ಅಂದ್ನಲ್ಲ ಭಾವ ಬಂದಾಗ ಕೇಳಿ ಇಸ್ಕೋತೀನಿ... ಈಗ ಎಲ್ರೂ ಏಳಿ. ಕೈ ಕಾಲು ತೊಳೆದ್ಕೊಂಡು ಬನ್ನಿ. ಎಲ್ಲಿಗೂ ಬ್ರೆಡ್ಡು ಹಾಲು ಕೊಡ್ತೀನಿ.. ನನಗೆ ಇವತ್ತು ತುಂಬಾ ಕೆಲಸ ಇದೆ. ಈ ಸಾಮಾನುಗಳನ್ನೆಲ್ಲಾ ಜೋಡಿಸ್ಬೇಕು."

"ಬ್ರೆಡ್ಡು ಎಲ್ಲಿತ್ತೆ ಅಕ್ಕ ಭಾವ ಕೊಟ್ಟ ದುಡ್ನಲ್ಲಿ ತರಿಸಿದ್ಯಾ ? "ಅವಳು ಸುಮ್ಮನೇ ನಕ್ಕಳು ಉತ್ತರಿಸಲಿಲ್ಲ. ಅದು ಆಸ್ಪತ್ರೆಯಿಂದ ತಂದ ಬ್ರೆಡ್ಡು ಅಂತ ತಿಳಿದ್ರೆ ಯಾರು ತಿನ್ನಲ್ಲ ಎಲ್ಲರೂ ಹೆದರ್‍ತಾರೆ ಅಲ್ಲಿ ರೋಗಿಗಳಿಗೆ ಕೊಡುವ ಬ್ರೆಡ್ಡನ್ನು ಅಮ್ಮ ತಾನು ತಿನ್ನದೇ ಊಟದ ಡಬ್ಬಿಯಲ್ಲಿಟ್ಟು ಕಳಿಸಿದ್ದಳು.

"ಅವಳಿಗೆ ಮಡಿ ಆಸ್ಪತ್ರೆಯ ಬ್ರೆಡ್ಡನ್ನು ತಿನ್ನಲ್ಲ ಅವರುಗಳು ಇಟ್ಟು ಹೋಗಿರ್‍ತಾರೆ ಕಾಫೀನ ತರಿಸ್ಕೊಂಡು ಕುಡಿದಿರ್‍ತಾಳೆ. ಮಕ್ಕಳಿಗೆ ಆಗುತ್ತೇ ತಗೊಂಡ್ಹೋಗಿ" ಎಂದು ಹೇಳಿ ಡಬ್ಬಿಯೊಳಗೆ ಇಟ್ಟು ತಂದೆಯೊಡನೆ ಕಳಿಸಿದ್ದಳು ತಾಯಿ.

"ಬ್ರೆಡ್ಡು ಸಪ್ಪೆ ಅಂದ್ರೆ ಸಪ್ಪೆ.... ಹಾಲಿಗೆ ಇನ್ನೊಂದು ಸ್ವಲ್ಪ ಸಕ್ಕರೆ ಹಾಕು." ಜಲಜ ಹೇಳಿದಾಗ ಎಲ್ಲರಿಗೂ ಎರಡೆರಡು ಚಮಚ ಸಕ್ಕರೆಯನ್ನು ಹಾಕಿ ಕಲಕಿ ಕೊಟ್ಟಳು.

"ನೀವೆಲ್ಲಾ ತಿನ್ತಿರಿ ನಾನು ಬಾಲುಗೆ ಹಾಲು ಕುಡಿಸ್ಬಿಟ್ಟು ಬರ್‍ತೀನಿ' ಎಂದು ಹೇಳಿ ಹಾಲಿನ ಬಟ್ಟಲನ್ನು ಹಿಡಿದು ಹೊರಗೆ ಬಂದಳು. ಅವನು ಜಗುಲಿಯ ಮೇಲೆ ಕುಳಿತಿರಲಿಲ್ಲ. ಸೀತಾ ಏನಾದ್ರೂ ಎತ್ತಿಕೊಂಡು ಹೋಗಿರಬಹುದೇ ಅಂತಂದುಕೊಂಡು ಕೆಳಗೆ ಇಳಿದು ನಡೆದು ಬಂದಿದ್ದಳು. ಬಾಲು ಪಕ್ಕದ ಮನೆಯ ತುಳಸಿ ಕಟ್ಟೆಯ ಮುಂದೆ ನಿಂತಿದ್ದ. ಲಕ್ಷ್ಮಿದೇವಮ್ಮ ಪೂಜೆ ಮಾಡುತ್ತಿದ್ದಳು ಇವಳು ಹಾಗೇ ನಿಂತಳು. ಆಕೆ ಪೂಜೆಯನ್ನು ಮುಗಿಸಿ, ಥಾಲಿಯಲ್ಲಿದ್ದ ಹಾಲನ್ನು ಅವನ ಬಾಯಿಗೆ ಹೊಯ್ದು... ಚಾಚಿದ ಅಂಗೈಗೆ ದ್ರಾಕ್ಷಿಯನ್ನು ಹಾಕಿ 'ತಿನ್ನು' ಎಂದಳು. ಇವನು ಒಂದೊಂದೇ ದ್ರಾಕ್ಷಿಯನ್ನು ಬಾಯಿಗೆ ಹಾಕಿಕೊಂಡು, ಮನೆಯ ದಿಕ್ಕಿಗೆ ತಿರುಗಿದ ಆಕೆ ಹೊರಟು ಹೋಗಿದ್ದಳು.

ಅಕ್ಕನನ್ನು ಕಂಡ ಕೊಡಲೇ ಅವನು ಪುಟ್ಟ ಪುಟ್ಟ ಹೆಜ್ಜೆಗಳನ್ನು ಎತ್ತಿಡುತ್ತಾ ಓಡಿ ಬಂದು ಅವಳನ್ನು ತಬ್ಬಿದ ಅವಳ ಕೈಯಲ್ಲಿದ ಹಾಲಿನ ಬಟ್ಟಲಿನಿಂದ ಹಾಲು ತುಳುಕಿತ್ತು. ಅವನನ್ನು ಎತ್ತಿಕೊಂಡು ಮನೆಯೊಳಕ್ಕೆ ಬೇಗ ಬೇಗನೇ ಬಂದಳು. ಈ ಕಳ್ಳ ಎಲ್ಲಿಗೆ ಹೋಗಿದ್ದ ಗೊತ್ತಾ? ಎನ್ನಾತ್ತಾ ತಾನು ಕಂಡದ್ದನ್ನು ತಿಳಿಸಿದಳು ಶಂಕರ, ವನಜ ಇಬ್ಬರೂ ಕಿಸಕ್ಕನೆ ನಕ್ಕರು.

"ನೀನು ದಿನಾ ಪೂಜೆಯ ಸಮಯದಲ್ಲಿ ಅವರ ಎದುರಿಗೆ ಹೋಗಿ ನಿಂತ್ಕೋ ಅವರು ನಿನ್ನನ್ನ ತಮ್ಮ ಮನೆಗೆ ಕರ್ಕೊಂಡು ಹೋಗಿ ಇಟ್ಕೋತಾರೆ ಅಷ್ಟೇ" ವನಜ ಹೆದರಿಸಿದಳು.

"ನಾನೂ ಹೋಗ್ತಿನಿ ನಂಗೂ ಹಣ್ಣು ಕೊಡ್ತಾರೆ " ಕುಸುಮ ಮುದ್ದಾಗಿ ನುಡಿದಳು.

"ಹಣ್ಣು ಕೊಯ್ದು ಕೊಡೋಕೆ ಶಂಕರ ಹೋಗ್ತಾನೆ. ಹೂವು ಕೊಯ್ದು ಕೊಡೋಕೆ ಜಲಜ ನೀನು ಹೋಗೇ ... ಅವರ ಮನೆ ತುಂಬಾ ದೊಡ್ಡದಾಗಿದೆಯಂತೆ ಅಣ್ಣ ಚಿಕ್ಕಪ್ಪನ ಹತ್ರ ಹೇಳ್ತಿದ್ರು ಎಲ್ರೂ ಅವರ ಮನೆಗೇ ಹೋಗಿದ್ದುಬಿಡಿ" ವನಜ ಎಂದಳು.

"ನೀನೇ ಬೇಕಾದ್ರೆ ಹೋಗು ನಾನು ಎಲ್ಲಿಗೂ ಹೋಗಲ್ಲ" ಜಲಜ ಮುನಿಸಿ ಕೊಂಡು ನುಡಿದಳು.

"ಅಕ್ಕ ಮದುವೆ ಮಾಡ್ಕೊಂಡು ಹೋದ್ಮೇಲೆ, ನಾನೇ ನಿಮಗೆಲ್ಲ ಅಡಿಗೆ ಮಾಡಿ ಹಾಕ್ಬೇಕು. ಸ್ಕೂಲಿಗೆ ಕಳಿಸ್ಬೇಕು ನಾನೇ ಇಲ್ಲದಿದ್ರೆ ನಿಮ್ಮನ್ನೆಲ್ಲ ಯಾರು ನೋಡ್ಕೋತಾರೆ!"

"ಯಾಕೇ... ಅಮ್ಮಾ ಆಸ್ಪತ್ರೆಯಿಂದ ವಾಪಸ್ಸೇ ಬರುಲ್ವಾ?" ಶಂಕರ ಕೇಳಿದ.

"ಅಮ್ಮ ಆಸ್ಪತ್ರೆಯಿಂದ ವಾಪಸ್ಸು ಬಂದು ಸರಿಯಾಗಿ ನಡೆದಾಡುವಂತೆ. ಆಗೋವರೆಗೂ ನಾನು ಇಲ್ಲೇ ಇರ್ತೀನಿ ಮದುವೆ ಆಗುಲ್ಲ ಮಂಗಳಾ ನುಡಿದಳು.

"ಭಾವ ಸುಮ್ಮನೇ ಒಪ್ಕೋತಾರೇನೇ!"

"ಅದೆಲ್ಲ ನಿಂಗ್ಯಾಕೆ ! ನಾನು ಹೊರಟು ಹೋದ್ರೆ ನಿಮಗೆಲ್ಲ ಕಷ್ಟ ಆಗುಲ್ವಾ! ಮನೆ ಕೆಲಸಾನೇ ಮಾಡ್ತಿದ್ರೆ ಸ್ಕೂಲಿಗೆ ಯಾವಾಗ ಹೋಗ್ತೀಯಾ? ಪಾಠ ಯಾವಾಗ ಓದ್ತೀಯಾ ?

"ಅಮ್ಮ ಬೇಗ ಬರುವಂತಾಗಲಿ ಅಕ್ಕನ ಮದುವೆ ಬೇಗ ಆಗಲಿ ... ನಮಗೆಲ್ಲ ಹೊಸ ಬಟ್ಟೆ ಸಿಗುತ್ತೆ. ಒಳ್ಳೊಳ್ಳೆಯ ತಿಂಡಿ ಊಟ ಎಲ್ಲಾ ತಿನ್ನಬಹುದು. "ಸಚ್ಚಿ ಎಂದ.

'ಏ ತಿಂಡಿ ಪೋತ... ಬರೀ ತಿನ್ನೋ ವಿಚಾರನೇ ಯೋಚಿಸ್ಬೇಡ... ಎದ್ದು ಕೆಲಸ ಮಾಡು ನಿಮ್ಮ ನಿಮ್ಮ ಪುಸ್ತಕಗಳನ್ನು ಸರಿಯಾಗಿ ಜೋಡಿಸಿ ತೆಗೆದಿಟ್ಟುಕೊಳ್ಳಿ."ಎಂದು ವನಜ ನುಡಿದು. ಅಕ್ಕನ ಹಿಂದೆ ಅಡಿಗೆ ಮನೆಗೆ ಬಂದಳು. "ಅಕ್ಕ , ಅಮ್ಮನಿಗೆ ಪೂರ್ತಿ

ಸರಿ ಹೋಗುತ್ತಂತೇನೇ? ... ಎರಡು ವಾರ ಆಯ್ತು ಅಮ್ಮನ್ನ ನೋಡಿ ನೋಡ್ಬೇಕು ಅಂತ ಅನ್ಸುತ್ತೆ ಕಣೇ ..."ಅಳುತ್ತಾ ನುಡಿದಳು.

"ಅಳ್ಬೇಡ ನೀನು ಅತ್ರೆ ಅವೂ ಎಲ್ಲ ಅಳುತ್ವೆ ... ಅಣ್ಣಂಗೆ ಹೇಳ್ತೀನಿ ಒಬ್ಬೊಬ್ಬರು ಒಂದೊಂದು ದಿನ ಹೋಗಿ ನೋಡ್ಕೊಂಡು ಬಂದರಾಯ್ತು ನಾನು ಬೇಗ ಅಡಿಗೆ ಮಾಡ್ತೀನಿ. ಹನ್ನೆರಡು ಗಂಟೆಯ ಹೊತ್ತಿಗೆ, ಅಮ್ಮಂಗೆ ಊಟ ತಗೊಂಡು ಹೋಗ್ತೀನಿ ಅಂತ ಅಣ್ಣ ಹೇಳ್ತಿದ್ರು. ಇವತ್ತು ನೀನು ಅಣ್ಣನ ಜತೇಲಿ ಹೋಗಿ ನೋಡ್ಕೊಂಡು ಬಾ ಈಗ್ಲೇ ಯಾರ್ಗೂ ಹೇಳ್ಬೇಡ" ತಂಗಿಯನ್ನು ಸಮಾಧಾನಗೊಳಿಸಿದಳು.

"ವೈನೀ... ವೈನೀ... ದತ್ತಣ್ಣ ಬಂದಾನ ಲಗೂನ ಬಾ ಚಾ ಮಡ್ಕೊಂಡು... ಅವ್ವ ಹೇಳ್ಯಾಳ ಸೀತಾ ರಾಧಾಬಾಯಿಯ ಸೆರಗನ್ನು ಹಿಡಿದು ಎಳೆದು ಹೇಳಿದಳು. ರಾಧಾಬಾಯಿಯ ಕಣ್ಣುಗಳಲ್ಲಿ ಆನಂದ ಚಿಮ್ಮಿತು. ಕಣ್ಣೀರು ತುಳುಕಿತು. "ಯಾಕೆ ಅಳ್ತೀಯೇ ವೈನೀ... ನಾನು ಖರೇನೇ ಹೇಳ್ತಿನಿ... ಬಾ ಲಗೂನೆ ನೀನೇ ನೋಡೂವಂತೆ... ಸೀತಾ ರಾಧಾಬಾಯಿಯ ಕೈ ಹಿಡಿದು ಕರೆತಂದಳು ಹಿಂಬಾಗಿಲಿನಿಂದ ಒಳ ಬಂದು, ಬಾಗಿಲ ಮರೆಯಲ್ಲಿ ನಿಂತು ಗಂಡನ ಕಡೆ ನೋಡಿದಳು. ಮಿಲಿಟರಿ ಸಮವಸ್ತ್ರ ಧರಿಸಿದ್ದ ಅವನು ಬಹಳ ಚೆನ್ನಾಗಿ ಕಾಣುತ್ತಿದ್ದ ಅವಳ ಹೃದಯದಲ್ಲಿ ಕಾರಂಜಿಗಳು ಪುಟಿದವು....

"ಸೀತವ್ವಾ ರಾಧಾಭಾಯಿಗೆ ಹೇಳ್ಲಿಲ್ಲೇನು ? ದತ್ತ ಬಂದಾನಂತಾ ?...." ಅಪ್ಪ ಕೇಳಿದಾಗ, ದತ್ತನ ಕಣ್ಣುಗಳು ಅತ್ತಿತ್ತ ಚಲಿಸಿದವು ಹೆಂಡತಿಯನ್ನು ಕಣ್ಣುಗಳು ಅರಸಿದವು ಅದನ್ನು ಗಮನಿಸಿದ ರಾಧಾ ನಾಚಿ ನೀರಾಗಿ, ಹಾಗೇ ಹಿಂದಕ್ಕೆ ಸರಿದು ಬಚ್ಚಲ ಮನೆಯೊಳಗೆ ಬಂದು ಕಟ್ಟೆಯ ಮೇಲೆ ಕುಳಿತಳು.

"ಬಾಳಾ ಪ್ರಯಾಣ ಮಾಡಿ ದಣಿದು ಬಂದಿದೀಯ ... ಸಮವಸ್ತ್ರ ಬಿಚ್ಚಿಟ್ಟು ಪಂಚಿ ಷರಟು ತಟ್ಕೋ... ಕೈ ಕಾಲು ತೊಳ್ಕೊಂಡು ತುಸು ವಿಶ್ರಾಂತಿ ತಗೋ... ಈ ರಾಧಾ ಎಲ್ಲಿ ಅಡಗಿ ಹೋದ್ಲೋ... ಗಂಡ ಮನಿಗೆ ಬಂದಾನ ಅನ್ನೋದಾರ ಬೇಡ್ವಾ ಆಕಿಗೆ" ತಾಯಿ ದೂಷಿಸಿದಳು.

"ಇರ್ಲಿ ಬಿಡವ್ವಾ... ಆಕಿಗೇನು ಗೊತ್ತದ ನಾನು ಇಂದೇ ಬರೋವ್ನಿದೀನಿ ಅಂತ ನಾನಾ. ಆಮೇಲೆ ಮಾತಾಡಿಸ್ತೀನಿ" ಎನ್ನುತ್ತಾ ತನ್ನ ಟ್ರಂಕಿನಿಂದ ಮನೆಯಲ್ಲಿ ಉಡುವ ಬಟ್ಟೆಗಳನ್ನು ತೆಗೆದುಕೊಂಡು ಕ್ಯಾಪ್‌ನ್ನು ಬಿಚ್ಚಿಟ್ಟು ಬಚ್ಚಲು ಮನೆಯ ಕಡೆಗೆ ಬಂದ. ಅವನನ್ನು ಕಂಡು ರಾಧಾಭಾಯಿ ಸರ್ರನೆ ಎದ್ದು ನಿಂತಳು. ಅವನಿಗೆ ತಕ್ಷಣಕ್ಕೆ ಅವಳ ಗುರುತು ಸಿಕ್ಕಲಿಲ್ಲ. ಕೃಶವಾಗಿದ್ದ ಶರೀರ, ಅಲಂಕಾರವಿಲ್ಲದ ಮುಖ ಉಟ್ಟಿದ್ದ ಹಳೆಯ ಸೀರೆ... ಕೆಲಸದವಳಿರಬಹುದೆಂದು ಭಾವಿಸಿದ ಅವಳು ಸರಿದು ಪಕ್ಕಕ್ಕೆ ನಿಂತಳು. "ನೀ ಹೊರಕ್ಕೆ ಬಾ... ನಾನು ಮಾರೀ ತೊಳೀಬೇಕು... "ಎಂದ ಅವಳು ಹೊರಕ್ಕೆ ಬಂದಳು. ಅವನು ಹತ್ತಿರದಿಂದ ಅವಳನ್ನು ನೋಡಿದ... ಹೆಂಡತಿ "ಅರೇ ನೀನು ರಾಧಾ ಏನೇ

ಏನಾಗೈತಿ ನಿಂಗೆ ! ಮೈಗೆ ಆರಾಮ ಇಲ್ಲೇನು!... ಅದ್ಯಾಕೆ ಹೀಗೆ ಬಡಕಲಾಗಿದೀ "ಕೇಳಿದ. ಅವಳು ಉತ್ತರ ಕೊಡುವ ಮುಂಚೆಯೇ, ಹಿಂದಿನಿಂದ ಅತ್ತೆಯ ಧ್ವನಿ ಕೇಳಿಸಿತು

"ಇಲ್ಲೇನ ಮಾಡ್ತಕತ್ತಿದೇಯೇ ತಾಯೀ... ಇತ್ಲಾಗೆ ಸರಿ ಅವ ದಣಿದಾನ ಕೈ ಕಾಲು ಮಾರಿ ತೋಳಿತಾನ" ರಾಧಾ ಬೆದರುತ್ತಾ ಅಲ್ಲಿಂದ ಸರಿದಿದ್ದಳು.

"ಅವ್ವಾ ಆಕಿಗೇನು ಗದರತದಿ ? ಆಕಿ ಏನು ತಪ್ಪು ಮಾಡ್ಯಾಳಾ?"

"ನಿಂಗೇನೂ ಗೊತ್ತಿಲ್ಲ ಬಿಡು ಬಾಳಾ... ತುಕಡಿಯಾಗ ನಿನ್ನ ಕತಿಯೇ ಬ್ಯಾರೇ... ಇಲ್ಲಿ ಈ ತುಕಡಿಯಾಗ ನನ್ನ ಕತಿಯೇ ಬ್ಯಾರೆ ಅದ... 'ನೀನು ಲಗೂನ ತೊಳೆದು ಬಾ. ಚಾ ಕುಡೀವಂತೆ ಕಿಚಡಿ ತಿನ್ನುವಂತಿ...." ಎಂದು ಹೇಳಿ ಹಂಡೆಯಿಂದ ಬಿಸಿ ನೀರನ್ನು ಬಕೆಟ್ಟಿಗೆ ತೋಡಿ ತಣ್ಣೀಗನ್ನು ಬೆರಸಿ ಹದ ಮಾಡಿದಳು.

"ಅಪ್ಪ ಎಲ್ಲಿ ಹೋದ್ನೋ ಇಷ್ಟು ಹೊತ್ತಾದ್ರೂ ಬಂದ್ಹಂಗಿಲ್ಲ."|ತಂದೆಯನ್ನು ಕಾಣದೆ ದತ್ತ ಕೇಳಿದ.

"ವರನ ಕಡಿಯವ್ರು ಲಗ್ನದ ಸುದ್ದಿ ಮಾತಾಡ್ಲಿಕ್ಕೆ ಬರ್ತೀನಿ ಅಂತ ತಿಳ್ಸಿದ್ರು... ದಿನ ವ್ಯಾಳ ಯಾವುದು ಭಲೋ ಇದ ಅಂತ ಕೇಳ್ಕಂಬರ್ಲಿಕ್ಕ ಹೋಗ್ಯಾರ..."

"ಸುಧಂಗ ಈಗ್ಲೇ ಯಾಕವ್ವಾ ಲಗ್ನ ? ಆಕಿ ಇನ್ನೂ ಚಿಕ್ಕವಳಿದಾಳ..."

"ನಿಂಗೆ ಅದೆಲ್ಲ ಗೊತ್ತಾಗಕ್ಕಿಲ್ಲ ತೆಗಿ... ಆಕಿ ಹಿಂದೆ ಸೀತಾ, ಆಕಿ ಹಿಂದ ಕಪಿಲ.... ಎಲ್ರಿಗೂ ಲಗ್ನ ಮಾಡ್ಬೇಕಪ್ಪಾ... ನಮ್ಮ ತಲೀ ಮ್ಯಾಲಿನ ಕೆಲ್ಸ ತಾನೇ..."

"ಮತ್ತ...? ರೊಕ್ಕಕ್ಕ ಏನು ಮಾಡೀರಿ?..."

"ನಿನ್ನ ಕಾಕಾನ ಕೂಡ ಮಾತಾಡ್ಯಾರಾ... ಊರಾಗಿರೋ ಜಮೀನನ್ನು ಮಾರ್ಲಿಕ್ಕೆ ಒಪ್ಕಂಡ್ಯಾರ ನಿಮ್ಮ (ಕಾಕಾ)

"ಜಮೀನ ಹೋದ್ರ ಮತ್ತ ತಗೊಳಕ್ಕಾಯ್ತದೇನ ಅವ್ವಾ.... ಒಂದಿಷ್ಟು ಸಾಲ ತಂಗೋಡ್ರಾಯ್ತು... ನಾನು ತೀರಿಸ್ತೀನಿ."

"ಸಾಲದ ಹಣದಾಗ ಏನಾಯ್ತದೋ... ವರದಕ್ಷಿಣೇನೇ ಸಾವಿರ ಎರಡು ಸಾವಿರ ಕೊಡ್ಬೇಕಂತೆ..."

"ಅಷ್ಟೊಂದು... ವರದಕ್ಷಿಣೆ ಕೊಡಾದು, ತಗೊಳ್ಳಾದೂ ಎರಡು ತಪ್ಪು ಅಂತ ಕಾನೂನು ಹೇಳ್ತದವ್ವಾ.... ಜೈಲು ಶಿಕ್ಷೆ ಆಗ್ತದೆ..."

"ಎಲ್ರೂ ನಿನ್ಹಂಗ ಅಪರಂಜಿ ಹಂಗಿರ್ತಾರೇನೋ ಬಾಳಾ... ಮಾವಗೆ ತ್ರಾಸ ಆಗ್ತದೆ ಅಂತ ವರದಕ್ಷಿಣೆ ಬ್ಯಾಡ ಅಂದೇ... ನೀನು ಬ್ಯಾರೆ ಹೆಣ್ಣಿನ್ನ ಲಗ್ನ ಆಗಿದ್ದಿದ್ರೆ ಬ್ಯಾಡ ಅಂತಂದ್ರೂ ವರದಕ್ಷಿಣೆ ರೊಕ್ಕ ಸಿಗ್ತಿತ್ತು.... ಆ ರೊಕ್ಕ ಇಲ್ಲದಂಗಾತು."

"ಅದಕ್ಕೇ ಏನವ್ವಾ ನಿಂಗ ರಾಧನ ಮ್ಯಾಲೆ ಕ್ಯಾಪ?... ನಿಂಗೆಷ್ಟು ರೊಕ್ಕ ಬೇಕು

ಕೇಳು ನಾನು ಕೊಡ್ತೀನಿ."

"ನೀನು ಕೊಡ್ಡಿದ್ರೆ ಲಗ್ನ ಹ್ಯಾಂಗೆ ನಡೆದಾತು?... ನೋಡು ನಿನ್ನ ಹೇಣ್ತೇನ ಎಷ್ಟೊತ್ತಾತು ಚಾ ಮಾಡ್ಲಿಕ್ಕೆ ಹೇಳಿ. ಕೈ ಓಡಾದೇ ಇಲ್ಲ... ಮೆಮಳು ಚುರುಕಿಲ್ಲ. ನಂಗೂ ಹೇಳಿ ಹೇಳಿ ಸಾಕಾಗ್ತದ..."

"ಅವ್ವಾ... ನಾನು ಹೋಗಿ ನೋಡ್ತೀನಿ. ನಾನೇ ಚಾ ಮಾಡ್ಕೊಂಡು ಕುಡ್ಪ ಅಭ್ಯಾಸ ಐತಿ... ನಿಂಗೂ ಬೇಕೇನು ಹೇಳು..."

"ಅಗಾ... ವಾರಾಯ್ತಿ ಬಂದ್ಲು... ಲಗೂನೇ ತಗೊಂಡ್ಬಾರವ್ವಾ... ತಣ್ಣಗಾಗ್ತದೆ..." ಎಂದು ಹೇಳಿ ಚಹಾದ ಕಪ್‌ಗಳಿದ್ದ ತಟ್ಟೆಯನ್ನು ಎತ್ತಿಕೊಂಡಳು. "ಒಳಗ್ಹೋಗಿ ಕೆಲಸ ನೋಡು" ಎಂದು ಹೇಳಿ ಒಳಕ್ಕೆ ಸೊಸೆಯನ್ನು ಕಳಿಸಿದಳು.

ಎಲ್ಲರ ಊಟ ಮುಗಿದು, ಮಲಗುವ ಸಮಯವಾಗಿತ್ತು. ಹಿತ್ತಲಿನಲ್ಲಿ ಬೆಳದಿಂಗಳ ಬೆಳಕಿನಲ್ಲಿ ಪಾತ್ರೆಗಳನ್ನು ತೊಳೆಯುತ್ತಿರುವ ಹೆಂಡತಿಯ ಬಳಿಗೆ ಬಂದ. "ಮಲಗೂದಿಲ್ಲೇನು ರಾಧಾ ಇನ್ನು ಪಾತ್ರೆ ತಿಕ್ಕೋತಾ ಕೂತಿದೀಯ..." ಕೇಳಿದ. ಅವಳು ಉತ್ತರಿಸಲಿಲ್ಲ. ಅವನು ಅಲ್ಲಿದ್ದ ಕಲ್ಲಿನ ಮೇಲೆ ಕುಳಿತು, ಅವಳ ಕೈ ಹಿಡಿದ. "ಯಾಕ, ನನ್ನ ಕೂಡಾ ಮಾತಾಡುದಿಲ್ಲೇನು ರಾಧಾ..." ಪ್ರೀತಿಯಿಂದ ಕೇಳಿದ. ಅವಳು ಸೊರಸೊರ ಅತ್ತಳು. "ಯಾಕ ? ಹುಚ್ಚಿ ಅದಿಯೇನು ನೀನು... ಅಳಾಕ ಹತ್ತಿದ್ದೀಯಲ್ಲ..." ಆಕಡೆ ಈ ಕಡೆ ನೋಡಿ, ಅವಳ ಗಲ್ಲವನ್ನು ಹಿಡಿದೆತ್ತಿದ. ಅವಳು ಅವನ ಕೈಯನ್ನು ಸರಿಸಿ ಪಾತ್ರೆಯನ್ನು ಜೋರಾಗಿ ತಿಕ್ಕ ತೊಡಗಿದಳು. ಅವಳ ಕೈಯಿಂದ ಪಾತ್ರೆಯನ್ನು ಕಿತ್ತು ಕುಕ್ಕಿದ." ನಡೀ ಒಳಕ್ಕ. ಮಲಗೂ ವ್ಯಾಳೆ ಆಯ್ತು..." ಎಂದು ಬಲವಂತವಾಗಿ ಎಬ್ಬಿಸಿದ ಚೊಂಬಿನಲ್ಲಿದ್ದ ನೀರಿನಿಂದ ಕೈ ತೊಳೆಸಿದ ಕೈ ಒರೆಸ್ಕೊಂಡು ಬೇಗ ಬಾ... ಕಾಯ್ತಾ ಇರ್ತೀನಿ" ಎಂದ.

"ಮತ್ತೆ ಅತ್ತೀ..."

"ಅತ್ತೀ ಮಾವ ಯಾರ್ಗೂ ಹೆದರಂಗಿಲ್ಲ. ನಾನು ಅವ್ವಗ ಹೇಳ್ತೀನಿ" ಎಂದು ಹೇಳಿ ಮನೆಯೊಳಕ್ಕೆ ನಡೆದ. ಇವಳು ಪಾತ್ರೆಗಳನ್ನು ಅಲ್ಲಿಯೇ ಬೋರಲು ಹಾಕಿ ಸೀರೆಯಲ್ಲೇ ಕೈ ಒರೆಸಿಕೊಳ್ಳುತ್ತಾ ಒಳಗೆ ಬಂದಳು. ಗಂಡ ಎಲ್ಲಿದ್ದಾನೆ, ತಾನು ಎಲ್ಲಿ ಮಲಗಬೇಕೆಂದು ತಿಳಿಯದೇ, ಅಡಿಗೆ ಮನೆಗೆ ಬಂದಳು. ಅಲ್ಲಿ ದತ್ತ ಹಾಸಿಗೆಗಳನ್ನು ಹಾಸಿಕೊಂಡು ಇವಳಿಗಾಗಿ ಕಾಯುತ್ತಾ ಕುಳಿತಿದ್ದ. "ರಾಧಾ ಕದ ಹಾಕು..." ಎಂದ. ಇವಳ ಮೈ ಜುಮ್ಮೆಂದಿತು. ಅಲ್ಲಿಯವರೆಗಿನ ಕಷ್ಟಗಳನ್ನು ಮರೆತಳು. ಅವಳು ಬಾಗಿಲನ್ನು ಹಾಕಿ ಅವನ ಸನಿಹಕ್ಕೆ ಬಂದಳು. ಅವಳ ಕೈ ಹಿಡಿದು ಎಳೆದುಕೊಂಡ. ನಾಚಿದ್ದರೂ ಕೊಸರಿಕೊಳ್ಳಲಿಲ್ಲ. "ರಾಧಾ... ನಾನು ನಿಂಗೋಸ್ಕರ ಬಂದಿದ್ದೀನಿ..." ಎನ್ನುತ್ತಾ ತಬ್ಬಿಕೊಂಡು "ಹೆಂಗಿದ್ದವಳು ಹೆಂಗಾಗಿ ಹೋಗಿದ್ದೀಯಲ್ಲ... ಏನಾಗದೆ

ನಿಂಗೆ ? ಪ್ರಶ್ನಿಸಿದ.

"ನನ್ನನ್ನು ನಿಮ್ಮೂರಿಗೆ ಕರೆಕ್ಕೊಂಡು ಹೋಗಿ..." ಅಳುವ ಧ್ವನಿಯಲ್ಲಿ ಹೇಳಿದಳು.

"ಅಲ್ಲಿ ಹೆಂಗಸ್ರನ್ನ ಇಟ್ಕೊಳ್ಳುವ ಹಂಗಿಲ್ಲ. ನೀನು ನಿಮ್ಮಪ್ಪನ ಮನಿಗೆ ಹೋಗಿರು. ನಾನು ರಜದಲ್ಲಿ ಅಲ್ಲಿಗೇ ಬರ್ತೀನಿ. ನಾನು ಅವ್ವನ ಹತ್ರ ಮಾತಾಡ್ತೀನಿ."

"ಬ್ಯಾಡ... ಮಂದಿ ಆಡ್ಕೊಂತಾರು..."

"ಯಾರೂ ಆಡ್ಕಳಾದಿಲ್ಲ. ನಾನು ಮಾವಗ ಹೇಳ್ತೀನಿ. ಅಲ್ಲಿಗೇ ರೊಕ್ಕ ಕಳಿಸ್ತೀನಿ... ಇದೆಂಥಾ ಕೊಳಕು ಸೀರಿ... ವೈನಾಗಿರೋದು ಇಲ್ಲೇನು?..." ಕೆಟ್ಟ ಮುಖ ಮಾಡಿದ.

"ಪೆಟ್ಟಿಗೆ ಒಳಗೆ ಅದೆ... ಅತ್ತಿ ತೆಗೆದಿಟ್ಟಾರ..."

"ನಾಳೆ ಪ್ಯಾಟೆಗ್ಹೋಗಿ, ನಿಂಗೆ ನಾಲ್ಕು ಹೊಸ ಸೀರಿ ತಂದ್ಕೊಡ್ತೀನಿ..." ಎಂದು ಹೇಳಿ ರಮಿಸಿ, ಅವಳನ್ನು ತನ್ನ ಅಪ್ಪುಗೆಯಲ್ಲಿ ಬಂಧಿಸಿದ.

ಬೆಳಕು ಹರಿಯುವ ಸಮಯವಾಗಿತ್ತು. ಕಟ ಕಟ ಬಾಗಿಲು ಸದ್ದಾಯಿತು. ರಾಧಾ ಎಚ್ಚರಗೊಂಡಳು. ಗಂಡ ಗಾಢ ನಿದ್ದೆಯಲ್ಲಿದ್ದ. ಎದ್ದು ಬಂದು ಬಾಗಿಲನ್ನು ತೆರೆದು ಬಾಗಿಲ ಮರೆಯಲ್ಲಿ ನಿಂತಳು. "ಬೆಳಕಾಗ್ಯೆತಿ...ಬಚ್ಚಲು ಮನೆಯ ಹಂಡೆಗೆ ನೀರನ್ನು ತುಂಬಿ ಒಲೆ ಉರಿ ಹಾಕು... ಒಬ್ಬೊಬ್ಬರಾಗಿ ಏಳುವ ಹೊತ್ತಾಯ್ತು... ಬಾಗಿಲು ಹಾಕ್ಕೊಂಡು ಮಲಗುವ ವ್ಯಾಳೆ ಇದಲ್ಲ" ಎಂದು ಹೇಳಿದಳು. ರಾಧಾ ಆಚೆಗೆ ಬಂದಳು. ದತ್ತನಿಗೂ ಎಚ್ಚರವಾಗಿತ್ತು.

"ಬಾಳಾ, ಎದ್ದು ಹೋಗಿ ಮಾರ್ತಂಡನ ಪಕ್ಕ ಮಲಕ್ಕೋ, ಬೆಳಗಾಗ್ತಾ ಬಂದದೆ. ಅಕ್ಕ, ಭಾವ, ಏನಂದ್ಕೊಂಡಾರು...?" ದತ್ತ ಆಕಳಿಸುತ್ತಾ ಎದ್ದು ಹಾಸಿಗೆಯನ್ನು ಸುತ್ತಲಾರಂಭಿಸಿದ ನೀನು ಹೋಗಿ ಮಲಕ್ಕೋ ರಾಧಾ ಸುತ್ತಿಡ್ತಾಳೆ..." ಅವನು ಉತ್ತರಿಸದೇ ಹೊರಗೆ ಬಂದು ತಮ್ಮನ ಪಕ್ಕದಲ್ಲಿ ಮಲಗಿದ. ನಿದ್ದೆ ದೂರ ಸರಿದಿತ್ತು. ರಾಧಾ ಹಾಸಿಗೆಗಳನ್ನು ಸುತ್ತಿ ಆಚೆ ಎತ್ತಿ ತಂದಿಟ್ಟಿದ್ದು ತಿಳಿಯಿತು. 'ಛೆ... ಇದೆಂಥಾ ಜೀವನ ? ರಾಧಾಗೆ ಚೂರೂ ಸುಖವಿಲ್ಲ ಅಂತ ಅನ್ನಿಸಿತು. ಆದರೆ ಅವನೂ ಅಸಹಾಯಕ. ಅವನಿದ್ದ ಊರಿಗೆ ಅವಳನ್ನು ಕರೆದೊಯ್ಯುವಂತಿಲ್ಲ. ಅವಳು ಇಲ್ಲಿ ಜೀತದಾಳಿನಂತೆ ದುಡಿಯುತ್ತಿರುವುದು ಗಮನಕ್ಕೆ ಬಂದಿತ್ತು. ಮದುವೆಯಾಗಿ ಎರಡು ವರ್ಷ ಕಳೆದಿತ್ತು. ಮಕ್ಕಳಾಗಿಲ್ಲ... ಒಂದು ಮಗುವಾದರೂ ಇದ್ದಿದ್ದರೆ, ಇವಳ ಏಕಾಂಗಿತನ ಕಡಿಮೆಯಾಗುತ್ತಿತ್ತೆನ್ನಿಸಿತ್ತು.

ಮದುವೆಯಾಗಿದ್ದಾಗ ರಾಧಾ ಎಂಥಾ ಚೆಲುವಿಯಾಗಿದ್ದಳು ! ರಸ ತೊಟ್ಟಿಕ್ಕುವ ಮಾವಿನ ಹಣ್ಣಿನಂತೆ, ಯೌವನದಿಂದ ತುಂಬಿದ್ದಳು. ತನ್ನ ಸ್ನೇಹಿತರೆಲ್ಲ ಅಸೂಯೆ

ಪಟ್ಟಿದ್ದರು. ಗೇಲಿ ಮಾಡಿದ್ದರು. ರಸಪೂರಿ ಮಾವಿನ ಹಣ್ಣಿನಂತೆ ಇರೋಳನ್ನ ಬಿಟ್ಟು ಕ್ಯಾಂಪ್‌ನಲ್ಲಿ ಹೇಗೆ ಇರ್ತೀಯೋ ಜೋಷಿ...? ನಿನ್ನಿಂದ ದೂರ ನಿನ್ನ ವೈನಿ ಹೇಗಿರ್ತಾರೋ... ಯಾರಾದ್ರೂ ಅಪಹರಿಸ್ಕೊಂಡು ಹೋದ್ರೆ ಏನ್ಮಾಡ್ತೀಯ ಅಂತ ಕೆಣಕಿದ್ದರು.

"ಗೇಲಿ ಮಾಡ್ಬೇಡ್ರೋ... ನಿಮ್ಗೆಲ್ಲಾ ಹೊಟ್ಟೆಕಿಚ್ಚು... ರಜ ಸಿಕ್ಕಾಗೆಲ್ಲಾ ಬಂದು ನೋಡ್ಕೊಂಡು ಹೋಗ್ತೀನಿ. ನನ್ನ ರಾಧಾ... ನಂಗೋಸ್ಕರ ಕಾಯ್ತಾಳೆ..." ಎಂದಿದ್ದ. ರಜ ಸಿಗುತ್ತಿದ್ದುದು ವರುಷಕ್ಕೊಮ್ಮೆ. ಅದೂ ಎರಡು ವಾರಗಳು ಮಾತ್ರ. ಎರಡು ಮೂರು ವರ್ಷಗಳಲ್ಲಿ ಎರಡು ಬಾರಿ ಬಂದಿದ್ದ. ಮನೆ ತುಂಬಾ ಜನ ಹೆಂಡತಿಯೊಡನೆ ಏಕಾಂತದಲ್ಲಿ ಕುಳಿತು ಮಾತಾಡುವಂತಿಲ್ಲ. ಸಮಯ ಕಳೆಯುವಂತಿಲ್ಲ... ನನಗಗಿ ವರ್ಷವೆಲ್ಲಾ ಕಾಯುತ್ತಾ ಕುಳಿತಿರುವ ಈಕೆಗೆ ತಾನು ಅನ್ಯಾಯ ಮಾಡುತ್ತಿದ್ದೇನೆಂದೆನಿಸಿತ್ತು. ಏಕಾಏಕಿ ಆ ನೌಕರಿಯನ್ನು ಬಿಟ್ಟು ಬರುವಂತಿಲ್ಲ. ಇಲ್ಲಿ ಇವರುಗಳ ನಡುವೆ ಇರೋದೂ ಕಷ್ಟನೇ... ಬೇರೆ ಏನಾದ್ರೂ ದಾರಿಯನ್ನು ಹುಡುಕಬೇಕೆಂದುಕೊಂಡ...

"ಅವ್ವಾ... ರಾಧನ್ನ ಪ್ಯಾಟೆಗೆ ಕರ್‍ಕೊಂಡು ಹೋಗ್ತೀನಿ... ಜವುಳಿ ಅಂಗಡಿಗೆ ಹೋಗೋದದ..."ಎಂದ.

"ಜವುಳಿ ಅಂಗಡಿಗಾ ? ಈಗೇನ ಸಂಭ್ರಮ?... ಯಾರಿಗೆ ಸೀರಿ? ಅವಳ ಹತ್ರ ಬೇಕಾದಷ್ಟವ... ಉಟ್ಟು ಹರೀತಾಳ ಅಂತ ಪೆಟ್ಟಿಗೇಲಿ ಇಟ್ಟೀನಿ..."

"ನನ್ನ ಸ್ನೇಹಿತಂಗೆ ಮದುವೆ... ಅವನು ಸೀರೆ ತಗೊಂಡ್ಬಾ ಅಂತ ರೊಕ್ಕ ಕೊಟ್ಟಾನ... ಬಣ್ಣ, ಅಂಚು, ಸೆರಗು ನನಗೇನ ತಿಳೀತತಿ.... ರಾಧಂಗಾದ್ರೆ ತಿಳೀತತಿ..."

"ಸುಧಾನ್ನ ಕರ್‍ಕೊಂಡ್ಹೋಗು... ಅವಳೂ ಲಗ್ನಕ್ಕೆ ನೆರೆದು ನಿಂತಿರುವ ಕನ್ಯಾ ಅದಾಳ. ಅವಳಿಗಾದ್ರ ಎಲ್ಲಾ ತಿಳೀತತಿ... ಇವಳು ಹಳ್ಳೀ ಗುಗ್ಗು ಏನ್‌ಗೊತ್ತದ..."

"ಹಳ್ಳೀ ಗುಗ್ಗು ಅಂತ ಮನೇಲೇ ಕೂರಿಸ್ಕೊಂಡಿದ್ರೆ, ತಿಳಿಯೋದು ಯಾವಾಗ?... ಸುಧಾ ಆದರ ಶಾಣೆ ಅದಾಳ. ರಾಧಾ ದಡ್ಡಿ ಅಂತ ನೀನೇ ಒದರ್‍ತೀಯ... ನನ್ನ ಹೆಣ್ತೇನೂ ಶಾಣೆ ಆಗ್ಬೇಕು ಅಂತ ನಂಗ ಆಸೆ ಇಲ್ವೇನವ್ವಾ?... ನನ್ನ ಜತೀಲಿ ತಾನೇ ಬರ್ತಾಳೆ...?"

"ಅವಳು ನಿನ್ನ ಕೂಡಾ ಬಂದು ಬಿಟ್ರೆ ಇಲ್ಲಿ ಮನಿ ಕೆಲ್ಸ ಯಾರು ಮಾಡ್ತಾರೋ... ನೀನು ಅಪರೂಪಕ್ಕೆ ಬಂದಿದ್ದೀಯ... ಹತ್ತಾರು ಪರಿಕರ ಮಾಡುಕ್ಕೆ ನನ್ನ ಒಬ್ಬಾಕಿ ಕೈಯಾಗೆ ಆಗ್ತದೇನಪ್ಪಾ... ಅವಳು ಕೆಲಸ ಕಲಿಯೋದು ಯಾವಾಗ?...."

"ಯಾಕವ್ವಾ... ಕಕ್ಕಿ ಅದಾಳ, ಸುಧಾ ಅದಾಳ... ಸುಧಾ ಲಗ್ನ ಆಗೋ ಹುಡುಗಿ ಅವಳಿಗೆ ಕೆಲಸ ಕಲಿಸ್ಕೊಡು... ರಾಧಾ ವರ್ಷವೆಲ್ಲಾ ಮನೇಲೇ ಕುಂತಿರ್ತಾಳ... ಒಂದಿನ ನಾನು ಹೊರಕ್ಕೆ ಕರ್‍ಕೊಂಡು ಹೋಗೋದೂ ಬ್ಯಾಡ ಅಂತಿಯೇನು !" ಸ್ವಲ್ಪ ಗಡುಸಾಗಿ ಕೇಳಿದ.

"ನಾನೆಲ್ಲಿ ಹಂಗಂದೆ ! ಅಪ್ಪನಂತೆ ಕರ್ಕೊಂಡ್ಹೋಗು... ಒಂದು ರಾತ್ರೀಲಿ ಅದೇನು ಮಾಟ ಮಾಡಿದ್ಲು ನಿನ್ಹೆಂಡ್ತಿ...?" ಕೆನ್ನೆ ಮೇಲೆ ಬೆರಳಿಟ್ಟು ಕೇಳಿದಳು.

"ಅವ್ವಾ... ನೀನು ಹಿಂಗೆಲ್ಲಾ ಮಾತ್ನಾಡಿದ್ರೆ, ನಾನು ಇವಳನ್ನ ಅವರ ಅಪ್ಪನ ಮನೇಲಿ ಕರ್ಕೊಂಡ್ಹೋಗಿ ಬಿಟ್ಟು ನಾನೂ ವಾಪಸ್ಸು ಹೊರಟು ಹೋಗ್ತೀನಿ. ಎರಡು ವರ್ಷದಿಂದ ಇವಳು ಒಂದು ದಿನವಾದ್ರೂ ಅದು ಬೇಕು, ಇದು ಬೇಕು ಅಂತ ಹಠ ಮಾಡಿದ್ದಿಲ್ಲ. ಅಪ್ಪನ ಮನೆಗೆ ಹೋಗಿದ್ದಿಲ್ಲ. ತುರಗವಾಸ ಆಗಿದೆ ಇವಳಿಗೆ. ನಿಂಗೆ ಏನೂ ಅನ್ನಿಸೋದೇ ಇಲ್ವಾ!... ಸುಧಾಳ ಅತ್ತೀ ಮನೆಯವ್ರೂ ಸುಧಾಳನ್ನ ಹಿಂಗೇ ನಡೆಸ್ಕೊಂಡ್ರೆ ಏನ್ಮಾಡ್ತೀಯ...?" ತಾಯಿ ಪೆಚ್ಚಾದಳು. ಸ್ವಲ್ಪ ಹೊತ್ತು ಸುಮ್ಮನಿದ್ದು ನುಡಿದಳು.

"ಹೊರಗೆ ದುಡಿಯೋ ಗಂಡ್ಸು ನೀನು... ನಿಂಗೆ ಅನ್ನಿಸಿದ್ದನ್ನ ಒದರ್ತೀಯ... ಈ ಮನೇಲಿ ನಾನೂ ಜೀತದಾಳಿನಂತೆ ದುಡಿದಿದ್ದೀನಿ ಮಗನ... ಅತ್ತೀ ಮಾವನ ಸೇವೆ ಮಾಡೀನಿ. ಅಕ್ಕಭಾವ ಹೇಳ್ದಂಗ ಕೇಳೀನಿ. ನಿಮ್ಮಪ್ಪನ ಕೈಯಿಂದ ಬಡಿಗೇಲಿ ಬಡಿಸ್ಕೊಂಡೀನಿ... ನಿಮ್ಮನ್ನೆಲ್ಲಾ ಹೊತ್ತು ಹೆತ್ತಿದ್ದೀನಿ... ಸಾಕಿದೀನಿ..." ಹೇಳ್ತಾ ಹೇಳ್ತಾ ಅತ್ತಳು.

"ಸಾಕು ಅಳ್ಬೇಡವ್ವ... ಕಷ್ಟ ಅಂದರೆ ಏನೂಂತ ನಿಂಗೂ ಗೊತ್ತೈತಿ... ರಾಧಾನೂ ಹಂಗೇ ಬಾಳ್ಬೇಕಾ?... ಅವಳನ್ನ ಅಪ್ಪನ ಮನೇಲಿ ಬಿಟ್ಟು ನಾನೂ ಹೊರಟ್ಹೋಗ್ತೀನಿ... ಅಷ್ಟೆ. ನೀನಾದ್ರೂ ಅರ್ಥ ಮಾಡ್ಕೋತೀಯ ಅಂತ ತಿಳಿದಿದ್ದೆ ನಾನು..."

"ಸರಿ, ನನ್ನನ್ನು ಅಂದದ್ದು ಸಾಕು. ಅದೇನು ಮಾಡ್ಕೋತೀಯೋ ಮಾಡ್ಕೋ... ನಾನು ಇನ್ನು ನಿನ್ನ ಸುದ್ಧಿಗೆ ಬರುಲ್ಲ..." ಅವಳು ಅವನನ್ನು ಅಲ್ಲಿಯೇ ಬಿಟ್ಟು ಹೋಗಿದ್ದಳು. ಇವನ ಮನಸ್ಸು ಕೆಟ್ಟು ಹೋಗಿತ್ತು. ತಾನು ಅವ್ವನನ್ನು ಅಂದದ್ದು ಸ್ವಲ್ಪ ಹೆಚ್ಚಾಯಿತೇನೋ ಅಂತ ಅಂದುಕೊಂಡು, ಮನೆಯ ಮುಂಬಾಗಿಲಿಗೆ ಬಂದು ನಿಂತ. ದೊಡ್ಡಪ್ಪ ಅಪ್ಪ ಎಲ್ಲೋ ಹೊರಗೆ ಹೋಗಿದ್ದರು ಚಿಕ್ಕವರು ಸ್ಕೂಲಿಗೆ ಹೋಗಿದ್ದರು. ಸುಧಾ ಕಸೂತಿಯ ಬಟ್ಟೆಯನ್ನು ಹಿಡಿದು ಕುಳಿತಿದ್ದಳು. ರಾಧಾ ಬಟ್ಟೆಗಳನ್ನು ಒಗೆಯುತ್ತಿದ್ದಳು... ಬೇಸರದಿಂದ ಅತ್ತಿತ್ತ ಠಳಾಯಿಸಿದ. ಇದ್ದಕ್ಕಿದ್ದಂತೆ ಹೆಜ್ಜೆ ಹಾಕುತ್ತಿದ್ದ ಅವನ ಕಾಲುಗಳು ನಿಂತವು. ಎದುರು ಮನೆಯಲ್ಲಿ ಯುವತಿಯೊಬ್ಬಳು, ಜಗುಲಿಯ ಮೇಲೆ ನಿಂತಿದ್ದ ಮಗುವಿಗೆ ಏನನ್ನೋ ತಿನ್ನಿಸುತ್ತಿದ್ದಳು. ಮತ್ತೆ ಮತ್ತೆ ನೋಡಿದ. ಯಾರೋ ಹೊಸಬರು,ಎದುರು ಮನೆಗೆ ಹೊಸ ಸಂಸಾರ ಬಂದಂತಿದೆ. ಆ ಯುವತಿ, ದಷ್ಟಪುಷ್ಟವಾಗಿ ಆರೋಗ್ಯವಾಗಿದ್ದಾಳೆ. ಅವಳದ್ದೇ ಮಗು ಇರಬಹುದು. ಎಷ್ಟು ಮುದ್ದಾಗಿದೆ. ಆ ಕಡೆಯೇ ನೋಡುತ್ತಾ ನಿಂತ. ಅವನು ತನ್ನನ್ನೇ ನೋಡುತ್ತಿರುವನೆಂದು ಭಾಸವಾಯಿತು ಮಂಗಳನಿಗೆ. ತಮ್ಮನನ್ನು ಅಲ್ಲೇ ಬಿಟ್ಟು,

ಒಳಗೆ ನಡೆದುಬಿಟ್ಟಳು.

ಅವನು ಅಲ್ಲಿಯೇ ನಿಂತಿದ್ದ. ಒಳಬಾಗಿಲಲ್ಲಿ ನಿಂತು ಬಾಗಿಲ ಸಂದಿಯಿಂದ ನೋಡಿದಳು ಜೋಷಿ ಮನೆಗೆ ಯಾರೋ ಬಂದಿದ್ದಾರೆ. ನೋಡಲು ಕಟ್ಟುಮಸ್ತಾಗಿದ್ದಾನೆ. ಮೀಸೆ ಬೇರೆ ಇದೆ... ತನ್ನ ಗಂಡನಾಗುವವನಿಗಿಂತ ಸುಂದರವಾಗಿದ್ದಾನೆ ಅಂತೆನ್ನಿಸಿತು ಅವಳಿಗೆ.

"ಯಾರೇ ಮಂಗಳಾ ? ಮರೆಯಲ್ಲಿ ನಿಂತು ನೋಡ್ತಿದ್ದೀಯ...? ಮಲಗಿದ್ದ ತಾಯಿ ಕೇಳಿದಾಗ ಬೆಚ್ಚಿದಳು. ಬಾಲು ಎಲ್ಲಿ ಹೋದ?..."

"ಜಗುಲಿ ಮೇಲೆ ಆಡ್ಕೋತಿದ್ದಾನೆ..."ಎಂದು ಹೇಳಿ ಮತ್ತೊಮ್ಮೆ ಅವನಿದ್ದ ಕಡೆ ನೋಡಿದಳು. ಆ ವ್ಯಕ್ತಿ ಇರಲಿಲ್ಲ. ಅಡಿಗೆಮನೆ ಸೇರಿದಳು. ತೊಳೆದ ಪಾತ್ರೆಗಳನ್ನು ಜೋಡಿಸಿಡುವಾಗ ತಾಯಿ ಕರೆದದ್ದು ಕೇಳಿಸಿತು. ಹೊರಗೆ ಬಂದಳು.

"ನೋಡು, ಯಾರೋ ಸಾರ್...ಸಾರ್ ಅಂತ ಕರೀತಿದ್ದಾರೆ...ಗಂಡಸರು..."

"ಯಾರಮ್ಮಾ?ಅಣ್ಣ ಮನೇಲಿಲ್ಲವಲ್ಲ"

"ಹೋಗಿ ನೋಡೇ... ನನ್ನನ್ನ ಕೇಳಿದ್ರೆ?"ತಾಯಿ ಸಿಡುಕಿದಳು. ಸೀರೆಗೆ ಕೈ ಒರೆಸುತ್ತಾ ಹೊರಬಂದಳು ಜಗುಲಿಯ ಕೆಳಗೆ, ಆ ವ್ಯಕ್ತಿ ನಿಂತಿದ್ದ.

"ನಿಮ್ಮ ಮಗು ಅಲ್ಲಿ ಹೋಗ್ತಿತ್ತುರೀ ಕರೆದ್ರೆ ಬರ್ಲಿಲ್ಲರೀ... ಬೀದಿಗೆ ಹೋಗ್ಯಾನ..."ಅವನೆಂದ...

"ಎಲ್ಲಿ? ಎಲ್ಲಿ" ಎನ್ನುತ್ತಾ ಗಾಬರಿಯಿಂದ ಅವಳು ಜಗುಲಿಯಿಂದ ಕೆಳಗಿಳಿದಳು ಯಾರೇ ಮಂಗಳಾ... ಮಗು ಎಲ್ಲಿ ಹೋಯ್ತೇ... ಒಬ್ಬನನ್ನೇ ಬಿಡ್ಬೇಡ ಅಂತಂದ್ರೂ ನೀನು ಕೇಳುಲ್ಲ..."ಅಲುಗಾಡದ ಸ್ಥಿತಿಯಲ್ಲಿದ್ದ ತಾಯಿ ಮಲಗಿದ್ದಲ್ಲಿಂದಲೇ ಕೇಳಿದಳು. ಮಂಗಳ ಉತ್ತರಿಸಲಿಲ್ಲ. ತಮ್ಮನನ್ನು ಹುಡುಕಿಕೊಂಡು ಹೊರಟಿದ್ದಳು.

"ಇಲ್ಲಿ ಬಾ... ಕರ್ಕೋ ಇವನನ್ನ, ನನ್ನನ್ನ ಮುಟ್ಟಿಬಿಟ್ಟ."ಲಕ್ಷ್ಮಿದೇವಮ್ಮ ಕೂಗಿದಳು ಮಂಗಳ ಅತ್ತ ತಿರುಗಿದಳು ಬಾಲು ಆಕೆಯ ಕಾಲುಗಳನ್ನು ಬಿಗಿಯಾಗಿ ಹಿಡಿದುಕೊಂಡು ಇತ್ತ ಬೆದರುಗಣ್ಣುಗಳಿಂದ ನೋಡಿದ. ಮಂಗಳ ಅವನ ಬಳಿ ಸಾರಿದಳು.

"ಏನಾಯ್ತೋ... ಬಾಲು... ಅತ್ತೇನ ಮುಟ್ಟಿಬಿಟ್ಯಾ..."ಎನ್ನುತ್ತಾ ಕೈ ಚಾಚಿದಳು. ಅವನು ಅವಳ ಬಳಿಗೆ ಬಂದು, ಅವಳ ಹಿಂದೆ ನಿಂತಿದ್ದ ಆ ವ್ಯಕ್ತಿಯ ಕಡೆ ದಿಗಿಲಿನಿಂದ ನೋಡಿದ. ಅವನು ಬಾ ಎನ್ನುವಂತೆ ಕೈ ಚಾಚಿದಾಗ, ಕಣ್ಣುಗಳನ್ನು ಮುಚ್ಚಿಕೊಂಡ.

"ತುಳಸೀಪೂಜೆ ಮಾಡುವಾಗ, ದಿನಾ ಬಂದು ಪ್ರಸಾದ ಕೊಡೋ ತನಕ ದೂರದಲ್ಲಿ ನಿಂತಿರುತ್ತೆ. ಇವತ್ತು ಏನಾಯ್ತೋ... ಓಡ್ಬಂದು ಕಾಲಿಗೆ ಆತುಕೊಂಡ್ಬಿಟ್ಟ."ಆಕೆ ವಿವರಣೆ ನೀಡಿದಳು... ದನಿಯಲ್ಲಿ ಅಸಮಾಧಾನವೂ ಇತ್ತು.

'ಅವ ಇಲ್ಲಿಗೆ ಬರ್ತಾನ ಅಂತ ನಂಗ ಗೊತ್ತಾಗ್ಲಿಲ್ರೀ... ನಿಂತ್ಕೋ ಅಂತ ಒದರಿದೆ ಓಡ್ಬಿಟ್ಟ... ನನ್ನ ಕಂಡು ಅವ ಹೆದರ್ಕೊಂಡಿದಾನ ಅಂತನ್ನಿಸ್ತದ...

"ಮತ್ತಿನ್ನೇನಪ್ಪಾ... ಯಾರೋ ಹೊಸಬ... ಮೀಸೆಗೀಸೆ ಬಿಡ್ಕೊಂಡಿದೀಯ. ಹೆದರ್ಬೇ ಇರ್ತಾರಾ ಚಿಕ್ಕ ಮಕ್ಳು... ಯಾರ್ನೀನು? ಇಲ್ಲೇನು ಮಾಡ್ತಿದ್ದೆ? ಪ್ರಶ್ನಿಸಿದಳು ಬಿರುಸಾಗಿ

'ನಾನ್ರೀ ದತ್ತಾತ್ರೇಯ ಜೋಷಿ... ತುಂಗಾಬಾಯಿಯವರ ಮಗನ್ರೀ... ಸೂಟಿ ಮೇಲೆ ನೆನ್ನೆ ಬಂದಿನ್ರೀ... ನಮಸ್ಕಾರ ರೀ... ಇಬ್ಬರ ಕಡೆಗೂ ತಿರುಗಿ ಕೈ ಮುಗಿದ.

"ನನ್ನ ಮಡಿ ಕೆಡ್ತು... ತುಳಸೀ ಪೂಜೆ ಮುಗಿದಿರ್ಲಿಲ್ಲ... ಮತ್ತೆ ಮಡೀ ಉಟ್ಕೋಬೇಕಾಯ್ತು..." ಲಕ್ಷ್ಮಿದೇವಮ್ಮ ಗೊಣಗಿದಳು.

"ಕೂಸು ಮುಟ್ಟೈತ್ರೀ... ಮಡೀ ಏನ...? ಬೆಣ್ಣೆ ಕೃಷ್ಣ ಇದ್ಹಂಗಿದಾನ..." ಮಗುವಿನ ಕಡೆ ಮೆಚ್ಚುಗೆಯಿಂದ ನೋಡಿದ. ಆಕೆ ಉತ್ತರಿಸದೇ, ಹಾಲಿನ ಥಾಲಿಯನ್ನು ವಿಳ್ಳೇದೆಲೆಯ ಮೇಲಿದ್ದ ದ್ರಾಕ್ಷಿಯನ್ನು ಅಲ್ಲೆ ತಟ್ಟೆಯ ಮೇಲೆ ಬಿಟ್ಟಳು... ಮಂಗಳನ ಕಡೆ ತಿರುಗಿದಳು" ನಾನು ಮಡಿಸೀರೆ ಉಟ್ಕೊಂಡು ಬಂದು, ಆರತಿ ಎತ್ತಿ ಪ್ರಸಾದನ ಮಗೀಗೆ ಕೊಡ್ತೀನಿ. ಅಲ್ಲೀವರೆಗೂ ಇಲ್ಲೇ ಇರು. ಎಲ್ಲಿಗೂ ಹೋಗ್ಬೇಡ. ಬೆಳ್ಳಿ ತಟ್ಟೆ, ಬಟ್ಟಲುಗಳು ಇಲ್ಲಿವೆ ನೋಡ್ಕೋ"|ಎಂದು ಆಜ್ಞೆ ಮಾಡಿ ತನ್ನ ಮನೆಯ ಕಡೆ ನಡೆದಳು. ದತ್ತ ಇವಳ ಕಡೆ ತಿರುಗಿ ನಸುನಕ್ಕ...

"ಕೂಸಿಗೆಲ್ಲಾ ಎಂಥಾ ಮಡೀ ರೀ... ಅದಕ್ಕೇನ ಗೊತ್ತದ ? ತಪ್ಪು ನಂದ... ಇವ ದಿನಾ ಇಲ್ಲಿಗೆ ಬರ್ತಾನ ಅಂತ ಕಾಣ್ತದ...'ಹೌದಲ್ರೀ..."

"ಹೂಂ, ಪ್ರಸಾದ ಕೊಡ್ತಾರೆ ಅದಕ್ಕೇ ಬಂದು ನಿಂತ್ಕೋತಾನೆ..."

"ಭಲೋ ಆತ್ರೀ... ದಿನಾ ಬಾಲಕೃಷ್ಣ ಸೇವಿ ಮಾಡ್ತಾರಾ... ಆಕಿಗೆ ಮಕ್ಕಳಿಲ್ಲಂತ... ಅವ್ವಾ ಹೇಳ್ತಿದ್ಲು..." ಕೆಳದನಿಯಲ್ಲಿ ಹೇಳಿದ. ಅವಳು ತಲೆತಗ್ಗಿಸಿದ್ದಳು. ನನ್ನ ನೋಡಿದ್ರೆ ನಿಮ್ಗೂ ಭಯ ಆಗ್ತೈತೆನ್ರೀ... ನಾನು ಮಿಲಟರಿ ಸರ್ವಿಸ್‌ನ್ಯಾಗ ಅದೀನಿ. ಮೀಸೆ ಬಿಟ್ಟೀನ್ರೀ... ಅವನ ಕೈ ಮೀಸೆಯತ್ತ ಚಲಿಸಿತು. ಅಷ್ಟರಲ್ಲಿ ಲಕ್ಷ್ಮಿದೇವಮ್ಮ ಮತ್ತೆ ಹಿಂತಿರುಗಿದ್ದಳು. ಬೇರೆ ರೇಶ್ಮೆ ಸೀರೆಯನ್ನುಟ್ಟಿದ್ದಳು. ಅರ್ಧಕ್ಕೆ ನಿಲ್ಲಿಸಿದ್ದ ಪೂಜೆಯನ್ನು ಮುಂದುವರೆಸಿದಳು.

ಹಾಲನ್ನು ಹಣ್ಣನ್ನು ಬಾಲುಗೆ ಕೊಟ್ಟು, ಮಂಗಳಾ ಹಾಗೂ ದತ್ತನಿಗೂ ತೀರ್ಥ ಪ್ರಸಾದಗಳನ್ನು ಕೊಟ್ಟಳು. ಮಂಗಳಾ ಆಕೆಗೆ ನಮಸ್ಕಾರಿಸಿದಳು. 'ಬೇಗ ಮದುವೆಯಾಗಲಿ' ಎಂದು ಆಶೀರ್ವದಿಸಿದಳು. ದತ್ತನೂ ನಮಸ್ಕರಿಸಿದ.' ಬೇಗ ಮಕ್ಕಳಾಗಲಿ' ಎಂದು ಅವನಿಗೆ ಆಶೀರ್ವಾದ ಮಾಡಿದಳು. ತನ್ನ ಪಾಡಿಗೆ ತಾನೂ ಪೂಜಾ ಸಲಕರಣೆಗಳನ್ನೆತ್ತಿಕೊಂಡು ಮನೆಗೆ ಹಿಂತಿರುಗಿದಳು.

"ಇವ ನಿಮ್ಮ ಮಗ ಅಂತ ಮಾಡಿದ್ವನ್ರೀ..." ದತ್ತ ಹೇಳಿದ. ಅವಳು ನಾಚಿ ಕೆಂಪಾಗಿದ್ದಳು.

"ಇವನು ನನ್ನ ತಮ್ಮ... ನೀವು ಸೀತನ ಅಣ್ಣ ಅಂತ ನನಗೆ ಗೊತ್ತಾಗಲಿಲ್ಲ. ಯಾರೋ ಅಂತ ಅಂದ್ಕೊಂಡಿದ್ದೆ.

"ನಾನು ನೆನ್ನೆ ಸಂಜಿ ಹೊತ್ನಾಗ ಬಂದ್ನಿ. ನಾನು ಮಿಲಟರಿಯ ಸರ್ವಿಸ್‌ನಲ್ಲಿದ್ದೀನಿ. ಅಂಬಾಲದಲ್ಲಿದೀನ್ರೀ..."

"ಅಂಬಾಲಾ... ಅದೆಲ್ಲಿದೆ?..."

"ಡೆಲ್ಲಿಯಿಂದ ಮತ್ತೆ ಆರುಗಂಟೆ ಪ್ರಯಾಣ ರೀ... ಅಲ್ಲೆಲ್ಲಾ ಬಿಸಿಲು ಜಾಸ್ತಿ... ಇಲ್ಲಿ ತಂಪಾಗೈತಿ..."ಅಲ್ಲಿ ಹಂಗಿಲ್ಲರೀ."

"ಇಲ್ಲಿ ಮರಗಳು ಇವೆಯಲ್ಲ. ನೆರಳು ಜಾಸ್ತಿ... ತಂಪಾಗಿದೆ. ನಾನಿನ್ನು ಬರ್ತೀನಿ. ಅಮ್ಮ ಒಬ್ಬರೇ ಮಲಗಿದ್ದಾರೆ. ಎದ್ದು ಓಡಾಡುಕ್ಕಾಗುಲ್ಲ."

"ಏನಾಗೈತ್ರೀ ನಿಮ್ಮಮ್ಮಗಾ?"

"ಗೋಡೆ ಕುಸಿದು ಬಿದ್ದು ಸೊಂಟದ ಮೂಳೆ ಮುರಿದಿದೆ... ಎರಡು ತಿಂಗಳು ಅಲ್ಲಾಡು ಹಂಗಿಲ್ಲ ಅಂತ ಡಾಕ್ಟರು ಹೇಳಿದ್ದಾರೆ. ಹದಿನೈದು ದಿನಗಳಾದವು. ನೆನ್ನೆ ಡಿಸ್ಚಾರ್ಜ್ ಮಾಡಿಸ್ಕಂಡು ಬಂದ್ರು ನಮ್ಮ ತಂದೆ."

"ನೀವು ಈ ವಠಾರಕ್ಕೆ ಹೊಸಬ್ರು ಅಲ್ವೇನ್ರೀ... ಈ ಮುಂಚೆ ನಿಮ್ಮನ್ನಾ ನೋಡಿದ್ದಿಲ್ಲ."

"ಹೌದು ದೊಡ್ಡಾಸ್ಪತ್ರೆಗೆ ಹತ್ರ ಆಗುತ್ತೆ ಅಂತ ಈ ಮನೆಗೆ ಬಂದೆವು... ನಾ ಹೋಗ್ಲಾ?" ಕೇಳಿದಳು.

"ನಿಮಗೇನಾದ್ರೂ ಸಹಾಯ ಬೇಕಿದ್ರೆ ನಮ್ಮವ್ವನ್ನೋ, ನನ್ನ ಪತ್ನಿ ರಾಧಾನೋ ಕರೀರಿ. ಒಬ್ರೇ ಹೆಂಗೆ ಮಾಡ್ತೀರ್ರೀ!... ಕಷ್ಟ ಆಯ್ತದೆ ಅಲ್ಲೋ...?"

"ತಂಗೀರು, ತಮ್ಮಂದಿರು ಇದಾರೆ. ಕಷ್ಟ ಏನಿಲ್ಲ ಎಂದು ಹೇಳಿ ಅವನಿಗೆ ಬೆನ್ನ ಮಾಡಿ ಹೊರಟೇ ಬಿಟ್ಟಳು. ಅವನು ಅವಳ ತೊಗಡುವ ಜಡೆಯನ್ನೇ ನೋಡಿದ. ತನಗೆ ಮದುವೆಯಾಗಿದೆ ಎನ್ನವುದನ್ನು ಮರೆತು. ಅವಳ ಮೈಮಾಟದ ಸೊಬಗನ್ನು ಕಣ್ಣೊಳಗೆ ತುಂಬಿಕೊಂಡ.

"ದತ್ತ .... ದತ್ತ.... ಇಲ್ಲೇನ ಮಾಡಾಕೆ ಹತ್ತಿದೀಯೋ ...." ದೊಡ್ಡಪ್ಪ ಬಾಗಿಲಲ್ಲಿ ನಿಂತು ಕೂಗಿದಾಗ, ಎಚ್ಚೆತ್ತು ಮನೆಯ ಕಡೆ ಹೆಜ್ಜೆ ಹಾಕಿದ ನಿಮ್ಮವ್ವ ಭಕ್ರಿ ಮಾಡ್ಯಾಳ ಹುಚ್ಚೆಳ್ಳ ಚಟ್ನೆ ಬೆಣ್ಣೆ ಹಾಕ್ಕೊಂಡು ತಿನ್ನು ... "ಎಂದು ಹೇಳಿದಾಗ ಇವನಿಗೆ ರೇಗಿತ್ತು.

"ನಂಗೇನು ಬ್ಯಾಡಾ ಕಾಕ್ಕಾ ಸೇರು ಹಂಗಿಲ್ಲ."

"ಯಾಕೋ ಬಾಳಾ .... ಅಲ್ಲಿ ದಿನಾ ಭಕ್ರಿ ಸಿಕ್ತಾದೇನು ನಿಂಗ ? ಸುಮ್ನೇ ತಿನ್ನ. ಆಮೇಲೆ ನಂಜೊತಿ ಪ್ಯಾಟೆಗೆ ಬರೂವಂತಿ ಸ್ವಲ್ಪ ಕೆಲ್ಸ ಇದೆ" ಎಂದು ಹೇಳಿ ಪಂಪ್ ಷೂಸನ್ನು ಮೆಟ್ಟಿಕೊಂಡು, ಕೊಂಯ್ ಕೊಂಯ್ ಸದ್ದು ಮಾಡುತ್ತಾ ಹೊರಗೆಲ್ಲೊ ನಡೆದ. ಇವನು ಮತ್ತಮ್ಮೆ ಎದುರು ಮನೆಯ ಕಡೆ ನೋಡಿ, ಮನೆಯೊಳಗೆ ಬಂದ

"ಅಣ್ಣಾ ಅವ್ವಾ ಬಿಸಿ ಬಿಸಿ ಭಕ್ರಿ ಬೆಣ್ಣೆ ಇಟ್ಟಾಳಾ ತಿನ್ನಾವಂತಿ ಬಾ " ತಂಗಿ ಕರೆದಾಗ ಅವಳ ಮುಖವನ್ನೇ ನೋಡಿದ ಯಾಕೋ "ಅಣ್ಣ ಹಿಂಗ ನೋಡ್ಲಿಕ್ಕೆ ಹತ್ತಿದೀ ಈ ಮುಂಚಿ ನನ್ನನ್ನ ನೋಡಿಲ್ಲೇನು "

"ಹೆಂಗೆ ಬೆಳ್ದಿದೀಯ ಅಂತ ನೋಡ್ದೆ .... ಆಗ್ಲೇ ಲಗ್ನ ಆಗೂ ಆಸೇನಾ ನಿಂಗೆ? ಕೆಲ್ಸ ಕಾರ್ಯ ಕಲ್ತಿದೀಯೇನು ? ಅತ್ತಿ ಜತಿ ಹೆಂಗಿರ್ಬೇಕು ಅಂತ ಅವ್ವ ಹೇಳಿ ಕೊಟ್ಟಾಳೇನು ?..."

"ಏ ಹೋಗಪ್ಪಾ ಏನೇನೋ ಕೇಳ್ಬೇಡ ." ಅವಳು ನಾಚಿದಳು.

"ಅಲ್ವೇ ಸುಧೀ.... ಲಗ್ನ ಅಂದ್ರೆ ಗೊಂಬಿ ಆಟ ಅಂತ ಮಾಡಿಯೇನು.... ಜವಾಬ್ದಾರಿ ಹೆಚ್ತದೆ... ನಿನ್ನ ವೈನಿ ಹೆಂಗ ಕೆಲ್ಸ ಮಾಡ್ತಾಳ ಹಂಗೆ ಮನಿ ಕೆಲಸ ಮಾಡ್ಬೇಕಾಗ್ತದ.... ಅದಕ್ಕೆ ಕೇಳ್ದೆ."

" ನೀನು ಆಕಿ ತಲಿ ಕೆಡಿಸ್ಬ್ಯಾಡಪಾ ನಿನ್ನ ಹೇಣ್ತಿಗೇನ ಕೆಲ್ಸ ಬರ್ತಿತ್ತಾ ? ಈಗ ಈಗ ಕಲಿತಾಳ. ಆಕಿಗೆ ಎಲ್ಲಾ ನಾನ ಹೇಳಿಕೊಟ್ಟೇನ ಹಂಗೇ ಈಕಿಗೂ ಈಕಿ ಅತ್ತಿ ಕಲಿಸಿ ಕೊಡ್ತಾಳ ಅವೆಲ್ಲಾ ಹೆಂಗಸರ ಕೆಲಸ..... ನಿಂಗ್ಯಾಕ ಹೆಂಗಸ್ರ ಉಸಾಬರಿ !"

"ಹೌದವ್ವಾ ನಂಗ್ಯಾಕ ಹೆಂಗಸ್ರ ಉಸಾಬರಿ ? ಮನೀಲಿ ಇರೋ ನೀವೆಲ್ಲಾ ಹೆಂಗಸ್ರೇ ಅಲ್ಲೇನು...? ನೀವು ಮಾಡೋ ಕೆಲ್ಸಾನ ನಾವು ನೋಡುದಿಲ್ಲೇನು?...."

"ತುಂಗಾ ..... ಲಗ್ನ ಆದಮ್ಯಾಗೆ ನಿನ್ನ ಮಗ ಭಾಳ ಶಾಣ್ಯ ಆಗ್ಯಾನ... ಮೊದ್ಲು ಹಿಂಗಿರ್ಲಿಲ್ಲ ನಮ್ಮವ್ವ... ಮಾತೇ ಆಡ್ತಿರಲಿಲ್ಲ ಅಂತೀನಿ " ದೊಡ್ಡಮ್ಮನೆಂದಳು.

"ನೀ ಸುಮ್ನಿರು ಕಕ್ಕೀ ಬ್ಯಾಡ ಬ್ಯಾಡ ಅಂದ್ರೂ, ರಾಧಾನ ಕೂಡ ನನ್ನ ಲಗ್ನ ಆಗಾಕೆ ನೀವೇ ಕಾರಣ ಈಗ ಮಾತು ಮಾತಿಗೂ ಹಂಗ್ಸುದ್ಯಾಕೆ ? "ರೇಗಿದ.

"ಅಕ್ಕಾ ನೀವಾರ ಸುಮ್ನಿರ್ಬಾರ್ದಾ... ಇವ ಬರೋದೇ ವರುಷಕೊಮ್ಮಿ. ಹತ್ತು ಹನ್ನೆರಡು ದಿನ ಕೂಡಾ ನಮ್ಮೆಂದಿಗಿರುಲ್ಲ ...ಇವ ಬ್ಯಾಸ್ರ ಮಾಡ್ಕೊಂಡು ಹೋದ್ನು ಅಂದ್ರೆ... ಮನಿ ಭಿಂ ಅಂತದೆ.....

"ಮನಿ ಭಿಂ ಅನ್ನದಿರ್ಬೇಕಾದ್ರೆ ಕಾಲು ಗೆಜ್ಜೇನ ಕುಣಿಸ್ಕೊತಾ ಅಡ್ಡಾಡೋ ಕಂದ ಬೇಕು.... ಅದನ್ಯಾವಾಗ ಕೊಡ್ತಾನಂತ ನಿನ್ನ ಮಗ ?.....ಎರಡು ವರ್ಷ ಆಯ್ತು ಲಗ್ನ ಆಗಿ... ಇದುವರೆಗೂ ಒಂದು ಸೂಚನಿ ಇಲ್ಲ ಕತಿ ಏನಂತ?

"ಅದ್ಹೆಂಗ ಆಯ್ತದಕ್ಕೆ... ಇಬ್ರೂ ಒಟ್ಟಾಗಿ ಎಲ್ಲಿದಾರೆ? ಅವ ಅಲ್ಲಿ... ಈಕಿ ಇಲ್ಲಿ ಈ ಮನ್ಯಾಗೋ ಬ್ಯಾರೆ ಕೋಣೆ ಇಲ್ಲ ಅಡಿಗೆ ಮನ್ಯಾಗೆ ಅದೆಂಥದು ? ಒಟ್ಟಾರೆ ನಮ್ಮ ದತ್ತನ ನಸೀಬ ಚೆನ್ನಿಲ್ಲ...."

"ನಿನ್ನ ಸೋಸೀನೋ ಒಣಗಿದ ಬಡಗಿ ಇದ್ದ್ಹಂಗ ಆಗ್ಯಾಳ... ಮೈಯೊಳಗೆ ಏನು ರಸ ಐತಿ ? ತವರು ಮನಗೆ ಒಂದು ವಾರ ಕಳ್ಸು . ಆರೈಕೆ ಮಾಡಿಸ್ಕಂಡು ಬರಲಿ... ಆಮ್ಯಾಗೆ ನನ್ನ ಕೇಳು...."

"ಏನ ಮಾತಾಡ್ತೀರಿ ಕಕ್ಕೀ ವೈನಿ ಕೇಳಿಸ್ಕಂಡ್ರೆ ಪಾಪ... ಆಕೀನೊ ... ದತ್ತಣ್ಣಂಗೋಸ್ಕರ, ಶಬರಿ ಥರ ಕಾದೂ ಕಾದೂ ಕೃಶವಾಗಾಳೆ" ಸುಧಾ ಎಂದಳು.

"ಆಹಹಾ ...ನಿಂಗೆಲ್ಲಾ ಗೊತ್ತು ಅಲ್ಲೇನೋ ...ನಿಂಗಿನ್ನೂ ಲಗ್ನಾನೇ ಆಗಿಲ್ಲ.... ಏನೇನ್ಗೊತ್ತು ನಿಂಗೆ ' ಚುಡಾಯಿಸಿದಳು.

"ಹಂಗಾರೆ ನೀವೂ ಸುಮ್ನಿರಿ ಮತೇ.... ನಿಮ್ಮ ಲಗ್ನ ಆಗಿ ನಲವತ್ತು ವರ್ಷ ಆಗ್ಯಾದ... ನಿಮಗೆಲ್ಲೈತಿ ಮಕ್ಳು.... ನೀವೂ ವೈನಾಗೇ ಇದೀರಲ್ಲ....."

ಸುಧಾ.... ಬಡೀತೀನಿ ನೋಡು.... ನನ್ನ ಮಾತಿಗೆ ಬಂದ್ರು.... ತುಂಗಾ ನಿನ್ನ ಮಗ್ಳು ಹೆಚ್ಗಂಡಿದಾಳೆ ಇನ್ಮ್ಯಾಲೆ ನಾನು ಯಾವ ಮಾತಿಗೂ ಮುಸುಡಿ ತೂರೂದಿಲ್ಲ. ನಂಗ್ಯಾಕೆ ಬೇಕು....? ಇದೇನು ನನ್ನ ಸಂಸಾರಾನಾ ಆಕೆ ಮುನಿದು ನುಡಿದಳು.

"ಅಕ್ಕಾ ....ನೀವು ಈಕಿ ಮಾತಿಗೆ ಬ್ಯಾಸರಿಸ್ಬೇಡ್ರಿ..... ಅದಕ್ಕೇನು ತಿಳೀತೈತಿ....

"ಹೋದ ಮನ್ಯಾಗ ಹಿಂಗ ಮಾತಾಡ್ಲಿ... ಬರ್ಲು ತಗೊಂಡು ಬಡಿದು ಮನೆ ಯಿಂದಾಚಿ ಅಟ್ತಾರಾ..... ನಿನ ಮಗಳನ್ನ ಹುಂ" ಆಕೆ ಹೊಂಕರಿಸಿದಳು.

"ಒಳ್ತು ಅನ್ನಿ ಅಕ್ಕಾ.... ಲಗ್ನ ಮುಂದಿಟ್ಕೊಂಡು ಎಂಥಾ ಮಾತನ್ನಾಡ್ತೀರಲ್ಲ ಏಯ್.... ಸುಧಾ... ತಪ್ಪಾತು ಅಂತ ದೊಡ್ಡವ್ವನ ಕಾಲಿಗೆ ಬೀಳೇ...."

"ನಾನೇನ ತಪ್ಪಾಡ್ದೆ ? ವೈನೀನ ಅಂದದ್ದಕ್ಕೆ ಹೇಳ್ದೆ ಕಕ್ಕೀಗೂ ಮಕ್ಕಳಾಗಿಲ್ಲ ಅದು ಖರೇ ತಾನೇ...."

"ಹೋಗ್ಲಿ ಬಿಡು ಸುಧಾ... ಸುಮ್ನೆ ಕಿರ ಕಿರಿ ಯಾಕೆ ?..... ಲಗ್ನ ಆಗಿ ಹೋದ ಮೇಲೆ ಬರೋದೇ ಅಪರೂಪ ಆಗ್ತದೆ... ಕಕ್ಕಿ ದೊಡ್ಡೋರು ನಿನ್ನ ಎತ್ತಿ ಆಡ್ಸಿ ಬೆಳೆಸ್ಯಾರ ಅವರ್ಕೂಡೆ ಹಿಂಗೆಲ್ಲಾ ಮಾತಾಡ್ಬಾರ್ದು" "ತಪ್ಪು ನಿಂದೇ "ದತ್ತನೆಂದ.

"ನೀನೂ ನನ್ನೇ ಅಂತೀಯಲ್ಲೋ ಅಣ್ಣಾ.... ವೈನಿಗೋಸ್ಕರ ಮಾತಾಡಿದ್ದು..... ಆಕಿ ಒಬ್ಬಳೇ ಕೂತ್ಕೊಂಡು ಅಳೋದನ್ನ ನಾನು ಕಂಡೀನಿ.... ನಿನ್ಕಡೆಯಿಂದ ಪತ್ರ ಎಂದಿಗೆ ಬಂದಾತೋ ಅಂತ ಕಾಯ್ತು ನಿಂತಿದ್ದನ್ನ ನಾನು ಕಂಡೀನಿ. "ಅಷ್ಟರಲ್ಲಿ ರಾಧಾ ಬಟ್ಟೆ ಒಗೆಯುವ ಕೆಲಸವನ್ನು ಮುಗಿಸಿ ಒಳಗೆ ಬಂದಿದ್ದಳು ಆಕೆಯನ್ನು ಕಂಡು ಎಲ್ಲರೂ ಮಾತನ್ನು ನಿಲ್ಲಿಸಿದರು. ತಾಯಿ ಎಲ್ಲರಿಗೂ ಭಕ್ರಿ ಚಟ್ನಿ ಬೆಣ್ಣೆಗಳನ್ನು ಇಟ್ಟ ತಟ್ಟೆಗಳನ್ನು

ತಂದು ಕೊಟ್ಟಳು. ಎಲ್ಲರೂ ಮೌನವಾಗಿ ತಿನ್ನಲಾರಂಭಿಸಿದ್ದರು.

○ ○ ○

"ನಾನು ಪಂಕಜಾ ಅಂತ ಸ್ಕೂಲಿನಲ್ಲಿ ಟೀಚರ್ ಆಗಿದೀನಿ. ಇಲ್ಲೇ ಈ ವಠಾರದಲ್ಲಿ ನಾನೂ, ನಮ್ಮ ತಂದೆ ವಾಸವಾಗಿದೀವಿ" ಪಂಕಜಾ ತನ್ನ ಪರಿಚಯವನ್ನು ಹೇಳಿಕೊಂಡಳು

"ನಾನು ಏಳುವ ಹಾಗಿಲ್ಲ. ಎದ್ದು ಓಡಾಡುಲ್ಲ ಸೊಂಟದ ಮೂಳೆ ಮುರಿದಿದೆ. ಪ್ಲಾಸ್ಟರ್ ಹಾಕಿದಾರೆ ಮಲಗಿದಲ್ಲೇ ಎಲ್ಲಾ ಸೇವೆ...."ಜಾನಕಿ ತನ್ನ ವ್ಯಥೆಯನ್ನು ಹೇಳಿಕೊಂಡಳು.

"ಹೂಂ ನಮ್ಮ ತಂದೆ ಹೇಳಿದ್ರು ... ನಿಮ್ಮ ಯಜಮಾನ್ರನ್ನ ಪರಿಚಯ ಮಾಡ್ಕೊಂಡಿದಾರೆ ಅವರಿಂದ ವಿಷಯ ತಿಳಿತು. ಅವತ್ನಿಂದ ನಿಮ್ಮನ್ನ ನೋಡೋಕೆ ಬರಬೇಕು ಅಂತ, ಬಿಡುವೇ ಆಗ್ಲಿಲ್ಲ. ಮನೆ ಕೆಲಸ.... ಸ್ಕೂಲಿನ ಕೆಲಸ.... ನಮ್ಮ ತಂದೇನೊ ನೋಡ್ಕೋಬೇಕು...."

"ಯಾಕೆ ! ಮನೇಲಿ ಇನ್ಯಾರು ಇಲ್ವೇ...."

"ಇದಾರೆ. ಎಲ್ಲಾ ಊರ್ನಲ್ಲಿದಾರೆ... ನನಗೆ ಇಲ್ಲಿ ಕೆಲಸ ಸಿಕ್ಕಿದೆ... ನನ್ನ ಜತೆಗೆ ನನ್ನ ತಂದೆ ಇದಾರೆ. ಅವರಿಗೂ ವಯಸ್ಸಾಗಿದೆ...."

"ನಿಮ್ಮ ಯಜಮಾನ್ರು ಏನು ಮಾಡ್ತಾರೆ? ಅವಳ ಮುಖ ಸಣ್ಣಗಾಯಿತು.

"ಅವರಿಲ್ಲ..." ಕೆಳದನಿಯಲ್ಲಿ ನುಡಿದಳು.

"ತಪ್ಪು ತಿಳ್ಕೋ ಬೇಡಮ್ಮ ಗೊತ್ತಾಗ್ಲಿಲ್ಲ.... ಪಶ್ಚಾತ್ತಾಪದಿಂದ ಹೇಳಿದಳು.

"ಪರವಾಗಿಲ್ಲ ಬಿಡಿ ಅಮ್ಮ. ನೀವು ಹೊಸಬ್ರು ನಿಮಗೇನು ಗೊತ್ತಿರುತ್ತೆ! ನಿಮ್ಮ ಮಗಳು ಎಲ್ಲಿ ಕಾಣ್ತಾ ಇಲ್ಲ.... " ಆ ಕಡೆ ಈ ಕಡೆ ದೃಷ್ಟಿ ಹಾಯಿಸಿದಳು.

"ಬಟ್ಟೆಗಳನ್ನು ಒಗೆಯುಕ್ಕೆ ಅಂತ ಹಿತ್ತಲಿಗೆ ಹೋಗಿದಾಳೆ... ಬರ್ತಾಳೆ ಕೂತ್ಕೊಳ್ಳಿ"

"ನಾನು ಅವರ ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು. ಅಲ್ಲಿಗೇ ಹೋಗಿ ಮಾತಾಡ್ತೀನಿ."

"ಏನು ವಿಷಯ?..." ಆತಂಕದಿಂದ ಪ್ರಶ್ನಿಸಿದಳು.

"ಏನಿಲ್ಲ ನಮ್ಮ ತಂದೆಗೆ ಸ್ವಲ್ಪ ಹುಶಾರಿರಲಿಲ್ಲ. ರಾತ್ರಿ ಸ್ವಲ್ಪ ಜ್ವರ ಇತ್ತು. ಇವತ್ತು ಮಧ್ಯಾಹ್ನ ನಾನು ಬರುಕ್ಕಾಗುಲ್ಲ ಸ್ಕೂಲ್ನಲ್ಲಿ ಇನ್‌ಸ್ಪೆಕ್ಷನ್ ಇದೆ. ಒಂದು ಗಂಟೆ ಹೊತ್ತಿಗೆ ಅವರಿಗೆ ಗಂಜಿ ಕೊಡ್ಬೇಕು. ಹಾಗೇ ಜ್ವರ ಇದ್ದರೆ ಮಾತ್ರೆ ಕೊಡ್ಬೇಕು.... ಆಗುತ್ತಾ ಅಂತ ಕೇಳಕ್ಕೆ ಬಂದೆ.... ತೊಂದ್ರೆ ಕೊಡ್ತಾ ಇದೀನಿ ಮನೇಲಿ ಅವರೇ ಎಲ್ಲಾ ಕೆಲ್ಸಾನೂ ಮಾಡ್ಬೇಕು ಅಂತ ಕಾಣುತ್ತೆ ..."ಸಂಕೋಚದಿಂದ ನುಡಿದಳು ಪಂಕಜ.

"ಹೌದು ನಾನೂ ಮಲಗಿಬಿಟ್ಟಿದೀನಿ. ಉಳಿದೋವೆಲ್ಲಾ ಸ್ಕೂಲಿಗೆ ಹೋಗುತ್ವೆ... ನಿಮಗೆ ಹೊತ್ತಾಗಲಿಲ್ವೇ...? ಇನ್ನು ಇಲ್ಲೇ ಇದೀರಿ "

"ಹೊತ್ತಾಗಿದೆ ಅರ್ಧಗಂಟೆ ತಡವಾಗಿ ಬರ್ತೀವಿ ಅಂತ ಪರ್ಮಿಷ್‌ನ್ ತಗೊಂಡಿದಿನಿ. ನಮ್ಮ ತಂದೇನ ಷಾಪಿಗೆ ಕರ್ಕೊಂಡು ಹೋಗಿದ್ದೆ... ಈಗ ಬ್ರೆಡ್ಡು ಹಾಲು ಕೊಟ್ಟಿದೀನಿ..."

"ನೀವು ಏನೂ ಚಿಂತೆ ಮಾಡ್ಬೇಡಿ ಮಂಗಳಂಗೆ ಹೇಳ್ತೀನಿ ಬಿಸಿ ಬಿಸಿ ಗಂಜಿ ಮಾಡಿ ಕುಡಿಸಿ ಬರ್ತಾಳೆ ...ನಿಮ್ಮ ತಂದೆ. ಇವಳಿಗೂ ತಂದೆಯ ಸಮಾನ... ನೀವು ಧೈರ್ಯವಾಗಿ ಹೋಗ್ಬನ್ನಿ...." ಹೇಳಿದಳು.

"ತುಂಬಾ ಉಪಕಾರ ಆಯ್ತು. ಇನ್‌ಸ್ಪೆಕ್ಷನ್ ಇಲ್ವೇ ಹೋಗಿದ್ದಿದ್ರೆ ರಜ ಹಾಕ್ತಿದ್ದೆ ಊರ್ನಿಂದ ತಕ್ಷಣಕ್ಕೆ ಬರೋರು ಯಾರೂ ಇಲ್ಲ. ಸಾಯಂಕಾಲ ಬೇಗ ಬಂದು ಬಿಡ್ತೀನಿ" ಎನ್ನುತ್ತಾ ಹೊರಟೇ ಬಿಟ್ಟುಳು. ಅವಳತ್ತ ಹೋದ ಕೊಡಲೇ ಇತ್ತ ಮಂಗಳಾ ಒಳಕ್ಕೆ ಬಂದಿದ್ದಳು.

"ಯಾರ ಹತ್ರ ಮಾತಾಡ್ತಿದ್ದ್ಯಮ್ಮ? ಯಾರು ಬಂದಿದ್ರು?"

"ಪಂಕಜ ಅಂತ" ಎದುರು ಮನೇಲಿದಾರಂತೆ.... ಆಕೆ ಸ್ಕೂಲ್ನಲ್ಲಿ ಟೀಚರ್‍ರು ತಂದೆಗೆ ಹುಶಾರಿಲ್ವಂತೆ... ಮಧ್ಯಾಹ್ನ ಗಂಜಿ ಮಾಡಿ ಕೊಡೋಕೆ ಆಗುತ್ತಾ ಅಂತ ಕೇಳಿದ್ರು ಹೂಂ ಅಂದೆ.......

"ಯಾಕೆ? ತಂದೆಗೆ ಹುಶಾರಿಲ್ಲ ಅಂತಂದ್ರೆ ಇವತ್ತೂ ಸ್ಕೂಲಿಗೆ ಹೋಗ್ತಾರಂತ?"

"ಇನ್‌ಸ್ಪೆಕ್ಷನ್ ಅಂತೆ.... ಆಕೆಗೆ ಗಂಡ ಇಲ್ಲ ಚಿಕ್ಕ ವಯಸ್ಸು ಪಾಪಾ ಎರಡು ಚಮಚ ರವೆ ಹುರಿದು ಬೇಯಿಸಿ ಗಂಜಿ ಮಾಡೋದೇನು ಕಷ್ಟ ? ಆಗ್ಲಿ ಅಂತಂದೆ.'

"ಕಷ್ಟ ಅಲ್ಲಮ್ಮ... ತಗೊಂಡು ಹೋಗಿ ಕುಡಿಸೋರು ಯಾರು? ಅವರ ಮನೇಲಿ ಬೇರೆ ಯಾರು ಇಲ್ಲವಂತೆ ನಾನು ಹೋಗುಲ್ಲ ಅಣ್ಣ ಬೈತಾರೆ."

"ನಿಮ್ಮಣ್ಣರಿಗೆ ನಾನು ಹೇಳ್ತೀನಿ. ಒಂದಿನದ ವಿಷಯ ತಾನೇ ? ಒಬ್ಬರಿಗೊಬ್ಬರು ಸಮಯ ಅಂದ್ರೆ ಸಹಾಯ ಮಾಡ್ಬೇಕು... ಹುಶಾರು ತಪ್ಪಿದರೆ ಎಷ್ಟು ಕಷ್ಟ ಅಂತ ನನಗೀಗ ಚೆನ್ನಾಗಿ ಅರ್ಥವಾಗಿದೆ. ... ಪಾಪ , ಆಕೆ ಬಂದು ಕೇಳ್ಕೊಂಡೀದಾಳೆ.... ಇಲ್ಲ ಅಂತ ಹೇಗೆ ಹೇಳೋದ ... ಎದುರು ಮನೆಯೋರನ್ಯಾರನ್ನಾದ್ರೂ ಜತೇಲಿ ಕರ್ಕೊಂಡು ಹೋಗು - ಒಬ್ಬಳಿಗೇ ಹೋಗುಕ್ಕೆ ನಾಚಿಕೆ ಆದ್ರೆ...' ಸಲಹೆಯನ್ನಿತ್ತಳು.

"ಸರಿ ನೋಡೋಣ.... ನಿಂಗೆ ಕಾಫಿ ಏನಾದ್ರೂ ಬೇಕಾ! ಕೊಡ್ಲಾ!..."

"ಹುಂ ಕೊಡು... ಹಾಗೇ ಬೆನ್ನಿಗೆ ಅಮೃತಾಂಜನ ತಿಕ್ತೀಯ... ಒಂದೇ ಕಡೆ ಮಲಗಿ ಮಲಗಿ ಎಲ್ಲೆಲ್ಲೋ ನೋಯಿತ್ತೇ."

ಮಂಗಳ ಉತ್ತರಿಸದೇ ಒಳಗೆ ಹೋಗಿದ್ದಳು ಈಚೆಗೆ ಅವಳ ಅಸಹನೆ ಹೆಚ್ಚಿತ್ತು.

ಬೇಸರದಿಂದ ಮನಸ್ಸು ವ್ಯಗ್ರವಾಗುತ್ತಿತ್ತು. ಮನೆಯ ಕೆಲಸವಲ್ಲಾ ಇವಳ ತಲೆ ಮೇಲೆ... ಅಡಿಗೆ ಮನೆ ಕೆಲಸ ಮಾಡಿ, ಊಟ ತಿಂಡಿ ಮಾಡಿಡುವುದು, ಸ್ಕೂಲಿಗೆ ರೆಡಿ ಮಾಡಿ, ತಮ್ಮ ತಂಗಿಯರನ್ನು ಕಳಿಸುವುದು. ಚಿಕ್ಕ ತಮ್ಮನನ್ನು ನೋಡಿಕೊಳ್ಳುವುದು ಪ್ರತಿಯೊಂದು ಇವಳ ಜವಾಬ್ದಾರಿ. ಜತೆಗೆ, ಕನ್ಸರ್‌ವೆನ್ಸಿಯಲ್ಲಿ ಬೇಲಿಯ ಪಕ್ಕ ಬಂದು ನಿಲ್ಲುವ ಆ ವ್ಯಕ್ತಿಯ ಕಾಟ ... ಯಾರಿಗೂ ಹೇಳುವಂತಿಲ್ಲ ಅನುಭವಿಸುವಂತಿಲ್ಲ. ಅವನು ಅಲ್ಲಿ ಬಂದು ನಿಂತ ಕೊಡಲೇ ಒಳಗೆ ಬಂದು ಬಿಡುತ್ತಿದ್ದಳು... ಅವನು ಅಲ್ಲಿಂದ ಮರೆಯಾದ ನಂತರ ಉಳಿದ ಕೆಲಸಗಳನ್ನು ಮುಗಿಸುತ್ತಿದ್ದಳು ಬೇಗ ಮದುವೆ ಮಾಡಿಕೊಂಡು, ಈ ಪರಿಸರದಿಂದ ಹೋದರೆ ಸಾಕೆನ್ನಿಸಿತ್ತು. ಭಾವೀ ಗಂಡ ನಿಂದ ಬಂದ ಪತ್ರಕ್ಕೆ ಉತ್ತರವನ್ನು ಬರೆಯಲು ಸಹ ಬಿಡುವಿಲ್ಲ. ಇವತ್ತಾ ಬರೆಯೋಣ ಅಂತಂದು ಕೊಂಡಿದ್ದಳು. ಅಂಥಾದ್ದರಲ್ಲಿ ಈ ಹೊಸ ಕೆಲಸ.... ಮಲಗಿರುವ ಅಮ್ಮನ ಕೆಲಸವೇ ಬೇಕಾದಷ್ಟು... ಈಗ ಆ ಮುದುಕರ ಸೇವೆ.... ಈ ಅಮ್ಮನಿಗೆ ತಿಳಿಯಬೇಡ್ವೆ? ನಾನು ಹೋಗಿ ಗಂಜಿ ಕುಡಿಸಿದರೆ ಏನು ಚೆನ್ನಾಗಿರುತ್ತೆ ? ಸೀತನ ಮನೆಯಲ್ಲಿ ಎಷ್ಟೊಂದು ಜನ ಇದಾರೆ ಅವರಿಗ್ಯಾಕೆ ಹೇಳಲಿಲ್ಲ....? ನಾನೇ ಯಾಕೆ ಅವರ ಮನೆಯವರಿಗೆ ಈ ಕೆಲಸವನ್ನು ವಹಿಸಿಕೊಡಬಾರದು? ಮಾಡ್ತಾರೋ ಇಲ್ಲವೋ? ಮಾತಿನಲ್ಲಂತೂ ಒರಟರು ಆದರೇನಂತೆ ನಮಗಿಂತ ಅವರಿಗೆ ಹಳೆಯ ಪರಿಚಯ... ಸ್ವಭಾವ ತಿಳಿದು ಅವರಿಗೆ ಹೇಳಿಲ್ಲದೇ ಇರಬಹುದು. ಹೋಗ್ಲಿ ಇವತ್ತು ಮಾತ್ರ, ಅಂತ ಹೇಳಿದಾರಂತಲ್ಲ.. ಮುಂದೆಂದೂ ಒಪ್ಪಿಕೊಳ್ಳಬಾರದು ... ಇವತ್ತು ಸುಧನನ್ನೋ ರಾಧಾಬಾಯಿಯನ್ನೋ ನನ್ನ ಜೊತೆಗೆ ಕರ್ಕೊಂಡು ಹೋಗ್ತೀನಿ..."ಎಂದು ತನ್ನಲ್ಲೇ ನಿರ್ಧರಿಸಿಕೊಂಡು ಕಾಫಿಯನ್ನು ಬೆರೆಸಿದಳು ಎರಡು ಬಟ್ಟಲುಗಳಿಗೆ ಸುರುವಿದಳು ತನಗೆಂದು ಒಂದನ್ನು ತೆಗೆದುಕೊಂಡು, ತಾಯಿಗೆ ಇನ್ನೊಂದನ್ನು ತಂದಿತ್ತಳು.

"ಇವನೇನೇ ಇಷ್ಟು ಹೊತ್ತು ಮಲಗಿ ಬಿಟ್ಟಿದ್ದಾನೆ... ಆಮೇಲೆ ಮಧ್ಯಾಹ್ನವೆಲ್ಲಾ ಹುರಿಪತ ಮಾಡ್ತಾನೆ... ಆಕೆ ತುಳಸೀಪೂಜೆ ಮಾಡುವ ಸಮಯ ಆಗಿರ್ಬೇಕು ಅಲ್ವಾ... ದಿನವೂ ಒಳ್ಳೇ ವಾರಾನ್ನದ ಹುಡುಗನಂತೆ. ತಪ್ಪಿಸದೇ ಹೋಗಿ ನಿಂತ್ಕೋತಾನೆ ಅಂತ ನೀನೇ ಹೇಳ್ತೀಯ... ಇವತ್ತು ಎದ್ದೇ ಇಲ್ಲ. ಎಬ್ಬಿಸು... ನೋಡು ಜ್ವರಗಿರ ಏನಾದ್ರೂ ಬಂದಿದೆಯಾ ಅಂತ... "ತಾಯಿ ಕಾಫಿಯನ್ನು ಹೀರುತ್ತಾ ಮಧ್ಯೆ ಮಧ್ಯೆ ಮಾತಾಡಿದಳು. ದನಿಯಲ್ಲಿ ಆತಂಕವಿತ್ತು.

"ಮಲಗಿರ್ಲಿ ಬಿಡಮ್ಮ. ತುಳಸೀ ಪ್ರಸಾದಕ್ಕೋಸ್ಕರ ಎಬ್ಬಿಸ್ಬೇಕಾ? ಇವನಿಗೋಸ್ಕರ ಇಟ್ಟಿರ್ತಾರೆ. ಆಮೇಲೆ ಕೊಡ್ತಾರೆ... ಆಕೆಗೂ ತಪ್ಪಿಸುವುದಕ್ಕೆ ಇಷ್ಟವಿರುಲ್ಲ."

"ಅದ್ಸರಿ.... ಆ ಕಡೆ ಗೇಟಿನ ಹತ್ರ ಇನ್ನೊಂದು ಮನೆ ಇದೆ ಅಂದ್ಯಲ್ಲಾ... ಅದು ಹೇಗಿದೆ ? ಇದಕ್ಕಿಂತ ದೊಡ್ಡದಾಗಿದೆಯಾ !... ನಾವು ಆ ಮನೆಗೇ ಬಾಡಿಗೆಗೆ

ನೋಡಬಹುದು... ಮದುವೆ ಹೊತ್ತಿಗೆ ಅನುಕೂಲವಾಗುತ್ತೆ. ನೆಂಟರಿಷ್ಟರು ಬಂದರೆ ಜಾಗ ಸಾಕಾಗಬೇಡ್ವೇನೆ?..."

"ನೀನೂ ಮಲಗಿದ್ದೀಯ, ಎಲ್ಲಾ ತಯಾರಿ ಮಾಡೋರ್‍ಯಾರು ?.... ಮದುವೇನ ಮುಂದಕ್ಕೆ ಹಾಕ್ಸಿ ಅಂತ ಅಣ್ಣಂಗೆ ಹೇಳು... ನೀನು ಎದ್ದು ಓಡಾಡುವ ಹಾಗೆ ಆಗ್ಬೇಡ್ವಾ?...."ಅರೆ ಅನುಮಾನದಿಂದ ನುಡಿದಳು.

"ಅದೇನೋ ಸರಿ, ಆದರೆ ಅವರುಗಳು ಒಪ್ಪಬೇಕಲ್ಲ. ವಿಷಯ ತಿಳಿಸಿ ಕಾಗದ ಬರೀರಿ ಅಂತ ಅಣ್ಣಂಗೆ ಹೇಳ್ತೀನಿ. ಮೂರು ನಾಲ್ಕು ತಿಂಗಳು ಕಳದ್ರೆ ಆಮೇಲೆ ಹೇಗೋ ಆಗುತ್ತೆ." ಆ ಹುಡುಗ್ನಿಂದ ಕಾಗ್ದ ಬಂದಿದೆ ಅಂದ್ಯಲ್ಲ. ಏನು ಬರೆದಿದ್ದಾನೆ...?"

"ಬಿಚ್ಚಿ ಓದಿಲ್ಲ" ಸುಳ್ಳು ಹೇಳಿದಳು.

"ಯಾಕೇ ಹಾಗ್ಮಾಡ್ದೆ? ಉತ್ತರ ಬರೀ ಬೇಡ್ವಾ ? ಏನೆಂದುಕೊಳ್ತಾರೆ ಅವರು?..."

"ಏನಾದ್ರೂ ಅಂದುಕೊಳ್ಳಲಿ ಬೇರೆ ಮನೆಯವರ ಕೆಲಸ ಬೇರೆ..."ಅಸಹನೆಯಿಂದ ನುಡಿದಳು.

"ನಿಂಗೆ ಏನಾಯ್ತೋ ಅಂತ ಅಂದ್ಕೊಂಡ್ರೆ?...

"ಬೇಕಾದ್ರೆ ಬಂದು ನೋಡ್ಲಿ... ನನಗೆ ಬಿಡುವಿಲ್ಲ ಅಂತ ಗೊತ್ತಾಗ್ಲಿ..."ಸಿಡುಕಿದಳು.

"ನಿಮ್ಮದೆಲ್ಲಾ ನಮ್ಮನ್ನ ದೂರೋಜಾತಿ. ನಾನೇನು ಇದನ್ನೆಲ್ಲ ಬೇಕು ಅಂತ ಮಾಡ್ಕೊಂಡ್ನಾ...? ನಿಮ್ಮಕ್ಕನ್ನ ಕರೆಸ್ಕೊಳೋಣ ಅಂತಂದ್ರೆ ಅವಳಿಗೆ ಬಯಕೆ ಸಂಕಟವಂತೆ... ಇಲ್ಲಿ ನಮಗೇನು ಸಹಾಯ ಮಾಡ್ತಾಳೆ...? ಸ್ಕೂಲಿಗೆ ರಜ ಇದ್ದ ದಿನ ವನಜನ ಕೈಲಿ ಅಡಿಗೆ ಕೆಲಸ ಮಾಡಿಸು. ನಿನಗೂ ಸಹಾಯವಾಗುತ್ತೆ. ಅವಳೂ ಕಲಿತಂತೆ ಆಗುತ್ತೆ..."

"ಅವಳೆಲ್ಲಿ ಮಾಡ್ತಾಳೆ? ಓದೋದು ಬರೆಯೋದು ಇರುತ್ತೆ ಅಂತ ನೆವ ಹಾಕ್ತಾಳೆ. ನಾನು ತಾನೇ ಇಲ್ಲಿ ಬಿಟ್ಟಿ ಬಿದ್ದಿರೋದು..." ಗೊಣಗಿದಳು.

"ಏನೋ, ನನ್ನ ಗ್ರಹಚಾರವೋ ನಿನ್ನ ಕರ್ಮವೋ... ಈ ಸ್ಥಿತಿ ಬಂದಿದೆ. ಮದುವೆ ಮಾಡ್ಕೊಂಡು ಹೋದ್ಮೇಲೆ, ನಿನ್ನನ್ನ ಕರೆದು ಮಾಡಿಸ್ಕೊಳ್ತೀನಾ?... ನಿನ್ನ ಗಂಡ ಕಳಿ ಸ್ಕೊಡ್ತಾನಾ?... ನಿಮಗೆಲ್ಲ ಇಷ್ಟು ಸೇವೆ ಮಾಡಿದೀನಿ. ಜೀವ ತೇದಿದ್ದೀನಿ... ಎಂದಾದ್ರೂ ಒಂದು ದಿನ ಜ್ವರ ಅಂತ ಮಲಗಿದ್ನಾ ?... ಈಗ ಅಸಹಾಯಕ ಸ್ಥಿತೀಲಿ ಮಲಗಿದೀನಿ ಅಂತ ಎಲ್ರೂ ಬಾಯಿಗೆ ಬಂದ ಹಾಗೆ ಮಾತಾಡ್ತೀರಿ... ಹೀಗೆ ಸೇವೆ ಮಾಡಿಸಿಕೊಳ್ಳುವ ಬದಲು, ಅವತ್ತು ಗೋಡೆ ಬಿದ್ದ ದಿನ ಸತ್ತೇ ಹೋಗಿದ್ರೆ ಚೆನ್ನಾಗಿ ರ್ತಿತ್ತು..." ಆಕೆ ಅಳುತ್ತಾ ನುಡಿದಳು.

"ಅಳುವಂಥದ್ದು ಏನಂದೆ ನಾನೀಗ?... ಎಲ್ಲಾ ಮಾಡ್ತಿಲ್ವಾ?... ಬೇಸರವಿಲ್ಲದೇ ಅಸಹ್ಯವಿಲ್ಲದೇ ಎಲ್ಲವನ್ನು ಮಾಡ್ತಿದೀನಿ. ನಿಂಗೆ ತೃಪ್ತಿ ಇಲ್ಲ ಅಷ್ಟೇ?... ನನಗೆ ಅನ್ನಿಸಿದ್ದನ್ನ ಹೇಳುವ ಹಕ್ಕು ನನಗಿಲ್ವಾ?....

"ಹಕ್ಕು, ಸ್ವಾತಂತ್ರ್ಯ, ಜೋರು, ದರ್ಪ ಎಲ್ಲಾ ಇಲ್ಲಿ ಮಾತ್ರ ನಡೆಯುತ್ತೆ... ನೆನಪಿರಲಿ. ಅಲ್ಲಿ ಬಾಯಿಗೆ ಹೊಲಿಗೆ ಹಾಕ್ಕೊಂಡು ಇದ್ರೋ ನಿನಗೇ ಕ್ಷೇಮ... ಸಾಕಮ್ಮ ಸಾಕು. ನಿನ್ನ ಸೇವೆಯೂ ಸಾಕು... ಮಾತೂ ಸಾಕು... ನಿಮ್ಮಪ್ಪ ಬಂದ ಕೂಡ್ಲೇ ಮತ್ತೆ ನನ್ನನ್ನ ಆಸ್ಪತ್ರೆಗೇ ಕರೆದ್ಕೊಂಡು ಹೋಗಿ ಸೇರಿಸಿಬಿಡಿ ಅಂತ ಹೇಳಿ ಬಿಡ್ತೀನಿ... ಅಲ್ಲಿ ನರ್ಸ್‌ಗಳಿರ್ತಾರೆ. ಆಯಾಗಳಿರ್ತಾರೆ... ಕಾಸಿನ ಆಸೆಗೆ ಕರೆದ್ರೆ ಬಂದು ಏನು ಹೇಳಿದ್ರೂ ಮಾಡ್ತಾರೆ. ಬಾಯಿಗೆ ಬಂದಂತೆ ಮಾತಾಡುಲ್ಲ... ಏನೋ ಪಾಪ, ಈ ಮಗು ಇನ್ನು ಚಿಕ್ಕದು... ಅಮ್ಮನನ್ನು ಕಾಣದೇ ಜರೆದುಕೊಳ್ಳುತ್ತಲ್ಲ... ನಿಮ್ಮಪ್ಪನ ಓಡಾಟ ಕಡಿಮೆಯಾಗುತ್ತಲ್ಲ ಅಂತ ಮನೆಗೆ ಬಂದೆ... ನನಗೇನು ಗೊತ್ತಿತ್ತು ನಿನ್ನ ಮನಸ್ನಲ್ಲಿ ಇಷ್ಟು ದುಬ್ಬಿ ತುಂಬಿಕೊಂಡಿದೆ ಅಂತ... ಇವತ್ತು ನಿಮ್ಮಪ್ಪರಿಗೆ ಹೇಳಿ ಬಿಡ್ತೀನಿ.... ಇರಿಸಿರುವ ಮಹೂರ್ತದಲ್ಲಿ ಧಾರೆ ಎರೆದು ಕಳಿಸಿಕೊಡಿ ಅಂತ... ನಾನು ಹಸಮಣೆ ಮೇಲೆ ಕೂರದಿದ್ರೆ ಏನಾಯ್ತು ?... ಎಷ್ಟೋ ಜನ ಮಕ್ಕಳಿಗೆ ತಾಯಿ ಇರುಲ್ಲ... ಅವರಹಾಗೆ ಅಂತ ಅಂದ್ಕೊಂಡ್ರಾಯ್ತು... " ಪಟ ಪಟ ಮಾತನ್ನು ಉದುರಿದಳು.

"ಸಾಕು, ಮಾತಾಡಿ ಆಯಾಸ ಯಾಕೆ ಮಾಡ್ಕೋತೀಯ... ಎತ್ಲಾಗೆ ಅಂತ ತೋರ್ಸು. ಅಮೃತಾಂಜನ ತಿಕ್ತೀನಿ..."ಅಮೃತಾಂಜನದ ಡಬ್ಬಿಯ ಮುಚ್ಚಳವನ್ನು ತೆರೆದಳು.

"ಏನೂ ಬೇಡ... ಈಗ ಯಾವ ನೋವೂ ಇಲ್ಲ. ಯಾವ ನಲಿವೂ ಉಳಿದಿಲ್ಲ... ಸುಮ್ಮನೇ ಹೋಗು..."ಕೈಯನ್ನು ಅತ್ತ ತಳ್ಳಿದಳು.

"ನೀನು ಹೀಗಾಡಿದ್ರೆ ವಠಾರದಲ್ಲಿ ಇರೋರೆಲ್ಲರಿಗೂ ಹೇಳ್ಕೊಂಡು ಬರ್ತೀನಿ ಅಷ್ಟೇ.... ನೀನೂ ಅಡ್ಬೆ ನಾನೂ ಆಡ್ಬೆ... ಎಲ್ಲಾ ಮುಗೀತು..." ಎಂದು ಹೇಳಿ ಬೆರಳಿನ ತುದಿಯಲ್ಲಿ ಅಮೃತಾಂಜನವನ್ನು ಬಳಿದು ಎತ್ತಿಕೊಂಡು, ಬೆನ್ನಿಗೆ ಹಚ್ಚಿ ತಿಕ್ಕತೊಡಗಿದಳು. ಅಮೃತಾಂಜನದ ಘಾಟುವಾಸನೆಗೆ ಇಬ್ಬರ ಕಣ್ಣುಗಳಲ್ಲೂ ನೀರು ಜಿನುಗಿತು. ಇಬ್ಬರೂ ಕಣ್ಣುಗಳನ್ನು ಮುಚ್ಚಿಕೊಂಡು ಮೌನವಾಗಿ ರೋಧಿಸಿದರು. ಸಮೀಪದಲ್ಲೇ ಮಲಗಿದ್ದ ಬಾಲು ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ ಎದ್ದು ಕುಳಿತು ಅಳತೊಡಗಿದ.

"ಹಚ್ಚಿದ್ದು ಸಾಕು ಮಗೂಗೆ ಹೊಟ್ಟೆ ಹಸಿದಿರಬಹುದು... ಏನಾದ್ರು ಕೊಡು." ತಾಯಿ ಅಷ್ಟು ಹೇಳಿದ್ದೇ ಸಾಕು ಎಂಬಂತೆ, ಮಂಗಳ, ಸೆರಗಿಗೆ ಕೈಯನ್ನು, ಚೆನ್ನಾಗಿ ಉಜ್ಜಿ ಒರೆಸಿಕೊಂಡು, ತಮ್ಮನನ್ನು ಎತ್ತಿಕೊಂಡು ಹೊರಬಂದು ಜಗುಲಿಯ ಮೇಲೆ

ನಿಂತಳು. ಅವಳ ಕಣ್ಣು, ಮುಂಬಾಗಿಲಿನಲ್ಲಿ ನಿಂತಿದ್ದ ದತ್ತನ ಕಡೆಗೆ ತಿರುಗಿತ್ತು.. ಪ್ಯಾಂಟಿನ ಜೇಬಿನೊಳಕ್ಕೆ ಕೈಗಳನ್ನು ತೂರಿಸಿ ಯಾರಿಗಾಗಿಯೋ ಕಾಯುತ್ತಾ ನಿಂತಿರುವನೆಂದೆನಿಸಿತ್ತು... ತನಗಾಗಿ ಅವನು ಇಲ್ಲಿ ನಿಂತಿರಬಹುದೇ ಅಂತೆನ್ನಿಸಿದಾಗ, ಕಚಗುಳಿ ಇಟ್ಟಂತೆ ಅನ್ನಿಸಿತ್ತು.

ಬಾಲು ಕೈ ಕಾಲು ಒದರಿ, ಇಳಿಸು ಎನ್ನುವಂತೆ ಚಡಪಡಿಸಿದಾಗ ಅವನನ್ನು ಕೆಳಕ್ಕೆ ಇಳಿಸಿದಳು. ತುಳಸೀಪೂಜೆಯನ್ನು ಮಾಡುತ್ತಿದ್ದ ಲಕ್ಷ್ಮೀದೇವಮ್ಮನನ್ನು ಅವನ ಪುಟ್ಟ ಕಣ್ಣುಗಳು ಕಂಡಿದ್ದವು. ಎಂದಿನಂತೆ ತುಳಸೀ ಕಟ್ಟೆಗೆ ನಾಲ್ಕು ಹೆಜ್ಜೆಗಳ ಅಂತರದಲ್ಲಿ ನಿಂತು ಪ್ರಸಾದಕ್ಕಾಗಿ ಕಾಯತೊಡಗಿದ. ಅದನ್ನು ಗಮನಿಸಿದ ದತ್ತ ಇವಳ ಕಡೆ ನೋಡಿ ಮಂದಹಾಸವನ್ನು ಬೀರಿದ. ಇವಳು ಮುಗುಳ್ನಗೆಯನ್ನು ಸೂಸಿದಳು. ಅವಳ ದುಃಖ ದುಮ್ಮಾನವೆಲ್ಲಾ ಕಡಿಮೆಯಾಗಿತ್ತು.

ಲಕ್ಷ್ಮೀದೇವಮ್ಮ ಪೂಜೆ ಮುಗಿಸಿ, ವಾಪಸ್ಸು ಹೋಗುವವರೆಗೂ ಕಾದಿದ್ದು ತಮ್ಮನನ್ನು ಎತ್ತಿಕೊಳ್ಳುವ ನೆವದಲ್ಲಿ ಮುಂದೆ ಬಂದಳು."ಸುಧಾ ಇದಾಳಾ ? ಸ್ವಲ್ಪ ಕರೀತೀರಾ?" ದತ್ತನನ್ನು ಕುರಿತು ಕೇಳಿದಳು.

"ಇಲ್ವಲ್ರೀ ಎಲ್ಲೋ ಹೊರಗೆ ಹೋಗ್ಯಾಳ ಏನಾಗ್ಬೇಕಿತ್ರಿ ಅವಳ ಸಂಗಡ?" ಕೇಳಿದ.

"ಪಂಕಜ ಟೀಚರ್ ತಂದೆಗೆ ಹುಶಾರಿಲ್ವಂತೆ. ಗಂಜಿ ಮಾಡ್ಕೊಂಡು ಹೋಗಿ ಕುಡಿಸ್ಬೇಕಂತೆ... ನನ್ನ ಜೊತೆ ಸುಧಾ ಬರ್ತಾಳೇನೋ ಅಂತ... ಕೇಳ್ದೆ ಒಬ್ಬಳೇ ಹೋಗ್ಬೇಕಲ್ಲ... ರಾಧಕ್ಕ ಬರ್ತಾರೇನು?" ತಮ್ಮನನ್ನು ಎತ್ತಿಕೊಂಡಳು.

"ರಾಧಾ ಬಾಯೀನ ಅವ್ವ ಕಳಿಸೂದಿಲ್ರೀ... ನೀವ್ಯಾಕ ಹೋಗ್ಬೇಕು? ನಾನ ಒಯ್ದು ಕೊಟ್ಟು ಬರ್ತೀನಿ ಗಂಜಿ ಮಾಡ್ಯಾಗಿದ್ಯೇನ್ರೀ...?

"ಇಲ್ಲ ಇನ್ನು ಮಾಡಿಲ್ಲ... ಸುಧಾ ಬಂದ್ರೆ ನಾನೂ ಅವಳೂ ಒಟ್ಟಾಗಿ ಹೋಗಿ ಕೊಡ್ತೀವಿ... ನಿಮಗ್ಯಾಕೆ ತೊಂದ್ರೆ...?'

"ತೊಂದ್ರೆ ಏನಿಲ್ಲ, ನಾನು ಸೂಟಿ ಮ್ಯಾಲೆ ಬಂದೀನ್ರೀ... ಯಾರೂ ಯಾವ ಕೆಲ್ಸಾನೂ ನಂಗೆ ಹೇಳೋದಿಲ್ಲ... ನೀವಾದ್ರೂ ಹೇಳ್ರಲಾ..."ಮುಗುಳ್ನಕ್ಕ.

"ಟೀಚರ್ ನನಗೆ ವಹಿಸಿ ಹೋಗಿದ್ದಾರೆ... ನಾನು ನಿಮಗೆ ಹೇಗೆ ಹೇಳಲಿ?

"ನಾನೂ ನಿಮ್ಮವನೇ ಅಂತ ತಿಳೀರ್ರಿ... ಹೆಂಗಸರು ಯಾರೂ ಇಲ್ಲದ ಮನೀಗೆ, ಗಂಡಸಿಗೆ ಗಂಜಿ ಕುಡಿಸ್ಯಾಕೆ ಹೆಣ್ಮಕ್ಳು ಹೋಗಾದು ಛಲೋ ಅಲ್ರೀ... ನಾನು ಆ ಕೆಲಸ ಮಾಡ್ತೀನ್ರೀ ನೀವು ಸಂಕೋಚ ಮಾಡಬೇಡ್ರಿ... ಗಂಜಿ ಆದ ಕೂಡ್ಲೇ ನನಗೆ ಕರೀರಿ... ನಾನು ಬರ್ತೀನಿ..."ನಯವಾಗಿ ನುಡಿದ.

"ಟೀಚರ್ರು ಏನಂದ್ಕೊಳ್ತಾರೋ... ನಿಮ್ಮನೆಯವ್ರು ಏನಂತಾರೋ...?"

"ಆಕಿಗೆ ತಿಳಿಸ್ಲೇ ಬ್ಯಾಡ್ರೀ... ಅವ್ವ ಏನಂದಾಳು... ಹೇಳಿದ್ರೆ ಅವಳೇ ಗಂಜಿ ಮಾಡ್ಕೊಡ್ತಾಳು... ಹೇಳ್ಲೇನು?"

"ಬೇಡ ಬೇಡ... ನಾನೇ ಮಾಡ್ತೀನಿ. ಅಮ್ಮ ಒಬ್ಬಳೇ ಇದಾಳೆ. ನಾನು ಹೋಗ್ತೀನಿ. ಹನ್ನೆರಡೂವರೆ ಗಂಟೆಯ ಹೊತ್ತಿಗೆ ಗಂಜಿ ಸಿದ್ಧ ಮಾಡಿರ್ತೀನಿ..."

"ಸರೀರ್ರಿ... ಹಂಗೇ ಮಾಡ್ರೀ..." ಎಂದು ಹೇಳಿ ಅವಳು ಹೋಗುವುದನ್ನೇ ನೋಡುತ್ತಾ ನಿಂತ. ಬೆನ್ನ ಮೇಲೆ ಜಡೆ ತೂಗಾಡುವುದನ್ನು ಕಂಡ. ಈಕೀನ್ನ ಯಾರು ಲಗ್ನ ಆಗ್ತಾನೋ ಅವ ಪುಣ್ಯವಂತ" ಎಂದು ತನ್ನಲ್ಲೇ ಹೇಳಿಕೊಂಡ...

ಹನ್ನೆರಡೂವರೆಯ ಗಂಟೆ ಹೊಡೆಯುವುದನ್ನೇ ಕಾಯುತ್ತಿದ್ದ ದತ್ತ ಮನೆಯಿಂದ ಹೊರಟ. ದೊಡ್ಡಮ್ಮ, ತಾಯಿ, ರಾಧಾ ಅಡಿಗೆ ಮನೆಯಲ್ಲಿದ್ದರು. ಸುಧಾ ದರ್ಜಿಯ ಬಳಿಗೆ ಹೋಗಿದ್ದಳು. ದೊಡ್ಡಪ್ಪ ಹಾಗೂ ತಂದೆ ಅದೇ ತಾನೇ ಹೊರಗೆಲ್ಲೋ ಹೋಗಿದ್ದರು... ಆಕಡೆ ಈ ಕಡೆ ನೋಡಿ, ಎದುರು ಮನೆಗೆ ಬಂದು ಬಾಗಿಲನ್ನು ತಟ್ಟಿದ. ಮಲಗಿದ್ದಲಿಂದಲೇ ಜಾನಕಿ ಯಾರು ಯಾರು ?' ಎಂದು ಕೇಳಿ, 'ಮಂಗಳಾ ನೋಡೇ ಯಾರೋ ಬಾಗಿಲು ಬಡೀತ್ತಿದ್ದಾರೆ'ಎಂದಳು.

ಮಂಗಳಾ ಗಡಿಯಾರದ ಕಡೆ ನೋಡಿದಳು. ಹನ್ನೆರಡೂವರೆಯಾಗಿತ್ತು. ಇವನೇ ಇರಬೇಕೆಂದುಕೊಂಡು, ಸೆರಗಿನ ತುದಿಯಿಂದ ಮುಖವನ್ನು ಒರೆಸಿಕೊಂಡು ಕೈಯಲ್ಲಿ ಗಂಜಿಯನ್ನು ಹಾಕಿದ್ದ ಡಬ್ಬಿಯನ್ನು ಹಿಡಿದು ಬಂದು ಮುಂಬಾಗಿಲನ್ನು ತೆರೆದಳು "ನಾನ್ರೀ... ಅವಸರ ಆಯ್ತೋ ಹೇಗೋ...?" ಎಂದ.

"ಇಲ್ಲ, ಎಲ್ಲಾ ಸಿದ್ದ ಇದೆ ತಗೊಳ್ಳಿ." ಎಂದು ಹೇಳಿ ಡಬ್ಬಿಯನ್ನಿತ್ತಳು.

"ನನ್ನೊಂದಿಗೆ ನೀವೂ ಬರೋರಿದ್ರೇನು?" ಆಸೆ ಕಣ್ಣುಗಳಿಂದ ಕೇಳಿದ.

"ಇಲ್ಲ, ನನಗೆ ಇನ್ನೂ ಕೆಲಸ ಇದೆ... ತಗೊಳ್ಳಿ ಬೀಗದ ಕೈ ಕೂಡಾ ಕೊಟ್ಟಿದ್ದಾರೆ."ಎಂದು ಹೇಳಿ ಅವರ ಮನೆಯ ಬೀಗದ ಕೈಯನ್ನು ಕೊಟ್ಟಳು. ಅವನು ಎಲ್ಲವನ್ನು ಹಿಡಿದು ಅಲ್ಲಿಂದ ಹೊರಟ. ಎಂಥಾ ಒಳ್ಳೆಯ ಮನುಷ್ಯ. ಮಿಲಟರಿಯಲ್ಲಿ ಕೆಲಸದಲ್ಲಿದ್ದೀನಿ ಅಂತ ಅನ್ನುವ ಹಾಗೆ ಇಲ್ಲವೇ ಇಲ್ಲ. ಮೃದುವಾಗಿ ಮಾತಾಡ್ತಾನೆ. ಹಸನ್ಮುಖಿನಾಗಿದ್ದಾನೆ... ಇವನನ್ನು ತನ್ನ ಭಾವೀ ಗಂಡನೊಂದಿಗೆ ಹೋಲಿಸಿಕೊಂಡಳು. ಇವನ ಪರಿಚಯ ಇತ್ತೀಚಿನದು. ಅವನ ಪರಿಚಯವೂ ಬಹಳ ಇಲ್ಲ... ಅವನ ಪತ್ರಕ್ಕೆ ಉತ್ತರವನ್ನೇ ಬರೆದಿಲ್ಲ. ಕೋಪಿಸಿಕೊಳ್ಳುವನೋ ಏನೋ. ಇವತ್ತಾದರೂ ಉತ್ತರ ಬರೆಯಬೇಕು ಅಂತು ಎಂದುಕೊಂಡಳು.

"ಮಂಗಳಾ, ಗಂಜೀನ ಯಾರ ಕೈಲಿ ಕಳಿಸ್ದೆ ? ಟೀಚರ್ರೇ ಬಂದಿದ್ರಾ?" ತಾಯಿ ಕೇಳಿದಳು.

"ಇಲ್ಲಮ್ಮ ಎದುರು ಮನೆ ಧಾರವಾಡದವರ ಮನೆಯ ಸೀತನ ಅಣ್ಣ... ನಾನು

ತಗೊಂಡ್ಹೋಗಿ ಕುಡಿಸ್ತೀನಿ ಅಂತಂದ... ಅವನ ಕೈಗೆ ಕೊಟ್ಟೆ"

"ಅವನನ್ಯಾಕೇ ಕೇಳ್ದೆ..."

"ಸುಧಾ ನಂಜೊತೆ ಬರ್ತಾಳಾ ಅಂತ ಕೇಳುಕ್ಕೆ ಹೋಗಿದ್ದೆ... ಹೆಂಗಸರು ಯಾರು ಹೋಗೋದು ಬೇಡ... ಟೀಚರ್ರು ಮನೇಲಿರುಲ್ಲ... ಆ ಗಂಡಸು ಒಬ್ಬರೇ ಅಂತಂದ್ರು.... ಅವರು ಹೇಳಿದ್ದು ಸರೀನೇ ತಾನೇ..."

"ಹೌದು, ಸರೀನೇ... ಆದರೆ ಆ ಟೀಚರ್ರು ಏನಂದ್ಕೊಳ್ತಾರೋ..."

"ಏನಾದ್ರೂ ಅಂದ್ಕೊಳ್ಳಲಿ... ಕೆಲಸ ಹಚ್ಚಿ ಹೋದ್ಮೇಲೆ, ಯಾರು ಮಾಡಿದ್ರೇನು?"

"ಈ ನಡುವೆ ತುಂಬಾ ಒರಟಾಗಿ ಮಾತಾಡ್ತೀಯ ಮಂಗಳ. ಇದು ಒಳ್ಳೆಯ ಲಕ್ಷಣವಲ್ಲ. ಗಂಡನ ಮನೇಲಿ ಏನಂದ್ಕೊಳ್ತಾರೆ... "ಸ್ವಲ್ಪ ಅನುನಯ ಕಲಿತ್ಕೋ"

"ಶುರು ಮಾಡಿದ್ಯಾ ನಿನ್ನ ಉಪದೇಶಾನಾ?" ಎನ್ನುತ್ತಾ ಅಲ್ಲಿಯೇ ಕುಳಿತು ಏನೋ ಆಟ ಆಡುತ್ತಿದ್ದ ತಮ್ಮನನ್ನು ಎತ್ತಿಕೊಂಡು ಹೊರಬಂದು ನಿಂತಳು. ತಾನೂ ಆ ಮನೆಗೆ ಹೋದರೆ ಏನೀಗ ಅಂತ ಅನ್ನಿಸಿದರೂ, ಇವನು ಬೇಡ ಅಂತ ಅಂದಿದ್ದಾನೆ. ಹೋದರೆ ಬೇಸರಗೊಂಡಾನೆಂದುಕೊಂಡು ಸುಮ್ಮನಾದಳು. ಅತ್ತ ಕಡೆಯೇ ನೋಡತೊಡಗಿದಳು.

○ ○ ○

"ಯಾರಯ್ಯಾ ನೀನು ?... ಯಾಕಯ್ಯಾ ಬಂದಿದ್ದೀಯ? ಇದರಲ್ಲಿ ಏನಿದೆ?" ಜ್ವರದಿಂದ ಬಳಲುತ್ತಿದ್ದರೂ, ನಂಜುಂಡಯ್ಯ ಭಯವನ್ನು ಮುಚ್ಚಿಟ್ಟು ಪ್ರಶ್ನಿಸಿದರು.

"ನಾನೂ ಈ ವಠಾರದವನೇ ಅದೀನಿ ರೀ... ನನ್ಹೆಸ್ರು, ದತ್ತಾತ್ರೇಯ ಜೋಷಿ ಅಂತ... ಟೀಚರ್ರು ನಿಮಗೆ ಗಂಜಿ ಕೊಡಾಕೆ ಹೇಳಿದ್ರು. ತಂದೀನ್ರೀ.... "ಕುಡೀರಲ್ಲಾ..."ಎಂದು ಗಂಜಿಯಿದ್ದ ಡಬ್ಬಿಯನ್ನು ಸಮೀಪದಲ್ಲಿದ್ದ ಟೇಬಲ್ ಮೇಲಿಟ್ಟು ಬಟ್ಟಲನ್ನೆತ್ತಿಕೊಂಡ.

"ಈ ಗಂಜಿ ಸೇರೂದಿಲ್ಲ ? ಇವಳು ಬಿಡೂದಿಲ್ಲ. ತಂದಿದೀರಿ ಸರಿ. ನಾನು ಆಮೇಲೆ ಕುಡ್ಕೊತೀನಿ'ಇಟ್ಟಿಟ್ಟು ಹೋಗಿ." ದಪ್ಪದನಿಯಲ್ಲಿ ಹೇಳಿದರು ಆತ.

"ನಿಮಗೆ ಗಂಜಿ ಕುಡಿಸಿ, ಮಾತ್ರೆ ತಿನ್ನಿಸಿ ಹೋಗ್ಬೇಕಂತ ಟೀಚರ್ರು ಹೇಳಿ ಹೋಗ್ಯಾರ..."

"ಅವಳಿಗೆ ಬುದ್ಧಿ ಇಲ್ಲ ನಂಗೆ ಏನೂ ಬೇಡ... ತಗೊಂಡ್ಹೋಗಿ..."

"ಹಂಗಂದ್ರೆ ಹಂಗೆ ಸರ್ ? ಉಪ್ವಾಸ ಇದ್ರೆ ಮೈಗೆ ತ್ರಾಣ ಎಲ್ಲಿಂದ ಬರ್ತದ? ಈಗ ಸ್ವಲ್ಪ ಕುಡೀರ್ರೀ... ಆರಾಮ ಬರ್ತದ..." ಸಮಾಧಾನದಿಂದ ಹೇಳಿದ.

"ಏನು ಆರಾಮ ಬರುತ್ತೋ ಏನೋ... ಬಾಯೆಲ್ಲಾ ಕಹಿ ಕಹಿ ಅನ್ಸುತ್ತೆ, ಗಂಜಿ ಸೇರುವ ಹಾಗೇ ಇಲ್ಲ..." ಕೆಟ್ಟ ಮುಖ ಮಾಡಿದರು.

"ಹಂಗಾರ ಬೋಂಡ ಪಕೋಡಿ ಏನಾದ್ರ ಮಾಡಿಸ್ಕೊಂಡು ಬರ್ಲ್ಲಾ ಸರಾ..."ಅವರು ತಮಾಷೆಯಾಗಿ ಕೇಳಿದ.

"ನಿಮಗೆ ತಮಾಷೆ... ನನ್ನ ಕಷ್ಟ ನಂಗೊತ್ತು, ಸುಮ್ಮನೆ ಪೀಡಿಸ್ಬೇಡಯ್ಯ. ಕುಡಿಯೋದಿಲ್ಲ ಅಂದ್ರೆ ಕುಡಿಯೋದಿಲ್ಲ." ಗೋಡೆಯ ಕಡೆಗೆ ಮುಖ ತಿರುಗಿಸಿದ.

"ಈ ವಯಸ್ನಾಗೆ ಹಠ ಒಳ್ಳೇದಲ್ಲ ಸರ... ನಿಮಗೆ ಬೇಸರ ಇದೆ ಅಂತ ನಂಗ ತಿಳೀತೈತಿ. ಈ ಒಂದು ಬಾರಿ ಕುಡಿದ್ಬಿಡಿ. ಮತ್ತೆ ನಾನು ತರೂದಿಲ್ಲ..."ಎಂದು ಹೇಳಿ ಕೈಲಿದ್ದ ಬಟ್ಟಲಿಗೆ ಸ್ವಲ್ಪ ಬಗ್ಗಿಸಿಕೊಟ್ಟ. ಅವರನ್ನು ಸರಿಯಾಗಿ ಕೂಡಿಸಿ, ಕುಡಿಸಲು ಮುಂದಾದ. ಆತ ತಾನೇ ಕೈಗೆ ತೆಗೆದುಕೊಂಡು ಮುಖ ಕಿವುಚಿ ಒಂದು ಚಮಚದಷ್ಟು ಕುಡಿದರು. ಅದೇನೆನ್ನಿಸಿತೋ ಮತ್ತೂ ಸ್ವಲ್ಪ ಕುಡಿದರು. ಕಡೆಗೆ ಬಟ್ಟಲನ್ನು ಖಾಲಿ ಮಾಡಿದರು. ದತ್ತ ಮನದಲ್ಲೇ ನಗುತ್ತಾ ಮತ್ತಷ್ಟು ಹಾಕಿದ. ಅದನ್ನು ಕುಡಿದರು... ಅವನು ಮಾತಾಡದೇ, ಅಲ್ಲಿದ್ದ ಮಾತ್ರೆಯನ್ನು ನೋಡಿ, ತೆಗೆದು ಒಂದನ್ನು ತಿನ್ನಲು ಕೊಟ್ಟ. ನೀರನ್ನು ಬಗ್ಗಿಸಿ ಕೊಟ್ಟ. ಆತ ನುಂಗಿದರು... ಅವನನ್ನು ನೋಡಿ ಕಣ್ಣಿನಲ್ಲೇ ಧನ್ಯವಾದವನ್ನು ತಿಳಿಸಿದರು. ಹೊಟ್ಟೆಯ ತಳಮಳ ಕಡಿಮೆ ಆಗಿತ್ತು.

"ನೋಡಿ ಸರಾ. ಈಗ ನಿಮ್ಮ ಮುಖದಾಗೆ ಕಾಂತಿ ತುಂಬಿದೆ... ಇನ್ನು ನೀವು ಮಲಗ್ರೀ ನಾನು ಬರ್ತೀನಿ." ಎದ್ದ.

"ಸ್ವಲ್ಪ ಹೊತ್ತು ಕೂತಿರೋಕೆ ಆಗುತ್ತೇನಪ್ಪಾ... ಒಬ್ಬನೇ ಮಲಗಿದೀನಿ"

"ಆಯ್ತು ಸರ... ನಾನು ಸೂಟಿ ಮೇಲೆ ಬಂದೀನಿ. ಏನು ಕೆಲಸ ಇರತೈತಿ?. ಹತ್ತು ನಿಮಿಷ ಕುಂತಿದ್ದು ಹೋಗ್ತೀನಿ"ಎನ್ನುತ್ತಾ ಬಟ್ಟಲುಗಳನ್ನು ತೊಳೆದಿಟ್ಟು ಉಳಿದ ಗಂಜಿಯನ್ನು ಡಬ್ಬಿಯಲ್ಲೇ ಮುಚ್ಚಿಟ್ಟು ಅಲ್ಲಿದ್ದ ಕುರ್ಚಿಯನ್ನು ಹತ್ತಿರಕ್ಕೆ ಎಳೆದುಕೊಂಡು ಕುಳಿತ.

"ಏನಾದ್ರೂ ಮಾತಾಡಯ್ಯಾ... ನಾನೇ ಮಾತಾಡೋಣ ಅಂತ್ರಂದ್ರೆ ಆಯಾಸ ಆಗುತ್ತೆ."

"ಆಯ್ತು ಸರ... ನನ್ನ ವಿಷಯ ಹೇಳಲೋ... ದೇಶದ ವಿಷಯ ಹೇಳಲೋ?"

"ದೇಶದ ವಿಷಯಾನ ಪತ್ರಿಕೇಲಿ ಓದಿರ್ತೀನಿ... ರಾಜಕೀಯದಲ್ಲಿ ಏನಿದೆ? ಉಳಿದಂತೆ ದರೋಡೆ, ಸುಲಿಗೆ, ಕಳ್ಳತನ ಇದು ಬಿಟ್ಟು ಬೇರೆ ಹೆಚ್ಚು ಏನಿರುತ್ತೆ?"...

"ಹೌದ ಸರ. ನೀವು ಹೇಳೋದು ಖರೆ. ಸಮಾಜದಾಗ ಅಪರಾಧಗಳೇ ಹೆಚ್ಚು ಹೆಚ್ಚು ಬೆಳೀತವ... ಜನಕ್ಕೆ ಅರಿವು ಬರ್ಬೇಕ್ರೀ..."

"ಬಿಡು... ಈ ಜನ್ಮದಾಗೆ ಮನುಷ್ಯರಿಗೆ ಅರಿವು ಬಂದ್ಹಂಗೇ... ಸಮಾಜ ಉದ್ಧಾರ ಆದಹಾಗೇ... ನಿನ್ನ ಮನೆಯ ವಿಷಯ ಹೇಳು. ನೀನು ಎಲ್ಲಿದ್ದೀಯ... ಏನು ಕೆಲಸ ಮಾಡ್ತೀಯ?... ಇಲ್ಲಿ ನಿಮ್ಮ ಮನೇಲಿ ಯಾರ್ಯಾರು ಇದ್ದಾರೆ?..."

"ನಮ್ಮದು ಭಾಳ ದೊಡ್ಡ ಸಂಸಾರ ರಾಯರ... ಮನೇಲಿ ನಾವು ಒಂಭತ್ತು ಮಂದಿ ಮಕ್ಕಳು... ಅವ್ವ ಅಪ್ಪ, ಕಾಕಾ ಕಾಕ್ಕಿ, ಎಲ್ಲೂ ಇದ್ದಾರ. ನಮ್ಮ ಕಾಕಗೆ ಮಕ್ಕಳಿಲ್ಲ. ಅವ ನಮ್ಮೊಂದಿಗೇ ಇದ್ದಾನೆ. ನಂಗೆ ಮದುವೆಯಾಗಿದೆ. ಹೆಣ್ತಿ ಇಲ್ಲೇ ಇದಾಳ. ತಂಗಿಗೆ ಲಗ್ನ ಗೊತ್ತಾಗಿದೆ. ತಮ್ಮಂದಿರು ತಂಗೀರು ಓದುತ್ತಾರ... ನಮ್ಮ ತಮ್ಮ ಒಬ್ಬ ಮನಿಬಿಟ್ಟು ದೇಶಾಂತರ ಹೋಗ್ಯಾನ.... ಅವ್ವಗೆ ಅದೇ ಕೊರಗು..."

"ಎಲ್ಲಿ ಹೋದ ಅಂತ ಗೊತ್ತಾಗ್ಲೇ ಇಲ್ವಾ?"

"ಈಗ ಗೊತ್ತಾಗದ ಯಾವುದೋ ಆಶ್ರಮಕ್ಕೆ ಸೇರಿಕೊಂಡ್ಯಾನ ಅಂತ ಬರೂದಿಲ್ಲ ಹೋಗೂದಿಲ್ಲ."

"ಹೋಗ್ಲಿ ಬಿಡು... ಎಲ್ಲೋ ಅವನ ಪಾಡಿಗೆ ಅವನು ಬದುಕಿದಾನಲ್ಲ. ಕೊರಗ್ಬೇಡಿ ಅಂತ ನಿಮ್ಮ ತಾಯಿಗೆ ಹೇಳು..."

"ಎಲ್ಲೂ ಹೇಳ್ಯಾರ... ನಾನೂ ಈ ಊರಾಗೆ ಇರೋದಿಲ್ಲ. ಸೂಟಿ ಮ್ಯಾಲೆ ವರುಷಕ್ಕೊಮ್ಮೆ ಬರ್ತೀನಿ... ಎರಡು ವಾರ ಇದ್ದು ಹೋಗ್ತೀನಿ..."

"ಮತ್ತೆ ನಿನ್ನ ಹೆಂಡ್ತಿ?... ಎಲ್ಲಿರ್ತಾಳೆ ?|ತವರು ಮನೇಲೋ ಅತ್ತೆ ಮನೇಲೋ...

"ಇಲ್ಲೇ ನಮ್ಮ ಮನೇಲೆ ಇರ್ತಾಳ್ರೀ... ಅತ್ತೆಗೆ ಸಹಾಯ ಮಾಡ್ಕೊಂಡು ಆರಾಮವಾಗಿದಾಳ್ರೀ..

"ಇದನ್ನ ಆರಾಮ ಅಂತೀಯೇನಪ್ಪಾ, ಗಂಡನ ಜತೆಗೆ ಇರಬೇಕಾದ ವಯಸ್ಸು, ಅತ್ತೆ ಮಾವನ ಸೇವೆ ಮಾಡ್ಕೊಂಡು ಇರಬೇಕಾದ ವಯಸ್ಸೇನಪ್ಪಾ ನೀನೊಳ್ಳೆ ಮನುಷ್ಯ."

"ನಂಗೂ ಗೊತ್ತೈತ್ರೀ ಆದರೇನ ಮಾಡೋದು. ನಾನು ಅಲ್ಲಿಗೆ ಸಂಸಾರ ಒಯ್ಯೋ ಹಂಗಿಲ್ಲ. ನಾನು ಮಿಲಟರಿ ಸರ್ವಿಸ್‌ನಲ್ಲಿ ಸೇವಿ ಮಾಡ್ತೀನ್ರೀ... ಪಂಜಾಬದ ಹತ್ರ ಇದೀನ್ರಿ... ಈಗ್ಲೇ ಲಗ್ನ ಬೇಡಾಂದನ್ರೀ...ಎಲ್ಲೂ ಒತ್ತಾಯ ಮಾಡಿ ಲಗ್ನ ಮಾಡಿದ್ರುರೀ..."

"ಒತ್ತಾಯಕ್ಕೆ ಮದುವೆ ಮಾಡ್ಕೊಂಡು, ಒಂದು ಹುಡುಗಿಯನ್ನು ಒಬ್ಬಳನ್ನೇ ಬಿಟ್ಟು ದೂರ ಇರ್ತಾರಾ ?... ಹೋಗ್ಲಿ ಮಕ್ಕಳು ಇವೆಯಾ?..."

"ಇಲ್ರೀ... ಮದುವೆಯಾಗಿ ಎರಡು ವರ್ಷ ಮಾತ್ರ ಆದವು... ಇನ್ನೂ ಆಗಿಲ್ರೀ..." ನಾಚುತ್ತಾ ಹೇಳಿದ.

"ಬೇಗ ಒಂದು ಮಗು ಆದರೆ, ನಿನ್ನ ಹೆಂಡ್ತಿ ಮನಸ್ಸಿಗೆ ಖುಷಿಯಾಗುತ್ತೆ. ನಿನ್ನ ಹೆಂಡ್ತಿಗೆ ಆಸೆ ಇಲ್ಲೇನು?' ಎಂದೂ ಹೇಳಿಲ್ವೇನು?" ಕುತೋದ್ಯದಿಂದ ಕೇಳಿದ.

"ಆಸಿ ಇರಬಹುದು. ಆದರೆ ಆರಾಮವಾಗಿ ಕೂತು ಮಾತಾಡುಕ್ಕೆ ಅವಳಿಗೆ ಬಿಡುವಿಲ್ಲ... ಮನೆ ಮಂದಿ ಎದುರಿಗೆ ಹೆಂಗ ಮಾತಾಡೋದು?....

"ನನ್ನ ಕೇಳಿದ್ರೆ ಏನು ಹೇಳಲಯ್ಯಾ... ಮನೆಯಿಂದ ಹೊರಕ್ಕೆ ಕರ್‍ಕೊಂಡು ಬಾ...

ಪಾರ್ಕಿಗೆ ಹೋಗು... ಸಿನಿಮಾಕ್ಕೆ ಕರ್‍ಕೊಂಡು ಹೋಗು... ಊರ್‍ನಲ್ಲಿರುವಷ್ಟು ದಿನ ಅವಳ ಜತೆ ಓಡಾಡು. ಹುಡುಗೀಗೆ ಇಷ್ಟ ಆಗುತ್ತೆ... ಅದನ್ನ ಯಾರಾದ್ರೂ ಹೇಳಿ ಕೊಡಬೇಕೇನಪ್ಪಾ?"

"ನಾವಿಬ್ರೇ ಹೋಗೋದು ಅಂದರ ತುಸು ತೊಂದರಿ ಬರ್‍ತದ... ದೊಡ್ಡೋರು ಏನಂತಾರೋ... ಚಿಕ್ಕೋರು ತಾವೂ ಹೊರಡ್ತಾವ..."

"ಇವೆಲ್ಲಾ ಕುಂಟು ನೆಪ. ನಿನಗೆ ನಿನ್ನ ಹೆಂಡ್ತಿ ಮೇಲೆ ಪ್ರೀತಿ ಇಲ್ಲ... ಅಷ್ಟೇ ನಾನೊಂದು ವಿಷಯ ಕೇಳ್ತೀವಿ... ಬೇಸರ ಮಾಡ್ಕೋಬೇಡ... ನಿನಗೆ ಯಾರಾದ್ರೂ ಗೆಳತೀರು ಇದಾರೇನು?... ಪರ್‍ವಾಗಿಲ್ಲ ಹೇಳು."

"ರಾಯರ...? ಏನ್ರೀ ಕೇಳ್ತೀರಿ ನೀವು?"... ಗಾಬರಿಯಿಂದ ಕೇಳಿದ.

"ಸುಮ್ನೆ ತಮಾಷೆಗೆ ಕೇಳ್ದೆ... ನೀನು ಇಲ್ಲಿ ಇರೋತನಕ... ಒಂದರ್ಧಗಂಟೆ, ನಿನ್ನ ಹೆಂಡ್ತಿನ ನಮ್ಮ ಮನೆಗೆ ಕರ್‍ಕೊಂಡು ಬಾ... ಇಲ್ಲಿ ನನ್ನ ಹೊರತು ಬೇರೆ ಯಾರೂ ಇಲ್ಲ. ಟೀಚರ್‍ರು ಬರೋದು ಸಾಯಂಕಾಲಕ್ಕೆ... ಇಲ್ಲಿ ಇಬ್ಬರೂ ಕೂತ್ಕೊಂಡು ಏನು ಬೇಕಾದ್ರೂ ಮಾತಾಡಿ... ತೊಂದ್ರೆ ಕೊಡೋರು ಯಾರು ಇಲ್ಲ..." ಉಪಾಯ ಹೇಳುವವನಂತೆ ಹೇಳಿದ.

"ಅದ್ಹೆಂಗ್ರಿ ಆಗ್ತದ ಸರ್... ಮಂದಿ ಏನಂದ್ಕೊಂಡಾರು?"

"ಈಗ ನನಗೆ ಗಂಜಿ ಕೊಡುವ ನೆವದಲ್ಲಿ ಬರ್‍ಲಿಲ್ವಾ... ಹಾಗೇ... ಇನ್ನೆಷ್ಟು ದಿನ ರಜ ಇದೆ ?... ಹೋಗ್ಲಿ ನಿನ್ನ ಹೆಂಡ್ತೀನ ಕರ್‍ಕೊಂಡು ಬಂದು ತೋರ್‍ಸು... ನಾನು ನೋಡಿದಂತೆ ನೆನೆಪಿಲ್ಲ... ನಿಮ್ಮ ಮನೆ ಮುಂದೆ ನಾನು ಓಡಾಡುಲ್ಲ. ಈ ಕಡೆಯಿಂದ್ಲೇ ರಸ್ತೆಗೆ ಹೊರಟು ಹೋಗ್ತೀನಿ."

"ಆಯ್ತು ಸರ... ನಾಳೆ ಕರ್‍ಕೊಂಡು ಬರ್ತೀನಿ... ಈಗ ನಾನು ಹೊರಡ್ಲಾ ? ನೀವು ಮಲಗ್ರೀ ತ್ರಾಸ ಮಾಡ್ಕೋಬ್ಯಾಡಿ..." ಮತ್ತೊಮ್ಮೆ ಎದ್ದ.

"ಗಂಜಿ ತುಂಬಾ ಚೆನ್ನಾಗಿತ್ತು... ಸಿಹಿಯಾಗಿತ್ತು. ನನ್ನ ಮಗಳು ಇಷ್ಟು ಸಕ್ಕರೆ ಹಾಕೋದಿಲ್ಲ... ನಿಮ್ಮವ್ವ ಮಾಡಿರ್‍ಬೇಕು... ನನ್ನಿಂದ ಅವರಿಗೆ ತೊಂದ್ರೆ... ನಾನು ಧನ್ಯವಾದ ಹೇಳ್ದೆ ಅಂತ ಹೇಳ್ಬಿಡು..."

"ನಮ್ಮವ್ವ ಮಾಡಿದ್ದಲ್ರೀ... ಈ ವಠಾರದಾಗೆ ಹೊಸ್ದಾಗಿ ಒಂದು ಸಂಸಾರ ಬಂದೈತಿ... ಅವರ ಮನಿ ಹುಡುಗಿ ಮಾಡಿ ಕೊಟ್ಟಾಳ... ನಾನು ತಗೊಂಡು ಬಂದನ್ರೀ.."

"ಅವರು ನಿಮ್ಮ ಸಂಬಂಧದವರೇನು ?. ಯಾವಾಗ ಬಂದ್ರು?...ಗೊತ್ತಾಗ್ಲೇ ಇಲ್ಲ. ನನ್ನ ಮಗಳೂ ಹೇಳ್ಲಿಲ್ಲ. ಆ ಮನೆ ರಿಪೇರಿ ಮಾಡಿಸ್ಬೇಕು ಅಂತ ಮಾಲಿಕರು ಹೇಳ್ತಿದ್ರು... ರಿಪೇರಿ ಆಯ್ತಾ ? ಇಲ್ಲ ಅಂತ ಕಾಣುತ್ತೆ. ಬಾಡಿಗೆ ಹಣದ ಆಸೆಗೆ ಹೋದ್ರೆ ಹಾಗೇ ಕೊಟ್ಟು ಬಿಡ್ತಾರೆ. ಎಲ್ಲಾ ಮನೆಗಳಲ್ಲೂ ಒಂದು ಅನುಕೂಲ ಇದ್ದರೆ...

ಇನ್ನೊಂದಿಲ್ಲ. ಈಗ ಈ ಮನೇನೇ ನೋಡು... ಮುಂಚೆಗೆ ಈ ಮನೆ ದನದ ಕೊಟ್ಟಿಗೆ ಆಗಿತ್ತಂತೆ. ಈಗಲೂ ಕೊಟ್ಟಿಗೆ ಇದ್ದ ಹಾಗೇ ಇದೆ... ಬಾಡಿಗೆ ಹೆಚ್ಚು ಇಲ್ಲ... ನನ್ನ ಮಗಳು ಒಬ್ಬಳೇ ಇರ್ತಾಳೆ ಅಂತ ನಾನೂ ಬಂದಿದ್ದೀನಿ... ಈ ಮನೆಗೆ ಕೂಡೋ ಬಾಡಿಗೆಯೂ ಹೆಚ್ಚು. .. ಮಾಲೀಕರ ಹಣೇ ಬರಹವೇ ಇಷ್ಟು... ಬಾಡಿಗೆ ಮಾತ್ರ ತಿಂಗಳು ತಿಂಗಳಿಗೆ ಸರಿಯಾಗಿ ಒಪ್ಪಿಸ್ಬೇಕು... ಏನಾದ್ರೂ ಅನುಕೂಲ ಕೇಳಿದ್ರೆ, ಇದ್ದರೆ ಇರಿ... ಇಲ್ಲದಿದ್ರೆ ಬಿಟ್ಟುಬಿಡಿ ಅನ್ನೋದು... ಎಲ್ಲಾ ಬಾಡಿಗೆ ಮನೆಯ ಹಣೇ ಬರಹವೂ ಇಷ್ಟೇ..." ಆತ ಹಣೆಯ ಮೇಲೆ ಕೈಯನ್ನಿಟ್ಟುಕೊಂಡು ನುಡಿದು ತಮ್ಮ ಮಾತನ್ನು ಮುಗಿಸಿದ್ದರು.

"ಏನ್ಮಾಡೋದು ಸರ... ಕಾಲ ಹಂಗಾಗಿ ಹೋಗದ. ಅವರಿಗೊಂದು ಬಗಿ ಕಷ್ಟ. ಇವರಿಗೊಂದು ಬಗಿ ಹಿಂಸೆ... ಹಂಗಾ ಸರಿ ಮಾಡ್ಕೊಂಡು ಹೋಗಬೇಕಾಗತದ... ನಾನಿನ್ನು ಬರ್ಲಾ... ಅವ್ವ ಕಾಯ್ತಾ ಇರ್ತಾಳಾ..."

"ಅವ್ವನೋ ಹೇಣ್ತಿಯೋ..." ಆತ ನಗುತ್ತಾ ಪ್ರಶ್ನಿಸಿದರು.

"ನೀವೂ ನಮ್ಮ ಭಾಷಾನ ಕಲಿತೇ ಬಿಟ್ರಲ್ಲ ಸರ..."

"ಹೀಂಗ ಸುಮ್ಮನ... ನಿನ್ನ ಹೇಣ್ತೀನ ಕರ್ಕೊಂಡು ಬನ್ರಪ್ಪಾ... ಮರೀಬ್ಯಾಡಿ."

"ಇಲ್ಲ ಸರ..." ಎಂದು ಹೇಳಿ ಹೊರಬಂದ... ನಾಲ್ಕು ಹೆಜ್ಜೆ ಬಂದ ಮೇಲೆ ಜಗುಲಿಯ ಮೇಲೆ ಇವನಿಗಾಗಿ ಕಾಯುತ್ತಾ ನಿಂತಿದ್ದವಳನ್ನು ಕಂಡ. ಸರಸರನೆ ಇತ್ತ ಬಂದ.

"ಮೊದಲ್ಗೆ ಆ ಮುದುಕ್ರು ಭಾಳ ತಕರಾರು ಮಾಡಿದ್ರು... ಆಮೇಲೆ ಕುಡಿದ್ರು ಗಂಜಿ ಭಾಳ ಛಲೋ ಇತ್ತು... ಧನ್ಯವಾದ ಹೇಳಿ ಅಂದಾರ ರ್ರೀ... ಧನ್ಯವಾದಾರೀ..." ನಗುತ್ತಾ ಹೇಳಿದ.

ಅವಳೂ ಮೆಲವಾಗಿ ನಕ್ಕಳು. "ಈಗ ಹೇಗಿದ್ದಾರೆ? ಜ್ವರ ಇಲ್ವಾ?..."

"ನನ್ನ ಕಂಡು ಎಲ್ಲಾ ಹಾರಿ ಹೋಗಿರ್ಬೇಕರೀ ... ಇಷ್ಟೊತ್ತು ಹರಟಿ ಹೊಡೀತಾ ಕುಂತಿದ್ರರ್ರೀ... ನೀವು ನನ್ನ ಸಲುವಾಗಿ ಕಾಯ್ತಾ ನಿಂತಿದ್ದರೇನ್ರೀ..."

"ಆತಂಕ ಆಯ್ತು.. ಎಷ್ಟೊತ್ತಾಯ್ತು ಹೋಗಿ..."

"ನೀವು, ನಿಮ್ಮ ತಮ್ಮನಿಗೆ ಹಾಲು ಕುಡಿಸೋವಷ್ಟು ಸುಲಭ ಅಲ್ರೀ ಆ ಮುದುಕ್ರಿಗೆ ಗಂಜಿ ಕುಡ್ಸೋದು... ಭಾರೀ ಗಲಾಟೆ ಮಾಡಿದ್ರರೀ ಈಗ ನಿಮ್ಮವ್ವ ಹೆಂಗಿದ್ದಾರ?"

"ಹಾಗೇ ಇದಾರೆ. ಮಲಗಿದ್ದಾರೆ... ನಿಮ್ಮ ಊಟ ಆಯ್ತಾ ?"

"ಇನ್ನು ಇಲ್ರೀ... ಈಗ ಹೋಗಿ ಉಣಬೇಕು. ನಿಮ್ಮದಾಯ್ತೇನ್ರೀ..."

"ಹೂಂ, ಆಯ್ತು... ಮತ್ತೆ ನಮ್ಮ ಮನೆ ಡಬ್ಬಿ...." ಅವನ ಕೈಯನ್ನು

ನೋಡಿದಳು.

"ಎಲ್ಲೂ ಹೋಗುದಿಲ್ರೀ... ಟೀಚರಮ್ಮ ಕೊಡ್ತಾರ ಬಿಡಿ... ಮತ್ತೊಮ್ಮೆ ನಿಮಗೆ ನನ್ನ ಕಡೀಂದ ಧನ್ಯವಾದಾರೀ... ನಂಗೂ ವ್ಯಾಳೀ ಕಳೀಲಿಕ್ಕ ಆಯ್ತು..." ಎಂದು ಕೈಮುಗಿದ. ಅವಳೂ ಕೈ ಮುಗಿದಳು. ಅವಳ ಎಡಗೈಯಲ್ಲಿದ್ದ ಹರಳಿನ ಉಂಗುರವನ್ನು ಕಂಡ...

"ನಿಮ್ಮ ಉಂಗುರ ಛಲೋ ಐತ್ರೀ... ಎಷ್ಟು ಗ್ರಾಂ ಅದ?...

"ಏನೋ ನಂಗೊತ್ತಿಲ್ಲ." ಎಂದಷ್ಟೇ ಹೇಳಿ, ಕೈಯನ್ನು ಸೆರಗಿನಡಿ ಮುಚ್ಚಿದಳು. ಅವನತ್ತ ತಿರುಗಿದ ಕೂಡಲೇ ಉಂಗುರವನ್ನು ಕಳಚಿದಳು. ಹಾಲಿನಲ್ಲಿದ್ದ ಕಪಾಟಿನಲ್ಲಿದ್ದ ಪುಸ್ತಕಗಳ ಸಂದಿಯಲ್ಲಿ ಮುಚ್ಚಿಟ್ಟಳು... ತನ್ನ ಭಾವಿಪತಿಯ ಮುಖ ಕಣ್ಣೆದುರು ಬಂದು ನಿಂತಿತು. ಅವನಿಗೆ ತಾನಿನ್ನು ಮಾರುತ್ತರವನ್ನು ಬರೆದಿಲ್ಲ ಎನ್ನುವುದು ನೆನಪಿಗೆ ಬಂತು. ನನಗೆಲ್ಲಿದೆ ಬಿಡುವು ಎಂದುಕೊಂಡು, ತಮ್ಮನ ಪಕ್ಕ ಮಲಗಿದಳು.

೦ ೦ ೦

"ನನ್ನ ತಮ್ಮನ ಮಗಳಿಗೆ ಲಗ್ನ ನಿಶ್ಚಯ ಆಗೈತ್ರೀ... ಮುಂದಿನ ತಿಂಗಳೇ ಮೂಹೂರ್ತ... ನಮ್ಮೂರಿನಿಂದ ನೆಂಟರು ಬರೋರು ಇದ್ದಾರ್ರೀ... ನಮ್ಮ ಮನೀಲಿ ಜಾಗ ಸಾಕಾಗುದಿಲ್ಲ... ನಿಮ್ಮದು ಈ ಕಡೇ ಮನೀನ ಹತ್ತು ದಿನಕ್ಕೆ ಬಿಟ್ಟುಕೊಟ್ಟರೆ ಉಪಕಾರ ಆಗತೈತಿ." ಗಂಗಾಧರ ಜೋಷಿ, ಕೈ ಮುಗಿಯುತ್ತಾ ಗೋಪಾಲಯ್ಯನನ್ನು ಕೇಳಿದ.

"ಆ ಮನೆಗೆ ಸುಣ್ಣ ಬಣ್ಣ ಮಾಡಿಸ್ಬೇಕು ವಾಸಕ್ಕೆ ಯೋಗ್ಯವಾಗಿಲ್ಲ..." ಕೈ ಕೈ ಹೊಸಕಿದ.

"ನಾವು ಮಾಡಿಸ್ತೀವ್ರೀ... ಹಂಗಾ... ನಾವು ಇರೋ ಮನಿಗೂ ಮಾಡಿಸ್ತೀವ್ರೀ... ಮನಿ ಮುಂದೆ ತೋರಣ, ಚಪ್ಪರ ಎಲ್ಲಾ ಕಟ್ಟಿಸ್ಬೇಕು... ನೀವು ಅಪ್ಪಣೆ ಕೊಡ್ರೀ..."

"ಆಗ಼್ಿ, ನಮ್ಮ ಯಜಮಾನಿತೀನ ಕೇಳಿ ತಿಳಿಸ್ತೀನಿ... ಶಾನೇ ಸದ್ದು ಗದ್ದಲ ಆಗಬಾರದು... ಉಳಿದವರಿಗೆ ತೊಂದರೆ ಆಗುತ್ತೆ..."

"ಹಂಗಂದ್ರ ಹೆಂಗ್ರೀ ರಾಯರ... ಮದುವೆ ಮನಿ ಅಂದ್ರ ಸಡಗರ, ಸಂಭ್ರಮ ಗದ್ದಲ ಗೌಜು ಇಲ್ಲದೇ ಹೆಂಗಾದೀತು... ವಠಾರದ ಮಂದಿಯೆಲ್ಲಾ ನಮ್ಮನಿ ಸಮಾರಂಭದಲ್ಲಿ ಸೇರ್ಬೇಕು ನಲೀಬೇಕು... ಆಗ್ಲೇ ಕಿಮ್ಮತ್ತು... ನೀವು ನಮ್ಮ ಕಡಿ ನಡೆಯೂ ಲಗ್ನನ ಕಂಡಿಲ್ಲ ಅಂತ ಕಾಣತೈತಿ.... ಹಬ್ಬ... ಹಬ್ಬ ಇದ್ದಂಗೆ ಇರತೈತಿ... ಹಸೆ, ಹಾಡು, ಕುಣಿತ ಕೋಲಾಟ ಎಲ್ಲಾ ಇರತೈತ್ರೀ..." ಸಡಗರದಿಂದ ಹೇಳಿಕೊಂಡ ಹಿರಿಯ ಜೋಷಿ.

"ಅದನ್ನೆಲ್ಲ ಇಲ್ಲಿ ಮಾಡು ಹಾಗಿಲ್ಲ ನೀವು... ಛತ್ರ ನೋಡಿದೀರಿ ತಾನೇ?"

"ಹೂಂ ನ್ರೀ... ಛತ್ರ ಸಿಕ್ಕದ... ನೀವೇನೂ ಚಿಂತಿ ಮಾಡ್ಬ್ಯಾಡಿ... ವಿಷಯ ಹೇಳ್ರಿ."

"ನನ್ನ ಯಜಮಾನಿತಿಗೆ ಇದೆಲ್ಲ ಸರಿ ಹೋಗುಲ್ಲ. ಈಗ್ಲೇ ಹೇಳಿದೀನಿ..."

"ಮತ್ತ... ಮನೀ ವಿಷಯ?...

"ಕೇಳ್ತೀನಿ... ಒಪ್ಪಿದ್ರೆ ನಿಮ್ಮ ಅದೃಷ್ಟ ಅಂತ ಅಂದ್ಕೊಳ್ಳಿ..." ಗಂಗಾಧರ ಜೋಷಿಯ ಮುಖ ಕಪ್ಪಗಾಗಿತ್ತು... ಕೈ ಮುಗಿದು, ಪಂಚೆಯ ತುದಿಯನ್ನು ಎತ್ತಿ ಕೈಯಲ್ಲಿ ಹಿಡಿದು ತನ್ನ ಮನೆಯ ಕಡೆಗೆ ನಡೆದ.

ಒಳಬಂದ ಗೋಪಾಲಯ್ಯ ಹೆಂಡತಿಗೆ ಈ ವಿಷಯವನ್ನು ಹೇಗೆ ಹೇಳುವುದೆಂದು ಅನುಮಾನಿಸುತ್ತಾ ಅತ್ತಿಂದಿತ್ತ ಓಡಾಡಿದ... "ಯಾರ್ಹತ್ರ ಮಾತಾಡ್ತಿದ್ರಿ...? ಏನಾಯ್ತು? ಯಾಕೆ ಹೀಗೆ ಶತಪಥ ತಿರುಗ್ತಿದ್ದೀರಿ!.." ಲಕ್ಷ್ಮಿದೇವಮ್ಮ ಕೇಳಿದಳು.

"ಜೋಷಿ, ಅದೇ ಧಾರವಾಡದವರ ಮನೆಯಾತ ಬಂದಿದ್ದ... ಅವರ ತಮ್ಮನ ಮಗಳಿಗೆ ಮದುವೆ ಗೊತ್ತಾಗಿದೆಯಂತೆ..."

"ಕರೆಯೋಕೆ ಬಂದಿದ್ನಾ? ಒಬ್ಬನೇ ಬಂದಿದ್ನಾ? ಒಳಗೆ ಬರ್ಲೇ ಇಲ್ಲ..."

"ಇಲ್ಲ, ಇನ್ನೂ ಮುಂದಿನ ತಿಂಗಳಲ್ಲಿ ಮದುವೆ... ಅವರ ಕಡೆಯ ನೆಂಟರು ತುಂಬಾ ಜನ ಬರ್ತಾರಂತೆ... ಈ ಕಡೆ ರಸ್ತೆ ಬದಿಗೆ ಇದೆಯಲ್ಲ ಮನೆ, ಅದನ್ನು ಹತ್ತು ದಿನಕ್ಕೆ ಬಿಟ್ಟು ಕೊಡ್ತೀರಾ ಅಂತ ಕೇಳಿದ್ರು..." ಕೆಳದನಿಯಲ್ಲಿ ಹೇಳಿದ.

"ಆಗುಲ್ಲ ಅನ್ಬೇಕಾಗಿತ್ತು. ನೀವೇನಂದ್ರಿ?..." ಗುಡುಗಿದಳು.

"ನಿನ್ನನ್ನು ಕೇಳಿ ಹೇಳ್ತೀನಿ ಅಂದೆ... ಲಕ್ಷ್ಮೀ..."

"ನನ್ನನ್ನೇನು ಕೇಳೋದು... ಮನೆ ಪಾಳು ಬಿದ್ದಿದೆ. ರಿಪೇರಿ ಆಗ್ಬೇಕು... ಸುಣ್ಣಬಣ್ಣ ಆಗ್ಬೇಕು... ಉಪಯೋಗಿಸುವ ಹಾಗೆ ಇಲ್ಲ ಅಂತ ಹೇಳ್ಬೇಕಾಗಿತ್ತು."

"ರಿಪೇರಿ, ಸುಣ್ಣ ಬಣ್ಣ ಅವರೇ ಮಾಡಿಸ್ತಾರಂತೆ..."

"ಏನೂ ಬೇಕಾಗಿಲ್ಲ... ಮೇಲೆ ಮೇಲೆ ಸುಣ್ಣದ ನೀರನ್ನು ಬಳಿಸಿದರೆ ಇನ್ನೂ ಅಸಹ್ಯವಾಗಿ ಕಾಣುತ್ತೆ... ಮಾಡಿನ ಹೆಂಚನ್ನು ಕೈಯಾಡಿಸ್ಬೇಕು.. ಮಳೆಗಾಲದಲ್ಲಿ ನೀನು ಸೋರುತ್ತೆ ಬೇಕಾದಷ್ಟು ಖರ್ಚಿದೆ... ಅಷ್ಟೆಲ್ಲಾ ಅವರ್‍ಯಾಕೆ ಮಾಡ್ತಾರೆ?"

"ಕೇಳಿ ನೋಡೋಣ ಲಕ್ಷ್ಮೀ... ಅವರೇ ರಿಪೇರಿ, ಸುಣ್ಣಬಣ್ಣ ಮಾಡಿಸಿದ್ರೆ ನಮಗೆ ಅನುಕೂಲವೇ ಆಗುಲ್ವಾ?... ಮದುವೆ ಮುಗಿದ್ಮೇಲೆ ಹೊಸಾ ಬಾಡಿಗೆಯವರನ್ನೂ ಗೊತ್ತು ಮಾಡಬಹುದು... ನಮಗೆ ಶ್ರಮ ಕಡಿಮೆ ಆಗುತ್ತೆ. ಖರ್ಚೂ ಉಳಿಯುತ್ತೆ" ಅನುಮಾನಿಸುತ್ತಾ ಹೇಳಿದ.

"ನೋಡೋಣ... ಹಾಗೇ ದಿಬ್ಬದ ಮೇಲಿರುವ ಮನೇನೂ ರಿಪೇರಿ ಮಾಡಿಸ್ಕೊಡೋದಾದ್ರೆ... ಒಪ್ಕೋಬಹುದು... ಒಟ್ಟಿಗೇ ಎರಡೂ ಮನೆ ರಿಪೇರಿ ಆದ ಹಾಗೆ

ಆಗುತ್ತೆ."

"ಅಷ್ಟೆಲ್ಲಾ ಖರ್ಚು ಮಾಡ್ತಾರಾ ಲಕ್ಷ್ಮೀ. ಇವರು ಹೆಣ್ಣಿನವರು."

"ಹಾಗಾದ್ರೆ ಯಾಕೆ ಕೇಳಿದ್ರು.? ಇಲ್ಲ ಅಂದ್ಬಿಡಿ... ಅವರಿಗೆ ತಾನೇ ಬೇಕಾಗಿರೋದು.

"ಕೇಳಿ ನೋಡ್ತೀನಿ. ಅವರು ಒಪ್ಕೊಂಡ್ರೆ... ಹತ್ತು ಹದಿನೈದು ದಿನಕ್ಕೆ ಅವರಿಗೆ ಮನೆ ಕೊಡಬಹುದು ಅಲ್ವಾ ?..." ಅವಳಿಗೆ ಅರ್ಧ ಒಪ್ಪಿಗೆ ಆಗಿದೆ ಎನ್ನುವುದು ಅರ್ಥ ಆಗಿತ್ತು.

"ಹತ್ತು ದಿನ ಮಾತ್ರ... ಹಾಗಂತಲೂ ಹೇಳ್ಬಿಡಿ" ಗಂಡನಿಗೆ ಆಜ್ಞೆ ಮಾಡಿದಳು. ಆತ ಹೆಂಡತಿಯನ್ನೇ ಮಿಕ ಮಿಕ ನೋಡಿದ "ಯಾಕೆ ಹಾಗೆ ನೋಡ್ತೀರಿ? ನಾನೇನು ಹೇಳಬಾರದ್ದನ್ನು ಹೇಳ್ದೇ?.. ಮನೆ ಬೇಕು.. ಖರ್ಚು ಬೇಡ ಅಂತಂದ್ರೆ...?"

"ರಿಪೇರಿ ಕೆಲ್ಸ ನಮ್ಮದಲ್ವಾ ಲಕ್ಷ್ಮೀ ಬೇರೆಯವರ್‍ಯಾಕೆ ಮಾಡ್ಬೇಕು!"

"ಅವರಿಗೆ ತಾನೇ ಮನೆ ಬೇಕಾಗಿರೋದು ಮಾಡ್ಲಿ ಬಿಡಿ. ನೀವ್ಯಾಕೆ ಅವರ ಪರ ವಹಿಸಿ ಮಾತಾಡ್ತೀರಿ. ನೀವು ಖರ್ಚು ಮಾಡಿದ್ದಿದ್ರೆ ಗೊತ್ತಾಗಿತ್ತು ಎಷ್ಟು ಖರ್ಚಾಗುತ್ತೆ ಅಂತ.. ನಿಮ್ಮ ಕೈಯಿಂದ ಎಂದು ಖರ್ಚು ಮಾಡ್ಸಿದೀನಿ?ಅವನು ಪೆಚ್ಚಾದ.

"ನಾನು ಮನೆ ಅಳಿಯ ನನ್ನ ಕೈಯಿಂದ ಏನೂ ಖರ್ಚು ಮಾಡಿಸ್ತಿಲ್ಲ ಅಂತ ಹಂಗಿಸಿ ಅನ್ತಿದೀಯಾ ಲಕ್ಷ್ಮಿ, ಅದೂ ಇಷ್ಟು ವರ್ಷ ಆದ್ಮೇಲೆ ? "

"ನೀವು ಮುಖ ಕೆಟ್ಟದು ಮಾಡ್ಕೊಳ್ಬೇಕಾಗಿಲ್ಲ ನಾನು ಆ ಅರ್ಥದಲ್ಲಿ ಹೇಳಲಿಲ್ಲ. ಇವೆಲ್ಲಾ ನಮ್ಮಪ್ಪನ ಆಸ್ತಿ . ನಾನು ನೋಡ್ಕೋತಿದೀನಿ. ಅದು ನಿಮಗೂ ಗೊತ್ತುಯ"

"ಸರಿ ನಿನಗೆ ಹೇಗೆ ಇಷ್ಟವೋ ಹಾಗೆ ಮಾಡ್ಕೋ.. ನಾನು ಯಾವ ಮಾತಿಗೂ ಬರುಲ್ಲ.... ಆತ ಕೇಳಿದ್ರೆ, ನಿನ್ಹತ್ರ ಮಾತ್ನಾಡುಕ್ಕೆ ಹೇಳ್ತಿನಿ."

"ಅದೇನೂ ಬೇಡ ನಾನು ಹೇಳಿದಷ್ಟನ್ನು ಹೇಳುಕ್ಕಾಗುಲ್ವಾ ನಿಮ್ಮ ಕೈಲಿ ನನ್ನನ್ನು ಕೆಟ್ಟೋಳನ್ನಾಗಿ ಮಾಡ್ಬೇಕು ಅಂತ ತಾನೇ ನಿಮ್ಮ ಮನಸ್ನಲ್ಲಿ ? "

"ಹಾಗೇನಿಲ್ಲ ಲಕ್ಷ್ಮಿ ನೀನು ಅಪಾರ್ಥ ಮಾಡ್ಕೋತೀಯ.. ನಾನು ಆತನಿಗೆ ಹೇಳ್ತೀನಿ .... ಬಿಡು."

"ಇದಿಷ್ಟಕ್ಕೆ ಎಷ್ಟು ಮಾತು? ಮುಂಚೆ ನೀವು ಹೀಗಿರ್ಲಿಲ್ಲ. ವಯಸ್ಸಾಯ್ತು ಸ್ವಲ್ಪ ಏನೇನೋ ಆಡಿಬಿಡ್ತೀರಿ...." ಅದಕ್ಕೆ ಅವನು ಉತ್ತರಿಸಲಿಲ್ಲ.

೦ ೦ ೦

ರಸ್ತೆಯ ಪಕ್ಕಕ್ಕೆ ಇದ್ದ ಈ ಮನೆ, ಒಂದು ಕಾಲದಲ್ಲಿ ಪಾಕಶಾಲೆಯಾಗಿತ್ತು. ಅಡಿಗೆಯವರ ಸಂಸಾರ ಅಲ್ಲಿ ವಾಸವಾಗಿತ್ತು. ದಿನ ನಿತ್ಯ ಬಂಗಲೆಯ ಅಡಿಗೆ ಮನೆಯಲ್ಲಿ ಅಡಿಗೆ ಕೆಲಸ ಜರುಗಿದರೂ, ವಿಶೇಷ ದಿನಗಳಲ್ಲಿ ಈ ಮನೆಯ ಅಂಗಳದಲ್ಲಿ ಭಾರಿ

ಭಾರಿ ಒಲೆಗಳನ್ನು ಹಚ್ಚಿ, ಭಾರಿಗಾತ್ರದ ಪಾತ್ರೆ, ಕಡಾಯಿಗಳಲ್ಲಿ ಭಕ್ಷ್ಯ, ಇತರೆ ಪದಾರ್ಥಗಳನ್ನು ತಯಾರಿಸುತ್ತಿದ್ದರು ದಿನಸಿ ಸಾಮಾನಿನ ಉಗ್ರಾಣವೂ ಅಲ್ಲಿಯೇ ಇದ್ದಿತು.

ಈಗ್ಗೆ ಆರು ತಿಂಗಳಿಂದ ಈ ಮನೆ ಖಾಲಿ ಬಿದ್ದಿತ್ತು. ಇದಕ್ಕೆ ಮೊದಲು ಒಂದು ಚಿಕ್ಕ ಸಂಸಾರದವರು ಇದ್ದು ಅವರುಗಳು ಬೇರೆ ಊರಿಗೆ ಹೊರಟು ಹೋಗಿದ್ದರು.

ಹತ್ತಾರು ವರುಷಗಳು ಆ ಕುಟುಂಬದವರು ಬಾಡಿಗೆಗೆ ಇದ್ದಾಗಲೇ ಮನೆಯ ಸ್ಥಿತಿ ಕೆಟ್ಟಿತ್ತು. ಸುಣ್ಣ ಬಣ್ಣವನ್ನು ಕಾಣದೇ ರಿಪೇರಿ ಮಾಡಿಸದೇ, ಲಕ್ಷಣವನ್ನು ಕಳೆದುಕೊಂಡಿತ್ತು. ಆನಂತರ ಬೇರೆಯವರು ಬಾಡಿಗೆಗೆಂದು ನೋಡಲು ಬಂದಾಗ, ಅವರೇ ಅವರ ಖರ್ಚಿನಲ್ಲಿ ಸುಣ್ಣ ಬಣ್ಣವನ್ನು ಮಾಡಿಸಿಕೊಳ್ಳಬೇಕೆಂದು, ಲಕ್ಷ್ಮಿದೇವಮ್ಮ ಕರಾರು ಹಾಕುತ್ತಿದ್ದಳು. ಹಾಗಾಗಿ ಯಾರೂ ಬರಲು ಒಪ್ಪಿರಲಿಲ್ಲ.

ದಿಬ್ಬದ ಮೇಲಿದ್ದ ಮನೆ, ಲಕ್ಷ್ಮಿದೇವಮ್ಮನವರ ತಂದೆಯ ಕಾಲದಲ್ಲಿ, ಕಾರು ಡ್ರೈವರನ ಸಂಸಾರಕ್ಕೆಂದು ಕಟ್ಟಿಸಿಕೊಟ್ಟ ಮನೆಯಾಗಿತ್ತು. ಆನಂತರ, ಮನೆಯನ್ನು ಸ್ವಲ್ಪ ವಿಶಾಲ ಮಾಡಿ, ಬಾಡಿಗೆಗೆ ಕೊಟ್ಟಿದ್ದರು. ಆ ಮನೆಯಲ್ಲಿದ್ದವರು ಅನುಕೂಲಕರ ಸ್ಥಿತಿಯಲ್ಲಿರಲಿಲ್ಲ. ಯಜಮಾನ ಅನೇಕ ಕಡೆ ಸಾಲ ಮಾಡಿ ಸಾಲಗಾರನಾಗಿದ್ದ. ಸಾಲ ಕೊಟ್ಟವರು ಆಗಾಗ್ಗೆ ಬಂದು ಪೀಡಿಸತೊಡಗಿದ್ದಾಗ, ಬೇಸತ್ತು, ವಿಷ ಸೇವಿಸಿ ಆತ್ಮಹತ್ಯಾ ಮಾಡಿಕೊಂಡಿದ್ದ. ಆ ನಂತರ ಆ ಮನೆಗೆ ಯಾರೂ ವಾಸಕ್ಕೆ ಬಂದಿರಲಿಲ್ಲ ಖಾಲಿ ಬಿದ್ದಿತ್ತು.

ಈಗ ಆ ಎರಡೂ ಮನೆಗಳಿಗೂ ಒಳ್ಳೆಯ ದೆಸೆ ಪ್ರಾರಂಭವಾಗಿತ್ತು. ಗಂಗಾಧರ ಜೋಷಿಯವರು ಮತ್ತೆ ಬಂದು ಕೇಳಿದಾಗ, ಗೋಪಾಲ, ಹೆಂಡತಿ ಹೇಳಿದುದನ್ನು ತಿಳಿಸಿದ. ಮೊದಲಿಗೆ ಆತ ಅನುಮಾನಿಸಿದರೂ, ಕಡೆಗೆ ಏನನ್ನೋ ಆಲೋಚಿಸಿ ಒಪ್ಪಿದ್ದರು. ಕೆಲವೇ ದಿನಗಳಲ್ಲಿ ಎರಡೂ ಮನೆಗಳ ರಿಪೇರಿ ಕೆಲಸ ಶುರುವಾಗಿತ್ತು. ಕೆಲಸಗಾರರು ನಿಷ್ಠೆಯಿಂದ ಕೆಲಸವನ್ನು ಮಾಡಿ, ಮುಗಿಸಿ, ವಾಸಕ್ಕೆ ಯೋಗ್ಯವಾಗುವಂತೆ ಮಾಡಿದ್ದರು. ಎರಡೂ ಮನೆಗಳೂ ನಾಡ ಹೆಂಚಿನವು...

ಕೆಲಸ ಮುಗಿದ ನಂತರ, ಒಂದು ಶುಭ ದಿನದಲ್ಲಿ ಮನೆಗೆ ಪುಣ್ಯಾಹದ ಕಾರ್ಯವನ್ನು ನೆರವೇರಿಸಿದರು. "ನೋಡ್ರೀ ರಾಯರ... ಮನಿಗೆ ಹೆಂಗೆ ಕಳೆ ಬಂದದ... ಎಂದು ಹೇಳಿ ತಮ್ಮ ಕಾರ್ಯವನ್ನು ಹೊಗಳಿಕೊಂಡಿದ್ದರು. ಹಾಗೇ ತಾವು ವಾಸವಿಗದ್ದ ಮನೆಯ ಮುಂಭಾಗಕ್ಕೆ ಸುಣ್ಣವನ್ನು ಬಳಿಸಿದ್ದರು. ಈಗ ನೋಡಿ ಮದುವಿ ಮನಿಯ ಕಳೆ ಕಾಣ್ತೈತಿ... ಹೌದಲ್ಲೋ" ಎಂದು ಪ್ರಶ್ನಿಸಿದ್ದರು.

"ಎಷ್ಟು ಖರ್ಚಾಯಿತು ಜೋಷಿಗಳೇ... ಮದುವೆ ಖರ್ಚಿನ ಜೊತೆಗೆ ಈ ಖರ್ಚು ಬಿದ್ದಂತಾಯಿತಲ್ಲ ನಿಮಗೆ..."ಗೋಪಾಲ ಹೇಳಿದ್ದ.

"ಹೌದು ರಾಯರ ಖರ್ಚು ಬಿದ್ದದೆ... ಆದರೆ ನಮ್ಮ ಕೆಲಸ ನಡೆಯೂ ವ್ಯಾಳೀಲಿ ಖರ್ಚಿನ ಮೋರಿ ನೋಡ್ಬಾರ್ದು ಅಂತ ನಮ್ಮ ಹಿರೇರು ಹೇಳ್ತಿದ್ರು... ನಮ್ಮ ಅಗತ್ಯಕ್ಕೆ ನಾವು ಖರ್ಚು ಮಾಡ್ಯೇವಿ. ನೀವು ಚಿಂತಿಸ್ಬ್ಯಾಡಿ... ಎಂದು ಹೇಳಿ ಇವರ ಕೈ ಹಿಡಿದು ವಿಶ್ವಾಸವನ್ನು ವ್ಯಕ್ತಪಡಿಸಿದ್ದರು.

"ನೋಡಿದ್ಯಾ ಲಕ್ಷ್ಮೀ... ಎರಡೂ ಮನೆಗಳಿಗೂ ಒಂದು ಲಕ್ಷಣ ಬಂತು... ನಮ್ಮ ಮನೆಗೂ ಸುಣ್ಣ ಬಣ್ಣ ಮಾಡಿಸಿದ್ರೆ ಚೆನ್ನಾಗಿರುತ್ತೆ ಅಲ್ವಾ..."

"ಈಗ್ಯಾಕೆ ಸುಮ್ಸುಮ್ನೆ...? ನಮ್ಮ ಮನೇಲಿ ಮದುವೇನೇ? ಮುಂಜೀನೆ? ಮುಂದೆ ಬೇಕಾದಾಗ ಮಾಡ್ಸಿದ್ರಾಯ್ತು..." ತಟ್ಟನೆ ಹೇಳಿದ್ದಳು.

"ಮದುವೆ ಅನ್ನುತ್ಲು ನೆನಪಿಗೆ ಬಂತು. ಚಂದ್ರು ಮದುವೆ ಬಗ್ಗೆ ಏನು ಯೋಚನೆ ಮಾಡಿದೆ?'... ರಾಮರಾಯರ ಕಡೆ ಯಾರನ್ನಾದ್ರೂ ವಿಚಾರಿಸೋಣ್ವಾ?..."

"ಅವರ ಮನೆ ಕಡೆ ಹುಡುಗೀನೇ ಯಾಕೆ ? ಅಲ್ಲದೇ, ನಾವೇ ಕೇಳಿಕೊಂಡು ಮುಂದುವರೆದರೆ, ಅವರ ಧಿಮಾಕು ಹೆಚ್ಚುತ್ತೆ. ಎಷ್ಟಾಗಲೀ, ಅವರು ನಮ್ಮ ಬಾಡಿಗೆದಾರರು... ನಮಗೆ ಸಮಾನ ಅಂತಸ್ತಿನವರು ಸಿಗದಿದ್ದಾಗ ವಿಚಾರಿಸಿದ್ರಾಯ್ತು... ಈಗ ಬೇಡ"

"ಚಂದ್ರೂಗೆ ಇದುವರೆಗೆ ಯಾವ ಹೆಣ್ಣುಗಳನ್ನು ನೋಡಿಲ್ಲ... ನಮಗೆ ಎಂಥಾ ಹುಡುಗಿ ಬೇಕು ಅಂತ ಮಾತಾಡಿಕೊಂಡಿಲ್ಲವಲ್ಲ... ಅವರುಗಳಿಗಾದ್ರೆ ಈ ಬಗ್ಗೆ ಗೊತ್ತಿರುತ್ತೆ."

"ಏನು ಅವಸರ ಬಿಡಿ. ಈಗಿನ್ನು ಡಿಗ್ರಿ ಮುಗಿಸಿ, ಕೆಲಸಕ್ಕೆ ಸೇರಿಕೊಂಡಿದ್ದಾನೆ ನಾಲ್ಕು ವರ್ಷ ಸಂಪಾದಿಸಲಿ... ಅವನ ಓದಿಗೆ ಖರ್ಚು ಮಾಡಿಲ್ವಾ ನಾವು?..."

"ಅವನ ಸಂಪಾದನೆ ಅವನಿಗೆ ಸೇರಿದ್ದು... ಏನೋ ವಿದ್ಯೆ ಹತ್ತಲಿಲ್ಲ... ಇಂಟರ್ ಮೀಡಿಯಟ್‌ನಲ್ಲಿ ಮುಗ್ಗರಿಸಿದ... ಬಿ.ಎಸ್ಸೀಲೂ ಫೇಲಾಗಿದ್ದ, ವಯಸ್ಸಂತೂ ಆಗಿದೆಯಲ್ಲ. ಅವನ ವಿದ್ಯೆ, ಕೆಲಸ, ಸಂಪಾದನೆಗೆ ತಕ್ಕಂಥ ಹುಡುಗೀನ ನೋಡೋಣ... ಹುಡುಗಿ ನಿನ್ನ ಹಾಗೆ ರೂಪವತಿಯಾಗಿದ್ರೆ ಸಾಕು..."

"ಎಲ್ರಿಗೂ ಅಂಥಾ ಅದೃಷ್ಟಲಕ್ಷ್ಮಿ ಎಲ್ಲಿ ಒಲಿತಾಳೆ ? ನಿಮಗೆ ರೂಪ, ಶ್ರೀಮಂತಿಕೆ ಎರಡೂ ಇರುವ ನಾನು ಸಿಕ್ಕಿದೆ... ನನ್ನಂಥೋಳು ಯಾರಾದ್ರೂ ಇದ್ದರೆ ನೋಡಿ, ಅವನನ್ನು ಮನೆ ಅಳಿಯನ್ನಾಗಿ ಕಳಿಸಿಬಿಡೋಣ..."ದನಿಯಲ್ಲಿ ತಮಾಷೆ ಇರಲಿಲ್ಲ.

"ಏನು ಮಾತು ಅಂತ ಆಡ್ತೀಯ ಲಕ್ಷ್ಮೀ... ಈ ಮನೆಗೆ ಇರೋನು ಅವನೊಬ್ಬನೇ, ಅವನನ್ನು ಪರರ ಮನೆಗೆ ಕಳಿಸಿಬಿಟ್ಟರೆ, ನಮಗೆ ಉಳಿಯೋ ರ್‍ಯಾರು?..."

"ಈಗ ಅವನೇನು ನಮ್ಮವನಾಗಿದಾನೆ?... ನಮ್ಮ ಜೊತೇಲಿ ಇದ್ದದ್ದೇ ಕಡಿಮೆ,

ಬೆಳೀಲಿಲ್ಲ, ಸುಖ ದುಃಖ ಹಂಚಿಕೊಳ್ಳಲಿಲ್ಲ. ನಮಗೆ ಮಗನಂತೂ ಆಗಲಿಲ್ಲ. ಬೇರೆಯವರಿಗೆ ಅಳಿಯನಾದ್ರೂ ಆಗಿರಲಿ. ಅಂಥಾ ಸಂಬಂಧ ಇದ್ದರೆ ಹುಡುಕಿ..."

"ಬೇಡ ಲಕ್ಷ್ಮೀ... ಮನೆ ಅಳಿಯನ ಸ್ಥಾನಮಾನಕ್ಕೆ ಮಾನ ಗೌರವ ಏನು ಇದೆ ಅಂತ ನನಗೆ ಅನುಭವವಾಗಿದೆ... ಆಡುಕ್ಕಿಲ್ಲ. ಅನುಭವಿಸುಕ್ಕಿಲ್ಲ... ನಾನೊಬ್ಬ ಫಜೀತಿ ಪಟ್ಟಿದ್ದು ಸಾಕು..."

"ಏನು ಫಜೀತಿ ಪಟ್ಟಿದ್ದು?... ಏನು ಕಡಿಮೆ ಆಗಿತ್ತು ನಿಮಗೆ ?... ಶ್ರೀಮಂತೆಯ ಕೈ ಹಿಡಿದು, ಶ್ರೀಮಂತರ ಮನೆಯ ಅಳಿಯನಾಗಿ ಸುಖವನ್ನೇ ಪಟ್ಟಿದ್ದೀರಿ. ಕಷ್ಟಪಟ್ಟು ಕೆಲಸ ಮಾಡಿ ಸಂಪಾದಿಸುವ ಅಗತ್ಯವಿರಲಿಲ್ಲ. ನಿಮಗೆ ಬರುತ್ತಿದ್ದ ಸಂಬಳ ನಿಮ್ಮ ಹೊಟ್ಟೆ ಬಟ್ಟೆಗೇ ಸಾಕಾಗುವಷ್ಟು ಇರಲಿಲ್ಲ. ನಾನು ಎಂದಾದ್ರೂ ಸೀರೆ ತಂದ್ಕೊಡಿ, ಒಡವೆ ಮಾಡಿಸ್ಕೊಡಿ ಅಂತ ನಿಮ್ಮನ್ನು ಪೀಡಿಸಿದ್ನಾ?... ಒಂದು ಮೊಳ ಹೂವು ತಂದ್ಕೊಡಿ ಅಂತ ಒಂದು ದಿನವೂ ಕೇಳಲಿಲ್ಲ ನಾನು... ಏನು ಕೊರತೆ ಆಗಿತ್ತು ನಿಮ್ಮ ಸ್ಥಾನಕ್ಕೆ ?... ನಿಮ್ಮ ಗೌರವಕ್ಕೆ ಏನು ಧಕ್ಕೆ ಬಂತು ? ಅಪ್ಪ ಅಮ್ಮ ಬದುಕಿದ್ದಾಗ ಒಂದು ದಿನವೂ ಹೀಗೆಲ್ಲಾ ಮಾತಾಡ್ಲಿಲ್ಲ ನೀವು. ಈಗ ನನ್ನನ್ನ ಕೇಳೋರು ಯಾರೂ ಇಲ್ಲ ಅಂತ, ನಿಮಗೆ ಧೈರ್ಯ ಬಂತಾ?...."

ಧೈರ್ಯದ ಪ್ರಶ್ನೆ ಅಲ್ಲ ಲಕ್ಷ್ಮೀ ಸ್ವಾತಂತ್ರ್ಯ... ಆಗಲೂ ಇರಲಿಲ್ಲ. ಈಗಲೂ ಇಲ್ಲ. ಈ ಪರಿಸ್ಥಿತಿ ಚಂದ್ರುಗೆ ಬರಬಾರದು. ಅವನು ಈ ಕಾಲದವನು, ಅದಕ್ಕೆಲ್ಲ ಒಪ್ತಾನೋ ಇಲ್ಲವೋ... ನಮಗೆ ತಾನೇ ಎಷ್ಟು ಜನ ಇದ್ದಾರೆ ?... ಇರೋನೊಬ್ಬ ನಮ್ಮ ಜತೆಗಿರಲಿ ಅಂತ... ನಮಗೆ ಸಹಾಯಕನಾಗಿರ್‍ತಾನೆ..."ಮುಂದೆ ಇವೆಲ್ಲಾ ಅವನಿಗೇ ತಾನೇ ?..."ಅಳಕುತ್ತಾ ನುಡಿದ.

"ಅದನ್ನು ನಿರ್ಧರಿಸುವ ಹಕ್ಕು ನಿಮಗಿಲ್ಲ. ನಮಗೂ ನಮ್ಮದೇ ಸ್ವಂತ, ನಾಲ್ಕು ಮಕ್ಕಳಿದ್ದಿದ್ದರೆ, ಆ ಮಾತೇ ಬೇರೆ ಇರ್ತಿತ್ತು... ಚಂದ್ರು ನಮ್ಮ ಮಗ ಅನ್ನುವ ಅಭಿಮಾನ ನಮಗಿಲ್ಲ; ನಾವು ಅವನ ತಂದೆ ತಾಯಿ ಎನ್ನುವ ಗೌರವ ಅವನಿಗಿಲ್ಲ... ಈ ಬಾಂಧವ್ಯಕ್ಕೆ ನಗಬೇಕೋ, ಅಳಬೇಕೋ ತಿಳೀತಿಲ್ಲ... ಅವನು ಮದುವೆ ಮಾಡಿಕೊಳ್ಳಲಿ, ಮಾಡಿಕೊಳ್ಳದಿರಲಿ ನನಗೆ ಏನೂ ಅನ್ನಿಸುವುದಿಲ್ಲ... ಅವನು ನಮ್ಮೊಂದಿಗೇ ಬಂದು ಇರಲಿ ಅನ್ನುವ ಆಸೆ ನನಗಿಲ್ಲ... ಈ ಆಸ್ತಿಯೆಲ್ಲಾ ಅವನಿಗೆ ಸೇರಬೇಕೋ ಬೇಡವೋ ಅನ್ನುವುದನ್ನು ನಾನು ನಿರ್ಧರಿಸುತ್ತೇನೆ... ಗೊತ್ತಾಯ್ತಾ?"

"ಚಂದ್ರು ನಮ್ಮ ದತ್ತು ಪುತ್ರ. ಕಾನೂನಿನ ಪ್ರಕಾರ ಎಲ್ಲಾದಕ್ಕೂ ಅವನೇ ಒಡೆಯನಾಗುತ್ತಾನೆ... ಅದನ್ನು ಬೇರೆ ಯಾರೂ ನಿರ್ಧರಿಸಲು ಸಾಧ್ಯವಿಲ್ಲ."

"ಬೇರೆ ಯಾರೂ ಅಲ್ಲ. ನಾನು ಈ ಆಸ್ತಿಗೆ ಒಡತಿ... ಅವನನ್ನು ದತ್ತು ತೆಗೆದುಕೊಂಡಿದ್ದು ನಮಗೆ ಒಂದು ಸದ್ಗತಿ ಕಾಣಿಸಲಿ ಅಂತ... ಅದಕ್ಕೆ ಇಷ್ಟೆಲ್ಲಾ

ಆಸ್ತಿಯನ್ನು ಅವನಿಗೆ ಕೊಡಬೇಕಾಗಿಲ್ಲ. ಈಗ ಈ ಮಾತುಗಳು ಸಾಕು... ಮತ್ತೆಂದೂ ಈ ಮಾತುಗಳನ್ನು ಎತ್ತಬೇಡಿ..."

"ನಾನು ನಿನ್ನ ಗಂಡ ಕಣೇ.... ನಾನು ನಿನ್ನ ಬಗ್ಗೆ, ನಮ್ಮ ಬಗ್ಗೆ ಯೋಚಿಸುವುದು ತಪ್ಪು ಅಂತೀಯಾ?.... ಚಂದ್ರುದೇನು ತಪ್ಪು ?... ಅವನನ್ನು ದತ್ತು ತೆಗೆದುಕೊಳ್ಳಲು ನಿರ್ಧರಿಸಿದ್ದು ಅತ್ತೆ. ಅವರ ನಿರ್ಧಾರ ತಪ್ಪು ಅಂತೀಯಾ?"

"ಈಗ ಈ ಸುದ್ದಿ ಸಾಕು ಅಂತ ಅಂದ್ನಲ್ಲ. ಬಿಡಿ... ಎರಡೂ ಮನೆಗಳಿಗೂ ಸರಿಯಾದ ದೊಡ್ಡ ಬೀಗವನ್ನು ಹಾಕಿ. ಬೀಗದ ಕೈಗಳನ್ನು ತಂದು ಇಲ್ಲಿ ಮೊಳೆಗೆ ತಗುಲಿ ಹಾಕಿ. ನನ್ನನ್ನು ಕೇಳದೇ ಯಾರಿಗೂ ಬೀಗದ ಕೈಯನ್ನು ಕೊಡಬೇಡಿ..."

ಹೆಂಡತಿಯ ಈ ರೀತಿಯ ಮಾತುಗಳು ಅವನಿಗೆ ಹೊಸದಲ್ಲ ಆದರೂ ಸ್ವಲ್ಪ ಮಟ್ಟಿಗಾದರೂ ಬದಲಾಯಿಸಲಿ ಎಂದು ಆಶಿಸಿದ್ದ .... ಆದರೆ ಇವಳು ಆಗ ಹೇಗಿದ್ದಳೋ ಈಗಲೂ ಹಾಗೇ... ದೇಹಕ್ಕೆ ವಯಸ್ಸಾಗಿದೆ. ಮಡಿ ಹೆಚ್ಚಾಗಿದೆ... ಆದರೆ ಸ್ವಭಾವದಲ್ಲಿ ಮಾತ್ರ ಕಿಂಚಿತ್ತೂ ಬದಲಾವಣೆ ಇಲ್ಲ. ಇವಳಿಗೂ ಇವಳದೇ ಆದ, ಇವಳೇ ಹೊತ್ತು ಹೆತ್ತು ಸಾಕಿ ಸಲುಹಿದ ಸ್ವಂತ ಮಕ್ಕಳಿದ್ದಿದ್ದರೇ ಖಂಡಿತಾ ಬದಲಾಗುತ್ತಿದ್ದಳು... ಈ ಕಟುನುಡಿಗಳಿರು ತ್ತಿರಲಿಲ್ಲ. ಜಿಪುಣತನವಿರುತ್ತಿರಲಿಲ್ಲ. ಹಠವಾದಿತನ ಇರುತ್ತಿರಲಿಲ್ಲ. ನನ್ನ ಬಗ್ಗೆ ಏನೂ ಅನ್ನಿಸುವುದಿಲ್ಲವಲ್ಲ. ನಾನು ಹೊಂದಿಕಂಡು ಇರುವುದರಿಂದ ಇವಳ ಕಾರುಬಾರು ನಡೆಯುತ್ತಿದೆ. ಇಲ್ಲದಿದ್ದರೆ, ಈ ಹೆಣ್ಣು ಹೆಂಗಸು ಹೇಗೆ ನಿಭಾಯಿಸಬಲ್ಲಳು ?... ಈಗಲೂ ನಾನು ಎಲ್ಲಿಗಾದರೂ ಹೇಳದೇ ಕೇಳದೇ ಹೊರಟು ಹೋದರೆ... ಆಗ ಏನು ಮಾಡುತ್ತಾಳೆ? ಆದರೆ ಈ ಅನಿಸಿಕೆ ಸರಿ ಎನಿಸಲಿಲ್ಲ. ಇಷ್ಟೇ ವರ್ಷಗಳು ಇವಳೊಂದಿಗೆ ಸಂಸಾರ ಮಾಡಿದ್ದಾಗಿದೆ. ಇವಳ ಕಟುಮಾತುಗಳನ್ನು ಕೇಳಿದ್ದೇನೆ. ಅಗ್ನಿಸಾಕ್ಷಿಯಾಗಿ ಕೈ ಹಿಡಿದು, ಇವಳೊಂದಿಗೆ ಬದುಕುವುದಾಗಿ ವಚನ ತಗೊಂಡಿದ್ದೇನೆ. ಈಗ ಈ ವಯಸ್ಸಿನಲ್ಲಿ ಇವಳನ್ನು ಒಬ್ಬಳನ್ನೇ ಬಿಟ್ಟು ಹೋದರೆ, ನನಗೂ ಅಪಖ್ಯಾತಿ ಇವಳಿಗೂ ಅಪಖ್ಯಾತಿ. ಈಗ ಇವಳಿಂದ ನನಗೆ ಏನೂ ಆಗಬೇಕಾಗಿಲ್ಲ, ಇಬ್ಬರಿಗೂ ಯೌವನವಿಲ್ಲ. ನನಗೆ ಯಾವ ಆಸ್ತಿಅಂತಸ್ತಿನ ಆಸೆ ಇಲ್ಲ... ಇವಳ ಮಾತುಗಳನ್ನು ಖಂಡಿಸಿದರೂ, ವಿರೋಧಿಸುವ ಮನಸ್ಸಾಗುವುದಿಲ್ಲ. ಇವಳಿಗೆ ಹಠ ಜಾಸ್ತಿ.. ಯಾರಾದರೊಬ್ಬರು ಸೋಲಲೇ ಬೇಕಲ್ಲವೆ ? ಇವಳಿಗೂ ಅಷ್ಟೇ ನನ್ನ ಹೊರತು ಬೇರೆಯಾರಿಲ್ಲ. ಚಂದ್ರುವನ್ನು ದತ್ತು ತೆಗೆದುಕೊಂಡಿದ್ದು ಇವಳ ತಾಯಿಯ ನಿರ್ಧಾರದಿಂದ... ಆದರೆ ಸಾಕಿ ಬೆಳೆಸಲಿಲ್ಲ. ವಾತ್ಸಲ್ಯ ಮಮತೆ ಬೆಳೆಯಲಿಲ್ಲ. ನಮ್ಮ ಮಗನಂತೆ ಎನ್ನುವ ಹೆಮ್ಮೆಗಿಂತ, ಇಲ್ಲದಿದ್ದರೂ ಪರವಾಗಿಲ್ಲ ಎನ್ನು ಧೋರಣೆ ! ಇದಕ್ಕೆ ಏನನ್ನೋಣ ?..." ಮನಸ್ಸು ಕುಂದಿತ್ತು.

'ಇಲ್ಲೇ ಕೂತಿದೀರಾ ನೀವು ?... ನಿಂಬೆ ಹಣ್ಣುಗಳಿದ್ದರೆ ಕೊಯ್ಕೊಂಡು ಬನ್ನಿ... ಆ ಮೇಲೆ ಬೇರೆ ಯಾರಾದ್ರೂ ಕೊಯ್ಕೊಂಡು ಹೋದಾರು. ಕೈಗೆ ಬಂದ ತುತ್ತು ಬಾಯಿಗೆ ಇಲ್ಲವಾಗುತ್ತೆ... ತೊಳೆದು, ಒರೆಸಿ, ಹೋಳು ಮಾಡಿ, ಜಾಡಿಯಲ್ಲಿ ಹಾಕಿ ಉಪ್ಪು ಹಾಕಿಡ್ತೀನಿ... ಈ ವರ್ಷಕ್ಕೆ ಉಪ್ಪಿನ ಕಾಯಿ ಆಗುತ್ತೆ..."

"ಸರಿ..." ಎಂದು ಭುಜದ ಮೇಲಿದ್ದ ಪಂಚೆಯ ತುಂಡನ್ನು ಒದರಿ ಎದ್ದ. ಕೊಯ್ಯುವಾಗ, ಯಾರಾದ್ರು ಬಂದು ಕೇಳಿದ್ರೆ ಕೊಟ್ಟುಬಿಡ್ಬೇಡಿ... ಒಂದು ಚೀಲವನ್ನು ತಗೊಂಡ್ಹೋಗಿ... ಒಂದೂ ಬಿಡದೇ ಕೊಯ್ಕೊಂಡು ಬನ್ನಿ..."ಮತ್ತೆ ಹೇಳಿದಳು.

'ಹುಶಾರು... ಮುಳ್ಳಿರುತ್ತೆ... ಜೋಪಾನ' ಎಂದು ಹೇಳಲಿಲ್ಲವೆನ್ನುವುದನ್ನು ಗಮನಿಸಿದ. ಆದರೆ ಆ ಅನುನಯದ ಮಾತುಗಳನ್ನು ನಿರೀಕ್ಷಿಸುವುದು ಹಾಸ್ಯಾಸ್ಪದ ವೆನಿಸಿತ್ತು. ಗೂಟಕ್ಕೆ ನೇತು ಹಾಕಿದ್ದ ಬಟ್ಟೆಯ ಚೀಲವನ್ನು ಹಿಡಿದು ಹಿತ್ತಿಲಿಗೆ ಬಂದ. ನಿಂಬೆಹಣ್ಣುಗಳನ್ನು ಉದುರಿಸಲು ಉದ್ಯುಕ್ತನಾದ. ಹಾಗೇ ಅತ್ತಿತ್ತ ಗಮನಹರಿದಿತ್ತು. ಮಂಗಳ ಅವರ ಮನೆಯ ಹಿತ್ತಿಲಿನಲ್ಲಿ ಬಟ್ಟೆಗಳನ್ನು ಒಗೆಯುತ್ತಿದ್ದಳು. ಕನ್ಸರ್‌ವೆನ್ಸಿ ಯಲ್ಲಿ ಗಿಡದ ಮರೆಯಲ್ಲಿ ಬೇಲಿಯ ಬಳಿ ನಿಂತು ಅವಳನ್ನೇ ನೋಡುತ್ತಿದ್ದ ಆ ವ್ಯಕ್ತಿಯನ್ನು ಕಂಡ...

'ಏ... ಯಾರದು?' ಎಂದು ಕೂಗುತ್ತ ಅತ್ತ ಬಂದ. ಮಂಗಳಾ ಬೆಚ್ಚಿದಳು. ಇವರ ಕಡೆ ನೋಡಿದಳು. ಯಾರೋ ಕಳ್ಳ... ಇತ್ಲಾಗೇ ನೋಡ್ತಿದ್ದ. ಬಟ್ಟೆಗಿಟ್ಟೆ, ಪಾತ್ರೆ ಪಡಗವನ್ನು ಕದ್ದುಕೊಂಡು ಹೋದಾನು... ಹುಶಾರಮ್ಮ. ಬಟ್ಟೆಗಳನ್ನು ಆಕಡೆ ಹರವಿಹಾಕು... ನಿರ್ದೇಶಿಸಿದ. ಹುಂ ಎಂದು ತಲೆಯಾಡಿಸಿದಳು. ಬೆದರಿದವಳ ಮುಖವನ್ನೇ ನೋಡಿದ. ಹುಡುಗಿ ಲಕ್ಷಣವಾಗಿದ್ದಾಳೆ. ಇಂಥವಳು ಸಿಕ್ಕಿದರೆ, ಚಂದ್ರುಗೆ ತಕ್ಕ ಪತ್ನಿಯಾಗ್ತಾಳೆ. ಕೆಲಸಕಾರ್ಯ ಎಲ್ಲಾ ಬರುತ್ತೆ. ಆದರೆ ಲಕ್ಷ್ಮಿಗೆ ಅಂತಸ್ತಿನ ಚಿಂತೆ. ಆಸ್ತಿ ಅಂತಸ್ತು ಯಾರಿಗೆ ಬೇಕಾಗಿದೆ ? ಆಕರ್ಷಕ ಜೀವನವಿರಬೇಕು. ಹೆಚ್ಚು ಕಡಿಮೆ ಎಂಬ ಭೇದಭಾವ ಇರಬಾರದು... ಈ ಕಾರಣ ದಿಂದಲೋ ಏನೋ ತಮಗೆ ಮಕ್ಕಳಾಗಲಿಲ್ಲ. ನನ್ನ ಅಂತಸ್ತಿಗೆ ಇಳಿದು ನೋಡಿದ್ದರೆ, ಖಂಡಿತಾ ಮಕ್ಕಳಾಗಿರುತ್ತಿದ್ದವು... ಆ ಕೊರತೆ ಈಗೀಗ ಇವಳನ್ನು ಕಾಡುತ್ತಿರಬಹುದು. ಆದರೆ ಒಣ ಪ್ರತಿಷ್ಠೆ... ಅದನ್ನು ಬಿಟ್ಟು ಇಂಥ ಹುಡುಗಿಯನ್ನು ಸೊಸೆಯನ್ನಾಗಿ ಮಾಡಿಕೊಂಡರೆ, ಮನೆ 'ನಂದನಗೋಕುಲ'ವಾಗುತ್ತೆ... ಇಂಥವಳನ್ನು ಚಂದ್ರು ಖಂಡಿತಾ ಮೆಚ್ಚುತ್ತಾನೆ. ಆದಷ್ಟು ಅವನನ್ನು ಕರೆಸಬೇಕು...

ಮಂಗಳ ಹಿಂಡಿದ ಬಟ್ಟೆಗಳನ್ನು ತೆಗೆದುಕೊಂಡು, ಹರವಲೆಂದು ಹೊರಟು ಹೋಗಿದ್ದಳು ಕನ್ಸರ್‌ವೆನ್ಸಿಯ ಆ ವ್ಯಕ್ತಿ ಮರೆಯಾಗಿದ್ದ. ಗೋಪಾಲ ಮತ್ತೆ ನಿಂಬೆ ಮರದ ಬಳಿಗೆ ಬಂದು ಹಣ್ಣುಗಳನ್ನು ಹುಡುಕಿ ಹುಡುಕಿ ಕೋಲಿನಿಂದ ಉದುರಿಸಿ,

ತುಂಬಿಟ್ಟುಕೊಂಡ.

೦ ೦ ೦

ಗಂಗಾಧರ ಜೋಷಿಗಳ ಮನೆಯಲ್ಲಿ, ಮದುವೆಯ ಎಲ್ಲಾ ಸಿದ್ಧತೆಗಳೂ ಭರದಿಂದ ಸಾಗಿದ್ದವು. ಪತ್ನೀ ಸಮೇತರಾಗಿ, ಗಂಗಾಧರ ಜೋಷಿಗಳು, ಖುದ್ದಾಗಿ, ವಠಾರದ ಮನೆಗಳಿಗೆ ಹೋಗಿ, ಆಮಂತ್ರಣ ಪತ್ರವನ್ನು ಕೊಟ್ಟು, ಅಕ್ಷತೆಯನ್ನಿತ್ತು, ವಿನಯದಿಂದ ಎಲ್ಲರನ್ನೂ ಆಹ್ವಾನಿಸಿದ್ದರು.

ಮೊದಲಿಗೆ ಅವರು ಗೋಪಾಲಯ್ಯನ ಮನೆಗೆ ಬಂದಿದ್ದರು. ನಿಮ್ಮ ಸಹಕಾರ ಇಲ್ದೇ ನಾವೇನು ಮಾಡ್ತೇವ್ರೀ... ಎಲ್ಲಾ ನಿಮ್ಮ ದಯಾ ಎಲ್ಲಾ ಸಿದ್ಧತೇನೀ ಮುಗಿದೈತಿ. .. ನಾಳೆಯಿಂದ ನೆಂಟರು ಬರ್ಲಿಕ್ಕೆ ಹತ್ತಾರ್ರೀ... ನಿಮ್ಮನ್ನು ಕಂಡು ಮಾತಾಡ್ಲಿಕ್ಕೆ ಆಗ್ತದೋ ಇಲ್ಲೋ... ಮೂರು ದಿನದ ಸಮಾರಂಭ... ನೀವು ಅಲ್ಲೇ ಬಂದು ನಮ್ಮೊಂದಿಗೆ ಇರಬೇಕರಿ. ಭಲೋ ಇರ್ತದ..." ವಿಶ್ವಾಸದಿಂದ ಆಹ್ವಾನಿ ಸಿದ್ದರು.

"ನೀವು ವಿಶ್ವಾಸದಿಂದ ಕರೆಯೋದು ಹೆಚ್ಚೋ... ನಾವು ಬರೋದು ಹೆಚ್ಚೋ... ನಿಮ್ಮ ಮನೆ ಮದುವೆ ; ನಮ್ಮ ಮನೆ ಮದುವೆ ನಾವು ಬಂದು ವಧೂವರರನ್ನು ಆಶೀರ್ವದಿ ಸ್ತೀವಿ..."ಗೋಪಾಲಯ್ಯ ಮುಗುಳ್ನಗುತ್ತಾ ಹೇಳಿದ್ದ.

"ಅದ್ಹೇಗೆ ಆಗುತ್ತೆ... ? ಮೂರು ಮೂರು ದಿನ ಮನೆಗೆ ಬೀಗ ಹಾಕಿ ನಾವು ಬರುಕ್ಕಾಗುಲ್ಲ. ವರಪೂಜೆಗೋ, ಮುಹೂರ್ತಕ್ಕೋ ಯಾವುದಾದ್ರೂ ಒಂದು ಹೊತ್ತಿಗೆ ಬರ್ತೀವಿ. ನಾನು ಮದುವೆ ಮನೇಲಿ ಊಟ ಮಾಡುಲ್ಲ. ನನ್ನ ಮಡಿಗೆ ಆಗಿ ಬರುಲ್ಲ" ಲಕ್ಷ್ಮೀದೇವಮ್ಮ ತಟ್ಟನೆ ಉತ್ತರಿಸಿದಳು. ಗೋಪಾಲನ ಮುಖ ಕಂಗೆಟ್ಟಿತು.

"ನಮ್ಮ ಕಡೀನೂ ಭಾಳ ಮಂದಿ ಮಡಿಯಾಗೇ ಉಣ್ತಾರ್ರೀ... ಮಡಿಯಾಗೇ ಅಡಿಗೆ ಬೇಯಿಸ್ತೀವಿ... ನಿಮಗೂ ಆಗ ಬರ್ತದ..."ಜೋಷಿಯ ಪತ್ನಿ ನುಡಿದಳು.

"ಮದುವೆ ಮನೆ ಮಡಿ ಅಂದ್ರೆ ಏನು ಅಂತ ನಂಗೂ ಗೊತ್ತು... ಬರೀ ತುಳುಕಲು... ಬಳಕಲು... ನಂಗೆ ಅದೆಲ್ಲ ಸರಿ ಬರುಲ್ಲ. ಮುಹೂರ್ತದ ಬೆಳಿಗ್ಗೆ ಬರ್ತೀನಿ. ಆಶೀರ್ವಾದ ಮಾಡ್ತೀನಿ. ಫಲ ತಾಂಬೂಲ ತಗೊಂಡು ಬರ್ತೀನಿ ಅಷ್ಟೇ... ಬಲವಂತ ಯಾಕೆ?"

"ಸರೀರ್ರಿ... ನಿಮ್ಮ ಖುಷಿ... ನಾವಿನ್ನು ಬರ್ತೀವಿ" ಕೈ ಮುಗಿದು ಎದ್ದರು. ಆಕೆಗೆ ಅರಿಶಿನ ಕುಂಕುಮವನ್ನು ಕೊಟ್ಟು, ಹೂವು ಹಣ್ಣುಗಳನ್ನಿಟ್ಟು ಎಲೆ ಅಡಿಕೆಯೊಂದಿಗೆ ಕೊಟ್ಟಳು.

"ಹಾಲೋ, ಕಾಫಿಯೋ ತಗೋಬಹುದಾಗಿತ್ತು..." ಗೋಪಾಲಯ್ಯ ಬಾಯಿ ಮಾತಿಗೆ ಹೇಳಿ ಪತ್ನಿಯ ಕಡೆ ನೋಡಿದ. ಆಕೆ ಬಿರುಗಣ್ಣುಗಳನ್ನು ಬಿಟ್ಟಳು.

"ಇಲ್ರೀ... ಇನ್ನು ಬಾಳ ಮನೀಗೆ ಹೋಗೋದದ... ಭಾಳ ಕೆಲಸ ಬಿದ್ದವ...

ಇನ್ನೊಮ್ಮೆ ಬಂದಾಗ ಎಲ್ಲಾ ತಗೋತೀನ್ರಿ" ಎಂದು ಹೇಳಿ ಅವರುಗಳು ಹೊರಟಿದ್ದರು.

"ಅಲ್ಲಾ ಲಕ್ಷ್ಮೀ ಆಕೆ, ನಮ್ಮ ಮನೆಗೆ ಬಂದದ್ದು ಇದೇ ಮೊದಲ ಸಲ... ಮನೇಲಿ ಅಷ್ಟೊಂದು ತೆಂಗಿನಕಾಯಿ ಇತ್ತು... ಒಂದು ರವಿಕೆ ಖಣದ ಜೊತೆ ಇಟ್ಟು ಕೊಡ ಬಹುದಾಗಿತ್ತು.. ಅಲ್ವಾ?"

"ನಿಮಗ್ಯಾಕೆ ಅದೆಲ್ಲಾ ? ಅದೆಲ್ಲಾ ಹೆಂಗಸರ ವಿಚಾರ. ಹಬ್ಬ ಹುಣ್ಣಿಮೆಗಳಲ್ಲಿ ಕಾಯಿ, ಖಣ ಎಲ್ಲಾ ಕೊಡೋದು... ಈಗ್ಯಾಕೆ ಸುಮ್ಸುನ್ನೇ... ಯಾವುದೂ ಬಿಟ್ಟಿ ಬರುಲ್ಲ..."

"ಹಾಗೆಲ್ಲಿ ನಾನಂದೆ ? ಇತ್ತಲ್ಲ. ಇಟ್ಕಂಡು ಏನ್ಮಾಡೋದು ಅಂತ ಕೇಳ್ದೆ. ಸರಿ ಬಿಡು ನಿನ್ನಿಷ್ಟ. ಹುಡುಗಿಗೆ ಏನು ಉಡುಗೊರೆ ಕೊಡೋಣ... ಮನೇಲಿ ಯಾವ್ದಾದ್ರೂ ಬೆಳ್ಳಿ ಲೋಟ, ಬಟ್ಟಲು ಏನಾದ್ರೂ ಇದ್ದರೆ ಪಾಲಿಷ್ ಹಾಕಿಸಿಕೊಡೋಣ."

"ಎಲ್ಲಿದೆ ? ಇದ್ದದ್ದನ್ನೆಲ್ಲಾ, ನಿಮ್ಮ ಮನೆ ಕಡೆಯ ನಾಮಕರಣ, ಉಪನಯನ, ಮದುವೆ ಅಂತ ಕೊಟ್ಟಿದ್ದಾಯಿತು. ಹೊಸದನ್ನು ತರ್ಬೇಕು... ಏನೂ ಬೇಡ... ಪೆಟ್ಟಿಗೆ ಯಲ್ಲಿ ರೇಶ್ಮೆ ಖಣಗಳಿವೆ. ಒಂದನ್ನು ಕೊಟ್ಟರಾಯ್ತು. ಹೊಲಿಸ್ಕೊಂಡು ತೊಟ್ಕೋ ತಾಳೆ... ಅದೇ ಬೆಳ್ಳಿ ಸಾಮಾನಾದ್ರೆ, ಅತ್ತೆ ಮನೆ ಸೇರುತ್ತೆ..."

"ನಿಂಗೆ ಎಲ್ಲಾ ಗೊತ್ತು... ನಾನ್ಯಾಕೆ ಕೇಳ್ತೀನೋ?"

"ಮತೆ? ತೆಪ್ಪಗಿರಿ, ಗಂಡಸಿಗ್ಯಾಕೆ ಗೌರಿದುಃಖ ಅಂತ..."

"ಗೌರಿ ದುಃಖ ಅವಳ ಗಂಡ ಶಂಕರಂದೇ ಅಲ್ವೇನಿ?..."| ಮುಗುಳ್ನಕ್ಕ.

"ಏನು ವಿಷಯ ? ತಮಾಷೆ ಬೇರೆ ಹೊಳೀತಿದೆ... ನಿಮಗೆ?"

"ಏನೂ ಇಲ್ಲ. ನಿನ್ಹತ್ರ ಅಲ್ಲದೇ ಇನ್ಯಾರ ಹತ್ರ ತಮಾಷೆ ಮಾತನ್ನಾಡ್ಲೀ... ನನಗೆ ಇನ್ಯಾರಿದ್ದಾರೆ ?.... ನಾನು ಬಡವ... ಪರದೇಶಿ..."

"ಯಾಕಿಲ್ಲ ! ನಿಮಗಾದರೆ, ಅಶ್ವತ್ಥ ಕಟ್ಟೆಗೆ ಎಣಿಸುವಷ್ಟು ನೆಂಟರಿದ್ದಾರೆ... ನನಗೇ ಯಾರಿಲ್ಲ. ನಮ್ಮಪ್ಪ ಅಮ್ಮಂಗೂ ಒಂದೈದಾರು ಮಕ್ಕಳಿದಿದ್ದರೆ ಚೆನ್ನಾಗಿ ರ್ತಿತ್ತು..."

"ಆಗ ಈ ಆಸ್ತಿ ಪಾಸ್ತಿಯೆಲ್ಲಾ ನಿನಗೊಬ್ಬಳಿಗೇ ಸಿಗುತ್ತಿರಲಿಲ್ಲ' ಎಂದು ಹೇಳಬೇಕೆಂದುಕೊಂಡರೂ, ಹೇಳದೇ ಸುಮ್ಮನಾದ. ಇವಳಿಗೆ ಎಷ್ಟು ಆಸ್ತಿ ಇದ್ದರೇನು! ತನಗೆ ಯಾವ ಅಧಿಕಾರವಿಲ್ಲ. ಯಾವ ಲಾಭವೂ ಇಲ್ಲ ಅಂತಂದುಕೊಂಡ ಇದೇ ಸಮಯವೆಂದುಕೊಂಡು ಕೇಳಿದ."ನಾನು ನಾಲ್ಕು ದಿನ ಮೈಸೂರಿಗೆ ಹೋಗಿ ಬರ್ಲಾ ಲಕ್ಷ್ಮೀ... ನೀನೂ ಬರ್ತೀಯಾ?...

"ಯಾಕೆ ? ಈಗೇನು ಸಡಗರ ? ಅಲ್ಲಿ ?"

"ಅಮ್ಮ ದಿನಾ ಕನಸ್ನಲ್ಲಿ ಬರ್ತಾಳೆ ಕಣೇ... ಅವಳಿಗೂ ಎಂಬತ್ತೈದು

ವರ್ಷಗಳಾಯ್ತು. ನೀನೂ ಬರ್ತೀಯೇನು?" ನಾಲ್ಕು ದಿನ ಇದ್ದು ಬರೋಣ"

"ಇಲ್ಲಪ್ಪಾ... ಈಗ ಮೊನ್ನೆ ಮೊನ್ನೆ ಮದುವೆ ಅಂತ ಹೋಗಿ ಬಂದದ್ದಾಗಿದೆ. ಪ್ರಯಾಣಕ್ಕೆ ಎಷ್ಟು ಸುರಿಯೋದು ?.... ಅಲ್ಲದೇ ಮನೆಗೆ ಬೀಗ ಹಾಕಿ, ನಾವು ಊರಲಿಲ್ಲ ಅಂತ ಗೊತ್ತಾದರೆ, ವಠಾರನೇ ಗಬ್ಬು ಎಬ್ಬಿಸಿ ಬಿಡ್ತಾರೆ... ಜೋಷಿಗಳ ಮನೆ ಮದುವೆ ಸಮಯದಲ್ಲಿ, ನೀವು ಹೋಗಿ... ಆಗ ನನಗೂ ಒಬ್ಬಳಿಗೇ ಭಯ ಆಗುವುದಿಲ್ಲ... ಜನ ಓಡಾಡ್ತಿರ್ತಾರೆ..."

"ಇವರು ಏನಂದ್ಕೊಳ್ತಾರೋ... ಮದುವೆಗೆ ತಪ್ಪಿಸಿಕೊಂಡರು ಅಂತ ಅಂದ್ಕೊಂಡರೆ?

"ನಿಮಗೆ ನಿಮ್ಮಮ್ಮ ಹೆಚ್ಚು ಅಂತ ಅನ್ನಿಸಿದರೆ ಊರಿಗೆ ಹೋಗ್ಬನ್ನಿ, ಅಥವಾ ಮದುವೆಗೆ ಹೋಗೋದು ಹೆಚ್ಚು ಅಂತ ಅನ್ನಿಸಿದ್ರೆ ಹೋಗ್ಬೇಡಿ... ಮುಗೀತು"

"ಬೇಡ ಬಿಡು. ನೀನು ಒಬ್ಬಳೇ ಆಗಿ ಬಿಡ್ತೀಯ..."

"ಸಧ್ಯ ಹೋಗಿ ಬನ್ನಿ, ಇಲ್ದಿದ್ರೆ ನಿಮ್ಮಮ್ಮ ನನ್ನ ಕನಸ್ನಲ್ಲಿ ಬಂದು ನನಗೆ ಶಾಪ ಹಾಕ್ತಾರೆ ಅಷ್ಟೇ..."

"ಅಮ್ಮ ಅಷ್ಟು ಕೆಟ್ಟೋಳಲ್ಲ... ಹಾಗಿದ್ದಿದ್ರೆ... ನನ್ನನ್ನು ನಿನಗೆ ಬಿಟ್ಟು ಕೊಡ್ತಿದ್ಲಾ?"

"ಒಳ್ಳೆಯವ್ರು ಅಂತ ಹೇಗೆ ಹೇಳ್ತೀರಿ?... ಅವರಿಗೂ ಏನೋ ದೂರದ ಆಸೆ... ನಿಮ್ಮನ್ನು ಬಿಟ್ಟುಕೊಟ್ಟಿದ್ದಾರೆ.. ಇಲ್ದಿದ್ರೆ ಯಾವ ತಾಯಿಯೂ ಒಪ್ಪಲ್ಲ... ಹೌದೂ ತಾನೇ?"

"ಒಪ್ಪದೇ ಇದ್ದಿದ್ರೆ ನಾನೆಲ್ಲಿ ನಿನಗೆ ಸಿಗ್ತಿದ್ದೆ ಲಕ್ಷ್ಮೀ... ಅದೇ ರೀತಿ ಚಂದ್ರು ನಮಗೆಲ್ಲಿ ಸಿಗ್ತಿದ್ದ..."

"ಮಾತು ಎಲ್ಲಿಂದ ಎಲ್ಲಿಗೋ ಹೋಗ್ತಿದೆ. ಸಾಕು ರಾತ್ರಿಗೆ ಫಲಾಹಾರಕ್ಕೆ ಉಪ್ಪಿಟ್ಟು ಮಾಡ್ತೀನಿ. ಸ್ವಲ್ಪ ಕಾಯಿ ತುರಿದುಕೊಂಡಿ... ಟಾರ್ಚ್ ತೆಗೊಂಡ್ಹೋಗಿ, ಕರಿಬೇವಿನ ಸೊಪ್ಪನ್ನು ಕೊಯ್ಕೊಂಡು ಬನ್ನಿ ಒಂದೇ ಒಂದು ಪಟ್ಟಿ ಸಾಕು..." ಗೋಪಾಲ ಟಾರ್ಚ್ ಹಿಡಿದು ಹಿತ್ತಿಲಿಗೆ ಹೋದ. ಆಕೆ ಅಡಿಗೆ ಮನೆಯ ಕಡೆಗೆ ತೆರಳಿದಳು.



"ರಾಯರ ಒಂದು ಸಹಾಯ ಮಾಡ್ಬೇಕು ನೀವು... ಆಪತ್ತು ಬಂದದೆ..."ಶಂಕರ ಜೋಷಿ ಕೈ ಮುಗಿದು ಕೇಳಿದಾಗ, ಗೋಪಾಲ ಅತ್ತಿತ್ತ ನೋಡಿದ... ಲಗ್ನಕ್ಕೆ ಅಂತ ನಾವು ಛತ್ರ ಗೊತ್ತು ಆ ಛತ್ರದ ಮಾಡೀವಲ್ಲ ಅಡಿಗಿ ಕೋಣಿ, ಬಚ್ಚಲು ಕೋಣೆಯ ಗ್ವಾಡಿಗಳು ಕುಸಿದು ಬಿದ್ದವಂತ್ರೀ... ಲಗೂನ ರಿಪೇರಿ ಆಗು ಹಂಗಿಲ್ಲ... ಏನ್ಮಾಡ್ಬೇಕೂಂತ ತಿಳೀತಿಲ್ರೀ...."

"ಈಗ ನಾನೇನು ಮಾಡ್ಬೇಕು?" ಗಾಬರಿಯಿಂದ ಕೇಳಿದ.

"ಇಲ್ಲೇ ವಠಾರದಾಗ ಚಪ್ಪರ ಹಾಕ್ಸಿ ಟಾರ್ಪಾಲು ಹೊದೆಸಿ ಲಗ್ನ ಮಾಡುದಕ್ಕೆ ನೀವು ಅಪ್ಪಣೆ ಕೊಡಬೇಕ್ರೀ... ಅನುಕೂಲ ಮಾಡಿಕೊಡಬೇಕ್ರೀ."

"ನಾನಾ ?... ನಾನೇನು ಹೇಳ್ಲಿ?..." ಕವಿವಿಸಿಗೊಂಡಿದ್ದ.

"ಗೊತ್ತದ ರಾಯರ... ನೀವು ನಿಮ್ಮ ಶ್ರೀಮತಿಯರ ಕೂಡೇ ಮಾತಾಡ್ರೀ... ಒಪ್ಪಿಗಿ ಕೊಡ್ಸಿ"

"ಒಂದು ಕೆಲಸ ಮಾಡಿ ಜೋಷಿಯವರೇ ನೀವು ಸೀದಾ ನಮ್ಮ ಶ್ರೀಮತಿಯ ಹತ್ರವೇ ಮಾತಾಡಿ. ಅವರು ಒಪ್ಪಿಗೆ ಕೊಟ್ಬರೆ ನನ್ನ ಅಭ್ಯಂತರ ಏನೇನೂ ಇಲ್ಲ..."

"ನಾನೇ ಮಾತಾಡಬೇಕೇನ್ರೀ... ಹಂಗಾರ ನೀವು ಕೇಳೋದಿಲ್ಲೇನ್ರೀ..."

"ಇಲ್ಲ ಜೋಷಿಗಳೇ... ಈಗ ನಾನು ಊರಿಗೆ ಹೊರಟಿದ್ದೀನಿ... ಬಸ್ಸಿಗೆ ಹೊತ್ತಾಗುತ್ತೆ. ನಮ್ಮಾಕೆ ಒಬ್ಬರೇ ಇರ್ತಾರೆ. ಅವರ ಹತ್ರ ಮಾತಾಡಿ. ಹಾಗೇ ಮನೆ ಕಡೆ ಸ್ವಲ್ಪ ನಿಗಾ ಇಡಿ. ಎರಡು ದಿನಕ್ಕೆ ಬಂದು ಬಿಡ್ತೀನಿ..."

"ಹೌದೇನ್ರೀ... ಅವರು ಏನೂ ಅನ್ನುದಿಲ್ಲೇನ್ರೀ..."ಸಂದೇಹದಿಂದ ಕೇಳಿದ.

"ಯಾಕ್ರೀ ಅಂತಾರೆ... ಆದರೆ ನಾನು ಹೀಗೆ ಹೇಳಿಕೊಟ್ಟೆ ಅಂತ ಮಾತ್ರ ಹೇಳ್ಬೇಡಿ... ಯಾಕಂದ್ರೆ ಅವರಿಗೆ ಇದು ಇಷ್ಟ ಆಗುಲ್ಲ. ನನ್ಹತ್ರ ಮಾತಾಡ್ದೆ ಅಂತ್ಲೂ ಹೇಳ್ಬೇಡಿ..."

"ಸರಿ ರಾಯರ..." ಗೋಪಾಲ ಕೈ ಚೀಲ ಹಿಡಿದು ಬಸ್‌ಸ್ಟ್ಯಾಂಡ್ ಕಡೆ ನಡೆದ.

" ತಾಯೀ... ಸಾಹೇಬರ ನಮಸ್ಕಾರ" ಕೈ ಮುಗಿದ ಶಂಕರ ಜೋಷಿಯನ್ನೇ ಪ್ರಶ್ನಾರ್ಥಕವಾಗಿ ನೋಡಿದಳು ಲಕ್ಷ್ಮೀದೇವಮ್ಮ. "ಸ್ವಲ್ಪ ತಮ್ಮ ಕೂಡೇ ಮಾತಾಡೋದಿತ್ತು..." ಹಲ್ಲುಗಿಂಜಿದ.

"ಯಜಮಾನ್ರು ಮನೇಲಿಲ್ಲ. ಹೊರಗೆ ಹೋಗಿದ್ದಾರೆ. ಆ ಮೇಲೆ ಬನ್ನಿ." ಎಂದಳು.

"ಸ್ವಲ್ಪ ಅರ್ಜೆಂಟ್ ವಿಷಯ... ಆಕವೇ ಒಪ್ಪಿಗೆ ಕೊಟ್ಬರೆ ಆಯ್ತು ತಾಯೀ..." ಹುಂ ಏನದು ಹೇಳಿ ಎಂದು ಆಕೆ ಕೇಳಲಿಲ್ಲ. ಆತನೇ ಮುಂದುವರೆಸಿದ. 'ಒಂದು ಅವಘಡ ಆಗ್ಹೋಗದ ತಾಯಾರಾ... ಛತ್ರದ ಗ್ವಾಡಿಗಳು ಕುಸಿದಾವ... ರಿಪೇರಿ ಲಗೂನ ಆಗೂ ಹಂಗಿಲ್ಲರೀ... ಲಗ್ನ ಹೆಂಗೆ ಮಾಡೋದು ಅಂತ ಚಿಂತಿ ಹತ್ತೈತಿ..."

"ಅದಕ್ಕೆ ನಾವೇನು ಮಾಡುಕ್ಕಾಗುತ್ತೇ ಜೋಷಿಗಳೇ?"

"ಇಲ್ಲೇ ವಠಾರದಾಗ, ಚಪ್ಪರ ಹಾಕ್ಸಿ ಟಾರ್ಪಾಲ್ ಹೊದೆಸಿ ಲಗ್ನದ ಮಂಟಪ ಹಾಕಲಿಕ್ಕೆ ಅನುಮತಿ ಕೊಡಬೇಕ್ರ ತಾವು ಅಂತ ಕೇಳ್ಕೋಂತೀನಿ..." ಕೈ ಜೋಡಿಸಿದ.

"ಅದ್ಹೆಂಗಾಗ್ತದೆ ಜೋಷಿ...? ಇವು ಮನೆಗಳು ವಠಾರ ಜನ ವಾಸ ಮಾಡುವ

ಜಾಗ... ಅದೆಲ್ಲಾ ಆಗುಲ್ಲ.. ವಠಾರದಲ್ಲಿ ಸಾಧ್ಯವಿಲ್ಲ."

"ಹಂಗನ್ಬೇಡಿ ತಾಯಾರ, ಕಟ್ಟಿದ ಲಗ್ನ ಮುರಿದು ಹೋಗ್ತೈತಿ.... ಕನ್ಯಾದಾನ ಮಾಡುವ ಪುಣ್ಯ ನಿಮ್ಗೇ ಬರ್ಲಿ... ದಯವಿಟ್ಟು ಒಪ್ಗೆ ಕೊಡಿ..."

"ಬೇರೆ ಛತ್ರ ಹುಡುಕ್ರೀ ಜೋಷಿಗಳೇ.. ಇದು ಸಾಧ್ಯವಿಲ್ಲ."

"ಛತ್ರ ಎಲ್ಲೂ ಸಿಗೂ ಹಂಗಿಲ್ಲರೀ... ಇಲ್ಲಾ ಅನ್ಬೇಡಿ..."ಎನ್ನುತ್ತಾ ಆಕೆಯ ಕಾಲಿಗೆಬಿದ್ದ..."

"ದೂರ... ದೂರ" ಹಿಂದೆ ಅಡಿ ಇಟ್ಟಳು ಇದೆಲ್ಲಾ ಮಾಡ್ಬೇಡಿ... ನಂಗೆ ಸರಿ ಕಾಣುಲ್ಲ... ಎಂಥಾ ಇಕ್ಕಟ್ಟಿಗೆ ಸಿಕ್ಕಿಸ್ತೀರಲ್ರೀ... ಇಲ್ಲ ಅನ್ನು ಹಂಗಿಲ್ಲ. ಅನುಭವಿಸುವ ಹಂಗಿಲ್ಲ... ಎಲ್ರೂ ತೊಂದ್ರೆ ಕೊಡೋರೇ" ಆಕ್ಷೇಪಿಸಿದಳು.

"ಇಲ್ಲ ತಾಯಾರೇ... ನಾವು ಯಾವ ತೊಂದರೆಯೂ ಆಗದ್ಹಂಗೆ ನೋಡ್ಕೋಳ್ತೀವಿ... ಇದೊಂದು ಬಾರಿ ಸಹಾಯ ಮಾಡ್ರೀ."

"ಅಲ್ರೀ ಜಾಗ ಎಲ್ಲಿದೆ ? ಮರಗಿಡಗಳಿಗೆ ಕೈ ಹಾಕಿದ್ರೆ ನಾನು ಸುಮ್ನಿರುಲ್ಲ..

"ಇಲ್ರೀ... ಯಾವುದೇ ಒಂದೇ ಒಂದು ಮರದ ಕೊಂಬೆಗೂ ಕೈ ಹಾಕೂದಿಲ್ರೀ... ಹೆಂಗೂ ಈ ಮನಿ ಬಿಟ್ಟು ಕೊಟ್ಟೇರಿ... ಅದರ ಮುಂದೆ ಇರೋ ಜಾಗದಾಗ, ನಮ್ಮ ಮನಿ ಮುಂದೆ ಇರೋ ಜಾಗದಾಗ.. ದೊಡ್ಡ ಚಪ್ಪರ ಹಾಕ್ಸೀ..."

"ಅದು ನಮ್ಮ ಮನೇ ಕಣ್ರೀ.... ನಿಮ್ಮದಲ್ಲ. ನೀವು ವಾಸಕ್ಕೆ ಇದೀರಿ ಅಷ್ಟೇ"

"ತಪ್ಪಾತ್ರೀ.... ನಾವು ವಾಸ ಇರೋ ಮನೆ ಮುಂದೆ ಇರೋ ಜಾಗದಾಗ ಚಪ್ಪರ ಹಾಕಿಸಿ ಅನುಕೂಲ ಮಾಡ್ಕೋಳ್ತೀವಿ .... ಒಪ್ಗೆ ಕೊಡಿ ಅಷ್ಟೇ ಬೇಡ್ಕೋಳ್ಳೋದು'

"ಆಯ್ತು ನಮ್ಮ ಯಜಮಾನ್ರು ಬಂದ್ಮೇಲೆ ಮಾತಾಡಿ ತಿಳಿಸ್ತೀವಿ."

"ಅವರು ಯಾವಾಗ ಬರ್ತಾರ್ರೀ....? "

"ನಾಲ್ಕು ದಿನ ಆಗುತ್ತೆ. ಊರಿಗೆ ಹೋಗಿದಾರೆ......"

"ಹಂಗಾರ ಅಲ್ಲಿವರ್ಗೂ ಕಾಯ್ಬೇಕಾಗ್ತದೇನ್ರೀ...? "ಪೆಚ್ಚು ಮುಖ ಮಾಡಿದ.

"ಹೂಂ ಮತ್ತೆ. ಕೆಲಸ ಆಗ್ಲೇಬೇಕು. ಅಂತಂದ್ರೆ ಕಾಯ್ಲೇಬೇಕು. ನೀವು ಆಮೇಲೇ ಬನ್ನಿ. ನನಗೆ ಈಗ ಬಹಳ ಕೆಲಸವಿದೆ ಎಂದು ಹೇಳಿ ಕಳಿಸಿಕೊಟ್ಟಳು. ಆತ ಹೋದ ಸ್ವಲ್ಪ ಸಮಯದ ನಂತರ ಮತ್ತೇ ಬಾಗಿಲನ್ನ ಬಡಿದ ಸದ್ದು ಕೇಳಿಸಿತ್ತು. ಇವರುಗಳಿಗೆ ಎಷ್ಟು ಹೇಳಿದರೂ ಅರ್ಥವಾಗಿಲ್ಲ. ತಮ್ಮ ಕೆಲಸ ಆಗಿ ಬಿಡ್ಬೇಕು ಎಂದು ಗೊಣಗಿ ಕೊಳ್ಳುತ್ತಾ ಮುಂಬಾಗಿಲಿಗೆ ಬಂದು ಬಾಗಿಲನ್ನು ತೆರೆದಳು. ಎದುರಿಗೆ ಗೋಪಾಲ ನಿಂತಿದ್ದ "ನೀವಾ ? ಊರಿಗೆ ಹೋಗ್ಲಿಲ್ವಾ" ಅರೆ ಕೋಪ, ಆಶ್ಚರ್ಯಗಳಿಂದ ಕೇಳಿದಳು. ಆ ಕಡೆ ಈ ಕಡೆ ಇಣುಕಿದಳು.

"ಬಸ್ಸೇ ಸಿಗ್ಲಿಲ್ಲ ಲಕ್ಷ್ಮೀ... ಕಾದೂ ಕಾದೂ ಸಾಕಾಯ್ತು.... ಕಾಲು ನೋಯುಕ್ಕೆ

ಶುರುವಾಯ್ತು. ಹೊಟ್ಟೆ ಬೇರೆ ಹಸಿಯೋಕೆ ಪ್ರಾರಂಭವಾಯ್ತು...."

"ಅದಕ್ಕೆ ಬಂದು ಬಿಟ್ರಾ?" ಅಸಹನೆಯಿಂದ ಪ್ರಶ್ನೆಸಿದಳು.

"ಬಸ್ಸುಗಳದ್ದೇ ಏನೋ ಗಲಾಟೆ , ತಕರಾರು ಅಂತ ಅಲ್ಲಿಯ ಆಫೀಸ್ನೋರು ಹೇಳಿದ್ರು ಎಷ್ಟೊತ್ತು ಅಂತ ಕಾಯೋದು ? ಬಂದ್ಬಿಟ್ಟೆ..." ಒಂದ್ಲೋಟ ನೀರು ಕೊಡ್ತೀಯ ಬಾಯರಿಕೆ ಆಗ್ತಿದೆ...." ಅವಳು ನೀರನ್ನು ತರಲೆಂದು ಒಳಗೆ ಹೋದಳು. ಜೋಷಿ ಏನಾದ್ರೂ ಬಂದಿದ್ದಾ ಎಂದು ತಿಳಿದುಕೊಳ್ಳುವ ಕುತೂಹಲವಿದ್ದರೂ ಅದುಮಿಟ್ಟುಕೊಂಡ ತಾನಾಗಿಯೇ ಕೇಳುವಂತಿಲ್ಲ, ಅವಳಾಗಿಯೇ ಹೇಳಲಿ ಎಂದು ಕಾದ ಹೆಂಡತಿ ತಂದು ಕೊಟ್ಟ ನೀರನ್ನು ಕುಡಿದು ಮುಗಿಸಿದ ತಕ್ಷಣವೇ ಅವಳು ನುಡಿದಳು.

"ಏನಾದ್ರೂ ತಿನ್ನುಕ್ಕೆ ಕೊಡ್ಲಾ! ತಿಂದ್ಬಿಟ್ಟು ಮತ್ತೇ ಹೊರಟ್ಬಿಡಿ"ಅಚ್ಚರಿ ಯಿಂದ ಅವಳ ಕಡೆ ನೋಡಿದ.

"ಸುಧಾರಿಸ್ಕೊಂಡು, ನಾಳೆ ಬೆಳಿಗ್ಗೆ ಹೊರಡ್ತೀನಿ. ಯಾಕೆ ?ಏನು ಅರ್ಜೆಂಟು?"

"ನಂಗೆ ಯಾವ ಅರ್ಜೆಂಟಿಲ್ಲ. ನಿಮಗೇ ತಾನೇ ಅರ್ಜೆಂಟು... ಸರಿ ಬೆಳಗಿನ ವರೆಗೂ ಯಾರಿಗೂ ಕಾಣಿಸ್ಕೋಬೇಡಿ. ಒಳಗೇ ಕೂತಿರ್ಬೇಕು... ಬೆಳಗಾಗುವ ಮುಂಚೆ ಹೊರಡ್ಬೇಕು..."

"ಯಾಕೇ ಲಕ್ಷ್ಮೀ... ಅಂಥಾ ಮುಚ್ಚುಮರೆ ಯಾಕೆ ? ನಾನೇನು ಮಾಡಿದೀನಿ.?"

"ನೀವು ಏನೂ ಮಾಡಿಲ್ಲ... ಆ ಜೋಷಿ ಹೊಸಾ ವರಸೆ ಎತ್ತಿದ್ದಾರೆ ಅವರು ಗೊತ್ತು ಮಾಡ್ಕೊಂಡಿದ್ದ ಛತ್ರದ ಗೋಡೆ ಕುಸಿದು ಬಿದ್ದಿದೆಯಂತೆ... ಅದಕ್ಕೆ ಇಲ್ಲೇ ಮನೆ ಮುಂದೆ ಚಪ್ಪರ ಹಾಕಿ ಮದುವೆ ಮಾಡ್ತಾರಂತೆ... ಥೂ ಏನಸಹ್ಯ?..."

"ಇದರಲ್ಲಿ ಅಸಹ್ಯ ಏನು ಬಂತು ಲಕ್ಷ್ಮೀ... ಎಂಥಾ ಫಜೀತಿ ಆಗಿದೆಯಲ್ಲ ಅವರಿಗೆ... ಮದುವೆ ಕಾರ್ಯ ನಡೆಯೋದು ಮುಖ್ಯ. ಚಪ್ಪರಾನಾದ್ರೂ ಹಾಸ್ಲಿ... ಅಥವಾ ಮನೆಯೊಳಗಾದ್ರೂ ಮಾಡ್ಕೊಳ್ಳಲಿ. ಏನೀಗ?"

"ನಿಮಗೆ ಏನೂ ಗೊತ್ತಾಗುಲ್ಲ. ಇದೆಲ್ಲ ದುಡ್ಡು ಉಳಿಸುವ ಆಲೋಚನೆ, ಪ್ರಯತ್ನಪಟ್ಟರೆ ಬೇರೆ ಛತ್ರ ಸಿಗದೇ ಇರುತ್ತಾ?... ಬರೀ ನಾಟಕ... ನನ್ನ ಒಪ್ಗೆ, ಬೇಕಂತೆ..."

"ಅದಕ್ಕೆ ನೀನೇನಂದೆ ?" ತಕ್ಷಣ ಕೇಳಿದ.

"ನಿಮ್ಮನ್ನ ಕೇಳ್ಬಿಟ್ಟು ಹೇಳ್ತೀನಿ. ನೀವು ಊರಲಿಲ್ಲ. ಬಂದ್ಮೇಲೆ ಕೇಳ್ತೀನಿ ಅಂತ ಅಂದೆ..."

"ಸರಿ ಹಾಗಾದ್ರೆ ಈಗ ನಾನೇನು ಹೇಳ್ಬೇಕು. ..?"

"ಈಗ ಏನೂ ಹೇಳ್ಬೇಡಿ... ಅದಕ್ಕೇ ಹೇಳಿದ್ದು... ಒಳಗೇ ಇರಿ. ಅಂತ."

"ಸರಿ, ಸೆರೆಮನೆ ವಾಸ" ಎಂದು ಗೊಣಗುತ್ತ ಒಳಗೆ ನಡೆದ. ಗಂಡ ಮನೆಗೆ ಬಂದುದನ್ನು ವಠಾರದವರು ಯಾರಾದರೂ ನೋಡಿರಬಹುದೇ... ಅಂತ ತಿಳಿದುಕೊಳ್ಳಲು ಇವಳು ಹೊರಗೆ ಬಂದು ಮೆಟ್ಟಿಲ ಮೇಲೆ ನಿಂತಳು. ಮನೆಯ ಮುಂದೆ ಒಂದರ ಹಿಂದೆ ಇನ್ನೊಂದು, ಎರಡು ಜಟಕಾಗಾಡಿಗಳು ಬಂದು ನಿಂತವು. ಯಾರೋ ಜೋಷಿಯ ಮನೆಗೆ ಬಂದಿರಬಹುದು ಎಂದುಕೊಂಡು ಹಾಗೇ ನಿಂತಿದ್ದಳು.

ಜಟಕಾ ಗಾಡಿಯ ಹಿಂದಿನಿಂದ ಮೊದಲಿಗೆ ಇಳಿದವನು ಅವಳ ಮೈದುನ... ನಾರಾಯಣ ನಿಧಾನವಾಗಿ ತನ್ನ ತಾಯಿಯನ್ನು ಇಳಿಸಿದ. ಅವನ ಪತ್ನಿ ಹಾಗೂ ಅವಳ ಎರಡು ಹೆಣ್ಣು ಮಕ್ಕಳೂ ಇಳಿದರು. ಇನ್ನೊಂದು ಗಾಡಿಯಿಂದ ಚಂದ್ರು, ಹಾಸಿಗೆ ಪೆಟ್ಟಿಗೆಗಳನ್ನು ಇಳಿಸಿ, ತಾನೂ ಇಳಿದ ಇವಳು ಬಿಟ್ಟ ಕಣ್ಣು ಬಿಟ್ಟುಕೊಂಡು ನೋಡುತ್ತಾ ನಿಂತಳು.

"ಹೇಗಿದೀರಿ ಅತ್ಗೇ... ಅಣ್ಣ ಹೇಗಿದಾನೆ?" ಮೈದುನ ಬಂದು ಮಾತನಾಡಿಸಿದ...

"ಇದೇನಿದು ನೀವೆಲ್ಲಾ ಹೀಗೆ ದಿಢೀರನೇ...? ಒಂದು ಪತ್ರವಿಲ್ಲ ತಂತಿ ಇಲ್ಲ..."

"ಇವಳ ಅಣ್ಣನ ಮಗಳಿಗೆ ಮದುವೆ... ಹೊರಟಿದೀವಿ... ಇಲ್ಲಿ ಒಂದೆರಡು ದಿನಗಳು ಇದ್ದು ಹೊರಡೋಣ ಅಂತ ಅಮ್ಮ ಆಸೆ ಪಟ್ಟಳು. ಆಮೇಲೆ ಹಾಗೇ ಅಲ್ಲಿಂದ ಸೀದಾ ಊರಿಗೆ ವಾಪಸ್ಸು ಹೊರಟು ಹೋಗ್ತೀವಿ..."ಎನ್ನುತ್ತಾ ತಾಯಿಯನ್ನು ನಿಧಾನವಾಗಿ ನಡೆಸಿಕೊಂಡು ಬಂದು ಮೆಟ್ಟಿಲುಗಳನ್ನು ಹತ್ತಿಸಿದ.

"ಅಕ್ಕ ಹೇಗಿದೀರಿ ?" ವಾರಗಿತ್ತಿ ವಿಚಾರಿಸಿದಳು.

"ನಾನು ಚೆನ್ನಾಗಿದ್ದೀನಿ..." ಎಂದಳು. ಅವಳ ಹಿಂದೆ ನಿಂತಿದ್ದ ಅವಳ ಹೆಣ್ಣು ಮಕ್ಕಳ ಕಡೆ ದೃಷ್ಟಿ ಹರಿಯಿತು." ಕಮಲಾ... ಕುಸುಮ ಅಲ್ವಾ... ಎಷ್ಟು ಬೆಳೆದುಬಿಟ್ಟಿದ್ದಾರೆ." ಅಚ್ಚರಿಯಿಂದ ನುಡಿದಳು. ತಕ್ಷಣವೇ ಸುಮ್ಮನಾಗಿ ಬಿಟ್ಟಳು

"ಹೌದು ಅಕ್ಕ... ಹೆಣ್ಣು ಮಕ್ಕಳು ಬೆಳೆಯೋದೇ ಗೊತ್ತಾಗುಲ್ಲ..." ಎಂದು ಹೇಳಿ ಚಂದ್ರು ನಿಂತಿದ್ದ ಗಾಡಿಯ ಕಡೆಗೆ ತಿರುಗಿದಳು. "ಸಾಮಾನುಗಳನ್ನು ಇಳಿಸಿದ್ದಾಯಿತಾ? ಒಂದು ಸಾರಿ ಎಲ್ಲಾ ಬಂದಿದೆಯಾ, ಏನೂ ಉಳಿದಿಲ್ವಾ ಅಂತ ಸರಿಯಾಗಿ ನೋಡ್ಬಿಡು..." ಎಂದಳು. ಅವನು ತಲೆಯಾಡಿಸಿ, ಗಾಡಿ ಓಡಿಸುವವರಿಗೆ ದುಡ್ಡನ್ನು ಎಣಿಸಿಕೊಟ್ಟು, ಪೆಟ್ಟಿಗೆಗಳನ್ನು ಹಾಸಿಗೆಯನ್ನು ಎತ್ತಿ ತಂದು ಮನೆಯ ಮುಂಭಾಗದಲ್ಲಿ ತಂದಿಟ್ಟು..., ಲಕ್ಷ್ಮೀದೇವಮ್ಮನ ಕಡೆ ನೋಡಿ ಸುಮ್ಮನೆ ಎಂಬಂತೆ ಮಂದಹಾಸ ಬೀರಿದ.

"ಹೇಗಿದೀರಿ?... ಅಪ್ಪ ಎಲ್ಲಿ?" ಕೇಳಿದ.

"ಒಳಗಿದಾರೆ... ನೀನು ಹೇಗಿದೀಯ... ?" ಸಂಭಾಷಣೆ ಬಹಳ ಕೃತಕವಾಗಿತ್ತು. ಅಷ್ಟರಲ್ಲಿ ಮನೆಯ ಮುಂದೆ ಮಾತುಗಳು ಕೇಳಿ ಬಂದುದರಿಂದ ಒಳಗಿನಿಂದ ಗೋಪಾಲ

ಬಂದ. ಮೊದಲಿಗೆ ತಾಯಿಯನ್ನೂ ತಮ್ಮನನ್ನೂ ಕಂಡ. ಸಂತಸದಿಂದ ಮುಖ ಅರಳಿದರೂ, ಮೌನವಾಗಿ ಮಾತನಾಡದೇ ಹೆಂಡತಿಯ ಕಡೆ ನೋಡಿದ. ಅವಳು ಬಿಗುಮಾನದಿಂದ ನಿಂತಿದ್ದಳು.

"ಏನೋ ಗೋಪೀ... ಹೇಗಿದೀಯೋ... ಈ ತಾಯೀನ ನೋಡೋಕೆ ಬರ್ಬೇಕು ಅಂತ ನಿಂಗೆ ಅನ್ಸೋದೇ ಇಲ್ವಾ?.... ನಾನೇ ಬಂದು ನನ್ನ ಮುಖಾನ ತೋರಿಸ್ಬೇಕಾ?...' ಆಕ್ಷೇಪಿಸಿದಳು ತಾಯಿ.

"ಹಾಗೇನಿಲ್ಲಮ್ಮ... ಬಿಡುವಾದ್ಮೇಲೆ ಬರೋಣ ಅಂತಿದ್ದೆ."

"ಈಗ ಬಿಡುವೇ ಅಲ್ವೇನೋ... ರಿಟೈರ್ ಆದ್ಮೇಲೆ ಮತ್ತೆ ಕೆಲಸಕ್ಕೆ ಸೇರ್ಕೊಂಡಿದೀಯಾ ಹೇಗೆ ? ಪೆನ್ಶನ್ ಬರುತ್ತೆ ಅಲ್ವಾ ನಿಂಗೆ..."

"ಇಲ್ಲಮ್ಮ... ಮನೆ ರಿಪೇರಿ ಕೆಲಸ ಇತ್ತು... ಅದಕ್ಕೆ ಹೇಳ್ದೆ... ಮೊದಲು ಸುಧಾರಿಸ್ಕೋ... ಆಮೇಲೆ ಮಾತಾಡುವಂತೆ... ನಾರಾಯಣನೂ ಸಂಸಾರ ಸಮೇತನಾಗಿ ಬಂದಿದ್ದಾನೆ... ಊರ್ನಿಂದ ಎಷ್ಟೊಟ್ಹೊತ್ಗೆ ಹೊರಟ್ರಿ?... ಪತ್ರ ಬರೆದು ತಿಳಿಸಿದ್ರೆ ಬಸ್ಸ್ಟ್ಯಾಂಡ್‌ಗೇ ಬರ್ತಿದ್ದೆ..." ಎಂದ ಕೈಗಳನ್ನು ಹೊಸಕುತ್ತಾ... ತಡವರಿಸುತ್ತಾ...

"ನಾವು ಇಬ್ಬಿಬ್ರು ಗಂಡಸರು ಇದ್ವಿ... ಚಂದ್ರೂನೂ ಬಂದಿದ್ದಾನೆ... ಸಾಮಾನುಗಳನ್ನು ಒಳಕ್ಕೆ ತಂದಿಡ್ತಿದಾನೆ... ಇವರಿಬ್ರೂ ನನ್ನ ಮಕ್ಕಳು ಗುರುತು ಸಿಕ್ತಾ?..." ತಮ್ಮ ನುಡಿದ

"ಅಂದ್ಕೊಡೆ... ಗಂಡು ಮಕ್ಕಳನ್ನು ಕರ್ಕೊಂಡು ಬರ್ಲಿಲ್ವಾ?....

"ಇಬ್ಬರಿಗೂ ಇನ್ನೂ ಪರೀಕ್ಷೆ ಮುಗಿದಿಲ್ಲ. ಅಕ್ಕನ್ನ ಜೊತೆಗೆ ಬಿಟ್ಟು ಬಂದಿದ್ದೀವಿ. ನನ್ನ ಭಾಮೈದುನನ ಮಗನ ಮದುವೆ... ನಿಂಗೂ ಆಹ್ವಾನ ಪತ್ರಿಕೆ ಬಂದಿರಬೇಕಲ್ಲ..."

"ಹೂಂ ಬಂದಿದೆ... ಈಗ್ಲೇ ಯಾವಾಗ಼್ೋ ಅಲ್ವಾ ಮದುವೆ...?"

"ಹೂಂ ಇವತ್ತಿಗೆ ಒಂದು ವಾರಕ್ಕೆ ಸರಿಯಾಗಿ ಮುಹೂರ್ತ... ಒಂದುವಾರ ಮುಂಚಿತವಾಗಿ ಬರ್ಬೇಕು ಅಂತ ಒತ್ತಾಯ ಮಾಡಿದ್ದ... ಇವಳಿಗೂ ಆಸೆ ಇತ್ತು... ಅಮ್ಮನನ್ನು ಕರ್ಕೊಂಡು ಬರ್ಬೇಕು ಅಂತ ಏನು ಬಲವಂತ ಅಂತ ಅಂತೀಯ...? ಇಲ್ಬಿದ್ರೆ ಅಮ್ಮನ ಕೈಲಿ ಈಗ ಪ್ರಯಾಣ ಮಾಡುಕ್ಕೆ ಎಲ್ಲಿ ಆಗುತ್ತೆ...? ಅಮ್ಮ ನಿಮ್ಮನ್ನೆಲ್ಲಾ ನೋಡ್ಬೇಕು ತುಂಬಾ ದಿನಗಳಾಯ್ತು ಅಂತ ಅಂದ್ಲು... ನಿನಗೆ ಒಂದ್ಮಾತೂ ತಿಳಿಸದೇ ಹೊರಟು ಬಂದೆವು... ಏನೂ ತೊಂದರೆ ಆಗ್ಲಿಲ್ಲ ತಾನೇ?" ಅತ್ತಿಗೆಯ ಕಡೆ ನೋಡಿ ಪ್ರಶ್ನಿಸಿದ. ಆಕೆ ಒಳಗೆ ನಡೆದಳು.

"ಏನೋ ನಾರಾಯಣ ಹೀಗೆ ಮಾತಾಡ್ತೀಯ...? ನಾವುಗಳು ಬಂದರೂ ನಿನಗೆ ತೊಂದರೆ ಆಗುತ್ತಾ ಹಾಗಾದ್ರೆ...? ಎಲ್ರಿಗೂ ಏನು ಕೊಡ್ಲಿ! ಕಾಫಿ ? ಶರಬತ್ತು...?' ಅವನೂ ಒಳಗೆ ಹೋದ.

"ತಣ್ಣಗೆ ಒಂದ್ಲೋಟ ನೀರನ್ನು ಕೊಡು ಮೊದ್ಲು... ಏನು ಶೆಕೆ ಅಂತೀಯ... ಇಲ್ಲಿ ನಿಮ್ಮ ವಠಾರದಲ್ಲಿ ತಂಪಾಗಿದೆ... ಸುತ್ತಲೂ ಮರಗಳು ಇವೆ... ನೆರಳು ಇದೆ... ಚೆನ್ನಾಗಿದೆ."

"ಹೌದು ಅಜ್ಜೀ... ಎಷ್ಟು ಹಿತವಾಗಿದೆ ಅಲ್ವಾ... ನಾವು ಹೋಗಿ ನೋಡ್ಕೊಂಡು ಬರ್ತೀವಿ... ಏನೇನಿದೆ ಅಂತ... ಯಾವ್ಯಾವ ಮರಗಳಿವೆ ಅಂತ..." ಹುಡುಗಿಯರು ಎದ್ದರು.

"ಹೋಗೋರಂತೆ... ಮೊದಲು ಒಳಗೆ ಹೋಗಿ ಕುಡಿಯುಕ್ಕೆ ನೀರನ್ನು ತಂದ್ಕೊಡು ಎಲ್ಲರಿಗೂ... ಒಳಗೆ ದೊಡ್ಡಮ್ಮನ್ನ ಕೇಳು..."ಅವರಿಬ್ಬರ ಪೈಕಿ ಒಬ್ಬಳು ಒಳಗೆ ಹೋದಳು. ವೆರಾಂಡದಲ್ಲಿ ಹಾಸಿಗೆ, ಟ್ರಂಕುಗಳನ್ನು ಎತ್ತಿಟ್ಟು, ಚಂದ್ರು ಒಳಗೆ ಬಂದು ಅವರುಗಳನ್ನು ಸೇರಿಕೊಂಡ. ಅವನೂ ಅಪರಿಚಿತನಂತೆ ನಿಂತು ಸುತ್ತಲೂ ನೋಡಿದಾಗ, ಅಜ್ಜಿ ಉಸುರಿದಳು.

"ಅದ್ಯಾಕೆ ಹಾಗೆ ನಿಂತ್ಬಿಟ್ಟೆ ? ಇದು ನಿನ್ನದೇ ಮನೆ... ಒಳಗೆ ಹೋಗಿ ನಿನ್ನ ಅಪ್ಪ ಅಮ್ಮನ್ನ ಮಾತನಾಡ್ಸು..." ಹೂಂ ಹೋಗು..." ಒತ್ತಾಯದ ಸಂಜ್ಞೆ ಮಾಡಿದಳು.

"ಅಮ್ಮನ್ನ ಮಾತನಾಡಿಸ್ದೆ. ಅಪ್ಪ ಎಲ್ಲಿ ?... ಕಾಣ್ತಿಲ್ಲ?"

"ಒಳಗೆಲ್ಲೋ ಅಡಿಗೆ ಮನೇಲಿದ್ದಾನೆ ಅಂತ ಕಾಣುತ್ತೆ, ಮೊದಲು ಕೈಕಾಲು ತೊಳ್ಕೋ. ಸೀದಾ ಒಳಗೇ ಹೋಗು. ನಿಂಗೆಂಥ ಬಿಗುಮಾನ ?..." ರಮಾಳ ಕಡೆ ನೋಡಿದಳು

"ಇಲ್ಲ ಅಜ್ಜಿ... ಅಮ್ಮಂಗೆ ಬೇಜಾರಾಗಬಹುದು... ನಂಗಿಷ್ಟವಾಗುಲ್ಲ." ಚಂದ್ರು ಎಂದ.

"ಬೇಜಾರಾಗ್ದೇ ಇರುತ್ತಾ ? ಸದಾ ಇವರಿಂದ ದೂರ ದೂರವೇ ಇರ್ತೀಯಾ... ನೀನೇ ಮುಂದಾಗಿ ಹೋಗಿ ಮಾತುಕತೆ ಆಡ್ಕೊಂಡು ಓಡಾಡಿದ್ರೆ ಇವರಿಗೂ ಖುಷಿಯಾಗುತ್ತೆ ಹೋಗು" ಚಂದ್ರು ಅನುಮಾನಿಸುತ್ತಾ ಬಚ್ಚಲು ಮನೆಗೆ ಬಂದ. ಅಷ್ಟರಲ್ಲಿ ನಾರಾಯಣನ ಮಗಳು ಕಮಲ ಎಲ್ಲರಿಗೂ ಕುಡಿಯಲು ನೀರನ್ನು ತಂದುಕೊಟ್ಟಳು.

"ದೊಡ್ಡಪ್ಪ ಶರಬತ್ ಮಾಡ್ತಾ ಇದಾರೆ... ಎಲ್ರೂ ತುಂಬಾ ನೀರನ್ನು ಕುಡೀಬೇಡಿ" ಎಂದಳು ನಗುತ್ತಾ.

"ದೊಡ್ಡಮ್ಮ ಎಲ್ಲಿ ಹೋದ್ಲೆ?..."

"ಒಲೆ ಮುಂದೆ ಕೂತು ಸ್ಟವ್ ಹಚ್ತಿದ್ರು... ಏನೋ ತಿಂಡಿ ಮಾಡ್ತಾರೆ ಅಂತನ್ಸುತ್ತೆ"

"ಸಧ್ಯ ಅಷ್ಟಾದರೂ ಬುದ್ಧಿ ಬಂತಲ್ಲ. ಎಲ್ರಿಗೂ ಹೊಟ್ಟೆ ಹಸಿದಿರುತ್ತೆ. ತಿಂಡಿ

ಮಾಡಿಕೊಡ್ಬೇಕು ಅಂತ ನಾವು ಮುಂಚೆಯೇ ತಿಳಿಸಿ ಬರ್ಬೇಕಾಗಿತ್ತು. ಮಾಡಿಟ್ಟಿರು ತ್ತಿದ್ಲು... ಎಷ್ಟು ಕೆಂಪಾಗಿದೆಯೋ ಮುಖ...? ರಮಾ... ಕೈ ಕಾಲು ತೊಳ್ಕೊಂಡು ಹೋಗಿ ನೀನು ಸಹಾಯ ಮಾಡು. ನಾನು ಒಂದ್ಗಳಿಗೆ ಕಾಲು ಚಾಚಿ ಕೂತ್ಕೋತೀನಿ ಪಾಗಳು ನಂದಲ್ಲ ಅಂತ ನೋಯ್ತಿದೆ." ಕಾಲು ನೀಡಿ ಗೋಡೆಗೆ ಒರಗಿ ಕುಳಿತಳು.

"ಸರಿ, ಅತ್ತೆ" ಎನ್ನುತ್ತಾ ರಮಾ ಒಳಗೆ ಬಂದಳು. ಅಷ್ಟರಲ್ಲಿ ಚಂದ್ರು ಎದುರಾದ. "ಚಿಕ್ಕಮ್ಮ ನಾನು ಬಂದದ್ದು ಅಮ್ಮಂಗೆ ಇಷ್ಟ ಆಗ್ಲಿಲ್ಲ ಅಂತ ಕಾಣುತ್ತೆ... ಇದುವರೆಗೂ ಮಾತಾಡ್ಸಿಲ್ಲ ನಂಗೆ ಹೇಗಾಗ್ತೆದೆ ಗೊತ್ತಾ ?

"ಹೇಳದೇ ಬಂದಿದ್ದು ನಮ್ಮ ತಪ್ಪು ಚಂದ್ರು ಅವರಿಗೆ ಬೇಜಾರಾಗ್ದೇ ಇರುತ್ತಾ? ನೀನು ಒಳಗೆ ಹೋಗು, ನಾನೂ ಈಗ ಬರ್ತೀನಿ" ಎಂದು ಬಚ್ಚಲಮನೆಗೆ ನಡೆದಳು.

○ ○ ○

ಲಕ್ಷ್ಮಿದೇವಮ್ಮ ಮೌನವಾಗಿ, ರವೆ ಹುರಿದು ಉಪ್ಪಿಟ್ಟನ್ನು ತಯಾರಿಸಿದಳು. ಗೋಪಾಲ ಮಾಡಿದ್ದ ಶರಬತ್ತನ್ನು ಕಮಲ ಎಲ್ಲರಿಗೂ ಕೊಟ್ಟಿದ್ದಳು. ಬಿಸಿ ಬಿಸಿ ಉಪ್ಪಿಟ್ಟನ್ನು ಚಿಕ್ಕ ಚಿಕ್ಕ ತಟ್ಟೆಗಳಿಗೆ ಹಾಕಿಟ್ಟಳು. ರಮಾ ಎಲ್ಲರಿಗೂ ಕೊಟ್ಟು ತಾನೂ ತಿನ್ನಲು ತೆಗೆದಿಟ್ಟುಕೊಂಡಳು. "ಅಕ್ಕ ನೀವೂ ತಗೊಳ್ಳಿ..."ಓರಗಿತ್ತಿಗೆ ಉಪಚರಿಸಿದಳು.

"ಇಲ್ಲ ರಮಾ... ನಾನು ಹಾಗೆಲ್ಲ ಹೊತ್ತಲ್ಲದ ಹೊತ್ನಲ್ಲಿ ತಿನ್ನೊಲ್ಲ."

"ತುಂಬಾ ಚೆನ್ನಾಗಿದೆ... ಬೆಳಿಗ್ಗೆ ತಿಂಡಿ ತಿಂದಿದ್ದು... ಬೇಕು ಅಂತ ಅನ್ನಿಸ್ತು..."

"ಅಲ್ಲಾ ರಮಾ... ನಾನು ಹೀಗಂತೀನಿ ಅಂತ ಬೇಸರ ಮಾಡ್ಕೋಬೇಡ. ಒಂದು ಮಾತು ತಿಳ್ಸೋದು ಅಲ್ವಾ...? ನಿಮ್ಮ ಭಾವ, ಅಮ್ಮನ್ನ ನೋಡೋಕೆ ಅಂತ ಇವತ್ತು ಊರಿಗೆ ಹೊರಟಿದ್ರು. ಬಸ್ಸು ಸಿಗಲಿಲ್ಲ ಅಂತ ಮನೆಗೆ ವಾಪಸ್ಸು ಬಂದ್ರು... ನನಗೊಬ್ಬಳಿಗೇ ಅಂತ ನಾನು ಬರೀ ಅನ್ನ ಮಾಡ್ಕೊಂಡಿದ್ದೆ.."

"ನಾವ್ಯಾರೂ ಹೊರಡೋ ಮಾತೇ ಇರ್ಲಿಲ್ಲ. ನೆನ್ನೆ ಅಣ್ಣನ ಪತ್ರ ಬಂತು. ಬರಲೇ ಬೇಕು ಅಂತ. ಮಕ್ಕಳೂ ಹಠ ಮಾಡಿದ್ರು... ಅತ್ತೆನೂ ಒಪ್ಪಿದರು ಹೊರಟೇ ಬಿಟ್ವೆವು. ಸೀದಾ ಅಲ್ಲಿಗೇ ಹೋಗಿದ್ದರೆ ಚೆನ್ನಾಗಿತ್ತು... ಅತ್ತೆ ನಿಮ್ಮನ್ನೆಲ್ಲ ನೋಡ್ಬೇಕು ಅಂತಂದ್ರು ಒಂದು ದಿನದ ಮಟ್ಟಿಗೆ ಇಲ್ಲಿಗೆ ಬಂದಿದೀವಿ. ನಾಳೆ ಹೊರಟು ಬಿಡ್ತೀವಿ..."

"ನೀವು ಬಂದದ್ದು ಬೇಜಾರಿಲ್ಲ ರಮಾ... ಹಾಗಂದ್ಕೋಬೇಡ. ಚಂದ್ರೂನೂ ನಿಮ್ಮ ಜತೆ ಮದುವೆ ಮನೆಗೆ ಬರ್ತಿದಾನಾ?..."

"ಇಲ್ಲ ಅಕ್ಕಾ, ಅವನು ಇಲ್ಲೇ ಇರ್ತಾನೆ. ಬೇರೆ ಕೆಲಸ ಹುಡುಕುತಿದ್ದಾನೆ. ಆ ಕೆಲಸ ಹೋಯ್ತು..."

"ಹೌದಾ? ಯಾಕೆ...? ಯಾವಾಗ ?..." ಬೇಸರ, ಆಶ್ಚರ್ಯಗಳಿಂದ ಕೇಳಿದಳು.

ನಂಗೂ ಸರ್ಯಾಗಿ ಗೊತ್ತಿಲ್ಲ... ಭಾವನ ಹತ್ರ ಅವನೇ ಹೇಳ್ತಾನೆ. ತುಂಬಾ

ಬೇಜಾರು ಮಾಡ್ಕೊಂಡಿದ್ದಾನೆ... ಅಲ್ಲಿ ಏನಾಯ್ತೋ ಏನೋ ?

"ಕೆಲ್ಸ ಹುಡ್ಕೋದನ್ನ ಬಿಟ್ಟು ಇಲ್ಲಿಗ್ಯಾಕೆ ಬಂದ ? ಇಲ್ಲಿ ಕೆಲ್ಸಾನ ನಾವು ಕೈಯಲ್ಲಿ ಇಟ್ಕೊಂಡು ಕೂತಿದೀವಾ?"

"ಅರ್ಜಿ ಕೊಟ್ಟಿದ್ದಾನೆ... ಉತ್ತರ ಬರಬೇಕು. ಇಂಟರ್‌ವ್ಯೂ ಆಗ್ಬೇಕು... ಅಲ್ಲೀವರೆಗೂ ಇರ್ತಾನೆ. ಆಮೇಲೆ ಎಲ್ಲಿ ಕೆಲಸ ಸಿಗುತ್ತೋ ಅಲ್ಲಿಗೆ ಹೋಗ್ತಾನೆ. ನೀವು ಚಿಂತೆ ಮಾಡ್ಬೇಡಿ."

"ಚಿಂತೆ ಆಗ್ದೇ ಇರುತ್ತಾ ರಮಾ... ಜವಾಬ್ದಾರಿ ಬೇಡ್ವಾ ? ... ಅವನೀಗ ಚಿಕ್ಕ ಹುಡುಗ ಅಲ್ಲ. ಅವನಿಗೂ ಇಪ್ಪತ್ತೇಳು ವರ್ಷ... ಈಗಾಗ್ಲೇ ನಾಲ್ಕು ಸಾರಿ ಕೆಲಸ ಬದಲಾಯಿಸಿದಾನೆ... ಒಂದು ಗಟ್ಟಿ ಕೆಲಸ ಬೇಕು ತಾನೇ ?" ಯಾವಾಗ ಸರಿ ಹೋಗ್ತಾನೋ?"

"ಆಗುತ್ತೆ ಬಿಡಿ. ನೀವು ಇಷ್ಟು ವ್ರತ ಪೂಜೆ ಎಲ್ಲಾ ಮಾಡ್ತೀರಿ... ಅದರ ಫಲ ಸಿಗದೇ ಇರುತ್ತಾ ?... ಎಲ್ಲಾ ಸರಿ ಹೋಗುತ್ತೆ... ಚಿಂತೆ ಮಾಡ್ಬೇಡಿ."

"ನನ್ನ ಹೊಟ್ಟೇಲಿ ಹುಟ್ಟಿದವನೇ ಆಗಿದ್ದಿದ್ರೆ ನಾನು ಚಿಂತೆ ಮಾಡ್ತಿರ್ಲಿಲ್ಲ... ನಾವು ಕುಡಿಯೋ ಗಂಜೀನೇ ಅವನಿಗೂ ಕೊಡುತ್ತಿದ್ವೆವು... ಇವನು ನನ್ನ ಹೊಟ್ಟೇಲಿ ಹುಟ್ಟಲಿಲ್ಲ ; ನಾನು ಬೆಳೆಸಲಿಲ್ಲ ; ಸಾಕು ಮಗ... ಇವನು ಸರಿಯಾಗಿ ನೆಲೆ ಊರದಿದ್ರೆ ನಮಗೆ ಕೆಟ್ಟ ಹೆಸರು ಬರುಲ್ವಾ ರಮಾ?... ಅದಕ್ಕೇ ನನಗೆ ಬೇಸರ... ಕಾಟಾಚಾರಕ್ಕೆ ದತ್ತು ತೆಗೆದುಕೊಂಡ್ರು ಅಂತ ಅವನ ಅಪ್ಪ ಅಮ್ಮ ನಮ್ಮನ್ನೇ ತಾನೇ ಬೈಯೋದು... ಇವನಿಂದ ನಮಗೆ ಅಪಖ್ಯಾತಿ ಅಷ್ಟೇ..." ರಮಾ ಉತ್ತರಿಸದೇ ಸುಮ್ಮನಾದಳು.

ಇವರುಗಳೆಲ್ಲ ಕುಳಿತು ಮಾತನ್ನಾಡುತ್ತಿರುವಾಗ, ಜೋಷಿ ಸಹೋದರರು ಮತ್ತೆ ಬಂದಿದ್ದರು. ಗೋಪಾಲ ಅವರಿಬ್ಬರನ್ನು ತನ್ನ ತಾಯಿಗೆ ಪರಿಚಯಿಸಿದ... ಅವರಿಬ್ಬರೂ ಆಕೆಗೆ ನಮಸ್ಕರಿಸಿ, ಆಮಂತ್ರಣ ಪತ್ರಿಕೆಯನ್ನು ಕೊಟ್ಟು ಮದುವೆಗೆ ಆಹ್ವಾನಿಸಿದರು. "ನಮ್ಮ ಮನಿ ಸಮಾರಂಭಕ್ಕೆ ಬಂದು ವಧೂವರರನ್ನು ಆಶೀರ್ವದಿಸಬೇಕೆಂದು ಕೇಳಿಕೊಳ್ತೀವ್ರಿ..." ಎಂದಿದ್ದರು. ಲಕ್ಷ್ಮೀದೇವಮ್ಮ ಒಳಗೊಳಗೇ ಹಲ್ಲು ಕಡಿದಳು.

ಹೊರಡುವ ಮುನ್ನ ಜೋಷಿ, ಲಕ್ಷ್ಮೀದೇವಮ್ಮನ ಹತ್ತಿರ ಮಾತನಾಡಿದ. "ಏನು ತೀರ್ಮಾನ ತಗೊಂಡ್ರಿ ತಾಯೀ... ಒಪ್ಗೆ ಕೊಡ್ತೀರಿ ಅಲ್ಲೋ..." ಕೇಳಿದ

"ಒಳ್ಳೇ ಇಕ್ಕಟ್ಟಿಗೆ ಸಿಕ್ಕಿಸ್ತೀರಿ ನೀವು... ನೆಂಟರು ಬಂದಿದ್ದಾರೆ"|ಮೆಲುದನಿಯಲ್ಲಿ ನುಡಿದಳು.

"ಇವರೆಲ್ಲಾ ಮನೆಯೋರೇ ಅಲ್ವೇನ್ರೀ... ಹೆಂಗೂ ಲಗ್ನಕ್ಕೂ ಇರ್ತಾರೆ. ಭಲೋ ಆತು ಬಿಡ್ರೀ... ಹಿರಿಯೋರ ಆಶೀರ್ವಾದ ಸಿಕ್ಕಂಗಾತು..."ಬಾಯಗಲಿಸಿ ನುಡಿದ.

"ಸರಿ. ಎಲ್ಲೆಲ್ಲೆಲ್ಲೋ ಚಪ್ಪರ ಅದೂ ಇದು ಅಂತ ಹಾಕ್ಬೇಡಿ... ನಿಮ್ಮ ಮನೆ

ಪಕ್ಕ ಜಾಗ ಇದೆಯಲ್ಲ ಅಲ್ಲಿ ಮಾತ್ರ ಹಾಕ್ಕೋಬೇಕು... ಗಲಾಟೆ, ಗದ್ದಲ, ಗಲೀಜು ಯಾವ್ದೂ ಆಗ್ಬಾರ್ದು. ಯಾರ್ಗೂ ತೊಂದರೆ ಆಗ್ಬಾರ್ದು... ಹಾಗೇನಾದ್ರೂ ಆದ್ರೆ ನಾನು ಸುಮ್ಮನಿರುಲ್ಲ." ತೋರುಬೆರಳನ್ನು ತೋರಿದಳು.

"ಇಲ್ಲ ತಾಯೀ... ಎಲ್ಲಾದನ್ನೂ ಚೊಕ್ಕಟ ಮಾಡಿಸ್ಕೊಡ್ತೇವು... ಹಂಗಾರೆ ಇವತ್ತಿಂದ್ಲೇ ಕೆಲಸ ಆರಂಭ ಮಾಡಬಹುದಾ ತಾಯೀ..." ಲಕ್ಷ್ಮೀದೇವಮ್ಮ ಹೂ ಎನ್ನುವಂತೆ ತಲೆಯಾಡಿಸಿದಳು. "ಭಾಳ ಉಪ್ಕಾರ ಆಯ್ತು ತಾಯಿ... ನಿಮ್ಮ ಮನಸ್ಸು ದೊಡ್ಡದು ಅಂತ ನಮಗ ಅರಿವಿತ್ತ" ಮತ್ತೆ ಇಬ್ಬರೂ ಕೈ ಮುಗಿದರು. ಅವರಿಬ್ಬರ ಮಾತುಗಳನ್ನು ಆಲಿಸುತ್ತಿದ್ದ ತಾಯಿ, ಗೋಪಾಲ ಹಾಗೂ ನಾರಾಯಣನ ಕಡೆ ನೋಡಿದಳು ಗೋಪಾಲ ಪೆಚ್ಚಾಗಿದ್ದ.

ಅವರಿಬ್ಬರೂ ಅತ್ತ ಮರೆಯಾದ ಕೂಡಲೇ ತಾಯಿ ಪ್ರಶ್ನಿಸಿದ್ದಳು. 'ಏನಂತೋ ಅವರ ಸಮಸ್ಯೆ?... ಕೈ ಕೈ ಮುಗೀತಿದ್ರು..." ವ್ಯಂಗ್ಯ ಬೆರೆತ ಧ್ವನಿಯಲ್ಲಿ ಕೇಳಿದಳು. ಗೋಪಾಲ ವಿಷಯವನ್ನು ತಿಳಿಸಿದ" ಇವರಿಗೆ ಬೇರೆ ಛತ್ರ ಸಿಕ್ಕಿಲ್ಲ. ಇಲ್ಲೇ ಪೆಂಡಾಲ್ ಹಾಕಿ ಮದುವೆ ಕಾರ್ಯ ಮಾಡ್ಬೇಕು ಅಂತ ಅಂದ್ಕೊಂಡಿದಾರೆ... ಅದನ್ನೇ ಮಾತಾಡ್ತಿದ್ರು"

"ಅದಕ್ಯಾಕೆ ಬೇಡ್ಕೋ ಬೇಕು.?... ಜಾಗಕ್ಕೇನು ಬರವೇ?... ಎಲ್ಲಾ ಅನು ಕೂಲವೂ ಇದೆ... ಜೈ ಅನ್ನಿಸಿದ್ರೆ ಆಯ್ತು..." ಅದಕ್ಕೆ ಅಷ್ಟು ನಸೆನಸೆ ಯಾಕೆ?"

"ಅನುಕೂಲ ಎಲ್ಲಿದೆ ಅತ್ತೆ?... ಮರಗಿಡಗಳಿವೆ... ಬಿಡುಬೀಸಾದ ಜಾಗ ಎಲ್ಲಿದೆ?... ಅರ್ಥವಾಗುಲ್ಲ ಅವರಿಗೆ..." ಎಲ್ಲಾ ಧ್ವಂಸ ಮಾಡಿ ಬಿಡ್ತಾರೆ... ಅಡಿಕೊಟ್ಟರೆ ಗಡಿ ದಾಟು ಅಂತ."

"ಅವರ ಕಷ್ಟ ಅವರಿಗೆ, ಹೇಗೋ ಮಾಡ್ಕೋತಾರೆ ಬಿಡು. ಇಲ್ಲ ಅಂತಂದು ನೀವ್ಯಾಕೆ ಕೆಟ್ಟವರಾಗ್ತೀರಿ... ಮದುವೆ ಕಾರ್ಯಕ್ಕೆ ಸಹಾಯ ಮಾಡಿದರೆ, ಪುಣ್ಯ ಬರುತ್ತೆ..."

"ಏನು ಪುಣ್ಯವೋ ನಿಮಗ್ಹೇಗೆ ಗೊತ್ತಾಗುತ್ತೆ. ವಠಾರದಲ್ಲೆಲ್ಲಾ ದಾಂಧಲೆ ಎಬ್ಬಿಸಿ ಬಿಡ್ತಾರೆ. ಹಣ್ಣು ಕಾಯಿ, ಹೀಚು, ಹೂವು ಒಂದನ್ನೂ ಬಿಡುಲ್ಲ. ಗದ್ದಲ ಗಲಾಟೆಯಿಂದ ತಲೆ ಕೆಡುತ್ತೆ ಅಷ್ಟೇ. ನಾನೇ ಎಲ್ಲಾದ್ರೂ ಹೊರಟು ಹೋಗ್ತೀನಿ ಅಷ್ಟೇ"... ಬೇಸರವನ್ನು ನಟಿಸಿದಳು.

"ನಮ್ಮ ಜೊತೆ ಬಂದ್ಬಿಡಿ ಅತ್ಗೇ... ಇಲ್ಲಿಯ ಗಲಾಟೆ ಮುಗಿಯುವವರೆಗೂ ಅಲ್ಲಿದ್ದು ವಾಪಸ್ಸು ಬಂದರಾಯ್ತು... ಅವರುಗಳಿಗೂ ಸಂತೋಷವಾಗುತ್ತೆ." ಮೈದೂನನೆಂದ.

"ಇಲ್ಲ ನಾರಾಯಣ... ಈ ಸಮಯದಲ್ಲಿ ನಾವು ಇಲ್ಲಿ ಇಲ್ಲದಿದ್ರೆ ಎಲ್ಲವನ್ನು ಆಕ್ರಮಿಸಿಕೊಂಡು ಬಿಡ್ತಾರೆ, ಹೇಳೋರಿರುಲ್ಲ; ಕೇಳೋರಿರುಲ್ಲ. ಅವರದ್ದೇ ಸಾಮ್ರಾಜ್ಯ ಆಗುತ್ತೆ. ನೀನೂ ಆ ಸಮಯಕ್ಕೆ ಇಲ್ಲಿಗೆ ಬಂದ್ಬಿಡು. ಅವರುಗಳ ಮೇಲೆ ಒಂದು

ಕಣ್ಣನ್ನಿಡುಕ್ಕಾಗುತ್ತೆ. ನಿಮ್ಮಣ್ಣ ಸಾಧು... ಯಾರಿಗೂ ಏನೂ ಹೇಳುಲ್ಲ..."

"ಬೇಕಾದ್ರೆ ಬರ್ತೀನಿ ಅತ್ಗೇ... ಚಂದ್ರು ಇಲ್ಲೇ ಇರ್ತಾನಲ್ಲ. ಅವನು ಗಮನ ಇಡ್ತಾನೆ ಬಿಡಿ..."

"ಹುಡುಗು ಬುದ್ಧಿ... ಅವನಿಗೆ ಜವಾಬ್ದಾರಿ ಇದೆ ಅಂತೀಯಾ?..." ಉದಾಸೀನ ವಾಗಿ ನುಡಿದಳು.

"ನೀನೇ ಹೀಗಂದ್ರೆ ಹೇಗೆ ಲಕ್ಷ್ಮೀ...? ಅವನಿಗೆ ಜವಾಬ್ದಾರಿ ವಹಿಸಿಕೊಡು... ಅವನೂ ಕಲಿತ್ಕೋತಾನೆ. ಸದಾ ದೂರ ದೂರವೇ ಇಟ್ಟಿದ್ದರೆ, ಇವನು ಕಲಿತ್ಕೊಳ್ಳೋದು ಯಾವಾಗ?"

"ನಾನು ದೂರ ಇಟ್ನಾ ಅತ್ತೇ... ಇವನಿಗೇ ಇಲ್ಲಿರುಕ್ಕೆ ಇಷ್ಟವೇ ಇರ್ಲಿಲ್ಲ."

"ಚಿಕ್ಕೋರಿಗೆ ತಿಳುವಳಿಕೆ ಸಾಲದು ನಿಜ ದೊಡ್ಡೋರು ತಿಳಿಸ್ಕೊಡ್ಬೇಕು... ಅವನಿಗೂ ಬೇಗ ಮದುವೆ ಮಾಡಿ... ಎಲ್ಲಾ ಜವಾಬ್ದಾರಿಯೂ ತಾನೇ ತಾನಾಗಿ ಬರುತ್ತೆ... ಮೊಮ್ಮಕ್ಕಳನ್ನು ಎತ್ತಿ ಆಡಿಸುವ ಆಸೆ ನಿಮ್ಮಿಬ್ಬರಿಗೂ ಇಲ್ವಾ?..." ಗೇಲಿ ಮಾಡುತ್ತಾ ಕೇಳಿದಳು.

"ಮೊದಲು ಸರಿಯಾದ ಕೆಲಸ ಸಿಕ್ಕು ನೆಲೆ ಗಟ್ಟಿಯಾಗ್ಲೀ ಇಲ್ದಿದ್ರೆ ಯಾರು ಹೆಣ್ಣು ಕೊಡ್ತಾರೆ?..."

"ಗಂಡು ಹುಡುಗ. ಓದಿದಾನೆ ಕೆಲಸ ಸಿಕ್ಕೇ ಸಿಗುತ್ತೆ... ರಮನ ಅಣ್ಣ ಅತ್ತಿಗೆಯ ಬಳಗದಲ್ಲಿ ಕೆಲವು ಹೆಣ್ಣುಗಳಿವೆ ರಮಂಗೆ ಹೇಳಿದ್ರೆ ವಿಚಾರಿಸ್ತಾಳೆ..."

"ಇಲ್ಲ ಅಜ್ಜೀ ನಂಗೆ ಈಗ್ಲೇ ಮದುವೆ ಬೇಡ. ಕೆಲಸ ಸಿಗದ ಹೊರತು ನಾನು ಮದುವೆಯಾಗುಲ್ಲ. ಇಲ್ದಿದ್ರೆ ಯಾವುದಾದ್ರೂ ಮನೆ ಅಳಿಯನಾಗಿರುವಂಥ ಮನೆಯನ್ನು ನೋಡಿ... ಹೊರಟು ಹೋಗ್ತೀನಿ... ಆರಾಮವಾಗಿರಬಹುದು..." ಕಹಿಯಾಗಿ ನುಡಿದ.

"ನಿಮ್ಮಪ್ಪನ್ನ ಹಂಗಿಸಿ ಅಂತೀಯಾ ಮುಂಡೇದೆ, ಇವನಿಗೆ ಇವನ ಮಾವ ಸರ್ಕಾರಿ ಕೆಲಸ ಕೊಡಿಸಿದ್ರು... ರಿಟೈರ್ ಆಗೋವರ್ಗ್ಗೂ ಕೆಲಸ ಮಾಡಿದ್ದಾನೆ... ಏನೋ ಇವನ ಹಣೇಲಿ ಹೀಗೇ ಬರೆದಿತ್ತು... ಏನೋ ನಮಗೂ ಬಡತನ... ಸಾಲಾಗಿ ಮಕ್ಕಳು... ಇವರ ತಂದೆ ಕೇಳಿಕೊಂಡ್ರು... ಒಪ್ಪಿಕೊಂಡೆವು... ಮದುವೆ ಆಯ್ತು... ನಿನಗೂ ಯಾಕೆ ಆ ಹಣೇಬರಹ? ನೀನು ಇರೋನು ಒಬ್ಬನೇ. ಲಕ್ಷಣವಾಗಿ ಅಪ್ಪ ಅಮ್ಮನ ಜತೆಗಿದ್ದು ಸಂಸಾರ ಮಾಡು... ಹೀಗೆಲ್ಲಾ ಮಾತಾಡ್ಬೇಡ..."

"ನಾನು ಹೇಳಿದ್ರಲ್ಲಿ ತಪ್ಪೇನಿದೆ ನೀವೇ ಹೇಳಿ ಅಜ್ಜೀ... ನಾನು ನಿಮಗ್ಯಾರಿಗೂ ಸ್ವಂತದವನಲ್ಲ. ನಿಜ ತಾನೇ ? ನಾನು ಎಲ್ಲಿದ್ದರೇನು ?... ಹೆತ್ತ ಅಪ್ಪ ಅಮ್ಮನಿಗೆ ಬಡತನವಿತ್ತು, ನನ್ನನ್ನು ಹೊರಗೆ ಹಾಕಿದರು. ನಾನು, ವಾರಾನ್ನದ ಹುಡುಗನಂತೆ ಒಂಟಿಯಾಗಿ ತಾನೇ ಬೆಳೆದದ್ದು. ಎಲ್ಲೋ ಇದ್ಕೋತೀನಿ ಬಿಡಿ."

"ನೋಡೋ ಗೋಪಾಲ, ಹೇಗೆ ಮಾತಾಡ್ತಾನೆ ? ಆದಷ್ಟು ಬೇಗ ಮೂಗುದಾರ ಹಾಕಿ ಕಟ್ಟಾಕು... ಇಲ್ದಿದ್ರೆ ಕೈ ತಪ್ಪಿ ಹೋಗ್ತಾನೆ..."

"ಇಷ್ಟವಿಲ್ಲದಿದ್ರೆ ಹೋಗ್ಲಿ ಬಿಡಿ ಅತ್ತೆ. ಬಲವಂತದಿಂದ ಯಾರನ್ನೂ ನಮ್ಮವರನ್ನಾಗಿ ಮಾಡ್ಕೊಳ್ಳಕ್ಕಾಗುಲ್ಲ." ಲಕ್ಷ್ಮೀದೇವಮ್ಮ ಮಧ್ಯೆ ಬಾಯಿ ಹಾಕಿದಳು.

"ಇದೇ ತಪ್ಪು ಲಕ್ಷ್ಮಿ. ಆದದ್ದಾಗಿ ಹೋಯ್ತು, ಹಳೇದನ್ನೆಲ್ಲ ಬಿಟ್ಟುಬಿಡು. ಎಲ್ರೂ ಮನಸ್ಸನ್ನು ಕೆಡಿಸ್ಕೊಂಡ್ರೆ ಹೇಗೆ ? ಸರಿ ಹೋಗೋದು ಯಾವಾಗ ?..."

"ಹೌದ ಚಂದ್ರೂ ನೀನಿನ್ನು ಚಿಕ್ಕೋನು. ನಿನಗೆ ಅರ್ಥವಾಗುಲ್ಲ... ಅಣ್ಣ ನಿನಗೋಸ್ಕರ ಎಷ್ಟು ಖರ್ಚು ಮಾಡಿದ್ದಾನೆ ?... ಅವರು ಅವರ ಜವಾಬ್ದಾರಿಯನ್ನು ಮರೆತಿಲ್ಲ, ನೀನು ನಿನ್ನ ಕರ್ತವ್ಯವನ್ನು ಮರೆಯಬಾರದು... ತಪ್ಪಾಯ್ತು ಅಂತ ಎಲ್ರನ್ನು ಕ್ಷಮೆಕೇಳು." ನಾರಾಯಣನೆಂದ

"ನಾನೇನು ತಪ್ಪು ಹೇಳ್ದೆ ಅಂತ ನನಗೆ ಈಗ ತಿಳೀತಿಲ್ಲ. ಆದರೂ ನಿಮ್ಮ ಮಾತಿಗೆ ಬೆಲೆಕೊಟ್ಟು ಕ್ಷಮೆ ಕೇಳ್ತೀನಿ... ಎಲ್ರೂ ನನ್ನನ್ನು ಕ್ಷಮಿಸಿಬಿಡಿ" ಎಂದು ಹೇಳಿ ಎದ್ದು ಹೊರಗೆ ಹೊರಟು ಹೋಟ... ತಾಯಿ ಗೋಪಾಲನಿಗೆ ಸಂಜ್ಞೆ ಮಾಡಿದಳು. ಅವನೂ ಅವನ ಹಿಂದೆ ಹೋದ... ಲಕ್ಷ್ಮಿ ಮುಖ ಊದಿಸಿಕೊಂಡು ಕುಳಿತಿದ್ದಳು."

"ರಮಾ... ಯಾಕೋ ಕಾಲು ತುಂಬಾ ನೋಯ್ತಿದೆ... ಸ್ವಲ್ಪ ನೀಲಗಿರಿ ತೈಲದ ಶೀಷೆ ತೆಗೆದ್ಕೊಡು... ಕಮಲಾ... ಸ್ವಲ್ಪ ಎಣ್ಣೇನ ಹಚ್ಚಿ ನೀವ್ತೀಯೇನೆ?" ಮೊಮ್ಮಗಳನ್ನು ಕೇಳಿದಳು.

"ಹೂಂ. ನಂಗೆ ಏನು ಕೊಡ್ತೀಯ?"

"ನಿನಗೆ ಒಬ್ಬ ಪುಟ್ಟ ಗಂಡನ್ನ ಹುಡುಕಿ ಕೊಡ್ತೀನಿ. ಸುಮ್ನೇ ನೀವ್ತೀಯಾ ?" ಮೊಮ್ಮಗಳ ಗಲ್ಲವನ್ನು ಹಿಂಡಿದಳು.

"ನೋವಾಗುತ್ತೆ ಬಿಡಿ ಅಜ್ಜೀ... ನೀವು ಅಲುಗಾಡದೇ ಕೂತ್ಕೊಳ್ಳಿ" ಎನ್ನುತ್ತಾ ನೋವಿದ್ದ ಭಾಗಕ್ಕೆ ನೀಲಗಿರಿ ತೈಲವನ್ನು ತಿಕ್ಕತೊಡಗಿದಳು.

ರಸ್ತೆಯ ಬದಿಗಿದ್ದ ಮರದ ಕೆಳಗ ನಿಂತಿದ್ದ ಚಂದ್ರುವನ್ನು ಗೋಪಾಲ ಸಮೀಪಿಸಿದ..."ಒಳಗೆ ಬಾ... ಚಂದ್ರೂ, ಇದ್ಯಾಕೆ ನಿಂತಿದೀಯ ಅಂತ ಎಲ್ರೂ ಕೇಳ್ತಾರೆ..."

"ಸರಿ ಇದಕ್ಕೂ ಸ್ವಾತಂತ್ರ್ಯ ಇಲ್ವಾ ? ಸರಿ ಬರ್ತೀನಿ... ಬಂದ ತಪ್ಪಿಗೆ ಎರಡು ದಿನ ಇರ್ತೀನಿ ಕೆಲಸ ಸಿಕ್ಕಿದ ಕೂಡ್ಲೇ ಹೊರಟು ಹೋಗ್ತೀನಿ..."ಬೇಸರದಿಂದ ನುಡಿದ.

"ಬೇಸರ ಮಾಡ್ಕೋ ಬೇಡ್ವೋ... ಮನೆ ಅಂದ್ಮೇಲೆ ಒಂದ್ಮಾತು ಬರುತ್ತೆ ಹೋಗುತ್ತೆ. ಅದನ್ನೆಲ್ಲ ಮನಸ್ಸಿಗೆ ಹಚ್ಕೋಬಾರದು."

"ಯಾವುದಪ್ಪಾ ಮನೆ?... ನನಗೆ ಯಾವ ಮನೆ ಇದೆ ?... ಹೆತ್ತವರ ಮನೆ

ನನ್ನ ಪಾಲಿಗಿಲ್ಲ. ಸಾಕಿದವರಿಗೆ ನಾನು ಬೇಕಿಲ್ಲ... ಎಲ್ಲೋ ಬದುಕ್ತಿದೀನಲ್ಲಪ್ಪಾ... ಇದೂ ಒಂದು ಬದುಕಾ?" ಮನದ ಕಹಿಯನ್ನು ಹೊರಗಡವಿದ.

"ಹಾಗಂತ ಯಾಕೆ ಅಂದ್ಕೋತೀಯ? ನಮಗೆ ನೀನು ಬೇಕು ಅದಕ್ಕೆ ತಾನೇ ದತ್ತು ತೆಗೆದುಕೊಂಡಿರೋದು... ನಿಮ್ಮಮ್ಮನಿಗೆ ವಯಸ್ಸಾಯ್ತು... ಮಡಿ ಹುಡಿ ಅಂತ ಸುಮ್ನೇ ಕೆಲಸ ಮಾಡ್ತಾಳೆ... ಮನೇಲಿ ಸದಾ ಒಬ್ಬಳೇ ಅವಳಿಗೂ ಬೇಸರ. ಅದಕ್ಕೇ ಏನೇನೋ ಆಡಿ ಬಿಡ್ತಾಳೆ... ಅವಳೂ ಒಳ್ಳೆಯವಳೇ... ಎಲ್ರೂ ಹೇಳುವ ಹಾಗೆ ಮದುವೆ ಮಾಡ್ಕೋ... ಆಗ ಎಲ್ಲಾ ಸರಿ ಹೋಗುತ್ತೆ. ನಿನ್ನ ಮನಸ್ಸಿನ ಬೇಸರವೂ ಕಳೆಯುತ್ತೆ. ನಿನ್ನ ಅಮ್ಮನ ಮನಸ್ಸು ಮೆತ್ತಗಾಗುತ್ತೆ... ಈಗ ಒಳಗೆ ಬಾ...." ಮಗನ ಭುಜದ ಮೇಳೆ ಕೈಯನ್ನಿಟ್ಟ.

"ನಾನು ಹೀಗೇ ಸುತ್ತಾಡ್ಕೊಂಡು ಬರ್ತೀನಿ... ಮನೆಗೆ ಏನಾದ್ರೂ ಸಾಮಾನು ಬೇಕಾ? ತರಕಾರಿ ಸೊಪ್ಪು ಏನಾದ್ರೂ ಬೇಕಾಗಿದ್ರೆ ತರ್ತೀನಿ."

"ನಿನಗೆ ಏನು ಇಷ್ಟವೋ ಅದನ್ನು ತಗೊಂಡ್ಬಾ... ದುಡ್ಡೇನಾದ್ರೂ ಬೇಕಿತ್ತಾ?"

"ಬೇಡಪ್ಪಾ. ನನ್ನ ಹತ್ರ ಇದೆ. ಬೇಕಾದ್ರೆ ಕೇಳ್ತೀನಿ." ಎಂದು ಹೇಳಿದ. ಇಬ್ಬರೂ ಮನೆಯತ್ತ ಬಂದರು. ಬಾಗಿಲ ಬಳಿ ಬಿಟ್ಟಿದ್ದ ಚಪ್ಪಲಿಯನ್ನು ಮೆಟ್ಟಿ ಚಂದ್ರು ಅತ್ತ ನಡೆದ. ಗೋಪಾಲ ಒಳಗೆ ಬಂದ.

ಂ ಂ ಂ

"ಮಂಗಳಾ ಮಗೂನ ಹೊರಗೆ ಬಿಡ್ಬೇಡ್ವೆ... ಕೆಲಸಗಾರರು ಓಡಾಡ್ತಿದಾರೆ. ಎತ್ಕೊಂಡು ಹೋದಾರು... ಎಲ್ಲಿ ಅವನು?" ತಾಯಿ ಮಲಗಿದ್ದಲ್ಲಿಂದಲೇ ಕೇಳಿದಳು.

"ಇಲ್ಲೇ ಜಗುಲಿ ಮೇಲೆ ಕೂತಿದ್ದಾನೆ... ಎಲ್ಲಿಗೂ ಹೋಗುಲ್ಲಮ್ಮ ನಾನು ನೋಡ್ಕೋತಾ ಇದೀನಿ..."ಮಂಗಳಾ ಒಳಗಿನಿಂದಲೇ ಉತ್ತರಿಸಿದ್ದಳು.

"ಈ ಕೆಲಸಗಾರರ ಕೆಲಸ ಇನ್ನು ಮುಗೀಲಿಲ್ವಾ?... ಅದೇನೋ ಕುಟ್ಟಿ ಚಚ್ಚಿ ಮಾಡ್ತಾನೇ ಇದಾರೆ... ಬರೀ ಗದ್ದಲ ಯಾವಾಗ ಮುಗಿಯುತ್ತೋ...?"

"ಎದುರು ಮನೇಲಿ ಮದುವೆ ಅಲ್ವಾ? ಚಪ್ಪರ ಹಾಕಿಸ್ತಿದ್ದಾರೆ..."

"ಅದಕ್ಕೆ ಇಷ್ಟು ಗದ್ದಲಾನಾ? ಮದುವೆ ಇನ್ನೂ ನಾಲ್ಕು ದಿನ ಬಾಕಿ ಇದೆ... ಇವತ್ತೇ ಚಪ್ಪರಾನಾ?... ಅದೆಷ್ಟು ದೊಡ್ಡದು ಹಾಕಿಸ್ತಿದಾರೆ..."

"ದೊಡ್ಡ ಚಪ್ಪರಾನೇ ಕಣಮ್ಮ... ಮದುವೆ ಇಲ್ಲೇ ಮಾಡ್ತಾರಂತೆ... ಛತ್ರ ಸಿಗಲಿಲ್ಲವಂತೆ... ಹಾಗೇ ವಠಾರದ ಎರಡು ಮನೆಗಳನ್ನು ಬಿಡಿಸಿಕೊಂಡಿದ್ದಾರೆ ರಿಪೇರಿ ಆಗಿದೆ, ಸುಣ್ಣ ಹಚ್ಚಿಸ್ತಿದಾರೆ"

"ನಮಗೆ ಅನುಕೂಲವೇ ಆಯ್ತು. ಎಲ್ಲರೂ ಮದುವೆ ಮನೆಗೆ ಹೋಗಿ ಬರಬಹುದು. ಊಟಕ್ಕೆ ತೊಂದರೆಯೂ ಇರುವುದಿಲ್ಲ. ಹೇಳಿದ್ರೆ ನಂಗೂ ಡಬ್ಬಿಗಳಲ್ಲಿ

ಹಾಕಿಸಿಕೊಡ್ತಾರೆ... ಸರೋಜನೂ ಬಂದಿದ್ದರೆ ಚೆನ್ನಾಗಿತ್ತು..." ತನ್ನ ಇಂಗಿತವನ್ನು ವ್ಯಕ್ತಪಡಿಸಿದಳು

"ಹೋಗಮ್ಮ ಎಲ್ರೂ ಹೇಗೆ ಹೋಗುಕ್ಕೆ ಆಗುತ್ತೆ ?ಸ್ಕೂಲು ಬಿಟ್ಟು ಚಿಕ್ಕೋರು ಮದುವೆ ಮನೇಲಿ ಕೂತಿರೋಕೆ ಆಗುತ್ತಾ? ಅಣ್ಣ ರಜ ಹಾಕ್ತಾರಾ?... ನಾನು ಹೋಗುಲ್ಲ..."

"ಸರಿ ನಿಮ್ಮಿಷ್ಟ ಹೋಗುಕ್ಕೆ ಆಗ್ದೇ ಇದ್ದಾಗ, ಹೋಗ್ಲಿಲ್ಲ ಹೋಗ್ಲಿಲ್ಲ ಅಂತ ಗೊಣಗ್ತೀರಿ, ಅವಕಾಶ ಸಿಕ್ಕಾಗ ಹೋಗ್ಬಾರ್ದು ಅಂತ ಹೇಳ್ತೀರಿ. ಏನಾದ್ರೂ ಮಾಡ್ಕೊಳ್ಳಿ. ಮಗೂನ ಒಳಕ್ಕೆ ಕರ್ಕೊಂಡ್ಬಾ... ಬಿಸಿಲಾಗಿದೆ. ಒಂದು ಗಳಿಗೆ ಮಲಗ್ಲಿ..."

ಹೊರ ಬಂದ ಮಂಗಳಾ ತಮ್ಮನನ್ನು ಕಾಣದೇ, ಜಗುಲಿಯಿಂದ ಕೆಳಗಿಳಿದು ಸುತ್ತಲೂ ನೋಡಿದಳು ಅವನು ಎಲ್ಲಿಯೂ ಕಾಣಲಿಲ್ಲ. 'ಬಾಲೂ... ಬಾಲೂ..." ಎಂದು ಕರೆದಳು. ಅವನು ಓಗೊಡಲಿಲ್ಲ ; ಓಡಿಯೂ ಬರಲಿಲ್ಲ, ತಲ್ಲಣಗೊಂಡು, ಮನೆಗೆ ಬಂದಳು."ಬಾಲು ಜಗುಲಿ ಮೇಲಿಲ್ಲ. ಲಕ್ಷ್ಮಿದೇವಮ್ಮನ ಮನೆಗೆ ಹೋಗಿರಬಹುದು. ನೋಡ್ಕೊಂಡು ಬರ್ತೀನಿ."

"ಅವನು ಎಂದೂ ಯಾರ ಮನೆಗೂ ಅವನಾಗಿಯೇ ಹೋದವನಲ್ಲ. ಜಗುಲಿ ಯಿಂದ ಕೆಳಗಿಳಿದವನಲ್ಲ. ನಾನು ಆಗ್ಲೇ ಹೇಳ್ದೆ... ಯಾರು ಕರ್ಕೊಂಡು ಹೋದ್ರೋ ನನ್ನ ಮಗೂನ... ನಂಗೋ ಏಳುಕ್ಕಾಗ್ತಿಲ್ಲ..." ಅಳುವಿನ ಧ್ವನಿಯಲ್ಲಿ ಹೇಳಿದಳು.

"ಅಳ್ಬೇಡ ಸುಮ್ನಿರಮ್ಮ ಇಲ್ಲೇ ಎಲ್ಲೋ ಇರ್ತಾನೆ. ನಾನು ಹೋಗಿ ನೋಡ್ಕೊಂಡು ಬರ್ತೀನಿ. ನೀನು ಮಲಗಿರು..." ಎನ್ನುತ್ತಾ ಮತ್ತೆ ಹೊರಕ್ಕೆ ಹೊರಟಳು.

"ಹೇಗೆ ಮಲಗ್ಲೀ...? ನಿಮ್ಮಪ್ಪನೂ ಮನೇಲಿಲ್ಲ. ಆತಂಕದಿಂದ ಎದೆ ಹೊಡೆದುಕೊಳ್ತಿದೆ. ಎದುರುಮನೆ ಸೀತ ಇದ್ದರೆ ಕರಿ... ಎಲ್ಲಾ ಕಡೆ ನೋಡ್ಲೀ..."

"ನೀನು ಅತ್ತರೆ, ನನ್ನ ಕೈ ಕಾಲೂ ನಡುಗುತ್ತೆ. ಸ್ವಲ್ಪ ಸುಮ್ನಿರ್ತೀಯಾ?" ಎನ್ನುತ್ತಾ ಹೊರಬಾಗಿಲಿಗೆ ಬಂದಳು. ಮೊದಲಿಗೆ, ಜೋಷಿಗಳ ಮನೆಗೆ ಬಂದಳು. ಎದುರಿಗೆ ಕಂಡ 'ಮಾರ್ತಾಂಡನನ್ನು ಕೇಳಿದಳು..." ನಮ್ಮ ಬಾಲು ಏನಾದ್ರೂ ಇಲ್ಲಿಗೆ ಬಂದಿದಾನಾ? ಎಲ್ಲೂ ಕಾಣ್ತಿಲ್ಲ."

"ಇಲ್ರೀ ಅಕ್ಕಾ ಅವನು ಇಲ್ಲಿಗೆ ಬರಲಿಲ್ಲ." ಅವಳ ಎದೆ ಕುಸಿಯಿತು ಅಮ್ಮ ಹೇಳಿದ್ದು ದಿಟವಾಗಿ ಯಾರಾದ್ರೂ ಅವನನ್ನು ಎತ್ತಿಕೊಂಡು ಹೋಗಿದ್ದರೇ... ಅಲ್ಲಿಂದ ಅನುಮಾನಿಸುತ್ತಾ ಲಕ್ಷ್ಮಿದೇವಮ್ಮನ ಮನೆಗೆ ಬಂದಳು. ಅವಳಿಗೆ ಎದುರಾದವನು ಚಂದ್ರು ಅವಳನ್ನೇ ಕಣ್ಣರಳಿಸಿ ನೋಡಿದ. ಇವಳಿಗೂ ಅವನಾರೆಂದು ತಿಳಿಯಲಿಲ್ಲ.

"ಅತ್ತೆ ಇದಾರಾ?..." ನಿಧಾನಿಸುತ್ತಾ ಕೇಳಿದಳು...

"ಯಾವ ಅತ್ತೆ ? ನೀವ್ಯಾರೋ ನಂಗೆ ಗೊತ್ತಾಗ್ಲಿಲ್ಲ." ಅವಳನ್ನೇ ದಿಟ್ಟಿಸುತ್ತಾ

ಕೇಳಿದ. ಅವನ ನೋಟಕ್ಕೆ ಅವಳು ಕೆಂಪಾಗಿದ್ದಳು. ಮುಖ ಬಿಸಿಯಾಗಿತ್ತು...

"ಅದೇ ಈ ಮನೆಯವರು... ಹೊಸ್ದಾಗಿ ಬಂದಿದ್ದೀವಿ... ಸ್ವಲ್ಪ ಕರೀತೀರಾ?"

"ಒಳಗ್ಬನ್ನಿ. ಕರೀತೀನಿ..." ಎಂದು ಒಳಗೆ ಹೋದವನು ಮತ್ತೆ ಬಂದು ಹೇಳಿದ. ನೀವೇ ಬರ್ಬೇಕಂತೆ. ಅವರು ಮಡೀಲಿದ್ದಾರೆ... ಆಚೆಗೆ ಬರುಲ್ಲ..." ಇವಳು ಅನುಮಾನಿಸುತ್ತಾ ಒಳಗೆ ಬಂದಳು. ಅಡಿಗೆ ಮನೆಯ ಸುತ್ತಲೂ ಕಣ್ಣು ಹಾಯಿಸಿದಳು ಅವನು ಅಲ್ಲಿಯೂ ಕಾಣಲಿಲ್ಲ.

"ಅತ್ತೇ... ಬಾಲು ಬಂದಿದಾನಾ? ಮನೇಲಿ ಎಲ್ಲಿಯೂ ಕಾಣ್ತಾ ಇಲ್ಲ."

"ಇಲ್ಲ... ಇಲ್ಲಿಗೆ ಬಂದಿಲ್ಲ... ನಾನು ತುಳಸೀ ಪೂಜೆಗೆ ಇನ್ನು ಬಂದೇ ಇಲ್ಲ. ತುಳಸೀ ಕಟ್ಟೆಯ ಹತ್ರ ಏನಾದ್ರೂ ಇದಾನೋ ಏನೋ ನೋಡ್ಬೇಕಾಗಿತ್ತು..."

"ಅಲ್ಲಿಂದ್ಲೇ ಬಂದೆ... ಅವನು ಅಲ್ಲಿಲ್ಲ..." ಕೆಟ್ಟ ಮುಖ ಮಾಡಿ ಹೇಳಿ ಅಲ್ಲಿ ನಿಲ್ಲದೇ ಹೊರಬಂದಳು. ಬಾಗಿಲಲ್ಲಿ ನಿಂತಿದ್ದ ಚಂದ್ರು ಬಂದ...

"ಬಾಲು ಯಾರು?.... ಹುಡುಕುಕ್ಕೆ ನಾನು ನಿಮಗೆ ಸಹಾಯ ಮಾಡ್ಲಾ?" ಕೇಳಿದ.

"ಅವನು ನನ್ನ ತಮ್ಮ... ಎರಡು ವರ್ಷದವನು... ಈಗ ಎಲ್ಲಿ ಅಂತ ಹುಡುಕ್ಲೀ ಎದುರು ಮನೇಲೂ ಇಲ್ಲ..." ಭಯದಿಂದ ಮುಖ ಬಿಳುಚಿ ಹೋಗಿತ್ತು.

'ಹೆದರ್ಬೇಡಿ. ಇಲ್ಲೇ ಎಲ್ಲೋ ಇರ್ತಾನೆ. ಸಿಗ್ತಾನೆ... ಬನ್ನಿ... ನಾನೂ ನಿಮ್ಮ ಜೊತೆಗೆ ಬರ್ತೀನಿ." ಅವನು ಬಾಗಿಲನ್ನು ಮುಂದುಕ್ಕೆಳೆದುಕೊಂಡ. "ಅಪ್ಪ ಮನೇಲಿಲ್ಲ. ಇಲ್ದಿದ್ರೆ, ಅವರನ್ನು ಹುಡುಕಿ ಅಂತ ಕಳಿಸ್ಬಹುದಾಗಿತ್ತು."ಮಂಗಳಾ ಉತ್ತರಿಸದೇ ಮುಂದೆ ಮುಂದೆ ನಡೆದು, ರಸ್ತೆಗೆ ಬಂದಳು. ತುದಿಯಲ್ಲಿ ನಿಂತು ಎರಡೂ ಕಡೆಗೆ ಕಣ್ಣು ಹಾಯಿಸಿದಳು.

"ಎಲ್ಹೋದ ಇವನು? ಯಾರು ಎತ್ಕೊಂಡು ಹೋಗಿರಬಹುದು?" ತನ್ನಲ್ಲೇ ಹೇಳಿಕೊಂಡು "ನೀವು ಈ ಕಡೆ ಹೋಗಿ ನೋಡಿ... ನಾನು ಈ ಕಡೆ ಹೋಗ್ತೀನಿ..."ಎನ್ನುತ್ತಾ ರಸ್ತೆಯ ಎಡ ದಿಕ್ಕಿಗೆ ತಿರುಗಿದಳು. ಅವನು ಅನುಮಾನಿಸುತ್ತಾ ಅಲ್ಲೇ ನಿಂತಿದ್ದವನು, ಇದ್ದಕ್ಕಿದ್ದಂತೆ ಕೂಗಿದ.

"ಇಲ್ಬನ್ನಿ... ಇಲ್ಲಿ ನೋಡಿ" ಎಂದ.

"ಸಿಕ್ಕಿದ್ನಾ?" ಎನ್ನುತ್ತಾ ಅವಳು ಓಡಿ ಬಂದಳು.

"ಅಲ್ನೋಡಿ ಅಪ್ಪ ಬರ್ತಿದಾರೆ. ಅವರು ಒಂದು ಹುಡುಗನ್ನ ಎತ್ಕೊಂಡಿದ್ದಾರೆ. ಅವನೇನಾ ನೋಡಿ..."

"ಎಲ್ಲಿ" ಎನ್ನುತ್ತಾ ಅವಳು ಅವನ ಪಕ್ಕಕ್ಕೆ ಬಂದಳು... ಅವನು ಅವಳಿಗೆ ಮೈ ತಗಲದಂತೆ ನಿಂತು ಅಲ್ನೋಡಿ ಎಂದು ತನ್ನ ತಂದೆ ಬರುತ್ತಿದ್ದ ದಿಕ್ಕಿಗೆ ಬೊಟ್ಟು ಮಾಡಿದ.

"ಹೌದು... ಅವನೇ..." ಕಣ್ಣು ಕಿರಿದು ಮಾಡಿ ನೋಡಿ ನುಡಿದು, ಮುಂದೆ

ಮುಂದೆ ನಡೆದಳು ಅವನು ಹಿಂಬಾಲಿಸಿದ. ಗೋಪಾಲಯ್ಯನನ್ನು ಸಮೀಪಿಸುತ್ತಿದ್ದಂತೆ, ಬಾಲು ಅವರ ತೋಳಿನಿಂದ, ಇವಳ ಕಡೆಗೆ ವಾಲಿದ. ಇವಳು ಬಾಗಿದವನನ್ನು ಎತ್ತಿಕೊಂಡು, ಅವನ ಪುಟ್ಟ ಕೆನ್ನೆಗೆ ಒಂದೇಟನ್ನು ಹಾಕಿದಳು. 'ಛಟ್' ಎನ್ನುವ ಸದ್ದು ಇಬ್ಬರನ್ನು ಬೆಚ್ಚಿಸಿತು. ಅವನು ಜೋರಾಗಿ ಅಳಲು ಪ್ರಾರಂಭಿಸಿದ. ಗೋಪಾಲಯ್ಯ " ಏನಮ್ಮ ಏನ್ಮಾಡ್ತಿದೀಯ... ಮಗೂನ ಯಾಕೆ ಹೊಡ್ದೇ?" ಗದರಿ ಕೇಳಿದರು.

"ಹೇಳದೇ ಕೇಳದೇ ಜಗುಲಿಯಿಂದ ಕೆಳಗಿಳಿದು ನಿಮ್ಮ ಮನೆಗೆ ಬಂದಿದ್ದಾನೆ... ಇವನ ದೆಸೆಯಿಂದಾಗಿ ನನ್ನ ಪ್ರಾಣವೇ ಹೋಗಿತ್ತು..." ಎನ್ನುತ್ತಾ ಅವನ ಕೆನ್ನೆ ಹಿಂಡಿದಳು. ರೋಷದಿಂದ ಅವಳ ಮುಖ ಕೆಂಪಾಗಿ ಅದುರುತ್ತಿತ್ತು... ಚಂದ್ರು ಅವಳ ತೋಳಿನಿಂದ ಮಗುವನ್ನು ಬಲವಾಗಿ ಎಳೆದುಕೊಂಡ.

"ಮಗು ಸಿಕ್ತು ಅಂತ ಖುಷಿ ಪಡೋದನ್ನ ಬಿಟ್ಟು ಹೊಡೆದು, ಜಿಗುಟಿ ಮಾಡ್ತಿದೀರಲ್ಲ... ಅಪ್ಪಾ... ಎಲ್ಲಾ ನಿಮ್ಮಿಂದ್ಲೇ ಹೀಗಾಗಿದ್ದು... ನೀವ್ಯಾಕೆ ಎತ್ಕೊಂಡು ಹೋದ್ರೀ?... ಕಳೆದು ಹೋಗಿದ್ದಾನೆ ಅಂತ ಅಷ್ಟೊತ್ತಿನಿಂದ ಹುಡುಕ್ತಿದ್ರು... ಈಗ ಸಿಕ್ಕ ಮೇಲೆ ಇವನಿಗೆ ಏಟು... ನೋಡಿ, ಕೆನ್ನೆ ಹೇಗೆ ಕೆಂಪಾಗಿದೆ?... " ಮಗುವಿನ ಕಣ್ಣೀರನ್ನು ಒರೆಸಿ, ಸಮಾಧಾನ ಮಾಡಿದ. ಅವಲು ಪೆಚ್ಚಾಗಿದ್ದಳು.

"ನಂಗೇನ್ಗೊತ್ತೋ ಹೀಗಾಗುತ್ತೆ ಅಂತ... ಜಗುಲಿ ಮೇಲೆ ನಿಂತಿದ್ದವನು. ನನ್ನನ್ನು ಕಂಡು ಓಡಿ ಬಂದ. ಎತ್ಕೊಂಡು ಬಂದೆ. ಅಷ್ಟರಲ್ಲಿ, ನಿಮ್ಮಮ್ಮ ಅಂಗಡಿಗೆ ಹೋಗಿ ಬಾಳೆ ಹಣ್ಣು ತಗೊಂಡ್ಬನ್ನಿ ಅಂತ ಅಂದ್ಲು... ಅಂಗಡಿಗೆ ಇವನನ್ನು ಎತ್ಕೊಂಡು ಹೋದೆ.. ಮಗೂಗೆ ಅಂತ ಒಂದು ಬಾಳೆ ಹಣ್ಣನ್ನು ಜಾಸ್ತಿ ತಗೊಂಡಿದೀನಿ... ಮನೆ ಹತ್ರ ಇಳಿಸಿದ್ಮೇಲೆ ಕೊಡೋಣ ಅಂತ ಅಂದ್ಕೊಂಡೆ... ತಗೊಳೋ ಪುಟ್ಟಾ" ಎನ್ನುತ್ತಾ ಬಾಲುವಿನ ಕೈಗೆ ಒಂದು ಬಾಳೆ ಹಣ್ಣನ್ನು ಇತ್ತ. ಹಣ್ಣನ್ನು ಕಂಡು ಅವನ ಅಳು ನಿಂತಿತು... ಅಕ್ಕನ ಕಡೆಗೆ ಕೈ ಚಾಚಿ ಎತ್ಕೋ ಎಂದ. ಅವಳು ಎತ್ತಿಕೊಂಡು, ಒಂದು ಕ್ಷಣವೂ ಅಲ್ಲಿ ನಿಲ್ಲದೇ ಮನೆಯ ಕಡೆಗೆ ಧಾವಿಸಿದಳು.

"ನೋಡಿದ್ರಾ ಅಪ್ಪಾ... ನಿಮ್ಮಿಂದ ಏನಾಯ್ತು ಅಂತ. ಹೇಳ್ಬಿಟ್ಟಲ್ವಾ ಕರ್ಕೊಂಡು ಹೋಗೋದು... ಅವರನ್ನು ನೋಡಿದ್ರಾ ಎಷ್ಟು ಗಾಬರಿಯಾಗಿದ್ರು ಅಂತ..."

"ಏನೋ ಮಗೂನ ನೋಡಿ, ಮುದ್ದಾಡ್ಬೇಕು ಅಂತ ಅನ್ನಿಸ್ತು. ಎತ್ಕೊಂಡೆ, ಅದೇ ತಪ್ಪಾಗಿ ಹೋಯ್ತು... ಇನ್ಮುಂದೆ ಅವನನ್ನು ಎತ್ತಿಕೊಳ್ಳೋದೇ ಇಲ್ಲ... ತಗೋ ಈ ಹಣ್ಣನ್ನು ನಿಮ್ಮಮ್ಮನಿಗೆ ಕೊಡು. ನಾನು ಅವರ ಮನೆಗೆ ಹೋಗಿ, ಆಕೆಯ ಹತ್ತಿರ ಕ್ಷಮಾಪಣೆ ಕೇಳ್ಕೊಂಡು ಬರ್ತೀನಿ."

"ಏನೂ ಬೇಡ ಸುಮ್ಮನೇ ಬನ್ನಿ, ಅಮ್ಮನ ಹತ್ರಾನೂ ಬೈಸಿಕೊಳ್ತೀರಿ ಅಷ್ಟೇ..."

ಎಂದ. ಅದೂ ಹೌದೆನ್ನಿಸಿತ್ತು. ಅವನೊಂದಿಗೆ ಮನೆಯ ಕಡೆಗೆ ಹೆಜ್ಜೆ ಹಾಕಿದ.

○ ○ ○

"ಎಲ್ಹೋಗಿದ್ಯೊ ಕಂದಾ... ಕೆನ್ನೆಯೆಲ್ಲಾ ಕೆಂಪಾಗಿದೆ... ಬಿಸಿಲ್ನಲ್ಲಿ ಸುತ್ತಾಡಿ ಬಳಲಿ ಹೋಗಿದ್ದೀಯ..." ತಾಯಿ ಮುದ್ದಿಸಿದಾಗ ಮಂಗಳಂಗೆ ರೇಗಿತ್ತು.

"ಇವನನ್ನ ಕಾಯೋ ಕೆಲಸ ನಂಗೆ... ಹುಡಿಕ್ಕೊಂಡು ಹೋಗ್ಬೇಕು. ಸಾಕಾಗಿದೆ ನಂಗೆ... ಎಲ್ಲಾ ಕೆಲಸವೂ ನಂದೇ... ಎಷ್ಟೂಂತ ಮಾಡ್ಲೀ...?

"ಮಾಡ್ಬೇಡ ಬಿಡು, ನಾನೇನು ಉಪವಾಸ ಬಿದ್ದಿರುಲ್ಲ... ಮದುವೆ ಮಾಡ್ಕೊಂಡು ಹೋದ್ಮೇಲೆ, ಕರೆದ್ರೂ ಎಲ್ಲಿ ಬರ್ತೀಯಾ?"...

"ಸರೋಜ ಇಷ್ಟು ಕೆಲಸ ಮಾಡಿದ್ಲಾ... ವನಜಾ, ಜಲಜಾ, ಮಾಡ್ತಾರಾ?... ನೀನೇ ಹೇಳಮ್ಮ... ಎಲ್ಲಾ ನನ್ನೊಬ್ಬಳ ತಲೇಗೆ ಬಿದ್ದಿದೆಯಲ್ಲ...' ಅಲವತ್ತು ಕೊಂಡಳು.

"ನನಗೀ ಗತಿ ಬಂದಿಲ್ದೇ ಇದ್ರೆ, ಒಂದು ಕಡ್ಡಿ ಸಹ ನಿನ್ನಿಂದ ಅತ್ತ ತೆಗೆದು ಇತ್ತ ಇಡು ಅಂತ ಹೇಳ್ತಿರ್ಲಿಲ್ಲ... ಕಟ್ಟು ಬಿಚ್ಚಿದ ಮೇಲೆ ಕೂರಿಸಿ ಉಪಚಾರ ಮಾಡ್ತೀನಿ... ಏನೋ ನನ್ನ ಕರ್ಮ... ರೆಕ್ಕೆ ಕತ್ತರಿಸಿದ ಹಾಗಾಗಿದೆ..." ಅತ್ತು ಸಮಾಧಾನ ಮಾಡ್ಕೊಂಡು ಪುನಃ ಕೇಳಿದಳು. "ಎಲ್ಲಿ ಸಿಕ್ದ?... ಯಾರೋ ಹೊಡೆದಿದ್ದಾರೆ ನೋಡು. ಕೈ ಬೆರಳು ಗುರುತಿದೆ... ಕೆನ್ನೆ ಊದಿದೆ. ಅವರ ಕೈ ಸೇದಿ ಹೋಗ..." ತಾಯಿ ಶಪಿಸಿದಳು ಮಂಗಳಾ ತನ್ನ ಕೈಯನ್ನು ನೋಡಿಕೊಂಡಳು. ಅವಳಿಗೂ ಬೇಸರವಾಗಿತ್ತು... ಅಸಹನೆಯಿಂದ ತಾನು ಹೊಡೆಯಬಾರದಾಗಿತ್ತು... ಇಷ್ಟು ದಿನವೇ ನೋಡಿಕೊಂಡನಂತೆ... ಇನ್ನು ಕೆಲವೇ ತಿಂಗಳು... ಮದುವೆ ಮಾಡ್ಕೊಂಡು ಹೊರಟು ಹೋದ್ಮೇಲೆ... ಇವನನ್ನು ತೊಡೆ ಮೇಲೆ ಕೂರಿಸ್ಕೊಂಡು, ಆಟ ಕೂಡಾ ಆಡಿಸುಕ್ಕೆ ಆಗುಲ್ಲ." ತನ್ನಕೃತ್ಯಕ್ಕೆ ಹೀನಾಯವೆನಿಸಿತ್ತು, ಅಡಿಗೆ ಮನೆಗೆಹೋಗಿ ಡಬ್ಬಿಗಳನ್ನು ತೆಗೆದು ಹುಡುಕಿ, ಕಲ್ಲು ಸಕ್ಕರೆಯನ್ನು ತಂದು ಅವನ ಬಾಯಿಗಿಟ್ಟು ಎತ್ತಿಕಂಡಳು.

"ಕುಡಿಯುಕ್ಕೆ ಹಾಲನ್ನು ಕೊಟ್ಟು, ತಟ್ಟಿ ಮಲಗಿಸು... ಬಿಸಿಲಲ್ಲಿ ಅಲೆದು ಮೈಯೆಲ್ಲಾ ಬಿಸಿಯಾಗಿದೆ." ಅವನನ್ನು ಎತ್ತಿಕೊಂಡು ಅಡಿಗೆ ಮನೆಗೆ ನಡೆದಳು. ತನ್ನ ಕೈ ಬೆರಳು ಊರಿ ಗುರುತಾಗಿದ್ದ ಜಾಗಕ್ಕೆ ಮುತ್ತಿಟ್ಟಳು...

"ಇನ್ಮೇಲೆ ಹೊಡೆಯುಲ್ಲ ಕಣೋ..." ಎನ್ನುತ್ತಾ ಮತ್ತೆ ಮತ್ತೆ ಮುತ್ತಿಟ್ಟಳು.

○ ○ ○

ಜೋಷಿಗಳ ಮಗಳ ಮದುವೆಯ ನೆಪದಲ್ಲಿ ವಠಾರವೆಲ್ಲಾ ಚೊಕ್ಕಟವಾಗಿತ್ತು. ಉಬ್ಬು ತಗ್ಗುಗಳಿದ್ದ ನೆಲವನ್ನು ಸಮತಟ್ಟು ಮಾಡಿ, ಹಸುವಿನ ಸಗಣಿ ಹಾಕಿ ಸಾರಿಸಿ, ಶುಚಿಗೊಳಿಸಿದ್ದರು. ಅಲ್ಲಲ್ಲೇ ಮರದ ಕಂಬಗಳನ್ನು ನೆಟ್ಟು, ಚಪ್ಪರವನ್ನು ಮಜ

ಬೂತಾಗಿ ಕಟ್ಟಲಾಗಿತ್ತು. ಮಾವಿನ ಸೊಪ್ಪಿನ ತೋರಣಗಳಿಂದ ಅಲಂಕರಿಸಲಾಗಿತ್ತು...

"ದತ್ತ ಬರ್ಲೇ ಇಲ್ಲ ನೋಡ್ರಿ ಅಕ್ಕ... ಮನಿ ಮಗ ಅವ ಬಂದಿಲ್ಲ ಅಂದರ ಏನು ಚಂದ...? ದೂರದ ಊರಾಗೆ ನಿಂತ್ರೆ ಆಗೋದೇ ಹೀಂಗ... ನಾ ಆಗ಼್ಲೇ ಬ್ಯಾಡಾ ಅಂದೀ... ನನ ಮಾತು ಯಾರೂ ಕೇಳ್ಲಿಲ್ಲ... ಸಮಯಕ್ಕೆ ಬರೂ ಹಂಗೂ ಇಲ್ಲ."

"ಮೊನ್ನಿ ಮೊನ್ನಿ ಬಂದು ಹೋಗಾನ... ಸೂಟಿ ಸಿಗಬೇಕಲ್ಲ ಏನು ಪಾಡೋ ಎರಡು ದಿನದ ರಜ ಹಾಕಿ ಬರ್ತೀನಿ ಅಂದಾನಲ್ಲ... ಬರ್ತಾನೆ ಬಿಡು... ನೀಯಾಕೆ ಚಿಂತಿ ಮಾಡೀಯ....?" ವಾರಗಿತ್ತಿಗೆ ಸಮಾಧಾನ ಹೇಳಿದಳು.

"ಹೆಂಗಾಗ್ತದೋ ಅಂತ ದಿಗಿಲಾಗ್ತದೆ ಅಕ್ಕಾ... ಛತ್ರದ ಗೋಡೆ ಕುಸಿದು ಅಪಶಕುನ ಆಗದೆ... ಏಟೊಂದು ರೊಕ್ಕ ಖರ್ಚು ಮಾಡೇವಿ... ನಮ್ಮ ಸುಧಾಳ ಹಣ್ಯಾಗಿ ಏನು ಬರೆದದೋ ಎಂಥದೋ... ಎಲ್ಲಾ ವೈನಾಗಿ ನಡದ್ರೆ ಸಾಕಾಗಿದೆ..."

"ಕುಲ ದೇವರ್ಗೆ ಹರಕೆ ಹೊತ್ತೀಯೋ ಇಲ್ವೋ... ಅವನೇ ಎಲ್ಲಾ ನೋಡ್ಕೋತಾನೆ ತೆಗಿ..."

"ಅಕ್ಕ, ಸುಧಾ ಜತಿ ಹೋಗಿ ನಾಲ್ಕುದಿನ ನೀವು ಇದ್ದು ಬನ್ನಿ. ಅಲ್ಲಿ ಆಕಿಗೆ ಹೊಸ ಜಾಗ ಆಗಿರ್ತದ... ನೀವು ಜತೆಗಿದ್ರ ಆಕಿಗೂ ಧೈರ್ಯ ಇರ್ತದ..."

"ನಾನ್ಯಾಕ ಹೋಗ಼್ಲೇ ಹುಚ್ಚೀ... ಅವಳ ಗಂಡ ಇರ್ತಾನಲ್ಲ. ಬೇರೆ ಯಾರ ಬೇಕ ? ನಿಂಗಷ್ಟು ಕಾಳಜಿ ಇದ್ದರ ನೀನೇ ಹೋಗಿ ಬಾರವ್ವಾ... ನಾನಂತೂ ಎಲ್ಲೂ ಹೋಗಾಕಿಲ್ಲ..."

"ನಾ ಹೋಗ್ತೇನಿ..." ಸೀತ ತಕ್ಷಣ ನುಡಿದಳು.

"ನೀ ಹೋಗು ಹಂಗಿಲ್ಲ... ನೀ ಹುಡುಗಿ ಅದಿ..." ಇಬ್ಬರೂ ಒಟ್ಟಿಗೇ ನುಡಿದಾಗ ಅವಳು ಮುಖ ಊದಿಸಿಕೊಂಡು ಹೋದಳು.

"ಅಣ್ಣ ಬಂದ... ಅಣ್ಣ ಬಂದ" ಎಂದು ಕುಣಿಯುತ್ತಾ ಒಳಕ್ಕೆ ಓಡಿ ಬಂದಳು.

"ಕುದುರಿ ಹಂಗ ಬೆಳಿದೀಯ ಅದ್ಯಾಕೆ ಹಂಗೆ ಕುಣಿದೀಯ... ಲಗ್ನದ ಮುಂದ ಕೈಯೋ ಕಾಲೋ ಮುರಿಕೊಂಡೀಯ... ನಗಸಾರ ಮಾಡಿಯೇನು?"

"ಇಲ್ಲವ್ವಾ ಖರೇನ... ಅಣ್ಣ ಬಂದ... ಕುದುರಿ ಗಾಡಿ ಮ್ಯಾಗೆ ಬಂದಾನ... ಬೇಕಾದ್ರ ನೀನೇ ಹೋಗಿ ನೋಡ ಬಾ..." ಇಬ್ಬರೂ ಓರಗಿತ್ತಿಯರು ಹೊರಗೆ ಬಂದರು... ದತ್ತ ಜಟಕಾದಿಂದ ಸಾಮಾನುಗಳನ್ನು ಇಳಿಸುತ್ತಿದ್ದ.

"ಹೌದಲ್ಲೇ... ದತ್ತ ಬಂದೇ ಬಿಟ್ಟನಾ... ಛಲೋ ಆತು... ನನ್ನ ಎದಿಗೆ ಈಗ ಸಮಾಧಾನ ಬಂತು... ಬಾರೋ ದತ್ತಣ್ಣಾ... ಬಾರೋ ಬಾಳಾ..." ತಾಯಿ ಉತ್ಸಾಹ ದಿಂದ ನುಡಿದಳು. ಅವರಿಬ್ಬರ ಹಿಂದೆ ರಾಧಾ ಸಹ ಬಂದು ನಿಂತಿದ್ದಳು. ಅವಳ ಕಣ್ಣು

ಗಳು ಮಿಂಚಿದವು. ದತ್ತ ಸಾಮಾನುಗಳೊಂದಿಗೆ ಬಂದು, ತಾಯಿಗೂ, ದೊಡ್ಡಮ್ಮನಿಗೂ ನಮಸ್ಕರಿಸಿದ.

"ಈಗ ಮದುವಿ ಮನಿಗೆ ಕಳಿ ಬಂತಪ್ಪಾ... ಬಿಕೋ ಬಿಕೋ ಅಂತಿತಪ್ಪಾ..." ತಾಯಿ ಮಗನ ಮೈದಡವಿ ನುಡಿದಳು...

"ಎರಡೇ ದಿನ ರಜ ಅಂತ ಪತ್ರ ಬರೆದು ಹೆದರಿಸಿದ್ಯಲೋ ಅಪ್ಪಾ..."

"ಹೌದು ಕಕ್ಕೀ... ಬೇಡಿ ಬೇಡಿ ಇನ್ನೆರಡು ದಿನ ರಜ ಮಂಜೂರು ಮಾಡಿಸ್ಕೊಂಡು ಬಂದೀನಿ... ಲಗ್ನದ ದಿನ ರಾತ್ರಿಯೇ ನಾನು ಹೊರಟು ಬಿಡ್ಬೇಕಾಯ್ತೈತಿ...

"ಏನೋಪ್ಪಾ... ಯಾವಾಗ್ಲೂ ಹಿಂಗೇ ಆತು... ಬರೋದು... ಹೋಗೋದು... ಇದ್ದಂಗೆ ಆಗಾದೇ ಇಲ್ಲ... ಈ ಪ್ರಾಂತ್ಯಕ್ಕೆ ವರ್ಗ ಮಾಡಿಸ್ಕೋ ಬಾರ್ದ್ಬಾನೇಪ್ಪಾ..."

"ಹೂಂ, ನೋಡಾವ... ಈಗಂತೂ ಸಧ್ಯಕ್ಕೆ ಅಲ್ಲೇ ಇರಾವ... ಎಲ್ಲಿ ಮದು ಮಗಳು?... ಮನೀಲಿಲ್ಲೇನು?" ಎನ್ನುತ್ತಾ ಒಳಬಂದ. ಬಾಗಿಲ ಬಳಿ ನಿಂತ ರಾಧಾಳನ್ನು ಕಂಡ..."ಹೆಂಗಿದೀಯೇ ರಾಧಾ..." ಪ್ರಶ್ನಿಸಿದ ಅವಳು ಸುಮ್ಮನೆ ತಲೆಯಾಡಿಸಿದಳು.

"ಅವಳನ್ನು ನೋಡು ಹೆಂಗಾಗ್ಯಾಳೆ... ಪಾಪ... ಸೊಸಿಗೆ ಕೂಳು ಹಾಕೋದೇ ಇಲ್ಲ ಅಂತ ಮಂದಿ ತಿಳ್ಕೊಬೇಕು... ನಮಗೆ ಅಪಖ್ಯಾತಿ. ನೀನಾರ ಅಷ್ಟು ಬುದ್ಧಿ ಹೇಳಪ್ಪಾ... ನಿನ್ನ ನೆನಸ್ಕೋತಾ ಅಳತಾಳ..."

"ಹೌದೇನೇ ರಾಧಾ... ಹಂಗ್ಯಾಕೆ ಮಾಡೀಯ...? ನಾ ಹೇಳಿಲ್ಲೇನು... ನಾ ಇರೋದು ಅಲ್ಲೇ ಅಂತ... ಮತ್ಯಾಕ ಕೊರಗೀಯ...?

"ಈಗ ನಿನ ಗಂಡ ಬಂದಾನಲ್ಲ... ಕೈ ಕಾಲು ಮೋರೆ ತೊಳೆಯೋಕೆ ಬಿಸಿ ನೀರು ಕೊಡು... ತಟ್ಟೆ ಹಾಕಿ ಉಣಬಡಿಸು... ಅಥವಾ ಅದನ್ನು ನಾನೇ ಮಾಡ್ಲೋ..."

"ಬೇಡವ್ವಾ... ಅವಳೇ ಮಾಡ್ತಾಳೆ. ನೀ ಕುಂದ್ರು." ಮಗ ನುಡಿದು ಸಾಮಾನುಗಳನ್ನು ಕೆಳಗಿಟ್ಟು, ಬಟ್ಟೆ ಬದಲಾಯಿಸಿ, ಬಚ್ಚಲು ಮನೆಗೆ ಬಂದ. ರಾಧಾ ಅವನ ಹಿಂದೆಯೇ ಬಂದಳು. ದತ್ತ ಅವಳ ಬಳಿ ಸಾರಿ, ಅವಳ ಕೈಹಿಡಿದ. ಅವಳು ಅತ್ತಳು.

"ಯಾಕ ಅಳ್ತೀಯೇ ರಾಧಾ... ಇಲ್ಲಿ ನಿಂಗೇನು ಕಡಿಮೆ ಆಗದ?..."

"ನನ್ನನ್ನು ತವರು ಮನಿಗಿ ಕಳಿಸಿ ಬಿಡ್ರಿ... ಇಲ್ಲಿ ನನ್ನ ಮನಸು ಒಗ್ಗೂದಿಲ್ಲ."

"ಏನಾಯ್ತದ? ಅವ್ವ ಬೈತಾಳೇನು? ನಾನು ಅವ್ವಗ ಹೇಳ್ತೀನಿ."

"ಏನೂ ಬ್ಯಾಡ್ರೀ... ನಾನು ಅಲ್ಲೇ ಇರ್ತೀನಿ... ನೀವು ಬಂದಾಗ ತಿಳಿಸ್ರಿ ನಾ ಬರತೇನಿ..." ಹೇಳುತ್ತಾ ಹೇಳುತ್ತಾ ಅವಳ ಕಣ್ಣೀರು ಇಳಿಯಿತು.

"ಸರಿ ಲಗ್ನಕ್ಕೆ ನಿಮ್ಮಪ್ಪ, ನಿಮ್ಮವ್ವ ಬರ್ತಾರಲ್ಲೋ... ಅವರ ಕೂಡ ಹೋಗುವಂತಿ ನಾ ಅವ್ವಗ ಹೇಳ್ತೀನಿ. ಈಗ ನೀ ಅಳಬ್ಯಾಡ, ನಾ ಬಂದೀನಲ್ಲ. ನಗು ನಗುತಾ

ಉಣಬಡಿಸು ಮತ್ತ. ಸಂಜೀ ಮುಂದೆ ಪ್ಯಾಟಿಗೆ ಹೋಗೋಣು... ನಿಂಗೆ ಏನು ಬೇಕೋ ಅದನ್ನು ಖರೀದಿ ಮಾಡುವಂತೆ..." ಅವಳನ್ನು ಎದೆಗೊರಗಿಸಿಕೊಂಡ.

"ಬಿಡ್ರೀ ಯಾರಾರೂ ಕಂಡಾರು" ಅವನ ಅಪ್ಪುಗೆಯಿಂದ ಬಿಡಿಸಿಕೊಂಡಳು. ಇಲ್ಲಿ ಬಿಸಿನೀರಿದೆ. ಲಗೂನೆ ಮಾರಿ ತೊಳೆದು ಬರ್ರಲಾ... ನಾನು ತಟ್ಟೆ ಇಟ್ಟು ಉಣ ಬಡಿಸ್ತೀನಿ." ಎನ್ನುತ್ತಾ ಅಲ್ಲಿಂದ ಹೊರಬಂದಳು... ಮುಖದಲ್ಲಿ ಗೆಲವು ಮೂಡಿತ್ತು.

ಊಟ ಆದ ನಂತರ, ದತ್ತ ಎಲ್ಲರೊಡನೆ ಕೂತು ಮಾತನಾಡಿದ್ದ. ತಾನು ಡೆಲ್ಲಿಯಿಂದ ತಂದಿದ್ದ ಸಣ್ಣಪುಟ್ಟ ಸಾಮಾನುಗಳನ್ನು ತೆಗೆದು ತಾಯಿಯ ಕೈಗಿತ್ತ."ಅವ್ವಾ ನೀನೇ ಎಲ್ಲರಿಗೂ ಹಂಚಿಬಿಡು" ಎಂದ. ಆಕೆ ತೆಗೆದಿಟ್ಟುಕೊಂಡಳು."ಅವ್ವಾ... ಸಂಜೀ ಮುಂದ, ನಾನು ಪ್ಯಾಟಿ ಕಡೆ ಹೋಗೋವನಿದ್ದೀನಿ. ಏನು ಸಾಮಾನು ಬೇಕೋ ಪಟ್ಟಿ ಮಾಡಿಕೊಡು... ತಂದು ಬಿಡ್ತೀನಿ."

"ಎಲ್ಲಾ ಸಾಮಾನು ತರಿಸ್ಯಾಗಿದೆ. ಎಲ್ಲಾವನ್ನು, ರಿಪೇರಿ ಮಾಡ್ಸಿದ್ಯಲ್ಲ ಆ ಮನೀಲಿ ಇಟ್ಟಾಗಿದೆ... ಅದನ್ನೆಲ್ಲಾ ನಿಮ್ಮಪ್ಪ, ಕಕ್ಕಾ ನೋಡ್ಕೊಂಡಾರಾ... ನೀನು ಇನ್ನೂ ಎರಡು ದಿನ ಬಿಟ್ಟು ಬರೋವನಿದ್ದಿ... ನಿಂಗೋಸ್ಕರ ಕೆಲಸ ಇಟ್ಕೊಳಕ್ಕಾಗ್ತಿತ್ತಾ?.... ಆಮ್ಯಾಕೆ ನೀನೇ ಹೋಗಿ, ಏನೇನು ಬಂದದೆ ಬಂದಿಲ್ಲ ಅಂತ ಒಂದ್ಸಾರಿ ನೋಡ್ಬಿಡು..."

"ಅಲ್ಲವ್ವಾ, ಛತ್ರದಾಗ ಲಗ್ನ ತುಸು ಸುಲಭ ಆಗ್ತಿತ್ತು ಹೌದಲ್ಲೋ... ಇಲ್ಲಿ ಚಪ್ಪರದಡಿ ತ್ರಾಸ ಆಗೂದಿಲ್ಲೇನು? ಮಳಿ ಬಂದು ಗಾಳಿ ಬೀಸಿದ್ರೆ ಏನ್ಮಾಡ್ತೀರಿ?..."

"ಮಳಿ, ಗಾಳಿ ಏನೂ ಕೊಡ್ಬೇಡ್ಯೋ ನಮ್ಮಪ್ಪ ಅಂತ ದೇವರಿಗೆ ಹರಕೆ ಕಟ್ಟಿಟ್ಟಿ ದೀನಿ... ಮನೆ ಮಾಲೀಕರು ಒಪ್ಗೆ ಕೊಡ್ದೇ ಇದ್ದಿದ್ರೆ ಏನ್ಗತಿ ಅಂತ ಚಿಂತೆ ಆಗಿತ್ತು."

"ಅದಕ್ಕೆ ಚಿಂತಿ ಯಾಕ ? ಲಗ್ನ ಮುಂದೂಡಿದ್ದರೆ ಆಗ್ತಿತ್ತು..."

"ಹಂಗೆಲ್ಲಾ ಮುಂದೂಡ್ಬಾರ್ದು ಬಾಳಾ ಮುಹೂರ್ತ ಅಂತ ಒಂದು ಇರ್ತದ... ಅದ ಬಿಟ್ರೆ ಒಳ್ಳೇದಲ್ಲ... ಬೀಗರ ಮನೆಯಿಂದ ಕೂಡಾ ಆ ಮಾತು ಬರ್ಲಿಲ್ಲ. ಹಿಂಗೆ ಮನೀ ಮುಂದೆ ಚಪ್ಪರದ ಕೆಳಗೆ, ಧಾರೆ ಎರೆದು ಕೊಡ್ತೀವಿ ಅಂದಪ್ಪಕ್ಕ ಸೈ ಅಂದ್ರು... ಅವರ್ದೂ ಒಪ್ಗೆ ಅದ..."

"ಒಪ್ಗೆ ಆಗ್ದೇ ಏನ್ಮಾಡ್ತಾರೆ?... ನಮ್ಮ ಸುಧಾನ ಕಂಡಾಗ್ನಿಂದ ಯಾವಾಗ ಮನೆ ತುಂಬಿಸಿಕೊಂಡೇವೋ ಅಂತ ತುದಿಗಾಲಲ್ಲಿ ನಿಂತಾರೆ ಕಕ್ಕಿ ನಕ್ಕಳು"

"ಸುಧಾ ಎಲ್ಲವ್ವಾ, ಇನ್ನು ಬರ್ಲಿಲ್ಲ..."

"ಗೆಳತಿ ಮನಿಗೆ ಹೋಗ್ಯಾಳ... ಎಲ್ರೂ ಕೂಡಿ ಹರಟೆ ಹೊಡೀತಾ ಕುಂದಿರ ಬಹುದು... ಗಂಡನ ಮನಿಗೆ ಹೋದ್ಮೇಲೆ ಅವರೆಲ್ಲಾ ಮತ್ತೆಲ್ಲಿ ಸಿಕ್ಕಾರು ? ... ಹಂಗೇ ಅವರನ್ನೆಲ್ಲಾ ಲಗ್ನಕ್ಕೆ ಕರೆದು ಬರ್ತಾಳಂತ."

"ಸರಿ... ನಾನು ಒಂದು ಗಳಿಗೆ ಆರಾಮ ಮಾಡ್ತೀನಿ. ರಾಧಾ... ನಂಗ ಬಿಸಿ ಬಿಸಿ

ಕಾಫಿ ತಂದ್ಕೊಡು, ನಾನು ಉರುಳಿರ್ತಿನಿ." ಅವನು ರೂಮಿಗೆ ಹೋಗಿದ್ದ.

"ಎಲ್ರಿಗೂ ಕಾಫಿ ಮಾಡಿಬಿಡೇ ರಾಧಾ... ನಾಳೆಯಿಂದ ನಿಂಗೆ ಕೆಲಸ ಕಡಿಮೆ ಆಗ್ತದ. ಬೆಳಿಗ್ಗೇನೇ ಅಡಿಗೆಯವರಿಗೆ ಬರ್ಲಿಕ್ಕೆ ಹೇಳ್ಯಾರ... ಕೆಲಸದವರು ಬರ್ತಾರಾ... ಊರ್ನಿಂದ ಚಿಗಪ್ಪ, ಅಬುಚಿ ಬರೋರಿದ್ದಾರ. ಅಣ್ಣ ತಮ್ಮನ ಮನೆಯವ್ರು ಬರೋರಿ ದ್ದಾರ, ನೀನು ನಿನ್ನ ಗಂಡನ ಯೋಗಕ್ಷೇಮ ನೋಡ್ಕೋ ಸಾಕು..." ರಾಧಾ ನಾಚಿಕೆ ಗೊಂಡು ಒಳಗೆ ಹೋಗಿದ್ದಳು.

"ಗಂಡನ ಮೋರೆ ಕಂಡ ಕೂಡ್ಲೆ... ಮುಖ ಲಕ್ಷಣ ಬದಲಾಗಿದೆ.. ನೋಡಿದ್ಯಾ ಅಕ್ಕಾ... ನಾಲ್ಕು ದಿನ ಗಂಡ ಹೆಂಡತಿ ಒಟ್ಟಿಗಿರಲಿ... ಈ ಬಾರಿಯಾದ್ರೂ... ಸಿಹಿ ಸುದ್ಧಿ ಬರಲಿ... ಹೆಂಗೂ ಎರಡೆರಡು ಮನಿ ಬಿಡಿಸ್ಕೊಂಡ್ಯಾರ... ಅದರಾಗೆ ಒಂದು ಕ್ವಾಣೇನ ಇವರಿಬ್ಬರಿಗೆ ಬಿಟ್ಟು ಕೊಟ್ರೆ ಆತು..'

"ಕ್ವಾಣೇನ ಬಿಟ್ಟು ಕೊಟ್ರು, ಮಲಗ್ಲಿಕ್ಕೆ ಸಮಯ ಬೇಕಲ್ಲೇ ತಂಗ್ಯವ್ವಾ... ನಾವು ಹುಡುಗಿ ಕಡೆಯೋರು... ತುರಿಸ್ಕೊಳ್ಳೋಕೂ ವ್ಯಾಳಿ ಇರುಲ್ಲ.

"ಹೌದಲ್ವಾ ಅಕ್ಕಾ ನಾ ಮರತೇನಿ... ಆದ್ರೂ, ರಾಧನ್ನ ತಂದೆ ತಾಯಿ ಲಗ್ನಕ್ಕೆ ಬಂದೋರು ಮಗಳನ್ನು ಕಂಡು ಏನಂದ್ಕೊಂಡಾರು?... ಅವರೇನಾದ್ರೂ ನಮ್ಮ ಸಂಗ ಕಳಿಸ್ಕೊಡಿ ಅಂದ್ರೆ ಕಳಿಸ್ಬಿಡ್ತೀನಿ... ಅಲ್ಲೇ ಇರ್ಲಿ... ಈ ಬಾರಿ ಗರ್ಭಿಣಿ ಆಗದಿದ್ರೆ, ದತ್ತಗೆ ನಾನು ಮತ್ತೊಂದು ಲಗ್ನ ಮಾಡ್ತೀನಿ ಅಷ್ಟೆ..." ಕೆಳದನಿಯಲ್ಲಿ ನುಡಿದಳು.

"ಮೆಲ್ಲಗೆ ಮಾತಾಡೇ ಮಾರಾಯ್ತಿ... ಇತ್ತ ದತ್ತ ಮನಗ್ಯಾನೆ. ಅತ್ತ ಅಡಿಗಿ ಮನೀಲಿ ಆ ಹುಡ್ಗಿ ಇದಾಳೆ... ಮೊದಲು ಮಂಗಳಕಾರ್ಯ ನೆಟ್ಟಗಾಗಲಿ... ನಿನ್ನ ಮಾತು ಯಾರ ಕಿವಿಗೇನಾದ್ರೂ ಬಿದ್ರ ಅದೇ ಒಂದು ದೊಡ್ಡ ರಂಪ ಆಗ್ತೈತಿ... "ನಮಗ್ಯಾಕ ಕೆಟ್ಟ ಹೆಸ್ರು?"

"ನಂಗೂ ಮೊಮ್ಮಗನ್ನ ಎತ್ತಿ ಆಡಿಸ್ಬೇಕು ಅನ್ನೋ ಹಂಬಲಕ್ಕೆ ಹಿಂಗೆ ಮಾತಾಡ್ತೀನಿ ಅಕ್ಕ... ನಾಳೆಯಿಂದ ಮಾತಿನ ವರಸೇನೇ ಬದಲಾಗ್ತದೆ... ಊಟ ಉಪಚಾರಗಳ ಮಾತಿನಲ್ಲೇ ಸಮಯ ಕಳೆದ್ಹೋಗ್ತದೆ... ಒಂದು ಗಳಿಗಿ ನಿಲ್ಲಕ್ಕೂ ವ್ಯಾಳಿ ಎಲ್ಲಿರ್ತದ?"

"ಎಲ್ರೂ ಕೂಡ, ಮಾಡೋ ಸಿದ್ವತೆ ಕೆಲಸ ಭಾಳಷ್ಟಿವೆ. ಅಡಿಗೆಯೋರಿಗೆ ಹೇಳೋದನ್ನೆಲ್ಲಾ ಸರಿಯಾಗಿ ಹೇಳ್ಬೇಕು. ನಿಂತು ಮಾಡಿಸ್ಬೇಕು.. ಆ ಕೆಲಸಾನ, ನಿನ್ನ ತಮ್ಮಗೋ, ಅಣ್ಣಗೋ ವಹಿಸ್ಕೊಡು ನಿನ್ನ ತಂಗಿ ತಂಗಿ ಗಂಡಗೆ, ಉಗ್ರಾಣದ ಕೀಲಿ ಕೈಯನ್ನು ಕೊಡು. ಅಣ್ಣ, ಶಿಸ್ತುಗಾರನ ಹಾಗೆ, ಮದುಮಗಳನ್ನು ಹಸೀಮಣೆ ತನಕ ಕರ್ಕೊಂಡು ಬರಲಿ. ಅರಿಶಿನ ಕುಂಕುಮ ತಾಂಬೂಲ ಉಡುಗೊರೆ ಈ ಕೆಲಸನೆಲ್ಲಾ ನಿನ್ನ ಅತ್ತಿಗೇರಿಗೆ ಒಪ್ಪಿಸು... ಎಲ್ಲಾ ನಾವೇ ಮಾಡೋಕೆ ಆಗುತ್ತಾ?... ನೀನು

ಹಸೆಮಣೇ ಮೇಲೆ ಬೇರೆ ಕುಂದರಬೇಕು... ನಿನ್ನ ಹೊಸಾ ಸೀರಿ ಕುಪ್ಪಸ ಎಲ್ಲಾದನ್ನು ಕೈಗೆ ಸಿಗೂಹಂಗೆ, ಕಣ್ಣಿಗೆ ಕಾಣೂಹಂಗೆ ತೆಗೆದಿಡು... ಅವಸರದಲ್ಲಿ ಹುಡುಕೋ ಹಾಂಗೆ ಮಾಡ್ಕೋಬೇಡ..." ಹೀಗೆ ತನಗೆ ತಿಳಿದ ಸಲಹೆಗಳನ್ನಿತ್ತಳು.

ಕಾಫಿ ಮುಗಿಸಿ, ದತ್ತ ಮುಂಬಾಗಿಲಿಗೆ ಬಂದು ನಿಂತ. ಸಹಜವಾಗಿ ಅವನ ಕಣ್ಣು ನೋಟ ಎದುರು ಮನೆಯತ್ತ ಹರಿಯಿತು. ಬಾಗಿಲು ಹಾಕಿತ್ತು. ಬಾಗಿಲು ಬಡಿದು ಹೊರಕ್ಕೆ ಕರೆದು ಮಾತನಾಡಿಸುವುದು ಸರಿಯಲ್ಲ ಅಂತ ಎಂದುಕೊಂಡರೂ, ಮಂಗಳ ಕಣ್ಣಿಗೆ ಬೀಳುವಳೇನೋ ಅಂತ ಕಾದು ನೋಡಿದ. ಬಾಗಿಲು ತೆಗೆಯಲಿಲ್ಲ. ಹಾಗೇ ಜೇಬಿನೊಳಕ್ಕೆ ಕೈ ಇಳಿ ಬಿಟ್ಟು ವಠಾರದ ಮೂಲೆಯಲ್ಲಿದ್ದ ಟೀಚರ್ ಮನೆಯ ಕಡೆ ನಡೆದ. ಆ ಮುದುಕರು ಹೇಗಿದ್ದಾರೋ... ಮಾತನಾಡಿಸಬೇಕೆಂದುಕೊಂಡು ಬಾಗಿಲ ಬಳಿಗೆ ಬಂದ... ಬಾಗಿಲಿಗೆ ಬೀಗ ಹಾಕಿತ್ತು. ನಿರಾಸೆಯಿಂದ ಹಿಂತಿರುಗಿದ.

"ಬಿಸಿಲ್ನಾಗೆ ನಿಂತು ಯಾಕೆ ದಣೀತೀಯೋ ? ಒಳಗೆ ತಣ್ಣಗೆ ಕುಂದ್ರ ಬಾರ್ಪಾ." ತಾಯಿ ಆಕ್ಷೇಪಿಸಿದಳು.

"ಇದೆಂಥಾ ಬಿಸಲಲ್ವಾ... ನಮ್ಮೂರ ಕಡಿ ನೋಡ್ಬೇಕು... ರಣ ಬಿಸಿಲು... ಹಂಗೇ ತಲೆ ಸುತ್ತಿ ಬರುತ್ತೈತಿ... ಮೈಯೆಲ್ಲಾ ಬೆವೆತು ಅಂಟತ್ತೈತಿ... ಬೆನ್ನ ಮ್ಯಾಗೆ ಬಿಸಿಲು ಗುಳ್ಳಿ ಏಳತಾವು... ಹಿಂಸಿ... ಹಿಂಸಿ... ಎರಡೆರಡು ಬಾರಿ ತಣ್ಣೀರಾಗೆ ಸ್ನಾನ ಮಾಡಿದ್ರೂ ನಿರಾಳಾಗೂದಿಲ್ಲ..."

"ಅಂಥಾ ಊರ್ನಗೆ ಜನ ಹೆಂಗಿದಾರೋ...? ನಿಂಗೇನು ಕರ್ಮವೋ ದತ್ತ... ? ಇತ್ಲಾಗೇ ಒಂದು ಕೆಲಸ ಹುಡುಕ್ಕಪ್ಪಾ... ಮನೀ ಮಾಲಿಕರ ಮಗ ಚಂದ್ರಮೌಳಿ ಈ ಊರ್ನಾಗೇ ಕೆಲಸ ಹುಡುಕ್ತಾ ಅದಾನಂತ ನೀ ನೋಡೀಯೇನು ಅವನ್ನ.../"

"ಇಲ್ಲವ್ವಾ ನಾನೆಲ್ಲಿ ನೋಡೀನಿ... ಅವರಿಗೆ ಒಬ್ಬ ಮಗ ಇದ್ದಾನ ಅನ್ನೋ ಸುದ್ದೀನೇ ಹೊಸದು ನಂಗ..."

"ಅವ ಸ್ವಂತ ಮಗನಲ್ಲಂತೆ. ದತ್ತು ಮಗ ಅಂತೆ ಇಲ್ಲಿ ಇರ್ಲೇ ಇಲ್ಲ... ಬ್ಯಾರೆ ಊರ್ನಗೇ ಇದ್ದುಕೊಂಡು ಓದ್ಯಾನ... ಅಲ್ಲೇ ಕೆಲ್ಸದಾಗೂ ಇದ್ನಂತ..."

"ಇಷ್ಟೆಲ್ಲಾ ಕತೀನ ನಿಂಗ್ಯಾರು ಹೇಳಿದ್ರವ್ವಾ...?"

"ಮಾಲಿಕರ ತಾಯಿ ಬಂದಾರ... ಆಕಿಗೆ ಮಾತು ಬೇಕು... ಆಗ ಈಗ ಬಂದು ಮಾತಾಡ್ತಾರ... ನಮ್ಮ ಮನಿ ಲಗ್ನಗೋಸ್ಕರ ಉಳಿಕೊಂಡಾರ... ಲಗ್ನ ಆಗ್ತಿದ್ದ ಹಾಗೇ ವಾಪಸ್ಸು ಹೋಗ್ತಾರಂತ... ಆಕೀ ಬಂದದ್ದಕ್ಕ... ನಮಗೆ ವಠಾರದಾಗಿನ ಎರಡು ಖಾಲಿ ಮನಿಗಳು ಬಿಡುವಾಗಿ ಸಿಕ್ಕವು... ಇಲ್ದಿದ್ರ ಆ ಯಜಮಾನಿತಿಗೆ ಫಸಂದೇ ಇರ್ಲಿಲ್ಲ... ಇಲ್ಲಿ ಲಗ್ನ ಮಾಡೋದೇ ಬೇಡ ಅಂತ ಹೇಳಿದ್ರು... ಈಗ ಮನೀನ ನಾವೇ ರಿಪೇರಿ ಮಾಡಿಸಿದೀವಿ... ಸುಣ್ಣ ಬಣ್ಣ ಹೊಡೆಸಿದೀವಿ..."

"ಇದಕ್ಕಿಂತ ಆ ಮನೆ ದೊಡ್ಡದಾಗಿದ್ರ ಅಲ್ಲಿಗೇ ಹೋಗೋಣವ್ವಾ ಕೇಳಿ ನೋಡು ಬಾಡಿಗೆ ಹೆಚ್ಚು ಕೇಳಿದ್ರೆ ಕೊಟ್ರಾಯ್ತು... ಇದು ಕಾರು ಷೆಡ್ಡು ಇದ್ದಂಗದ... ಮೇಲೆ ಶೀಟು ಹೊದಿಸ್ಯಾರ... ಇನ್ನೊಂದು ಕ್ವಾಣೆ ಎಲ್ಲೈತಿ... ಅಳಿಯ ಮಗಳು ಮನಿಗೆ ಬಂದ್ರ ಇಲ್ಲೇ ಎಲ್ಲರ ಕೂಡಾ ಹಾಲಿನಲ್ಲಿ ಮಲಗ್ತಾರೇನು ?... ಅಥವಾ ನನ್ನ ಹಂಗ ಅಡಿಗಿ ಮನೇಲಿ ಇಲಿಗಳ ಜತಿ ಮಲಗ್ತಾರೇನು?... ನಗುತ್ತಾ ಕೇಳಿದ.

"ಅದನ್ನೇ ನಾವೂ ಯೋಚನೆ ಮಾಡೀವಿ ಬಾಳಾ... ಲಗ್ನ ಆದ ಮೇಲೆ ವಿಚಾರ ಮಾಡ್ತೀವಿ. ಈಗ ಆಗೂದಿಲ್ಲ."

"ಹಂಗಾರ ನಾನು ಆ ಮನೀನ ನೋಡ್ಕೊಂಡು ಬರ್ತೀನಿ. ಕೀಲಿ ಕೈ ಎಲ್ಲದ?"

"ಕೀಲಿ ಕೈ ನಮ್ಮ ಹತ್ರ ಇಲ್ಲಪಾ... ಮಾಲೀಕರೇ ಇಟ್ಕೊಂಡಾರಾ... ನೀನೇ ಹೋಗಿ ಇಸ್ಕೊಂಡು ಬಾ... ಇವತ್ತು ರಾತ್ರಿ ನೀನು ನಿನ್ನ ಹೇಣ್ತಿ ಆ ಮನೆಯ ಕೋಣ್ಯಾಗ ಮಲಗ್ರಿ... ಯಾವ ಗದ್ದಲವೂ ಇರೂದಿಲ್ಲ."ನಸುನಗುತ್ತಾ ಅರ್ಥಗರ್ಭಿತವಾಗಿ ನುಡಿದಳು. ಅವನು ಉತ್ತರಿಸದೇ, ಗೋಪಾಲಯ್ಯನ ಮನೆಗೆ ಬಂದ. ಬಾಗಿಲಲ್ಲೇ ನಿಂತಿದ್ದ ಚಂದ್ರು ಪ್ರಶ್ನಿಸಿದ.

"ಯಾರು ನೀವು? ಯಾರು ಬೇಕಾಗಿತ್ತು?"

ದತ್ತ ಕೈ ಮುಗಿದ. "ನಾನು ದತ್ತಾತ್ರೇಯ ಜೋಷಿ ಅಂತ್ರೀ ಜೋಷಿಯವರ ಹಿರೀಮಗ... ಮಾಲಿಕರು ಇಲ್ಲೇನು?" ಕೇಳಿದ.

"ಕರೀತೀನಿ... ಇಲ್ಲೇ ಇರಿ" ಎಂದು ಹೇಳಿ ಚಂದ್ರು ಒಳಗೆ ಹೋದ. ಕೆಲವೇ ನಿಮಿಷಗಳಲ್ಲಿ ಅವನೊಂದಿಗೆ ಗೋಪಾಲಯ್ಯನೂ ಬಂದ. ದತ್ತ ಕೈಮುಗಿದ.

"ನಾನ್ರೀ ಜೋಷಿಯವರ ಹಿರೀಮಗರೀ, ಮಿಲಟರಿಯಲ್ಲಿ ನೌಕರಿಯಲ್ಲಿದ್ದೀನಿ... ರಾತ್ರಿಗೆ ಕೆಲವು ಮಂದಿ ನೆಂಟರು ಬರೋದ್ದಾರ್ರೀ... ಮನಿ ಕೀಲಿ ಕೈ ಬೇಕಿತ್ತರೀ... ಸ್ವಲ್ಪ ಚೊಕ್ಕಟ ಮಾಡಿಸಬೇಕಿತ್ತರೀ..."

"ಚಂದ್ರೂ... ಅಮ್ಮನ್ನ ಕೇಳು ಬೀಗದ ಕೈ ಕೊಡೋಣ್ವಾ ಅಂತ ? ಅಂತ ಕೆಳದನಿಯಲ್ಲಿ ಕೇಳಿ ಅವನನ್ನು ಕಳಿಸಿದ.

"ಇವರು ನಿಮ್ಮ ಮಗಾನೇನ್ರೀ... ನಾನು ಈ ಮೊದ್ಲು ಇವರನ್ನು ನೋಡಿದ್ದಿಲ್ಲ"

"ಇವನು ಇಲ್ಲಿ ಇಲ್ಲ, ಮೈಸೂರ್ನಲ್ಲಿದಾನೆ..."

"ಇವರು ಏನು ಮಾಡ್ತಾರ್ರೀ..."

"ಬೇರೆ ಕೆಲಸ ಹುಡುಕ್ತಿದ್ದಾನೆ... ಸಧ್ಯದಲ್ಲೇ ಸಿಗಬಹುದು..."

"ಮಿಲಿಟರಿಗೆ ಸೇರೋ ಆಶಿ ಇದ್ದರ ತಿಳಿಸ್ರೀ... ನಾನು ವಿವರ ವಿಳಾಸ ತಿಳಿಸ್ತೀನಿ."

"ಇಲ್ಲ, ಇವನು ನಮಗೆ ಒಬ್ಬನೇ ಮಗ... ಇವನ ತಾಯಿಗೆ ಇಷ್ಟವಾಗುಲ್ಲ." ಅಷ್ಟರಲ್ಲಿ ಚಂದ್ರು ಮನೆಯ ಬೀಗದ ಕೈಗಳನ್ನು ತಂದುಕೊಟ್ಟ.

"ಕೀ ಕಳೀಬಾರ್ದ್ಬಂತೆ ಜೋಪಾನವಾಗಿಟ್ಟುಕೊಳ್ಳಬೇಕಂತೆ... ಹಾಗೇ ಮನೆ ಕಿಟಕಿ ಬಾಗಿಲು ಎಲ್ಲಾ ಎಚ್ಚರದಿಂದ ಹಾಕಿ ತೆಗೆದು ಮಾಡ್ಬೇಕಂತೆ. ಏನಾದ್ರೂ ಹಾಳುಗೀಳು ಆದ್ರೆ ರಿಪೇರಿ ಖರ್ಚು ನೀವು ಕೊಡಬೇಕಾಗುತ್ತಂತೆ..." ಒಂದೇ ಉಸುರಿಗೆ ಹೇಳಿದ.

"ಹಾಗೇನೂ ಆಗುಲ್ಲ ಬಿಡ್ರೀ..." ದತ್ತ ನಗುತ್ತಾ ನುಡಿದು ಕೈ ಮುಗಿದು ಅಲ್ಲಿಂದ ತೆರಳಿದ, ಗೋಪಾಲಯ್ಯ ಮಗನ ಕಡೆ ತಿರುಗಿದ.

"ಅಮ್ಮ ಹೇಳಿದ್ದನ್ನು ನೀನು ಹೇಳ್ಬಾರ್ದಾಗಿತ್ತು ಚಂದ್ರೂ. ಎರಡೂ ಮನೆಯ ರಿಪೇರಿ ಸುಣ್ಣ ಬಣ್ಣ ಎಲ್ಲಾ ಅವರೇ ಮಾಡಿಸಿದ್ದಾರೆ... ಅವರು ಏನಂದ್ಕೊಳ್ತಾರೆ?"

"ನಂಗೇನ್ಗೊತ್ತಿತ್ತು?... ನೀವು ಅಮ್ಮ ಹೇಳಿದ ಹಾಗೇ ತಾನೇ ಕೇಳ್ತೀರಿ?. ನನಗೂ ಹಾಗೇ ಹೇಳಿದೀರಿ. ಏನು ಆಡಿದರೂ ತಪ್ಪು, ಆಡದಿದ್ದರೂ ತಪ್ಪು." ಅವನು ಗೊಣಗಿದ. ಗೋಪಾಲಯ್ಯ ಪೆಚ್ಚಾಗಿ ಮಗನ ಮುಖವನ್ನೇ ನೋಡಿದ.

"ವಠಾರಾ ಎಲ್ಲಾ ಕತ್ತಲೆ ಕತ್ತಲೆಯಾಗಿತ್ತು. ಗುಂಡಿ ಗೊಟರು ಸಹ ಕಾಣ್ತಿರಲಿಲ್ಲ. ಈಗ ಜೋಷಿಯವರ ಮನೆಯ ಮದುವೆಯ ಕಾರಣದಿಂದ ಗುಂಡಿ ಗೊಟರು ಸಹ ಮುಚ್ಚಿವೆ. ಎಲ್ಲಾ ಕಡೆಯ ದೀಪಗಳು ಸಹ ಸರಿ ಹೋಗಿವೆ." ರಾಮರಾಯ ತನಗೇ ಎಂಬಂತೆ ಹೇಳಿದ.

"ಏನು ಜನವೋ, ಮನೆ ಬಾಡಿಗೆ ಮಾತ್ರ ಸಮಯಕ್ಕೆ ಸರಿಯಾಗಿ ಇಸ್ಕೋತಾರೆ... ಇದನ್ನೆಲ್ಲ ಸರಿ ಮಾಡಿಸ್ಬೇಕು ಅಂತ ಗೊತ್ತಾಗ್ಬಾರ್ದಾ?"... ಮಕ್ಕಳು ಮರಿ ಬಿದ್ದು ಪೆಟ್ಟು ಮಾಡ್ಕೋತಾರೆ ಅನ್ನೋದು ಅವರಿಗೆ ಹೇಗೆ ಅರ್ಥವಾಗ್ಬೇಕು...? ಮನೇಲಿ ಅವರಿಬ್ರೇ ಅಂತೆ..." ಜಾನಕಿ ಎಂದಳು.

"ಹೌದಂತೆ ಅವರಿಗೆ ಮಕ್ಕಳಿಲ್ಲವಂತೆ ಸಂಗೀತ ಮೇಷ್ಟ್ರು ಹೇಳಿದ್ರು. ಯಾರೋ ಒಬ್ಬ ಹುಡುಗನ್ನ ಸಾಕಿಕೊಂಡಿದ್ದಾರಂತೆ ಅವನೂ ಜತೇಲಿಲ್ಲ. ಬೇರೆ ಊರ್ನಲ್ಲಿದಾನಂತೆ.

"ಜಿಪುಣರೂ ಅಂದ್ರೆ ಜಿಪುಣರು ವಠಾರದಲ್ಲಿ ಬೇಕಾದಷ್ಟು ಸೀಬೆ ಹಣ್ಣಿನ ಮರಗಳಿವೆ. ಅವತ್ತು ಇವನು ಹತ್ತಿ ಕೊಯ್ದುದ್ದಕ್ಕೆ ಬೈದು ಕಳಿಸಿದಾರೆ." ಮಂಗಳಾ ಎಂದಳು.

"ಮೆಲ್ಲಗೆ ಮಾತಾಡು ಕೇಳಿಸೀತು... ನೀನ್ಯಾಕೋ ಮರಾನ ಹತ್ತಿದ್ದೆ? ಹೇಳದೇ ಕೇಳದೇ. ಸಚ್ಚಿಯನ್ನು ಗದರಿ ಬೈದ.

"ಕುಸುಮ ಹಣ್ಣು ಬೇಕು ಅಂತಿದ್ಲು ಹತ್ತಿದ್ದೆ. ನನ್ನನ್ನು ಬೈದು ಮರದಿಂದ ಇಳಿಸಿ, ಇವನನ್ನು ಹತ್ತಿಸಿ ದಪ್ಪದಪ್ಪ ಹಣ್ಣುಗಳನ್ನು ಕಿತ್ತಿಸಿಕೊಂಡರು. ನಮಗೆ ಕೊಡಲೇ ಇಲ್ಲ. ಕುಸುಮಂಗೆ ಒಂದು ಕಸಕಟ್ಟೆ ಕಾಯೀನ, ಅದೂ ಕೆಳಗೆ ಬಿದ್ದಿದ್ದನ್ನು ಕೊಟ್ಟಿದಾರೆ. ಎಲ್ಲಾ ಅವರೇ ತಗೊಂಡು ಹೋದ್ರು."ಅವನು ಅಂದು ಅಣ್ಣನ ಕಡೆ ವಿಚಿತ್ರವಾಗಿ ನೋಡಿದ.

"ನಿನಗೆ ಹಾಗೇ ಆಗ್ಬೇಕು." ಜಲಜಾ ಹಂಗಿಸಿದಳು.

"ಅಣ್ಣ ಕಾಸು ಕೊಟ್ಟಿದ್ದರೆ, ನಾನು ಸ್ಕೂಲಿನ ಹತ್ರ ಹಣ್ಣು ಮಾರೋನ ಹತ್ರ ತಗೊಂಡು ತಿಂತಿದ್ದೆ... ಅಣ್ಣ ಕೇಳಿದ್ರೂ ಕಾಸನ್ನು ಕೊಡುಲ್ಲ..." ತಿನ್ಬೇಕು ಅಂತ ಆಸೆ ಆಗುಲ್ವಾ?"

"ಅದೆಲ್ಲಾ ದುರಭ್ಯಾಸ ಹಾಳೂ ಮೂಳೂ ತಿಂದು ಹೊಟ್ಟೆ ಕೆಡಿಸಿಕೊಂಡರೆ ಆರೋಗ್ಯ ಕೆಡುತ್ತೆ ಆಸ್ಪತ್ರೆಗೆ ಅಲೆಯೋರ್ಯಾರು ? ಸಂತೆಗೆ ಹೋದಾಗ, ನಾನೇ ಒಳ್ಳೆಯ ಹಣ್ಣುಗಳನ್ನು ತಂದ್ಕೊಡ್ತೀನಿ ತಿನ್ನೋರಂತೆ. ಅವರಿವರ ಮನೆ ಮರ ಹತ್ತಿ ಕದಿಯೋದನ್ನು ಯಾರೂ ಮಾಡ್ಬೇಡಿ... ತಿಳೀತಾ ?"

"ಮಾರ್ಕ್ಕೋತಾರೇನೋ...? ಹಣಕ್ಕೆ ಬರ ಬಂದಿದೆ ಅವರಿಗೆ..."ತಾಯಿ ಎಂದಳು.

"ನೀನು ಸುಮ್ನಿರು. ಅವರು ಏನಾದ್ರೂ ಮಾಡ್ಕೊಳ್ಳಲಿ... ಮಕ್ಕಳಿಗೆ ಇದನ್ನೆಲ್ಲ ಹೇಳಿ ಕೊಡ್ಬೇಡ. ಎಲ್ಲಾ ಅವರಿಗೆ ಸೇರಿದ್ದು... ನಮಗ್ಯಾಕೆ?..." ಹೆಂಡತಿಯನ್ನು ಗದರಿಸಿದ.

"ಈಗ ಮದುವೆ ಬೇರೆ ಈ ವಠಾರದಲ್ಲೇ ನಡೆಯುತ್ತೆ. ಗಲಾಟೆ ಗದ್ದಲ, ಕಳ್ಳತನ ನಡೀದೇ ಇರುತ್ತಾ? ಅದ್ಹೇಗೆ ಸುಮ್ಮನಿರ್ತಾರೋ... ಏನೇನು ರಾದ್ಧಾಂತ ವಾಗುತ್ತೋ..."

"ಎದ್ದು ನೋಡ್ಬೇಕು ಅಂತ ಆಸೆ ಇದ್ದರೆ, ಕೋಲನ್ನೂರಿಕೊಂಡು ಹೋಗಿ ನೋಡು. ಯಾರು ಬೇಡ ಅಂತಾರೆ ?" ಹೆಂಡತಿಯನ್ನು ಗೇಲಿ ಮಾಡಿದ.

"ತಮಾಷೆ ಮಾಡ್ತೀರಾ? ಮಾಡೀ... ಮಾಡೀ... ಕೈ ಕಾಲು ಸವೆಸಿ, ಎಲ್ಲರ ಸೇವೆ ಮಾಡಿದ್ದೀನಿ. ಈಗ ಕೈಲಾಗದೇ ಬಿದ್ಕೊಂಡಿದ್ದೇನಲ್ಲ ಅದಕ್ಕೆ ನಿಮಗೆ ತಮಾಷೆ...

"ತಮಾಷೇನೂ ಮಾಡ್ಬಾರದ?.... ಈಗ ನೀನು ಸೇವೆ ಮಾಡಿಸ್ಕೊಳ್ತಿಲ್ವಾ?"

"ಅದೇ ಕಷ್ಟಕ್ಕೆ ಬಂದಿರೋದು... ನನಗೆ ಮಾಡಿಸ್ಕೊಳ್ಳುಕ್ಕೆ ಇಷ್ಟವಿಲ್ಲ. ನಿಮಗೆ ಮಾಡುಕ್ಕೆ ಇಷ್ಟವಿಲ್ಲ. ಬೇಗ ಎಲ್ಲಾ ಸರಿ ಹೋಗಿ, ನನ್ನ ಪಾಡಿಗೆ ನಾನು ಓಡಾಡಿಕೊಂಡು ನನ್ನ ಕೆಲ್ಸಾನ ನಾನೇ ಮಾಡ್ಕೊಂಡ್ರೆ ಸಾಕಾಗಿದೆ. ನೆನ್ನೆ ಏನಾಯ್ತು ಗೊತ್ತಾ? ಬಾಲು ತಪ್ಪಿಸ್ಕೊಂಡಿದ್ದ... ಹೋಗಿ ನೋಡೋಕೂ ಆಗದಂಥ ಅಸಹಾಯಕ ಸ್ಥಿತಿ... ಯಾವ ಶತ್ರುಗೂ ಈ ಸ್ಥಿತಿ ಬೇಡಪ್ಪಾ..."

"ಹೌದಾ ಮಂಗಳಾ...? ಮಗೂನ ಒಂದನ್ನೇ ಹೊರಗೆ ಯಾಕೆ ಬಿಟ್ಟಿದ್ದೆ?"

"ದಿನಾ ಜಗುಲಿ ಮೇಲೆ ಸುಮ್ಮನೇ ಆಟ ಆಡ್ಕೊಂಡು ಇರ್ತಿದ್ದ... ಗೋಪಾಲಯ್ಯ ಎತ್ಕೊಂಡು ಅಂಗಡಿಗೆ ಕರ್ಕೊಂಡು ಹೋಗಿ ಬಾಳೆ ಹಣ್ಣು ಕೊಡಿಸಿದ್ದಾರೆ.... ಎಲ್ಲೂ ಕಳೆದು ಹೋಗಿರ್ಲಿಲ್ಲ... ಅವನನ್ನೇ ಕೇಳಿಬೇಕಾದ್ರೆ..."

"ಹೌದೇನೋ ಮಾವ ಬಾಳೆ ಹಣ್ಣು ಕೊಡ್ಸಿದ್ರಾ... ತಿಂದ್ಯಾ?" ಮಗನನ್ನು

ಮುದ್ದಿಸಿದ. ಬಾಲು ಹೌದು, ಇಲ್ಲ ಎನ್ನುವಂತೆ ತಲೆಯಾಡಿಸಿದ. ಹೆಂಡತಿ, ಮಗಳ ಕಡೆ ನೋಡಿ ಮತ್ತೆ ನುಡಿದ. "ಮದುವೆ ಮನೆಗೆ ಬಂದ ಜನಗಳ ಮಧ್ಯೆ ಕಳೆದು ಹೋದಾನು ಹುಶಾರಾಗಿರಿ... ಹೊರಗೆ ಬಿಡ್ಬೇ ಬೇಡಿ... ಬಾಗಿಲು ಹಾಕ್ಕೊಂಡಿರಿ."

"ಅಳ್ತಾನಣ್ಣ.... ಕೊಂಯ್ ಅಂತ ನಾಲ್ಕು ಮನೆಗೆ ಕೇಳೋ ಹಾಗೆ ಕಿರುಚ್ತಾನೆ..."

"ಹಾಗಾದ್ರೆ ಜಗುಲಿ ಮೇಲಿನ ಕಂಬಕ್ಕೆ ಕಟ್ಟಿ ಹಾಕಿ ಇವನನ್ನು..."

"ಹಾಗೇ ಮಾಡ್ಬೇಕು. ಇಲ್ಲದಿದ್ರೆ ಇವನನ್ನು ಕಾಯೋರು ಯಾರು?..."

"ಮಂಗಳಾ, ನನ್ನ ಷರಟಿನ ಜೇಬಿನಲ್ಲಿ ನಿನಗೆ ಬಂದ ಕಾಗದ ಇದೆ. ತಗೋ... ತಂದೆ ಹೇಳಿದಾಗ, ಮಂಗಳಾ ಷರಟನ್ನು ನೇತು ಹಾಕಿದ್ದ ಕಡೆಗೆ ನಡೆದಳು.

"ಅಣ್ಣಾ ಯಾರದಣ್ಣ ಕಾಗದ ? ಸರೋಜಕ್ಕ ಬರೆದಿದ್ದಾಳಾ..." ಆ ಪ್ರಶ್ನೆಗೆ ಉತ್ತರಿಸಲಿಲ್ಲ. "ಆ ಮನೆ ಅಡ್ರೆಸ್ಸಿಗೆ ಬಂದಿತ್ತು. ಮನೆಗೆ ಬರುವಾಗ ಆ ಕಡೆ ಹೋಗಿದ್ದೆ. ಪೋಸ್ಟ್‌ಮ್ಯಾನ್ ಪಕ್ಕದ ಮನೇಲಿ ಕೊಟ್ಟಿದ್ದ... ಅವನಿಗೆ ಈ ಅಡ್ರೆಸ್‌ನ್ನು ಕರೆದು ಕೊಟ್ಟೆ... ಅವರು ಎಲ್ಲರನ್ನು ವಿಚಾರಿಸ್ಕೊಂಡ್ರು..."ಮಂಗಳಾ ಕಾಗದವನ್ನೆತ್ತಿಕೊಂಡು ಹಿತ್ತಿಲಿಗೆ ಹೋದಳು.

"ಅಕ್ಕಾ... ಯಾರದ್ದೇ ಕಾಗದ?" ಎನ್ನುತ್ತಾ ವನಜ ಅವಳ ಹಿಂದೆ ಓಡಿದಳು. ಮಂಗಳಾ ಕಾಗದವನ್ನು ಮಡಿಸಿ, ಸೆರಗಿನೊಳಗೆ ಮುಚ್ಚಿಟ್ಟುಕೊಂಡಳು.

"ಯಾರದ್ದೋ ನಿಂಗ್ಯಾಕೆ?... ನನ್ನ ಸ್ನೇಹಿತೇದು..."

"ಯಾರೇ ನಿನ್ನ ಸ್ನೇಹಿತೆ... ಕುಮುದಾನಾ?... ನೀನು ಓದಾದ ಮೇಲೆ ನಂಗೂ ಕೊಡು... ನಾನೂ ಓದ್ತೀನಿ."

"ಹಾಗೆಲ್ಲಾ ಒಬ್ಬರಿಗೆ ಬಂದ ಕಾಗದಾನ ಇನ್ನೊಬ್ಬರು ಓದಬಾರದು ಅಂತ ನಿಂಗೆ ಗೊತ್ತಿಲ್ವಾ? ಸುಮ್ಮನೆ ಹೋಗು..."

"ನಾನು ಹೋಗುಲ್ಲ... ಇಲ್ಲೇ ಇರ್ತೀನಿ ಏನ್ಮಾಡ್ತೀಯ?..."

"ಸರಿ ಇರು. ನಂಗೇನಂತೆ ? ... ಎನ್ನುತ್ತಾ ದಿಬ್ಬದ ಬದಿಗಿದ್ದ ಮನೆಯ ಕಡೆಗೆ ನಡೆದಳು. ಮನೆಯ ಬಾಗಿಲು ತೆಗೆದಿತ್ತು. ಒಳಗೆ ದೀಪ ಹಾಕಿತ್ತು ಇಣುಕಿದಳು ಬಾಗಿಲ ಎದುರಿಗೆ ಚಾಪೆಯ ಮೇಲೆ, ದತ್ತ ಕುಳಿತಿದ್ದ. ಯಾವುದೋ ದಿನಪತ್ರಿಕೆಯನ್ನು ಓದುತ್ತಿದ್ದ. ಹೆಜ್ಜೆಯ ಸದ್ದನ್ನು ಕೇಳಿ ಕತ್ತೆತ್ತಿ... "ಯಾರು?" ಎಂದ. ಮಂಗಳ ಉತ್ತರಿಸಲಿಲ್ಲ. ಅವನು ಎದ್ದು ಬರುವಷ್ಟರಲ್ಲಿ ಇವಳು ಗೋಡೆಯ ಮರೆಯಲ್ಲಿ ನಿಂತಿದ್ದಳು. ದೀಪದ ಬೆಳಕಿನಲ್ಲಿ ಬಿದ್ದ ನೆರಳನ್ನು ಕಂಡು, ಅವನು ಮೆತ್ತಗೆ ಹೆಜ್ಜೆ ಇಡುತ್ತಾ, ಹಿಂದಿನಿಂದ ಬಂದು ಸರ್ರನೆ ಅವಳ ಕೈ ಹಿಡಿದ. ಅವಳು ಮೆಲ್ಲನೆ ಕಿರುಚಿದಳು. ಅವನು ಕೈ ಬಿಟ್ಟ ಅವಳು ಬೆಳಕಿಗೆ ಬಂದಳು... ಅವನು ಅವಳನ್ನು ಕಂಡು ಗಲಿಬಿಲಿ ಗೊಂಡು ಪ್ರಶ್ನಿಸಿದ.

"ಮಂಗಳಾ? ನೀವಾ? ಗೊತ್ತಾಗಲಿಲ್ರೀ ತಪ್ಪಾತು?... ಇಲ್ಲೇನು ಮಾಡುಕ್ಕೆ ಹತ್ತೀರೀ"

"ದೀಪ ಉರೀತಿತ್ತಲ್ಲ ನೋಡೋಣ ಅಂತ ಬಂದೆ... ನೀವು ಯಾವಾಗ ಬಂದ್ರೀ?"

"ನಾನು ಮಧ್ಯಾಹ್ನದ ಗಾಡಿಗೆ ಬಂದೆ... ನೀವು ಮನಿಗೆ ಹೋಗಿ... ಯಾರಾದ್ರೂ ಕಂಡರೆ ಚಂದ ಕಾಣುದಿಲ್ಲ." ಆ ಕಡೆ ಈ ಕಡೆ ನೋಡಿದ.

"ಇಲ್ಲಿ ಏನ್ಮಾಡ್ತಿದೀರಿ...? ಇನ್ಯಾರೂ ಇದ್ದಂತಿಲ್ಲ."

"ನನ್ನ ಹೇಣ್ತಿಗೋಸ್ಕರ ಕಾಯ್ತಾ ಇದ್ವೀನ್ರೀ... ನೀವು ಬಂದ್ರಿ... ಆಕೀನೇ ಬಂದ್ಲು ಅಂತ ನಾ ಮಾಡಿದ್ವನ್ರೀ, ಅದೇನದು ಕೈಯಾಗ?"

"ಏನೂ ಇಲ್ಲ" ಎನ್ನುತ್ತಾ ಅಲ್ಲಿಂದ ಮನೆಯ ಕಡೆಗೆ ತಿರುಗಿದಳು.

"ಮಂಗಳಾ... ಒಂದು ಗಳಿಗೆ ನಿಲ್ರೀ..." ಎನ್ನುತ್ತಾ ಹಿಂದೆ ಬಂದ. "ನಾನು ಎರಡು ದಿನದ ಸೂಟಿ ಮೇಲೆ ಬಂದೀನ್ರೀ... ಲಗ್ನದ ದಿನವೇ ವಾಪಸ್ಸು ಹೋಗುವನಿದ್ದೀನಿ... ನೀವು ಲಗ್ನಕ್ಕೆ ಬರ್ತೀರಿ ಹೌದಲ್ಲೋ...?"

"ಏನೋ ಗೊತ್ತಿಲ್ಲ."

"ಏನ್ರೀ... ಹಿಂಗಂದ್ರ? ಇದೇ ವಠಾರದಾಗ ಇದೀರಿ... ಸುಧಾ ನಿಮ್ಮ ಗೆಳತಿ ಇದ್ವಾಳ... ಅವಳು ಲಗ್ನ ಆಗ್ತಿದ್ದಾಗೇ ಗಂಡನ ಮನಿಗೆ ಹೊರಟು ಹೋಗ್ತಾಳಾ..."

"ಮನೇಲಿ ಅಮ್ಮ ಒಬ್ಬಳೇ ಇರ್ತಾಳೆ. ಅವಳೊಬ್ಬಳನ್ನೇ ಬಿಟ್ಟು ಹೇಗೆ ಬರೋದು?"

"ಅಂದ್ವಾಗೇ ಕೇಳೋದೇ ಮರೆತಿದ್ದಿನ್ರಿ... ನಿಮ್ಮ ತಾಯಾರು ಹೇಗಿದ್ದಾರು?"

"ಹಾಗೇ ಇದಾರೆ... ನಾನು ಹೋಗ್ತೀನಿ." ಎನ್ನುತ್ತಾ ಅಲ್ಲಿಂದ ಹೊರಟು ಬಿಟ್ಟಳು. ಓಲಾಡುವ ಜಡೆಯನ್ನು ಬಳಕುವ ದೇಹವನ್ನು ನೋಡಿದ. ಬಿಸಿ ಉಸಿರು ಇರಲಿಲ್ಲ. ರಾಧಾ ದಿನ ದಿನಕ್ಕೂ ಕೃಶವಾಗುತ್ತಿದ್ದಾಳೆ... ವಿರಹವೆ ? ಮನೆ ಕೆಲಸ ಅಧಿಕವೇ?... ಅಥವಾ ಹೊಟ್ಟೆಗೆ ಸಾಲದೆ?... ಅಥವಾ ಅವಳಿಗೆ ಏನಾದರೂ ಖಾಯಿಲೆ ಇರ ಬಹುದೆ?... ಈ ಅನಿಸಿಕೆ ಅವನನ್ನು ಹೆದರಿಸಿತು... ಏನು ಖಾಯಿಲೆ ಇರಬಹುದು? ಟಿ.ಬಿ.? ಇವಳನ್ನು ತವರಿಗೆ ಕಳಿಸಿ, ಸರಿಯಾಗಿ ಔಷಧೋಪಚಾರ ಮಾಡಿಕೊಂಡು ಹುಶಾರಾಗಿ ಬಾ ಅಂತ ಹೇಳಬೇಕು... ಆರೋಗ್ಯವೇ ಸರಿ ಇಲ್ಲದವಳೊಡನೆ ಸಂಸಾರ ಹೇಗೆ ಮಾಡುವುದು?"... ಆತಂಕಗೊಂಡಿದ್ದ.

"ಯಾರಿಗೆ ಕಾಯ್ತಾ ನಿಂತೀಯೋ ಅಣ್ಣಾ.... ಎಲಿ ಹಾಕದ. ಉಣ್ಣುಕ್ಕೆ ಬರ್ಬೇಕಂತ..."

"ನಿನ್ನ ವೈನಿ ಎಲ್ಲೇ ಸೀತಾ... ಈ ಮನಿ ಕಸ ಗುಡಿಸ್ಬೇಕಾಗಿತ್ತು ಬರ್ತೀನಿ ಅಂತ

ಅಂದಿದ್ನು."

"ವೈನಿ ಅಡಿಗೆ ಮನೇಲಿದಾರ... ಈಗ ಬರೂದಿಲ್ಲ... ನೀನು ನಡೀ..." ಅವನ ಕೈ ಹಿಡಿದು ಎಳೆದಳು... ಕೆಲಸದಾಕಿ ಬಂದು ಗುಡಿಸ್ಯಾಳ... ಕಸ ಏನೂ ಕಾಣುದಿಲ್ಲ... ನೀನು ನಡೀ..."

"ಏ... ಕೈ ಬಿಡೇ... ಏನು ಸಣ್ಣ ಕೂಸಿನ ಥರ ಆಡ್ಲಿಕ್ಕೆ ಹತ್ತೀಯ... ದೀಪ ಆರಿಸಿ ಕೀಲಿ ಹಾಕಿ ಬರ್ತೀನಿ. ನೀನು ನಡೀ..." ಅವಳನ್ನು ಕಳಿಸಿ ಒಳಗೆ ಬಂದ ಮಂಗಳಾಳ ಕೈ ಹಿಡಿದ ನೆನಪಾಯಿತು ಅಂಗೈ ಬಿಸಿಯಾಗಿದೆ ಎನಿಸಿತ್ತು.. ಅಂಗೈಯನ್ನು ಕೆನ್ನೆಗೆ ಉಜ್ಜಿಕೊಂಡ... ಆಕಿ ಏನಂದುಕೊಂಡ್ಳೋ ಏನೋ... ನಾ ಭಯ ಬೀಳಿಸ್ಬಿಟ್ಟೆ..." ಅಂತ ಹೇಳಿಕೊಂಡು ಮನದಲ್ಲೇ ನಗುತ್ತಾ, ದೀಪವನ್ನು ಆರಿಸಿ, ಮುಂಬಾಗಿಲನ್ನು ಎಳೆದು ಬೀಗವನ್ನು ಜಡಿದ... ಮೆಟ್ಟಿಲಿನಿಂದ ಇಳಿದು, ನಾಲ್ಕು ಹೆಜ್ಜೆ ನಡೆಯುವಷ್ಟರಲ್ಲಿ ಕಾಲಿಗೆ ಏನೋ ಕಾಗದ ತೊಡರಿದಂತಾಯಿತು. ಬೆರಳಿನ ಸಂದಿಯಲ್ಲಿ ಸಿಕ್ಕಿಕೊಂಡ ಕಾಗದವನ್ನು ಕೈಗೆತ್ತಿಕೊಂಡ. ಅದು ಒಂದು ಇನ್‌ಲ್ಯಾಂಡ್ ಲೆಟರ್ ಆಗಿತ್ತು. ಅದನ್ನು ಒಡೆದಿರಲಿಲ್ಲ... ಯಾರೋ ಯಾರಿಗೋ ಬರೆದ ಪತ್ರ, ಪೋಸ್ಟ್ ಮಾಡಲು ಮರೆತು, ಬೀಳಿಸಿಕೊಂಡಿರಬಹುದು ಎಂದುಕೊಂಡು ಷರಟಿನ ಜೇಬಿಗೆ ಹಾಕಿಕೊಂಡು ಮನೆಗೆ ಬಂದ.

○ ○ ○

ಎಲ್ಲರೂ ಊಟ ಮಾಡುತ್ತಿರುವಾಗ, ಗಂಗಾಧರ ಜೋಷಿ ಎಲ್ಲರನ್ನು ಕುರಿತು ಹೇಳಿದರು. ಲಗ್ನಕ್ಕೆ ಬೇಕಾದ ಸಿದ್ಧತಿ ಎಲ್ಲಾ ಆಗದ... ಆಚೆ ನಾಡಿದ್ದೇ ಮುಹೂರ್ತ.... ನಾಳೆಯಿಂದ ಎಲ್ಲರಿಗೂ ಬರೋಬ್ಬರಿ ಕೆಲಸ ಬೀಳ್ತದ... ಯಾರೂ ಆಲಸಿಗಳಾಗೂ ಹಂಗಿಲ್ಲ. ಬೆಳಿಗ್ಗೆ ಬೇಗನೇ ಏಳಬೇಕು... ಭಾಳ ಮಂದಿ ನೆಟರು ಬರೋರು ಇದ್ದಾರ. ಅಡಿಗೆಯವರು ಬರ್ತಾರಾ. ನೀರು ತುಂಬಬೇಕ. ಪಾತ್ರಿ ಕಡಗ ಲೆಖ್ಖ ನೋಡಿ ಕೊಡಬೇಕು. ದಿನಸಿ ಸಾಮಾನು ತೆಗೆದುಕೊಡಬೇಕು. ಎಲ್ಲರೂ ಟೊಂಕಕಟ್ಟಿ ಕೆಲಸ ಮಾಡಬೇಕು. ಆಗಲೇ ಕೆಲಸ ಹಗುರ ಆಗೋದು... ನಾ ಹೇಳೋದು ತಿಳೀತೋ ಇಲ್ಲೋ... ಎಲ್ರೂ ಲಗೂನೆ ಉಂಡು ಏಳ್ರೀ... ಹೆಣಮಕ್ಕಳೂ ಉಣಬೇಕಾಗಿದೆ... ಉಂಡ ಜಾಗ ಚೊಕ್ಕಟ ಮಾಡಬೇಕಾಗಿದೆ.."ಎನ್ನುತ್ತಾ ಎಲ್ಲರನ್ನು ಅವಸರಿಸಿದರು.

ಊಟವಾದ ಮೇಲೆ, ದತ್ತ ಹೆಂಡತಿಯ ಊಟ ಮುಗಿಯುವುದನ್ನೇ ಕಾದಿದ್ದು, ಚಾಪೆ, ಹೊದಿಗೆ, ದಿಂಬುಗಳನ್ನೆತ್ತಿಕೊಂಡು ದಿಬ್ಬದ ಸಮೀಪದ ಮನೆಗೆ ಹೊರಟ. "ರಾಧಾ... ಬೇಗ ಬೇಗ ಗೋಮ ಹಚ್ಚಿ, ಒರೆಸಿ, ಅವ್ವಗ ಹೇಳಿ ಹೊರಡು... ನಾನು ಬಾಗಲಲ್ಲಿ ಕಾಯ್ತಿರ್ತೀನಿ" ಎಂದು ಹೊರ ಬಂದ.

ರಾಧಾಳೊಂದಿಗೆ, ಸೀತಾ, ಮಾರ್ತಾಂಡ, ಜಯರಾಮ ಹಾಗೂ ಇನ್ನೊಂದೆರಡು

ನೆಂಟರ ಹುಡುಗರೂ ಹೊರಟಾಗ ಹುಬ್ಬೇರಿಸಿದ. ರಾಧಾ ಕ್ಷೀಣವಾಗಿ ನಕ್ಕಳು. ಅಲ್ಲಿ ಬರೀ ಸೊಳ್ಳಿ ಕಾಟ ನಿಮಗೆ ನಿದ್ದಿ ಬರೂದಿಲ್ಲ, ಸುಮ್ನೆ ಇಲ್ಲೇ ಮಲಗ್ರೀ..." ಗದರಿದ.

"ಇಲ್ಲಿ ಮನ್ಯಾಗೆ ಜಾಗಾನೆ ಇಲ್ಲ... ಸಾಮಾನುಗಳಿಂದ ತುಂಬಿ ಹೋಗದೆ... ಮನೆ ವಾಸ್ನೆಯಿಂದ ತುಂಬೈತೆ... ನಮಗೆ ಇಲ್ಲಿ ನಿದ್ದಿ ಬರೂದಿಲ್ಲ... ನಾವೂ ಬರತೇವಿ..." ಒಕ್ಕೊರಲಿನಿಂದ ನುಡಿದು, ಚಾಪೆ, ದಿಂಬುಗಳನಲು, ಹೊದ್ದಿಗೆಗಳನ್ನು ಹೊತ್ತು ಅವನಿಗಿಂತ ಮುಂದಾಗಿ ನಡೆದರು. ದತ್ತ ಹೆಂಡತಿಯ ಕಡೆ ಓರೆ ನೋಟದಿಂದ ನೋಡಿ. ಅವಳು ಬಹಳ ಬಳಲಿರುವಂತೆ ಅನ್ನಿಸಿತು.

ಮುಂಬಾಗಿಲಿಗೆ ಹಾಕಿದ್ದ ಬೀಗವನ್ನು ತೆಗೆದು, ಒಳಗಿನ ದೀಪವನ್ನು ಹಾಕಿದ. ಮಕ್ಕಳು 'ಹೋ' ಎಂದು ಕೂಗುತ್ತಾ ಒಳ ನುಗ್ಗಿದರು." ನೀವೆಲ್ಲಾ ಇಲ್ಲಿ ಮಲಗ್ರೀ... ನಾನು ವೆರಾಂಡದಲ್ಲಿ ಮಲಗತೇನಿ..."ಎಂದು ಹೇಳಿ ರಾಧಾಳಿಗೆ ಕಣ್ಣು ಸಂಜ್ಞೆ ಮಾಡಿದ.

ಇಡೀ ದಿನ ಕೆಲಸ ಮಾಡಿ ದಣಿದಿದ್ದ ರಾಧಾ, ಜಮಖಾನದ ಮೇಲೆ ಉರುಳಿ, ದಿಂಬಿಗೆ ತಲೆ ಕೊಡುತ್ತಿದ್ದಂತೆಯೇ ನಿದ್ದೆ ಹೋಗಿದ್ದಳು. ಬಾಗಿಲುಗಳನ್ನು ನೋಡಿ, ದಿಪವನ್ನಾರಿಸಿ, ವೆರಾಂಡಕ್ಕೆ ಬಂದು, 'ರಾಧಾ' ಎಂದು ಕರೆದ ಅವಳಿಂದ ಉತ್ತರಬರಲಿಲ್ಲ. ಮೆಲ್ಲಗೆ ಗೊರಕೆಯ ಸದ್ದು ಕೇಳಿಸಿತು. ತುಸು ಬೇಸರವೆನಿಸಿದರೂ, ನಿದ್ದೆ ಹೋಗುತ್ತಿರುವವಳನ್ನು ಎಬ್ಬಿಸುವ ಮನಸ್ಸಾಗದೇ, ದೀಪವನ್ನಾರಿಸುವ ಮುನ್ನ ಷರಟನ್ನು ಬಿಚ್ಚಿದ... ಆಗ ಷರಟಿನ ಜೇಬಿನಲ್ಲಿದ್ದ ಕಾಗದ ಅವನ ಕೈ ತಡವಿತು. ಕುತೂಹಲದಿಂದ ಯಾರು ಯಾರಿಗೆ ಬರೆದ ಪತ್ರವಿರಬಹುದೆಂದು ನೋಡಿದ. ಮಂಗಳನ ಹೆಸರಿಗೆ ಬಂದ ಪತ್ರ. ಚಂದ್ರ ಎಂಬುವನು ಬರೆದದ್ದು ತಿಳಿಯಿತು. ಈ ಚಂದ್ರ ಯಾರು ? ಮಂಗಳನಿಗೆ ಬರೆದ ಪತ್ರ ಈ ಮನೆಯ ಸಮೀಪ ಏಕೆ ಬಿದ್ದಿತ್ತು?... ಯೋಚಿಸಿದ. ಒಡೆದು ಒಳಗೇನಿರಬಹುದು ಎಂದು ಓದುವ ಮನಸ್ಸಾಯಿತು. ಮರುಕ್ಷಣವೇ ಅದು ಸರಿಯಲ್ಲ ಎಂದೆನಿಸಿತು... ಈ ಚಂದ್ರ ಮಾಲಿಕರ ಮಗ ಇರಬಹುದೇ... ಎದುರಿಗೆ ಮಾತನಾಡ ಲಾಗದೇ ಪತ್ರದಲ್ಲಿ ತಿಳಿಸಿರಬಹುದೇ?... ನೋಡಿದರೆ ಒಳ್ಳೆಯವನಂತೆ ಅನ್ನಿಸುವು ದಿಲ್ಲ, ಹೆಣ್ಣು ಮಕ್ಕಳಿಗೆ ತೊಂದರೆ ಕೊಡಲು ಪತ್ರ ಬರೆದಿರಬಹುದು. ಈ ಪತ್ರ ನನ್ನ ಕೈಗೆ ಸಿಕ್ಕಿದ್ದು ಒಳ್ಳೇದಾಯಿತು... ಒಂದು ವೇಳೆ ಬೇರೆಯಾರ ಕೈಗಾದರೂ ಸಿಕ್ಕಿದ್ದರೆ, ಏನು ಹಗರಣವಾಗುತ್ತಿತ್ತೋ... ಏನಾದರಾಗಲಿ, ಇದರಲ್ಲಿ ಏನು ಬರೆದಿದೆ ಅಂತ ನೋಡಿಯೇ ಬಿಡುತ್ತೇನೆ. ತಿಳಿಸಬಹುದಾದಂಥ ವಿಷಯ ಇದ್ದರೆ, ಮಂಗಳನಿಗೆ ತಿಳಿಸಿದರಾಯ್ತು... ಇಲ್ಲದಿದ್ದರೆ, ಈ ಪತ್ರವನ್ನು ಬರೆದವನಿಗೇ ತೋರಿಸಿ, ಬುದ್ಧಿವಾದ ಹೇಳಬಹುದು ಎಂದುಕೊಂಡು, ಪತ್ರವನ್ನು ಒಡೆದ ಓದಲಾರಂಭಿಸಿದ.

"ಮುದ್ದಿನ ಅರಗಿಣಿಗೆ ಮುತ್ತುಗಳು... ಎಂದು ಪ್ರಾರಂಭವಾಗಿತ್ತು. ಲೋಫರ್‌ನ ತಂದು, ಬೇರೆ ಹೆಣ್ಣಿಗೆ ಪ್ರೇಮಪತ್ರ ಬರೆಯುವಷ್ಟು ಧೈರ್ಯ ಎಂದುಕೊಂಡು

ಮುಂದುವರೆದ ನಿನಗಾಗಿ ಹಗಲೂ ಇರುಳೂ ಕಾಯುತ್ತಿದ್ದೇನೆ. ಹಗಲು ಕಣ್ಣ ಮುಂದೆ ಬಂದು ಬಂದು ಕಾಡುತ್ತೀಯೇ. ಇರುಳು, ಕನಸಿನಲ್ಲಿ ಬಂದು ಸತಾಯಿಸುತ್ತೀಯೆ... ಯಾಕೆ ಹೀಗೆ ಮಾಡ್ತೀಯಾ? ನನ್ನ ಬಳಿಗೆ ಎಂದು ಬರುತ್ತೀಯಾ? ಆ ದಿನ ಎಂದು ಬರೆವುದೋ ಎಂದು ಎದುರುನೋಡುತ್ತಿದ್ದೇನೆ... ಈಗ ನಿಮ್ಮ ತಾಯಿ ಹೇಗಿದ್ದಾರೆ? ಈ ನೆವದಿಂದ ನಮ್ಮಿಬ್ಬರ ಮದುವೆ ಮುಂದೆ ಹೋದರೆ ನಾನು ಸಹಿಸಲಾರೆ... ನಿನ್ನನ್ನು ಹಾರಿಸಿಕೊಂಡು ಬಂದು ನನ್ನವಳನ್ನಾಗಿ ಮಾಡಿಕೊಳ್ಳುತ್ತೇನೆ... ನಾನು ಇಲ್ಲಿ ಒಂಟಿಯಾಗಿ ಕಾಲ ಕಳೆಯುತ್ತಿದ್ದರೆ, ನೀನು ಅಲ್ಲಿ ಹಾಯಾಗಿ ಹೇಗಿದ್ದೀಯೋ... ಒಂಟಿಯಾಗಿ ಸಿಕ್ಕಾಗ ವಿಚಾರಿಸಿಕೊಳ್ಳುತ್ತೇನೆ. ಆದಷ್ಟು ಬೇಗ ನಮ್ಮಿಬ್ಬರ ಮದುವೆ ನೆರವೇರುವಂತೆ, ನಮ್ಮ ಮನೆಯವರು, ನಿನ್ನ ತಂದೆಯವರಿಗೆ ತಿಳಿಸುವಂತೆ ಹೇಳಿದ್ದೇನೆ. ನನ್ನ ಕಾಗದಗಳಿಗೆ ನಿನ್ನಿಂದ ಉತ್ತರವೇ ಬಂದಿಲ್ಲ. ಯಾಕೆ?.... ನೀನು ಹುಶಾರಾಗಿದೀಯ ತಾನೆ?... ಅಥವಾ ನನ್ನ ಮೇಲೆ ಕೋಪಾನೋ? ನಾನೇನು ಮಾಡಲಿ? ನನಗೆ ರಜವೇ ಸಿಗುತ್ತಿಲ್ಲ, ನನಗೂ ನಿನ್ನನ್ನು ನೋಡುವ ಆಸೆ ದಿನದಿನಕ್ಕೂ ಹೆಚ್ಚಾಗುತ್ತಿದೆ... ನಿನ್ನಿಂದ ಪತ್ರ ಬಂದರೆ ಮನಸ್ಸಿಗೆ ಹಿತವೆನಿಸುತ್ತದೆ. ನಿಮ್ಮ ಹೊಸ ಮನೆಯ ಅಡ್ರೆಸ್ ಗೊತ್ತಿಲ್ಲದುದರಿಂದ, ಅದೇ ಹಳೇಯ ವಿಳಾಸಕ್ಕೆ ಬರೆದಿದ್ದೇನೆ. ಈ ಪತ್ರ ನಿನಗೆ ತಲುಪಿದ ಕೂಡಲೇ ನನಗೆ ಉತ್ತರ ಬರಿ... ಇಲ್ಲದಿದ್ದರೆ, ನನಗೆ ನಿನ್ನ ಮೇಲೆ ಕೋಪ ಬರುತ್ತದೆ. ಅನುಮಾನ ಹುಟ್ಟುತ್ತದೆ... ನಾನು ಬೇರೆ ಯಾರನ್ನಾದರೂ ಬೇಗ ಮದುವೆಯಾಗ್ತೀನಿ... ಆಗ ಏನು ಮಾಡ್ತೀಯಾ?" ಎಂದು ಕೇಳಿ ಬರೆದಿದ್ದ.

ಈ ಚಂದ್ರ ಯಾರು ? ಮಾಲೀಕರ ಮಗ ಇರಲಾರದು... ಮದುವೆ ಬಗ್ಗೆ ಬರೆದಿದ್ದಾನೆ. ಅವನು ಇವಳನ್ನು ಪ್ರೀತಿಸುತ್ತಿರಬಹುದು. ಇವಳೂ ಪ್ರೀತಿಸುತ್ತಿರ ಬಹುದೇ... ಈ ವಿಷಯ ತಂದೆಗೂ ತಿಳಿದಿರಬಹುದೇ... ಅವನು ಯಾರೆಂದು ತಿಳಿದುಕೊಳ್ಳೋಣವೆಂದರೆ, ಪೂರ್ತಿ ವಿಳಾಸವಿಲ್ಲ. ಬರೀ ಹೆಸರಿದೆ. ಈಗ ಒಡೆದು ಓದಿದ್ದಾಗಿದೆ ಈ ಪತ್ರವನ್ನು ಮತ್ತೆ ಅಂಟಿಸುವುದಾದರೂ ಹೇಗೆ ? ಅವಳಿಗೆ ಕೊಡುವು ದಾದರೂ ಹೇಗೆ ?.... ನಿಮ್ಮ ಕೈಗೆ ಹೇಗೆ ಸಿಕ್ಕಿತು ಅಂತ ಕೇಳಿದರೆ ?... ನನ್ನ ಮೇಲೆ ಬೇಸರಗೊಂಡರೆ?... ಈ ಕಾಗದಕ್ಕೆ ಇವಳು ಉತ್ತರಿಸದಿದ್ದರೆ ಇವನಿಗೆ ಕೋಪ ಬರುತ್ತದೆ... ಬೇರೆ ಯಾರನ್ನಾದರೂ ಮದುವೆ ಯಾಗುತ್ತೀನಿ ಅಂತ ಬೆದರಿಸಿದ್ದಾನೆ. ಈವರೆಗೆ ಅವನಿಂದ ಬರದ ಪತ್ರಗಳಿಗೆ ಇವಳೇಕೆ ಉತ್ತರಿಸಿಲ್ಲ?... ಬಹುಶಃ ಇವಳು ಅವನನ್ನು ಪ್ರೀತಿಸುತ್ತಿಲ್ಲದೇ ಇರಬಹುದು... ಒಂದು ವೇಳೆ ಅವನು ಬರೆದಂತೆ, ಬೇರೆ ಯಾರನ್ನಾದರೂ ಮದುವೆಯಾದರೆ, ಇವಳಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೇ? ಇಬ್ಬರನ್ನು ತಾನು ಬೇರೆ ಮಾಡಿದಂತಾಗುತ್ತದೆ. ಆದರೆ ತಾನೇಕೆ ಇಬ್ಬರನ್ನು ಒಂದು ಗೂಡಿಸಬೇಕು? ನನಗೆ ಮಂಗಳ ಇಷ್ಟವಾಗಿದ್ದಾಳೆ. ಅವಳು ಮದುವೆಯಾಗದೇ ಇದೇ

ಮನೆಯಲ್ಲಿದ್ದರೆ, ತಾನು ಬಂದಾಗಲೆಲ್ಲಾ ಇವಳನ್ನು ಭೇಟಿಯಾಗಬಹುದು. ಮಾತಾಡಬಹುದು... ಇವಳು ಹೊರಟುಹೋದರೆ ಅದೂ ಇಲ್ಲವಾಗುತ್ತದೆ... ಅಷ್ಟರಲ್ಲಿ ರಾಧಾ ಹೊರಳಿದಳು. ದೀಪ ಉರಿಯುತ್ತಿರುವುದನ್ನು ಕಂಡಳು.

"ಇನ್ನೂ ಮಲಗಿಲ್ಲೇನು ನೀವು? ಏನು ಮಾಡ್ತಿಕ್ಕೆ ಹತ್ತಿದೀರಿ?" ಪ್ರಶ್ನಿಸಿದಳು.

"ಏನಿಲ್ಲ, ನೀ ಮಲಗು" ಎಂದು ಹೇಳಿ, ಪತ್ರವನ್ನು ಮಡಚಿ, ಜೇಬಿಗೆ ತುರುಕಿ ದೀಪವನ್ನಾರಿಸಿ, ಜಮಖಾನದ ಮೇಲೆ ಮಲಗಿದ. ಪಕ್ಕದಲ್ಲಿ ಮಲಗಿದ ಹೆಂಡತಿಯನ್ನು ಬಳಸಬೇಕೆಂದೆನಿಸಲಿಲ್ಲ. ಕೈ ಕಟ್ಟಿ, ಕತ್ತಲೆಯಲ್ಲಿ ಸೂರನ್ನು ನೋಡುತ್ತಾ, ಮಂಗಳನ ಬಗ್ಗೆಯೇ ಯೋಚಿಸುತ್ತಾ ಮಲಗಿದ.

○ ○ ○

ಇದ್ದಕ್ಕಿದ್ದಂತೆ, ಗೋಪಾಲಯ್ಯ ಮನೆಗೆ ಬಂದುದನ್ನು ಕಂಡು ಜಾನಕಿಗೆ ಆಶ್ಚರ್ಯ ವಾಗಿತ್ತು, ಎದ್ದು ಕೂರಲು ಆಗುವಂತಿರಲಿಲ್ಲ. ಮುಜುಗರಗೊಂಡಳು. ಗಂಡನೂ ಮನೆಯಲ್ಲಿಲ್ಲ. ಮಕ್ಕಳು ಸ್ಕೂಲಿಗೆ ಹೋಗಿದ್ದಾರೆ. ಮಂಗಳಾ ಹಿತ್ತಿಲಲ್ಲಿ ಬಟ್ಟೆ ಒಗೆಯುತ್ತಿದ್ದಾಳೆ. ಬಾಲು ಆಟದ ಸಾಮಾನುಗಳನ್ನು ಹರಡಿಕೊಂಡು ಕೂತಿದ್ದಾನೆ... ಬಾಡಿಗೆ ವಿಷಯ, ಅಥವಾ ಯಾವುದೇ ಹಣಕಾಸಿಗೆ ಸಂಬಂಧಿಸಿದ ಮಾತುಗಳನ್ನು ಇವರ ಹತ್ತಿರವೇ ಮಾತಾಡುತ್ತಾರಲ್ಲ ಎಂದುಕೊಂಡರೂ. ಸಂಕೋಚದಿಂದ "ಬನ್ನಿ" ಎಂದಳು.

"ಈಗ ಹೇಗಿದ್ದೀರಮ್ಮ... ಡಾಕ್ಟರು ಏನಂದಿದ್ದಾರೆ?" ಯೋಗಕ್ಷೇಮವನ್ನು ವಿಚಾರಿಸಿದ.

"ಹೀಗೇ, ಇನ್ನು ಎದ್ದು ಓಡಾಡುವಂತಿಲ್ಲ. ಕಟ್ಟು ಬಿಚ್ಚಲು ಇನ್ನೂ ಎರಡು ವಾರಗಳು ಬೇಕಾಗಬಹುದು."

"ಹೀಗಾಗಬಾರದಾಗಿತ್ತು, ಮನೇಲಿ ಎಲ್ಲರೂ ಚಿಕ್ಕ ಮಕ್ಕಳೇ. ಪಾಪ, ನಿಮ್ಮ ಮಗಳು ಎಲ್ಲಾ ಕೆಲಸವನ್ನು ಮಾಡೋದ್ರಿಂದ ಸರಿ ಹೋಗುತ್ತೆ. ಇಲ್ದಿದ್ರೆ ಎಷ್ಟು ಕಷ್ಟ ಆಗ್ತಿತ್ತು?... ಒಳ್ಳೆ ಹುಡುಗಿ... ಇವನು ನಿಮ್ಮ ಚಿಕ್ಕಮಗು ಅಲ್ಲವೆ? ಬಹಳ ಮುದ್ದಾಗಿ ದ್ದಾನೆ... ಚೇಷ್ಟೆ ಇಲ್ಲ, ರಗಳೆ ಇಲ್ಲ... ನೋಡಿದ್ರೆ ತುಂಬಾ ಸಂತೋಷವಾಗುತ್ತೆ."

ಈ ಪೀಠಿಗೆ ಯಾತಕ್ಕೆ ಎಂದು ಅವಳಿಗೆ ಅರ್ಥವಾಗಲಿಲ್ಲ. ಮನೆಯಲ್ಲಿ ಇಬ್ಬರೇ ಹೆಂಗಸರು, ಈ ಸಮಯದಲ್ಲಿ ಬಂದು ಕುಳಿತಿರುವ ಉದ್ದೇಶವೇನು ಎಂದು ತಿಳಿಯಲಾಗಿರಲಿಲ್ಲ. 'ನಮ್ಮ ಯಜಮಾನ್ರಿಗೆ ಏನಾದ್ರೂ ಹೇಳೋದಿತ್ತಾ?" ಅನುಮಾನಿಸುತ್ತಾ ಕೇಳಿದಳು.

"ಇಲ್ಲ... ಏನೂ ಹೇಳೋದಿಲ್ಲ... ಇದು ಒಂದು ಆಟದ ಸಾಮಾನು... ಇದನ್ನು ನಿಮ್ಮ ಮಗಿಗೆ ಕೊಡೋಣ ಅಂತ ತಂದೆ" ಎಂದು ಹೇಳುತ್ತಾ, ತನ್ನ ಶಲ್ಯದಲ್ಲಿ ಬಚ್ಚಿಟ್ಟ

ಬಟ್ಟೆಯಲ್ಲಿ ಸುತ್ತಿಟ್ಟಿದ್ದ ಒಂದು ಮರದ ಆಟದ ಸಾಮಾನನ್ನು ಹೊರಕ್ಕೆ ತೆಗೆದು ನೆಲದ ಮೇಲಿಟ್ಟ. ಅದು ಒಂದು ಚಿಕ್ಕದಾದ ಮರದ ಎತ್ತಿನಗಾಡಿ... ತುಂಬಾ ಸುಂದರವಾಗಿತ್ತು. ಚನ್ನಪಟ್ಟಣದಲ್ಲಿ ತಯಾರಾದ ಮರದ ಆಟದ ಗಾಡಿಯೇ ಇರಬೇಕು. ಎರಡು ಬಿಳಿಯ ಬಣ್ಣದ ಎತ್ತುಗಳು. ಅವುಗಳ ಕೋಡುಗಳಿಗೆ ಅಲಂಕಾರ, ಬೆನ್ನ ಮೇಲೆ ಬಟ್ಟೆ, ಗಾಡಿ ಹೊಡೆಯುವವನು, ಅವನ ತಲೆಗೆ ಸುತ್ತಿದ ಬಟ್ಟೆ, ಕೈಯಲ್ಲಿ ಚಾಟಿ... ಗಾಡಿಯಲ್ಲಿ ಒರಗಿ ಕುಳಿತುಕೊಳ್ಳುವಂತೆ ಹಾಸಿದ್ದ ಮೆತ್ತೆ, ಮೇಲೆ ಹಾಕಿದ್ದ ಕಮಾನು... ಬಣ್ಣ ಬಣ್ಣದ ಚಕ್ರಗಳು ಎಲ್ಲವೂ ಸುಂದರವಾಗಿ ಮೂಡಿದ್ದ ಒಂದು ಪುಟ್ಟ ಕಲಾಕೃತಿ... ಅವಳ ಕಣ್ಣುಗಳು ಮೆಚ್ಚುಗೆಯನ್ನು ಸೂಸಿದವು. ಆದರೂ ವಿನಯದಿಂದ ನುಡಿದಳು.

"ಸುಮ್ನೆ ಇದನ್ಯಾಕೆ ತರೋಕೆ ಹೋದ್ರಿ?... ಬೇಕಾದಷ್ಟು ಆಟದ ಸಾಮಾನುಗಳಿವೆ. ಕಂದ್ರ ಬಿಡದೇ ಆಡಿ ಆಡಿ ಮೂರು ದಿನಗಳಲ್ಲಿ ಹಾಳು ಮಾಡ್ತಾನೆ ಅಷ್ಟೇ... ಹಣ ದಂಡ."

"ಇದನ್ನು ನಾನು ಹಣ ಕೊಟ್ಟು ತರಲಿಲ್ಲ... ಮನೆಯಲ್ಲಿ ಬೇಕಾದಷ್ಟು ಬಣ್ಣದ ಮರದ ಆಟಿಕೆಗಳಿವೆ. ದಸರಾ ಹಬ್ಬದ ಸಮಯದಲ್ಲಿ ಮಾತ್ರ ಎಲ್ಲವನ್ನು ಈಚೆಗೆ ತೆಗೆದು, ಬೊಂಬೆಗಳ ಜೊತೆಯಲ್ಲಿ ಇಡುತ್ತೇವೆ... ಬಹಳ ಹಳೆಯದು... ನನ್ನ ಮಾವನವರ ಕಾಲದ್ದು..."ಅಭಿಮಾನದಿಂದ ಹೇಳಿಕೊಂಡ.

"ಹೊಸ್ದೇನೋ ಅಂತ ಅಂದ್ಕೊಂಡೆ ಬಣ್ಣ ಕೂಡಾ ಮಾಸಿಲ್ಲ... ಎಷ್ಟು ಒಪ್ಪವಾಗಿ ಇಟ್ಕೊಂಡಿದ್ದೀರಿ... ಸುಮ್ನೆ ಹಾಳಾಗುತ್ತೆ ಅಷ್ಟೇ..."

"ನಮ್ಮ ಮನೇಲಿ ಆಡುವ ಮಕ್ಕಳಿಲ್ಲ, ಹಾಗಾಗಿ ಹಾಳಾಗಿಲ್ಲ. ಮಕ್ಕಳಿಗಿಂತ ಬೊಂಬೆ ಹೆಚ್ಚೇ? ಈ ಗಾಡಿಯನ್ನು ನಿಮ್ಮ ಮಗುವನ್ನು ನಾನು ಕಂಡಾಗ್ನಿಂದ ಇವನಿಗೆ ಕೊಡಬೇಕು ಅಂತ ಅಂದ್ಕೊಂಡಿದ್ದೆ... ಅದಕ್ಕೇ ತಂದೆ... ತಪ್ಪು ತಿಳ್ಕೋಬೇಡಿ."

"ನಂಗೆ ಏನು ಹೇಳ್ಬೇಕೋ ಗೊತ್ತಾಗ್ತಿಲ್ಲ... ನಿಮ್ಮ ಶ್ರೀಮತಿಯವರಿಗೂ ನಮ್ಮ ಮಗುವನ್ನು ಕಂಡರೆ ಬಹಳ ಅಕ್ಕರೆ. ತುಳಸೀ ನೈವೇದ್ಯದ, ಹಾಲು, ದ್ರಾಕ್ಷಿಯನ್ನು ಇವನಿಗೆ ಕರೆದುಕೊಡುತ್ತಾರಂತೆ. ಅದಕ್ಕೋಸ್ಕರ ಇವನು ದಿನಾ ಪೂಜೆ ಸಮಯದಲ್ಲಿ ಅಲ್ಲಿ ಹೋಗಿ ನಿಂತ್ಕೋತಾನಂತೆ... ಮಂಗಳಾ ಹೇಳ್ತಿದ್ಲು."

"ಹಾದು, ಸಾಕ್ಷಾತ್ ಶ್ರೀ ಕೃಷ್ಣನೇ ಬಾಲಕೃಷ್ಣನ ರೂಪದಲ್ಲಿ ಬಂದು ಪ್ರಸಾದವನ್ನು ಸ್ವೀಕರಿಸುತ್ತಾನೆ ಅಂತ ಅವಳ ನಂಬಿಕೆ..."

"ಅವರನ್ನೂ ಕರೆದುಕೊಂಡು ಬರಬಹುದಾಗಿತ್ತು. ನಾನೂ ಅವರನ್ನು ನೋಡಿ ಧನ್ಯಳಾಗ್ತಿದ್ದೆ... ಆಸ್ಪತ್ರೆ ಸೇರಿದಾಗ್ನಿಂದ, ಪೂಜೆ ಇಲ್ಲ ; ಪುನಸ್ಕಾರವಿಲ್ಲ, ಮಡಿ ಇಲ್ಲ ; ಆಚರಣೆ ಇಲ್ಲ ಬೇಜಾರಾಗಿ ಹೋಗಿದೆ. ನಿಮ್ಮಂಥೋರನ್ನ ನೋಡಿ ಕೈಮುಗಿದು

ನಮಸ್ಕರಿಸಿದರೆ, ಅದೇ ಒಂದು ಭಾಗ್ಯ" ಮನಸಾರೆ ಹೊಗಳಿದಳು.

"ಛೇ ಅಂಥಾ ದೊಡ್ಡ ಮಾತುಗಳನ್ನಾಡ್ಬೇಡಿ... ಅವಳು ಯಾರ ಮನೆಗೂ ಬರುವುದಿಲ್ಲ. ಸ್ವಲ್ಪ ಮಡಿ ಜಾಸ್ತಿ ಹಾಗೇ ಇನ್ನೊಂದು ವಿಷಯ... ನಾನು ಈಗ ಇಲ್ಲಿಗೆ ಬಂದು ಹೋಗಿರುವ ವಿಷಯ ಅವಳಿಗೆ ತಿಳಿಯಕೂಡದು..."ವಿನಂತಿಸಿಕೊಂಡ.

ಇವಳ ಮುಖ ಗಂಭೀರವಾಯಿತು ಇವನ ಉದ್ದೇಶ ಏನಿರಬಹುದೆಂದು ಅರ್ಥೈಸಲು ಮನಸ್ಸು ಹಿಂಜರಿಯಿತು. ಕಣ್ಣುಗಳಲ್ಲಿ ಕಳವಳ ಕಂಡಿತ್ತು "ನೀವು ತಪ್ಪು ಭಾವಿಸ್ಬೇಡಿ... ಈ ಆಟದ ಸಾಮಾನು ಅವಳ ತಂದೆ ಮನೆಯದು... ಇದನ್ನು ಅವಳು ಬಹಳ ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಾಳೆ... ನಾನು ಕೊಟ್ಟಿದ್ದೇನೆ ಅಂತ ತಿಳಿದ್ರೆ ಅವಳ ಮನಸ್ಸಿಗೆ ಬೇಸರವಾಗುತ್ತದೆ. ಅದಕ್ಕೆ ಈ ವಿಷಯ ಅವಳಿಗೆ ತಿಳಿಯಕೂಡದು..."

ಅವಳು ಜಿಪುಣೆ, ಕೈ ಎತ್ತಿ ಯಾರಿಗೂ ಏನನ್ನೂ ಕೊಡುವುದಿಲ್ಲ ಎನ್ನುವುದನ್ನು ಸುತ್ತಿ ಬಳಸಿ ಹೀಗೆ ಹೇಳುತ್ತಿದ್ದಾನೆಂದು ತಿಳಿಯಿತು. ಆದರೆ ಹೆಂಡತಿಗೆ ತಿಳಿಯದಂತೆ ಬೇರೆಯವರ ಮನೆಯ ಮಗುವಿಗೆ ಆಟದ ಸಾಮಾನನ್ನು ಕೊಡುವ ಬಯಕೆ ಯಾಕೆ? .. ಆದರೆ ನೀವು ಮಾಡುತ್ತಿರುವುದು ಸರಿಯಿಲ್ಲ ಎಂದು ಹೇಳುವುದಾದರೂ ಹೇಗೆ?.... ಎಷ್ಟಾದರೂ, ಈ ವಠಾರದ ಮಾಲೀಕ ಈತ! ಆಕೆಗೆ ತಿಳಿದರೆ ? ಏನು ಮಾತು ಬರುವುದೋ ಆತಂಕಗೊಂಡಿ ದ್ದಳು. ಅವಳ ಮನಸ್ಸನ್ನು ಓದಿದವನಂತೆ ನುಡಿದ.

"ನಮ್ಮ ಮನೆಯಲ್ಲಿ ಮೂರು ನಾಲ್ಕು ಪೆಟ್ಟಿಗೆಗಳಲ್ಲಿ ಬೊಂಬೆ ಸಾಮಾನುಗಳಿವೆ. ಐದು ಜೊತೆ ಪಟ್ಟದ ಬೊಂಬೆಗಳಿವೆ. ರಾಜರ ದರ್ಬಾರನ್ನು ಪ್ರತಿಬಿಂಬಿಸುವ ಬೊಂಬೆಗಳಿವೆ, ಮೃಗಾಲಯದ ಪ್ರಾಣಿ ಪಕ್ಷಿಗಳಿವೆ... ಆಸ್ಥಾನದ ವಿದ್ವಾಂಸರಿದ್ದಾರೆ... ಸಂಗೀತಗಾರರಿದ್ದಾರೆ, ರೈತರಿದ್ದಾರೆ... ಎಲ್ಲವೂ ಇವೆ. ದಸರಾ ಹಬ್ಬದಲ್ಲಿ, ಪಾಡ್ಯದಿಂದ ವಿಜಯದಶಮಿಯವರೆಗೂ, ನಮ್ಮ ಮನೆಯಲ್ಲಿ ಬೊಂಬೆಗಳನ್ನಿಟ್ಟು ಪ್ರದರ್ಶಿಸುತ್ತೇವೆ. ಈ ಕೆಲಸ ಎಲ್ಲಾ ನನ್ನದು. ಹತ್ತು ಹದಿನಾರು ಮೆಟ್ಟಿಲುಗಳನ್ನು ಮಾಡುತ್ತೇನೆ. ಬಿಳಿಯ ಬಣ್ಣದ ಅದಕ್ಕೆಂದೇ ಇರುವ ಬಟ್ಟೆಗಳನ್ನು ಹೊದೆಸುತ್ತೇನೆ... ಎಚ್ಚರಿಕೆಯಿಂದ ಬೊಂಬೆಗಳನ್ನು ಕೂರಿಸುತ್ತೇನೆ... ಇದು ಪ್ರತಿ ವರ್ಷದ ಕೆಲಸ... ಹಾಗಾಗಿ ಬೊಂಬೆಗಳು ಎಷ್ಟಿವೆ, ಯಾವು ಯಾವು ಇವೆ? ಎನ್ನುವುದು ನನಗೆ ಗೊತ್ತಿರುತ್ತೆ... ಅವಳಿಗೆ ಕಾಣದಂತೆ, ಈ ಗಾಡಿಯನ್ನು ಎತ್ತಿಕೊಂಡು ತಂದು ನಿಮ್ಮ ಮಗುವಿಗೆ ಕೊಟ್ಟಿದ್ದೇನೆ. ಇದು ನನ್ನ ಸಣ್ಣ ಆಸೆ... ದಯವಿಟ್ಟು ಯಾರಿಗೂ ತಿಳಿಸಬೇಡಿ..." ಆತ ವಿನಯದಿಂದ ಕೇಳಿಕೊಂಡಾಗ, ಆಕೆಗೆ ವ್ಯಥೆಯಾಗಿತ್ತು...

ಮನೆಯಲ್ಲಿ ಆಕೆಯದೇ ಸರ್ವಾಧಿಕಾರ ಎಂದು ತಿಳಿದಿತ್ತು... ಈತನಿಗೆ ಯಾವ ಸ್ವಾತಂತ್ರ್ಯವೂ ಇಲ್ಲ... ಆದರೆ, ಭಾವನೆ ಎನ್ನುವುದೂ ಒಂದು ಇರುತ್ತದೆ ಅಲ್ಲವೆ?...

ಆದರೂ ಇಷ್ಟು ವರ್ಷಗಳ ನಂತರ, ಈ ಭಾವನೆಯನ್ನು ವ್ಯಕ್ತಗೊಳಿಸಬೇಕಾದರೆ, ಒಂದು ಕಾರಣ ಇರಲೇಬೇಕು ಅಂತಂದುಕೊಂಡಳು...

"ನಿಮ್ಮ ಮನಸ್ಸು ಅರ್ಥವಾಗುತ್ತದೆ... ಆದರೆ ಮಗುವಿನ ಕೈಯಿಂದ ಈ ಆಟದ ಎತ್ತಿನ ಗಾಡಿಯನ್ನು ಯಾರಿಗೂ ಕಾಣದಂತೆ ಮುಚ್ಚಿಡುವುದಾದರೂ ಹೇಗೆ? ಯಾರಾದರೂ ಕೇಳಿದರೆ ಏನು ಏನೆಂದು ಹೇಳುವುದು?..."

"ನಾನು ಕೊಟ್ಟೆ ಅಂತ ಹೇಳಬೇಡಿ ಅಷ್ಟೇ.. ಮೊನ್ನೆ, ಈ ಮಗುವನ್ನು ಎತ್ತಿ ಕೊಂಡು, ಅಂಗಡಿಗೆ ಕರೆದಕೊಂಡು ಹೋಗಿದ್ದೆ... ಮಗು ಕಳೆದು ಹೋಗಿದೆ ಅಂತ ನೀವುಗಳು ಆತಂಕಗೊಂಡು ಪರದಾಡಿದಿರಿ. ಇದಕ್ಕೆ ನಾನೇ ಕಾರಣ. ಈ ಕಾರಣದಿಂದಾಗಿ ನಿಮ್ಮ ಮಗು ಒಂದೇಟನ್ನು ತಿನ್ನಬೇಕಾಯಿತು. ಅದು ನನ್ನನ್ನು ತುಂಬಾ ನೋಯಿಸಿತು... ನಿಮ್ಮ ಕ್ಷಮೆ ಕೇಳಬೇಕಾಗಿತ್ತು. ಹಾಗೇ ಮಗುವಿಗೆ ಏನಾದರೂ ಉಡುಗೊರೆ ಕೊಡ ಬೇಕೆನ್ನಿಸಿತು. ಮುದ್ದಾಗಿರುವ ಮಗುವಿಗೆ ಮುದ್ದಾದ ಈ ಎತ್ತಿನ ಗಾಡಿಯನ್ನು ಕೊಡ ಬೇಕು ಅಂತೆನ್ನಿಸಿತು ಇದರಿಂದ ನನ್ನ ಮನಸ್ಸಿಗೆ ಸಮಾಧಾನವಾಗುತ್ತದೆ...ನಾನಿನ್ನು ಬರ್ತೀನಿ" ಆತ ಕೈ ಮುಗಿದರು. ಅಷ್ಟರಲ್ಲಿ ಮಂಗಳಾ ಒಳಗೆ ಬಂದಿದ್ದಳು. ಆತ ಯಾಕೆ ಬಂದಿರಬಹುದೆಂದು ಅವಳಿಗೂ ಗೊತ್ತಿರಲಿಲ್ಲ. ತಾಯಿಯ ಕಡೆ ಪ್ರಶ್ನಾರ್ಥಕ ವಾಗಿ ನೋಡಿದಳು.

"ಮಂಗಳಾ ಮಾವಂಗೆ ಕಾಫಿ ಕೊಡು, ಅಪರೂಪಕ್ಕೆ ಬಂದಿದ್ದಾರೆ" ಎಂದಳು.

"ಹಿಂದೊಂದು ಸಲ ಬಂದು, ನಿಮ್ಮ ಮಗಳ ಕೈಯ ಕಾಫಿಯನ್ನು ಕುಡಿದು ಹೋಗಿದ್ದೆ. ಕಾಫಿ ತುಂಬಾ ಚೆನ್ನಾಗಿತ್ತು. ಕುಡಿದೇ ಹೋಗ್ತೀವಿ"ಎನ್ನುತ್ತಾ ಗೋಪಾಲಯ್ಯ ಕುಳಿತ. ಮಕ್ಕಳು ಯಾವ ಯಾವ ತರಗತಿಯಲ್ಲಿ, ಯಾವ ಯಾವ ಶಾಲೆಯಲ್ಲಿ ಓದುತ್ತಿದ್ದಾರೆಂದು ವಿಚಾರಿಸಿಕೊಂಡ. ಮಂಗಳಾ ಬಿಸಿ ಬಿಸಿ ಹೊಗೆಯಾಡುವ ಘಮ ಘಮಿಸುವ ಕಾಫಿಯನ್ನು ತಂದಿತ್ತಳು. ಆತ ನಿಧಾನವಾಗಿ ಹೀರಿ , ಸ್ವಾದವನ್ನು ಅನುಭವಿಸಿದ. ಬಟ್ಟಲ ತಳದಲ್ಲಿ ಒಂದೇ ಒಂದು ಹನಿ ಉಳಿಯದಂತೆ ಕಾಫಿಯನ್ನು ಕುಡಿದು ಬಟ್ಟಲನ್ನು ಕೆಳಗಿಟ್ಟು ಮತ್ತೊಮ್ಮೆ ಬರ್ತೀವಿ ಎಂದು ಹೇಳಿ ಹೊರ ನಡೆದ.

ಬಾಲು ಗಾಡಿಯನ್ನು ಅತ್ತಿಂದಿತ್ತ ಓಡಿಸುತ್ತಿದ್ದ ಯಾವ್ಹಮ್ಮ ಈ ಗಾಡಿ! ಎಷ್ಟು ಚೆನ್ನಾಗಿದೆ!" ಮಂಗಳಾ ಉದ್ಗರಿಸಿ, ಕೈಗೆತ್ತಿಕೊಂಡಳು.

ಮಕ್ಕಳ ಕೈಗೆ ಸಿಗದಂತೆ, ಮೇಲೆ ತೆಗೆದಿಡು.... ಒಂದೇ ದಿನದಲ್ಲಿ ಹಾಳು ಮಾಡಿ ಬಿಡ್ತಾರೆ. ವರ್ಷಾನುಗಟ್ಟಳೆಯಿಂದ ಇವರ ಮನೆಯಲ್ಲಿ ಸಂಭಾಳಿಸಿಟ್ಟು ಕೊಂಡು ಬಂದಿದ್ದಾರೆ. ಇವನಿಗೆ ಅಂತ ಕೊಟ್ಟಿದಾರೆ...."

"ಮತ್ಯಾಕೆ ಕೊಟ್ರು?"

"ಮಗೂಗೆ ಆಡುಕ್ಕೆ ಅಂತ ಕೊಟ್ಟಿದ್ದಾರೆ. ಅದೂ ಹೆಂಡತಿಗೆ ತಿಳಿಯದಂತೆ...

ಅದರ ಬದಲು ಕೊಡದೇ ಇದ್ದಿದ್ದರೆ ಏನಾಗ್ತಿತ್ತು ?... ಬಾಳೆ ಹಣ್ಣು ಕೊಡಿಸೋಕೆ ಅಂತ ಅಂಗಡಿಗೆ ಕರ್ಕೊಂಡು ಹೋಗಿದ್ರಲ್ಲ... ಅವತ್ತು ನೀನು ಮಗುವಿನ ಕೆನ್ನೆಗೆ ಹೊಡೆದದ್ದು ಅವರಿಗೆ ನೋವನ್ನುಂಟು ಮಾಡಿದೆ. ಅದನ್ನು ಮರೆಸಲು, ಪೆಟ್ಟಿಗೆಯಿಂದ, ಈ ಆಟದ ಸಾಮಾನನ್ನು ಯಾರಿಗೂ ಕಾಣಿಸದಂತೆ ತಂದು ಕೊಟ್ಟಿದ್ದಾರೆ. ತೆಗೆದು ಮುಚ್ಚಿಡು...'ಬಾಲು ಅರ್ಥವಾದವನಂತೆ ಆ ಗಾಡಿ ಬೇಕೆಂದು ಹಠ ಮಾಡಿದ... ಆದರೂ ತಾಯಿಯ ಮಾತನ್ನು ಮಂಗಳಾ ಪರಿಪಾಲಿಸಿದಳು. ಅದೇ ಬಟ್ಟೆಯಲ್ಲಿ ಸುತ್ತಿ, ಅಟ್ಟದ ತುದಿಯಲ್ಲಿಟ್ಟಳು... ಅವನನ್ನು ಮುದ್ದಿಸಿ, ಅವನಿಗೆ ಕಲ್ಲು ಸಕ್ಕರೆಯನ್ನು ತಿನ್ನಿಸಿದಳು... ಸ್ವಲ್ಪ ಹೊತ್ತಿನಲ್ಲಿ ಅಳು ನಿಲ್ಲಿಸಿ ಸುಮ್ಮನಾದ.

೦ ೦ ೦

ಈ ಪೆಟ್ಟಿಗೆಗಳನ್ನೆಲ್ಲಾ ಯಾರೋ ಗೂರಾಡಿದ್ದಾರೆ... ಬೀಗ ತೆಗೆದು ಏನನ್ನೋ ಕದ್ದು ತಗೊಂಡಿದ್ದಾರೆ... ನಾನು ಸ್ನಾನಕ್ಕೆ ಹೋಗಿದ್ದಾಗ ಯಾರು ಬಂದಿದ್ರು?" ಲಕ್ಷ್ಮಿದೇವಮ್ಮ ಅಬ್ಬರಿಸಿ ಕೇಳಿದಾಗ, ಗೋಪಾಲಯ್ಯ ಮೆತ್ತಗಾದ.

"ಕದಿಯುವಂಥಾದ್ದೇನಿತ್ತು ಅದರಲ್ಲಿ ಲಕ್ಷ್ಮೀ... ಯಾರು ಬರ್ತಾರೆ ಹೇಳು?"

"ಹಾಗಾದ್ರೆ, ನೀವೋ, ಚಂದ್ರೂನೋ ತೆಗೆದಿರಬೇಕು... ಚಂದ್ರೂನ ಕರೀರಿ... ಕೇಳ್ತೀನಿ."

"ಅವನು ಮನೇಲಿಲ್ಲ... ಇಂಟರ್‌ವ್ಯೂಗೆ ಹೋಗಿದ್ದಾನೆ..."

"ನೀವೆಲ್ಲಿಗೆ ಹೋಗಿದ್ರಿ?... ಮುಂಬಾಗಿಲು ತೆಗೆದಿತ್ತು?"

"ಇಲ್ಲ ಲಕ್ಷ್ಮೀ... ನಾನು ಮನೇಲೆ ಇದ್ದೆ... ಬಾಗಿಲೂ ಹಾಕಿದ ಹಾಗೇ ಇದೆ."

"ಸರಿ ಹಾಗಾದ್ರೆ, ನೀವೇ ತೆಗೆದಿರ್ಬೇಕು. ಏನು ಹುಡುಕ್ತಿದ್ರಿ?"

"ನಾನ್ಯಾಕೆ ಹುಡುಕ್ಲೀ... ಅದರಲ್ಲಿ ಏನಿದೆ ಅಂತ ನಂಗೆ ಗೊತ್ತಿಲ್ವಾ? ನಾನೇ ತಾನೇ ಗೊಂಬೆಗಳನ್ನು ಬಿಟ್ಟೀರಿ ಸುತ್ತಿ ಸುತ್ತಿ ಜೋಪಾನವಾಗಿ ಪ್ರತಿ ವರ್ಷವೂ ತೆಗೆದಿಡೋನು... ನಂಗೇನು ಬೇಕು ನೀನೇ ಹೇಳು..."

"ಹಾಗಾದ್ರೆ ಚಂದ್ರೂದೇ ಕೆಲಸ... ಏನನ್ನೋ ಹುಡುಕಿದ್ದಾನೆ... ಬೊಂಬೆಗಳನ್ನೆಲ್ಲ ಕಲ್ಲಲ್ಲಿ ಮಾಡಿರ್ತಾರೆ... ಅದರಲ್ಲಿ ಒಂದೇ ಒಂದು ಬೊಂಬೆ ಏನಾದ್ರೂ ಹಾಳಾಗಿದ್ರೂ ನಾನು ಅವನನ್ನು ಸುಮ್ಮನೇ ಬಿಡುಲ್ಲ."

"ಅಲ್ಲಾ ಲಕ್ಷ್ಮೀ... ಈ ಬೊಂಬೆ ಪೆಟ್ಟಿಗೇಲಿ ಅವನಿಗೆ ಬೇಕಾದ್ದು ಏನಿರುತ್ತೇ ಅಲ್ಲದೇ ಅವನು ಮನೆಯವನು... ಕೇಳದೇ ಇದನ್ನೆಲ್ಲ ಯಾಕೆ ತೆಗೀತಾನೆ?"

"ಮನೆಯವನ ಥರ ಎಂದಾದ್ರೂ ಇದಾನಾ?... ಏನೋ ಚಿನ್ನಬೆಳ್ಳಿ ಮುಚ್ಚಿಟ್ಟಿರಬಹುದು ಅನ್ನೋ ಕುತೂಹಲ ಇರಬಹುದು. ನಿಮ್ಮ ತಾಯಿ ಹೇಳಿಕೊಟ್ಟಿದ್ದರೂ ಅನುಮಾನವಿಲ್ಲ... ಅವರನ್ನೇ ಕೇಳ್ತೀನಿ. ನಂಗೇನು ಭಯ"

"ಅಮ್ಮಂಗೆ ಹಾಗೆಲ್ಲಾ ಅವಮಾನ ಮಾಡ್ಬೇಡ. ಅವಳು ಜೋಷಿಯ ಮನೆಗೆ ಹೋಗಿದಾಳೆ. .. ಅವಳಿಗೆ ಬೇಕಾದ್ದು ಏನೂ ಇಲ್ಲ. ಅಲ್ಲದೇ ಅವಳಿಗೆ ಏನೂ ಬೇಕಿಲ್ಲ. ರಾಮಾಕೃಷ್ಣಾ ಅಂತ ಅವಳ ಪಾಡಿಗೆ ಅವಳು ಇದ್ದಾಳೆ... ಸುಮ್ನೇ ಸಂದೇಹ ಪಡ್ಬೇಡ... ಅವಳು ನನ್ನ ತಾಯಿ. ನಿನಗೆ ಅತ್ತೆ..." ಕೈ ಮುಗಿದ.

"ಸರಿ, ಅವರನ್ನ ನಾನು ಏನೂ ಕೇಳುಲ್ಲ. ಆದರೆ ಚಂದ್ರೂನ ಮಾತ್ರ ನಾನು ಬಿಡುಲ್ಲ... ಕೇಳಿಯೇ ಕೇಳ್ತೀನಿ."

"ಸರಿ ಇವತ್ತು ಮಾತ್ರ ಏನನ್ನು ಕೇಳ್ಬೇಡ. ಇವತ್ತು ಇಂಟರ್‌ವ್ಯೂಗೆ ಹೋಗಿದಾನೆ. ಏನಾಗಿರುತ್ತೋ ಏನೋ... ಬರ್‍ತಿದ್ದ ಹಾಗೇ ಮನಸ್ಸಿಗೆ ಬೇಜಾರು ಮಾಡ್ಬೇಡ..."

"ಆ ಹ ಹಾ... ಪುತ್ರ ವಾತ್ಸಲ್ಯ ! ಕುಪ್ಪಳಿಸ್ತಾ ಇದೆ.!! ಅದಕ್ಕೇ ಇಂಥೋರ್‍ನೆಲ್ಲಾ ನಾನು ದೂರ ಇಟ್ಟಿರೋದು. ಬಡವರ ಮನೆ ಹುಡುಗ ಅಂತ ಅಮ್ಮ ಕನಿಕರದಿಂದ ದತ್ತು ತೆಗೆದುಕೊಳ್ಳುವಂತೆ ಪುಸಲಾಯಿಸಿದಳು. ಅವಳಿಗೇನು ಗೊತ್ತಿತ್ತು ಇವನು ಇಂಥೋನು ಅಂತ..."

"ನಿಜ ತಿಳೀದೇ ಏನೇನೋ ಮಾತಾಡ್ಬೇಡ... ಲಕ್ಷ್ಮೀ... ಅದರಲ್ಲಿ ರವಿಕೆ ಖಣಗಳಿವೆ ಅಂತ ನೀನೇ ಹೇಳಿದ್ಯಲ್ಲಾ... ನೀನೇ ತೆಗೆದಿರಬಹುದು..."

"ನನ್ನನ್ನೇ ಸುಳ್ಳು ಮಾಡ್ಬೇಡಿ ನೀವು. ನಾನು ತೆಗೆದಿದ್ರೆ ನಿಮ್ಮನ್ನು ಕೇಳ್ತಿದ್ನಾ?... ನನಗೀಗ ರವಿಕೆ ಖಣ ಯಾಕೆ ... ಈಗೇನು ಹಬ್ಬವೇ ಹರಿದಿನವೆ?"...

"ಜ್ಞಾಪಿಸ್ಕೋ ಲಕ್ಷ್ಮೀ... ಜೋಷಿಯ ಹೆಂಡತಿಗೆ, ಅಥವಾ ಅವರ ಮಗಳಿಗೆ ಎಲೆ ಅಡಿಕೆ ಜೊತೇಲಿ ಕೊಡೋಕೆ ತೆಗೆದಿರಬಹುದು... ಸರಿಯಾಗಿ ಜ್ಞಾಪಿಸ್ಕೋ..."

"ಹಾಗಾದ್ರೆ ನೀವೇ ತೆಗೆದಿರ್‍ಬೇಕು... ನಿಮಗೆ ಆ ಕೆಲಸ ಹೇಳಿದ್ದ ನೆನಪು ನನಗೆ ನಿಮಗೆ ಈ ನಡುವೆ ಮರವೆ ಜಾಸ್ತಿ ಆಗ್ತಿದೆ... ನೀವು ತೆಗೆದಿದ್ರಾ ನೆನಪಿಸ್ಕೊಳ್ಳಿ..."

"ಸರಿ, ಲಕ್ಷ್ಮೀ ಜ್ಞಾಪಿಸ್ಕೊಳ್ತೀನಿ ಸ್ವಲ್ಪ ಸಮಯಕೊಡು, ನೀನು ಹೇಳಿದ ಹಾಗೇ ನನಗೆ ಮರೆವಾಗ್ತಿದೆ. ಅರವತ್ತು ವರ್ಷ ಆಯ್ತಲ್ಲ... ಇವತ್ತು ಬೆಳಿಗ್ಗೆಯಿಂದ ನಾನು ಏನೇನು ಕೆಲಸ ಮಾಡಿದೆ?... ಸ್ನಾನ ಮಾಡ್ದೆ... ದೇವರಪೂಜೆ ಮಾಡ್ದೆ, ತಿಂಡಿ ತಿಂದೆ... ಆಮೇಲೆ... ಆಮೇಲೆ... ಈ ಪೆಟ್ಟಿಗೇನ ತೆಗೆದು ರವಿಕೆ ಖಣ ಎಷ್ಟಿದೆ ಅಂತ ನೋಡಿ ಅಂತ ನೀನು ಹೇಳ್ದೆ... ನಾನು ಪೆಟ್ಟಿಗೆ ಬಾಗಿಲು ತೆಗೆದೆ... ಅಷ್ಟರಲ್ಲಿ ನೀನು ಕರಿಬೇವಿನ ಸೊಪ್ಪನ್ನು ಕೊಯ್ಕೊಂಡು ಬನ್ನಿ ಅಂತ ಹೇಳ್ದೆ... ನಾನು ಹಿತ್ತಿಲಿಗೆ ಹೋದೆ... ಆಮೇಲೆ ಏನ್ಮಾಡ್ದೆ ಅಂತ ಜ್ಞಾಪಕಾನೇ ಇಲ್ಲ ನೋಡು... ಈಗ ತೆಗೆದುಕೊಡ್ಲಾ?..."

"ಏನೂ ಬೇಡ... ನಾನೇ ನೋಡ್ತೀನಿ... ಯಾವ್ಯಾವ ಪೆಟ್ಟಿಗೇಲಿ ಏನೇನಿದೆ, ಎಷ್ಟೆಷ್ಟಿದೆ ಅಂತ ನನಗೆ ಚೆನ್ನಾಗಿ ನೆನಪಿದೆ... ನಿಮ್ಮ ಹಾಗೆ ಎಲ್ಲಾ ಪೆಟ್ಟಿಗೇನೂ ಗೂರಾಡುಲ್ಲ. ನಾನು ನಿಮಗೆ ಹೇಳಿದ್ದೇ ತಪ್ಪು... ಈಗ ನಿಮ್ಮಮ್ಮ ಹೇಗೂ

ಮನೇಲಿಲ್ಲ, ಈಗಲೇ ನೋಡಿ ಬಿಡ್ತೀನಿ..."

ಅಷ್ಟರಲ್ಲಿ ಮುಂಬಾಗಿಲ ಸದ್ದಾಗಿತ್ತು... 'ಗೋಪೀ ಗೋಪೀ' ಅಂತ ತಾಯಿ ಕರೆದದ್ದು ಕೇಳಿಸಿತ್ತು. ಅವಳ ಕಡೆ ನೋಡಿ ನಸುನಕ್ಕ. ಅವಳು ಉಗ್ರಾಣದ ಬಾಗಿಲನ್ನು ಭದ್ರಪಡಿಸಿದಳು "ಬಂದೇ ಬಿಟ್ರು ನಿಮ್ಮಮ್ಮ. ಅಡಿಗೆ ಆಗಿದೆ, ಎಲ್ರಿಗೂ ಬಡಿಸ್ತೀನಿ. ಎಲೆ ಹಾಕಿ ನಿಮ್ಮಮ್ಮನ್ನ ಕರೀರಿ..." ಗೋಪಾಲ ನೆಮ್ಮದಿಯ ನಿಟ್ಟುಸಿರನ್ನು ಬಿಟ್ಟು ಮುಂಬಾಗಿಲಿಗೆ ಬಂದ.

"ನೋಡು ಎಷ್ಟೊಂದು ಪ್ರಸಾದ ಕೊಟ್ಟಿದಾರೆ... ನೀನೂ ತಿನ್ನು ನಿನ್ನ ಹೆಂಡತಿಗೂ ಕೊಡು, ಚಂದ್ರೂಗು ಒಂದಿಷ್ಟು ತೆಗೆದಿಡು." ಪ್ರಸಾದವನ್ನು ಕೈಗೆತ್ತಿಕೊಂಡು ಕಣ್ಣಿಗೊತ್ತಿಕಂಡ.

"ಎಲ್ಲಿದಂತಮ್ಮಾ... ಎಷ್ಟು ಬಗೆ ಇದೆ?"

"ಬೇರೆ ಬೇರೆ ಊರ್‍ನಿಂದ ಯಾರ್‍ಯಾರೋ ನೆಂಟರೆಲ್ಲಾ ಬಂದಿದ್ದಾರೆ... ಅಲ್ಲಿಯ ದೇವಸ್ಥಾನಗಳಿಗೆ ಪೂಜೆ ಮಾಡಿಸುಕ್ಕೆ ಕೊಟ್ಟಿದ್ರಂತೆ. ಕೂತ ಜಾಗದಲ್ಲೇ ನಮಗೆ ಪ್ರಸಾದ ಸಿಕ್ತು..."

"ಎಲೆ ಹಾಕ್ತೀನಿ ಊಟಕ್ಕೇಳು..."

"ಊಟ ಮಾಡಿ ಅಂತ ಬಲವಂತ ಮಾಡಿದ್ರು. ನೀವುಗಳು ಕಾಯ್ತಿರ್‍ತೀರಿ ಅಂತ ಹಾಗೇ ಬಂದ್ಬಿಟ್ಟೆ... ನಾಳೆ ನಾಡಿದ್ದು ಮಾಡ್ತೀನಿ ಅಂತ ಹೇಳಿದ್ದೀನಿ... ನಡೀ..." ಎಂದಳು. ಇಬ್ಬರೂ ಒಳಕ್ಕೆ ಬಂದರು.

ಲಕ್ಷ್ಮೀದೇವಮ್ಮ ಇಬ್ಬರಿಗೂ ಮೌನದಿಂದ ಬಡಿಸಿದಳು. "ಎಲ್ಲಾ ಎಷ್ಟು ಚೆನ್ನಾಗಿ ಅಣಿ ಮಾಡ್ಕೊಂಡಿದ್ದಾರೆ ಅಂತ. ಬೀಗರ ಮನೆಗೆ ಇಡೋದು, ಕೊಡೋದು, ಕಳಿಸೋದು ಎಲ್ಲವನ್ನು ಅವರ ನೆಂಟರೆಲ್ಲಾ ಸೇರಿ ತಂದಿದ್ದಾರೆ. ಎಲ್ಲರೂ ಎಷ್ಟು ಒಗ್ಗಟ್ಟು ಅಂತ... ಒಬ್ಬರ ಮಾತನ್ನು ಒಬ್ಬರು ತೆಗೆದು ಹಾಕುಲ್ಲ. ಅನ್ಯೋನ್ಯವಾಗಿದ್ದಾರೆ. ನೋಡಿದ್ರೆ ಸಂತೋಷವಾಗುತ್ತೆ." ತಾಯಿ ಬಾಯಿ ತುಂಬಾ ಹೊಗಳಿದಾಗ, ಗೋಪಾಲ ಹೆಂಡತಿ ಯನ್ನೇ ಗಮನಿಸುತ್ತಿದ್ದ. ಮೌನವಾಗಿ ಊಟ ಮಾಡುತ್ತಾ ಮನದಲ್ಲೇ ಏನೋ ಯೋಚಿಸುತ್ತಿದ್ದ. ಇಬ್ಬರ ಊಟವೂ ಮುಗಿದಿತ್ತು. ಹೆಂಡತಿ ಊಟಕ್ಕೆ ಕುಳಿತುಕೊಳ್ಳು ವುದನ್ನೇ ಕಾಯುತ್ತಿದ್ದ. ಬಚ್ಚಲು ಮನೆಯಿಂದ, ಬಕೇಟ್‌ನಲ್ಲಿ ನೀರನ್ನು ತೋಡಿಕೊಂಡು ತಂದು ಹಿಂಬಾಗಿಲ ಬಳಿ ಇಟ್ಟು, ಆ ಕಡೆಯಿಂದಲೇ, ರಾಮರಾಯರ ಮನೆಗೆ ಬಂದ. ಮಂಗಳಾ ಹಿತ್ತಿಲಿನಲ್ಲಿ ಹರವಿದ್ದ, ಒಣಗಿದ್ದ ಬಟ್ಟೆಗಳನ್ನು ತೆಗೆಯುತ್ತಿದ್ದಳು. ಅವಳನ್ನು ಸಮೀಪಿಸಿದ, ಅವಳು ತಿರುಗಿ ನೋಡಿದಳು.

"ಮಂಗಳಾ, ನನಗೊಂದು ಉಪಕಾರ ಮಾಡ್ತೀಯೇನಮ್ಮಾ..." ಸಂಕೋಚ ಮುಜುಗರಗಳಿಂದ ಕೇಳಿದ.

"ಹೇಳಿ ಮಾವ... ಆಗೋದಾದ್ರೆ ಮಾಡ್ತೀನಿ." ಗೋಪಾಲ ಅತ್ತಿತ್ತ ನೋಡಿದ... ಕೈ ಕೈ ಹಿಸುಕಿಕೊಂಡ... ಜೋಷಿಯ ಮನೆಯ ಕಡೆಯಿಂದ ಸದ್ದು ಗದ್ದಲ ಕೇಳಿ ಬರುತ್ತಿತ್ತು... ತಮ್ಮಿಬ್ಬರನ್ನು ಯಾರಾದರೂ ಗುರುತಿಸುವ ಮೊದಲು, ಕೇಳಿಬಿಡಬೇಕೆಂದುಕೊಂಡ. ಅವನು ಅನುಮಾನಿಸುತ್ತಿರುವುದನ್ನು ಮಂಗಳಾ ಗಮನಿಸಿದಳು. "ಮಾವಾ... ಏನು ವಿಷಯ ?... ನನ್ನ ತಮ್ಮಂದಿರು ಏನಾದರೂ ತಪ್ಪು ಮಾಡಿದಾರಾ ?..." ಹಣ್ಣು ಗಿಣ್ಣು ಕಿತ್ಕೊಂಡು ತಿಂದಿದಾರಾ?"

"ಇಲ್ಲಮ್ಮ ತಪ್ಪು ನನ್ನಿಂದ ನಡೆದು ಹೋಗಿದೆ ಹೇಗೆ ಹೇಳ್ಬೇಕು ಅಂತ ನಂಗೆ ಗೊತ್ತಾಗ್ತಿಲ್ಲ... ಬೇರೆ ಯಾರ್ಗೂ ಈ ವಿಷಯ ಗೊತ್ತಾಗಬಾರದು"... ತೊದಲಿದ.

"ಏನಾಯ್ತು ಹೇಳಿ ಮಾವ...ನಾನು ಯಾರಿಗೂ ಹೇಳುಲ್ಲ"

"ಈ ಬೆಳಿಗ್ಗೆ ನಾನು, ನಿನ್ನ ತಮ್ಮನಿಗೆ ಅಂತ ಒಂದು ಆಟದ ಗಾಡಿಯನ್ನು ಕೊಟ್ಟೆನಲ್ಲಮ್ಮ... ಅದನ್ನು ವಾಪಸ್ಸು ತಂದು ಕೊಡ್ತೀಯಾ!" ನೇರವಾಗಿ ಅವಳ ಕಡೆ ನೋಡಲಾಗಿರಲಿಲ್ಲ. ಅವಳ ಮುಖದಲ್ಲಿ ನೆರಿಗೆಗಳು ಮೂಡಿದ್ದವು... ಬೆಳಿಗ್ಗೆ ಕೊಟ್ಟಿದ್ದನ್ನು ಇವತ್ತೇ ಯಾಕೆ ವಾಪಸ್ಸು ಕೇಳುತ್ತಿರಬಹುದೆಂದು ಅವಳಿಗೆ ಅರ್ಥವಾಗಿರಲಿಲ್ಲ ಯಾಕೆ? ಎಂದು ಕೇಳಬೇಕೆಂದೆನಿಸಲಿಲ್ಲ.

"ಸರಿ ಮಾವ ... ಈಗ್ಲೇ ತಂದು ಕೊಡ್ತೀನಿ ಬನ್ನಿ"

"ಇಲ್ಲ ನಾನು ಅಲ್ಲಿಗೆ ಬರುಲ್ಲ. ಇಲ್ಲಿಗೇ ತಂದುಕೊಡು ಹಾಗೇ ಈ ವಿಷಯವನ್ನು ನಿನ್ನ ತಾಯಿಗೂ ತಿಳಿಸ್ಬೇಡ. ಅವರು ಏನಂದ್ಕೊಡಾರು! ಕೊಟ್ಟ ವಸ್ತುವನ್ನು ಮತ್ತೆ ಹಿಂದಕ್ಕೆ ಕೇಳಿ ತೆಗೆದುಕೊಳ್ಳುವಾಗ, ಎಷ್ಟು ನೋವಾಗುತ್ತದೆ. ಮನಸ್ಸಿಗೆ ಅಂತ ಯಾರಿಗೂ ಅರ್ಥವಾಗುಲ್ಲ." ಆತನ ಗಂಟಲು ಕಟ್ಟಿತು.

"ಸರಿ ಮಾವ ಅಮ್ಮನಿಗೆ ಕಾಣದಂತೆ ತಂದುಕೊಡ್ತೀನಿ"ಅವಳು ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ಒಳಗೆ ಬಂದಳು. ತಾಯಿ ನಿದ್ರಿಸುತ್ತಿದ್ದಳು. ಸದ್ದಾಗದಂತೆ, ಕುರ್ಚಿಯನ್ನು ಹಾಕಿಕೊಂಡು, ಅಟ್ಟದ ತುದಿಯಲ್ಲಿಟ್ಟಿದ್ದ ಮರದ ಆಟದ ಗಾಡಿಯನ್ನು ಸುತ್ತಿದ್ದ ಬಟ್ಟೆಯ ಸಮೇತ ಎತ್ತಿಕೊಂಡು ಕೆಳಗಿಳಿದಳು. ಹಿತ್ತಿಲಿನಲ್ಲಿ ಅವಳಿಗಾಗಿ ಕಾಯುತ್ತಾ ನಿಂತಿದ್ದ ಗೋಪಾಲಯ್ಯನ ಕೈಯಲ್ಲಿಟ್ಟಳು..." ಸರಿಯಾಗಿದ್ಯಾ ನೋಡ್ಕೊಳ್ಳಿ ಮಾವ... ಎಂದಳು.

"ಪರವಾಗಿಲ್ಲಮ್ಮ ಆಮೇಲೆ ನೋಡ್ತೀನಿ ಈಗ ಹೊತ್ತಾಯ್ತು ನಾನು ಹೋಗ್ಬೇಕು ಎಂದು ಹೇಳಿ, ಆ ಆಟಿಕೆಯನ್ನು ಭುಜದ ಮೇಲೆ ಹೊದೆದಿದ್ದ ಟವೆಲ್ಲಿನ ಮರೆಯಲ್ಲಿ ಅಡಗಿಸಿ, ತನ್ನ ಮನೆಯ ಹಿತ್ತಲಿನ ಕಡೆ ಸರಸರನೆ ನಡೆದು ಮಾಯವಾದ ಅಲ್ಲಿಯೇ ಒಂದುಗಳಿಗೆ ನಿಂತಿದ್ದ ಮಂಗಳಾ, ಬಟ್ಟೆಗಳನ್ನೆತ್ತಿಕೊಂಡು ಒಳ ಬಂದಳು.

ಒಳ ಬಂದ ಗೋಪಾಲಯ್ಯ ಹೆಂಡತಿಯ ಊಟ ಇನ್ನೂ ಮುಗಿದಿಲ್ಲವೆನ್ನುವುದನ್ನು

ಗಮನಿಸಿ, ಸಮಾಧಾನದ ನಿಟ್ಟುಸಿರನ್ನು ಬಿಟ್ಟ ಎಲೆಯನ್ನು ಮಡಚಿ, ಹಿತ್ತಲಿನಲ್ಲಿ ಎಸೆದು ಕೈ ತೊಳೆದು ಅವಳು ಹಿಂತಿರುಗುವಷ್ಟರಲ್ಲಿ ಪೆಟ್ಟಿಗೆಯೊಳಗೆ, ಆ ಆಟಿಕೆಯನ್ನು ಸೇರಿಸಿ, ಬಾಗಿಲನ್ನು ಮುಚ್ಚಿದ. ಒಂದು ಪಣವನ್ನು ಗೆದ್ದಷ್ಟು ನಿರಾಳವೆನಿಸಿದ್ದರೂ, ತನ್ನ ಕೃತ್ಯಕ್ಕೆ ತನಗೇ ಹೀನಾಯವೆನಿಸಿತ್ತು... ತನ್ನ ಸ್ಥಿತಿಗೆ ತಲೆ ತಗ್ಗಿಸುವಂತಾಗಿತ್ತು.

"ಹೇಗಾಯ್ತೋ ಇಂಟರ್‌ವ್ಯೂ? ಚೆನ್ನಾಗಿ ಮಾಡಿದ್ಯಾ?"ಗೋಪಾಲ ಚಂದ್ರು ಮನೆಗೆ ಬಂದ ನಂತರ ಕೇಳಿದ.

"ಹೂಂ, ಎಲ್ಲಾ ಸರಿಯಾಗಿತ್ತು. ಕೆಲಸ ಸಿಗಬಹುದು ಅಂತ ಕಾಣ್ಸುತ್ತೆ"

"ಮೊದಲು ಕೈ ಕಾಲು ತೊಳೆದು ದೇವರಿಗೆ ನಮಸ್ಕಾರ ಮಾಡು. ಗೋಪಾಲ ಇವನಿಗೆ ಪ್ರಸಾದ ಕೊಡು. ಎಲ್ಲಾ ಒಳ್ಳೇದಾಗಲಿ" ತಾಯಿ ನುಡಿದಳು.

"ಸುಸ್ತಾಗಿ ಬಂದಿದ್ದಾನೆ, ಹಾಗೇ ಕಾಫಿ ತಿಂಡೀನೂ ಕೊಡ್ತೀನಿ" ಎಂದು ಹೇಳಿಕೊಂಡು ಗೋಪಾಲ ಚಂದ್ರುವಿನೊಡನೆ ಒಳಮನೆಗೆ ಬಂದ.

ವಠಾರದಲ್ಲಿ ಮದುವೆ ಮನೆಯ ಗದ್ದಲ ತುಂಬಿತ್ತು, ಬಗೆ ಬಗೆ ಭಕ್ಷ್ಯ ಭೋಜ್ಯಗಳ ತಯಾರಿಕೆಯ ವಾಸನೆ ತುಂಬಿಕೊಂಡಿತ್ತು, ಲಕ್ಷ್ಮೀದೇವಮ್ಮ ಬೇಸರದಿಂದ ಕೆಟ್ಟ ಮುಖ ಮಾಡಿಕೊಂಡು ಕುಳಿತಿದ್ದಳು. ಗೋಪಾಲ, ಮಗನಿಗೆ ತಾನೇ ಕಾಫಿ ತಿಂಡಿಯನ್ನು ತೆಗೆದಿಟ್ಟ. ಚಂದ್ರು ದೇವರಿಗೆ ನಮಸ್ಕರಿಸಿ ತಿಂಡಿ ತಟ್ಟೆಯನ್ನು ಕೈಗೆತ್ತಿಕೊಂಡ."ಫಲಿತಾಂಶ ತಿಳಿಯೋದು ಇನ್ನೂ ತಡ ಆಗುತ್ತೆ, ನಾನು ಊರಿಗೆ ಹೋಗಿ ಬರ್ತೀನಿ" ಎಂದ ಚಂದ್ರು...

"ಸುಮ್ನುಸುಮ್ನೆ ಈಗ್ಯಾಕೆ ಊರಿಗೆ ಹೋಗ್ಬೇಕು, ಅಮ್ಮನೂ ಇಲ್ಲೇ ಇದ್ದಾಳೆ."

"ಅಜ್ಜೀ ಬರೋದಾದ್ರೆ ಅವರನ್ನು ಕರ್‍ಕೊಂಡು ಹೋಗ್ತೀನಿ, ಫಲಿತಾಂಶ ತಿಳಿದ ಮೇಲೆ ಬರ್ತೀನಿ, ಅಲ್ಲೀವರ್‍ಗೂ ಅಲ್ಲೇ ಇರ್ತೀವಿ."

"ಯಾಕೆ ? ಇಲ್ಲಿ ಬೇಜಾರಾಗ್ತಿದೆಯಾ?...

"ಮುಂದಿನವಾರ ನನ್ನ ಸ್ನೇಹಿತನೊಬ್ಬನ ಮದುವೆ ಇದೆ. ಹೋಗ್ಬೇಕು, ಹಾಗೇ ಮೈಸೂರ್‍ನಲ್ಲಿ ಸ್ವಲ್ಪ ಕೆಲಸ ಇದೆ.

"ಸರಿ ಹೋಗೂವಂತೆ, ನಾಳೆ ನಾಡಿದ್ದು ಇಲ್ಲಿ ಜೋಷಿಗಳ ಮಗಳ ಮದುವೆ ಇದೆಯಲ್ಲ... ಆಮೇಲೆ ಹೋಗು. ತುಂಬಾ ಬಲವಂತ ಮಾಡಿ ಕರೆದಿದಾರೆ..."

"ನನಗೆ ಅವರ್‍ಯಾರ ಪರಿಚಯವಿಲ್ಲ. ನೀವುಗಳು ಹೋಗ್ಬನ್ನಿ..." ಎಂದು ಅವನು ಉದಾಸೀನದಿಂದ ನುಡಿದು ತಿಂಡಿಯನ್ನು ಮುಗಿಸಿದ. ಕಾಫಿಯನ್ನು ಕುಡಿದು ಎದ್ದ. ನಾನು ಸ್ವಲ್ಪ ಸುತ್ತಾಡಿ ಬರ್ತೀನಿ..." ಎಂದು ಹೊರಟವನನ್ನು ಅಜ್ಜಿ ಪ್ರಶ್ನಿಸಿದಳು.

"ಈಗ್ತಾನೇ ಬಂದ್ಯಲ್ಲೋ... ಮತ್ತೆ ಹೊರಟ್ಯಲ್ಲಾ... ಮನೇಲಿ ಕಾಲು ನಿಲ್ಲಲ್ವಾ? ..."

"ಮದುವೆ ಛತ್ರದಲ್ಲಿ ಕುಳಿತ ಹಾಗಿದೆ... ಅಡಿಗೆ ತಿಂಡಿ ವಾಸನೆ ತುಂಬಿಕೊಂಡಿದೆ... ಹೊಸಗಾಳೀಲಿ ಸುತ್ತಾಡಿಕೊಂಡು ಬರ್ತೀನಿ. ಬೇಕಾದ್ರೆ ನೀವೂ ಬನ್ನಿ..." ಅವನು ಕರೆದ. ಅಜ್ಜಿ ಸುಮ್ಮನೇ ನಕ್ಕಳು. ಇವನು ಚಪ್ಪಲಿ ಮೆಟ್ಟಿ, ಮೆಟ್ಟಿಲುಗಳನ್ನಿಳಿದ. ಇಷ್ಟಾದರೂ ಲಕ್ಷ್ಮಿದೇವಮ್ಮ ಕುಳಿತಲ್ಲಿಂದ ಎದ್ದಿರಲಿಲ್ಲ, ಏನನ್ನೂ ವಿಚಾರಿಸಿರಲಿಲ್ಲ. ಚಂದ್ರುಗೆ ಬೇಸರವಾಗಿತ್ತು, ನನ್ನ ಬಗ್ಗೆ ಯಾವ ಆಸಕ್ತಿಯೇ ಇಲ್ಲದವರ ಮನೆಯಲ್ಲಿ ತಾನು ಹೇಗೆ ಇರೋದು ? ಯಾಕೆ ಇರ್ಬೇಕು?... ಈ ಊರಿನ ಸಹವಾಸವೇ ಬೇಡ, ಮತ್ತೆ ಮೈಸೂರಿಗೇ ಹೊರಟುಹೋದರೆ...? ಅಜ್ಜಿ ಮಾತಿಗೆ ಒಪ್ಪಿ ಇಲ್ಲಿಗೆ ಬರಬಾರದಾಗಿತ್ತು ಎಂದು ಆಲೋಚಿಸುತ್ತಾ ಹೆಜ್ಜೆ ಹಾಕಿದ. ಗೇಟಿನ ಬಳಿಗೆ ಬಂದಾಗ, ಹಿಂದಿನಿಂದ ಯಾರೋ ಇಬ್ಬರು ಹುಡುಗರು ಓಡಿಬಂದು ಆಕಸ್ಮಿಕವಾಗಿ ತಳ್ಳಿದರು. ಆ ಹೊಡೆತಕ್ಕೆ ಅವನು ಮುಗ್ಗುರಿಸಿದ. ಆ ರಭಸದಲ್ಲಿ ತನ್ನ ಮುಂದೆ ಬರುತ್ತಿದ್ದ ಯುವತಿಯ ಮೇಲೆ ಬಿದ್ದು... ಇಬ್ಬರೂ ಒಟ್ಟಾಗಿ ನೆಲಕ್ಕೆ ಉರುಳಿದರು. ಅಟ್ಟಿಸಿಕೊಂಡು ಓಡುತ್ತಿದ್ದ ಹುಡು ಗರು ಪೆಚ್ಚಾಗಿ ಅಲ್ಲಿಯೇ ನಿಂತರು. ಬಿದ್ದವರು, ಇಬ್ಬರು ಸಾವರಿಸಿಕೊಂಡು ಎದ್ದರು. ಆ ಯುವತಿ, ತನ್ನ ಕೈ ಮೈಗೆ ಅಂಟಿಕೊಂಡಿದ್ದ ಧೂಳನ್ನು ಕೊಡವಿಕೊಂಡಳು. ಮರಗಳ ಸಂದಿಯಿಂದ ತೂರಿ ಬರುತ್ತಿದ್ದ ಅಲ್ಪ ಸ್ವಲ್ಪ ಬೆಳಕಿನಲ್ಲಿ ಅವಳು ಯಾರೆಂದು ಇವನಿಗೆ ತಿಳಿಯಲಿಲ್ಲ. "ಕ್ಷಮಿಸಿ... ಅಕಸ್ಮಾತ್ತಾಗಿ ಈ ಹುಡುಗರು ತಳ್ಳಿದ್ದರಿಂದ ಹೀಗಾಯ್ತು... ನನ್ನ ತಪ್ಪೇನಿಲ್ಲ. ನಿಮಗೆ ತುಂಬಾ ಪೆಟ್ಟಾಗಿರ ಬಹುದು..." ಎಂದು ಹೇಳಿ, ಕೆಳಗೆ ಬಿದ್ದಿದ್ದ ಅವಳ ಪರ್ಸನ್ನು ತೆಗೆದುಕೊಟ್ಟ. ಅವಳು ಏನೂ ಹೇಳದೇ, ವಠಾರದ ಕಾಲು ಹಾದಿಯಲ್ಲಿ ನಡೆದಳು. ಇವನು ಅಲ್ಲಿಯೇ ನಿಂತು ಅವಳು ಎಲ್ಲಿಗೆ ಹೋಗುವಳೆಂದು ನೋಡಿದ. ಆದರೆ, ಜೋಷಿಯ ಮನೆಯ ಮುಂದೆ ಹಾಕಿದ್ದ ಚಪ್ಪರದ ಕೆಳಗೆ ನುಸುಳಿದಾಗ, ಅಲ್ಲಿದ್ದ ಹೆಂಗೆಳೆಯರ ನಡುವೆ ಅವಳು ಎಲ್ಲಿಯೋ ಮಾಯ ವಾದಳು... ಮತ್ತೆ ಕಾಣಲಿಲ್ಲ. ಅವಳು ಯಾರಿರಬಹುದೆಂದು ಗುರುತಿಸಲು ಸಾಧ್ಯವಾಗಿರಲಿಲ್ಲ.

ಯಾರೋ ಏನೋ ಈ ಹುಡುಗರ ಹಾವಳಿಯಿಂದಾಗಿ ಬಿದ್ದು ಪೆಟ್ಟು ಮಾಡಿ ಕೊಂಡಳು. ಏನಂದುಕೊಂಡಳೋ ಏನೋ ಅಂತದುಕೊಂಡರೂ, ನಡೆದುದನ್ನು ಮನಸ್ಸಿನಿಂದ ತಳ್ಳಿಹಾಕಲು ಆಗಿರಲಿಲ್ಲ. ತನಗೆಂದೂ ಇಂಥ ಅನುಭವವಾಗಿರಲಿಲ್ಲ. ಒಬ್ಬ ಹೆಂಗಸಿಗೆ ಡಿಕ್ಕಿ ಹೊಡೆಯುವುದೆಂದರೆ...? ಯಾರಿಗಾದರೂ ತಿಳಿದರೆ ಏನಂದು ಕೊಂಡಾರು?.... ಸಧ್ಯ ಸ್ವಲ್ಪ ಕತ್ತಲೆಯಿದ್ದುದರಿಂದ, ನಾನ್ಯಾರೆಂದು ಯಾರಿಗೂ ತಿಳಿಯದು. ಅವಳ್ಯಾರೆಂದು ನನಗೂ ತಿಳಿಯಲಿಲ್ಲ, ಒಂಥರಕ್ಕೆ ಒಳ್ಳೆಯದೇ ಆಯ್ತು... ಅಂತಂದುಕೊಂಡು ಕಾಂಪೌಂಡನ್ನು ದಾಟಿದ. ರಸ್ತೆಯ ತಿರುವಿಗೆ ಹೋಗುವಷ್ಟರಲ್ಲಿ

ಯಾಕೋ ಬೇಸರವೆನಿಸಿತು. ಅದೇ ರಸ್ತೆಯಲ್ಲಿ ಹಿಂದಕ್ಕೆ ಹೆಜ್ಜೆ ಹಾಕಿದ. ವಠಾರದ ಹೆಬ್ಬಾಗಿಲಿಗೆ ಬರುವಷ್ಟರಲ್ಲಿ, ಒಂದಿಬ್ಬರು ಟಾರ್ಚ್ ಬೆಳಕಿನಲ್ಲಿ ಏನನ್ನೋ ಹುಡುಕುತ್ತಿರುವಂತೆ ಅನ್ನಿಸಿತು. ಅವರನ್ನು ಸಮೀಪಿಸಿದ, ಒಬ್ಬಳು ಯುವತಿ ತನ್ನಲ್ಲೇ ಗೊಣಗುತ್ತಾ ನೆಲದ ಮೇಲೆ ಬೆಳಕು ಬಿದ್ದ ಕಡೆ ಕೆದಕಿ ನೋಡುತ್ತಿದ್ದಳು. ಕೆಲವರು ಹುಡುಗರು ಅವಳೊಂದಿಗೆ ಕಾಲುಗಳಲ್ಲಿ ಕೆದಕಿ ನೋಡುತ್ತಿದ್ದರು.

"ಏನಾದರೂ ಕಳೆದು ಹೋಗಿದೆಯಾ?" ಎಲ್ಲರನ್ನೂ ಕುರಿತು ಕೇಳಿದ.

"ಬೀಗದ ಕೈ ಎಲ್ಲೋ ಬಿದ್ದು ಹೋಗಿದ್ಯಂತೆ ಹುಡುಕ್ತಿದಾರೆ..." ಒಬ್ಬ ಹುಡುಗ ಎಂದ.

"ಹೇಗೆ ಬಿತ್ತು...?" ತಾನೂ ಹುಡುಕುವವನಂತೆ ನಟಿಸುತ್ತಾ ಕೇಳಿದ.

"ಈ ಟೀಚರ್ರು ಹಿಂಗೆ ಬರ್ತಿದ್ರು... ಇತ್ಲಾಗಿಂದ ಒಬ್ಬ ಗಂಡಸು ಬಂದ್ರು ಇಬ್ಬರೂ ಡಿಕ್ಕಿ ಹೊಡೆದ್ರು ಕೆಳಗೆ ಬಿದ್ದು... ಬಿಟ್ರು ಇವರ ಬೀಗದಕೈ ಎಲ್ಲೋ ಬಿತ್ತು... ಪಾಪ... ಆಗ್ನಿಂದ ಹುಡುಕ್ತಿದಾರೆ..." ಅದೇ ಹುಡುಗ ಹೇಳಿದ. ಇವನಿಗೆ ಹೊಡೆದಂತಾಯಿತು... ಒಂದು ಗಳಿಗೆ ಹಾಗೇ ನಿಂತವನು, ತಾನೂ ಸರಿಯಾಗಿ ಹುಡುಕಲು ಅನುವಾದ...

"ಈ ಕಡೆಗೆ ಬೆಳಕು ಬಿಡಿ... ಇಲ್ಲಿ ಏನೋ ಇದ್ದ ಹಾಗಿದೆ..." ಎನ್ನುತ್ತಾ ಕಾಲು ಬೆರಳಿನಿಂದ ಮಣ್ಣನ್ನು ಕೆದಕುತ್ತಿದ್ದವನು ಹೇಳಿದ... ಟಾರ್ಚನ್ನು ಹಿಡಿದ ಹುಡುಗ ಈ ಕಡೆಗೆ ಬೆಳಕು ಬಿಟ್ಟ... ಅಲ್ಲಿ ಒಂದು ಬೀಗದ ಕೈ ಬಿದ್ದಿತ್ತು. ಅವಳು ಆ ಕಡೆಗೆ ದೃಷ್ಟಿಹಾಯಿಸಿ, ಧಾವಿಸಿ ಕೈಗೆತ್ತಿಕೊಂಡಳು.

"ಹೌದು ಇದೇ ಆ ಬೀಗದ ಕೈ" ಎಂದು ಹೇಳಿ ತನ್ನ ಮನೆಯತ್ತ ನಡೆದಳು. ಚಂದ್ರು ಅವಳ ಹಿಂದೆಯೇ ವೇಗವಾಗಿ ನಡೆದು, "ಟೀಚರ್" ಎಂದು ಕರೆದು ನಿಲ್ಲಿಸಿದ.

"ನನ್ನಿಂದ ನಿಮಗೆ ತೊಂದರೆ ಆಯ್ತು... ಕ್ಷಮಿಸಿ ಟೀಚರ್" ಎಂದವನು ಅವಳ ಪಕ್ಕಕ್ಕೆ ಬಂದ..." ನಾನೇ ನಿಮಗೆ ಡಿಕ್ಕಿ ಹೊಡೆದ ಆ ವ್ಯಕ್ತಿ" ಎಂದ. ತಪ್ಪೊಪ್ಪಿಕೊಂಡವನಂತೆ

"ಹುಂ. ಗೊತ್ತಾಯ್ತು, ನೀವೂ ಬಿದ್ದಿರಲ್ಲ. ನಿಮಗೂ ಪೆಟ್ಟಾಗಿರ್ಬೇಕು ಅಲ್ವಾ?" ಅವಳು ಕೇಳಿದಾಗ ಅವನು ಅಚ್ಚರಿಗೊಂಡ.... ಕತ್ತಲೆಯಲ್ಲಿ ಅವಳ ಮುಖ ಕಾಣಲಿಲ್ಲ.

"ನಾನೇ ಅಂತ ನಿಮಗೆ ಹೇಗೆ ಗೊತ್ತಾಯ್ತು?"

"ನಿಮ್ಮ ಧ್ವನಿಯಿಂದ, ಇರಲಿ ಈ ಸಲಕ್ಕೆ ಕ್ಷಮಿಸಿದ್ದೇನೆ, ಇನ್ನು ಮುಂದೆ ಎಚ್ಚರಿಕೆಯಿಂದ ಹೆಜ್ಜೆ ಹಾಕಿ. ಹಿಂದೆ ಮುಂದೆ, ಎಡಬಲ ನೋಡ್ಕೊಂಡು ಓಡಾಡಿ..."

"ನಾನು ಬೇಕೂಂತ ಮಾಡ್ಲಿಲ್ಲ ಟೀಚರ್...ನನ್ನನ್ನ ನಂಬಿ"

"ಹೋಗ್ಲಿ ಬಿಡಿ... ಈಗಾಗ್ಲೇ ಹೊತ್ತಾಗಿದೆ... ಸಧ್ಯ ಬೀಗದಕೈ ಸಿಕ್ತಲ್ಲ, ಇಲ್ದಿದ್ರೆ ಮನೆ ಹೊರಗೇ ಕಾಲ ಕಳೀಬೇಕಾಗ್ತಿತ್ತು..." ನಿಟ್ಟುಸಿರು ಬಿಟ್ಟಳು.

"ಅಂದ್ರೇ... ನೀವು ಇದೇ ವಠಾರದಲ್ಲಿ ಇದೀರಾ? ನೀವೆಲ್ಲೋ ಈ ಮದುವೆಗೆ ಬಂದವರಿರಬೇಕು ಅಂತ ಅಂದ್ಕೊಂಡೆ ನಾನು..."

"ನಾನು ಆ ಮೂಲೆ ಮನೇಲಿ ವಾಸವಾಗಿದೀನಿ.... ನೀವ್ಯಾರೋ ಗೊತ್ತಾಗ್ಲಿಲ್ಲ..."

"ನಾನು ಚಂದ್ರಮೌಳಿ ಅಂತ. ಈ ವಠಾರದ ಮಾಲೀಕರ ಮಗ... ವಾರದ ಕೆಳಗೆ, ಈ ಊರಿಗೆ ಬಂದೆ. ನಾನು ಇಲ್ಲಿಲ್ಲ. ಬೇರೆ ಊರ್ನಲ್ಲಿದ್ದೀನಿ... ನಿಮ್ಮನೇಲಿ ನೀವೊಬ್ರೇ ಇದೀರಾ? ಈಗ... ನಿಮ್ಮ ತಂದೆ ನಿಮ್ಮ ಜತೇಲಿದಾರೆ ಅಂತ ಕೇಳ್ದ ಹಾಗಿತ್ತು."

"ಅವರೀಗ ಊರಿಗೆ ಹೋಗಿದಾರೆ... ಸಧ್ಯಕ್ಕೆ ನಾನು ಒಬ್ಬಳೇ... ಈಗಾಗ್ಲೇ ತುಂಬಾ ಹೊತ್ತಾಗಿದೆ... ಬರ್ತೀನಿ" ಹೆಜ್ಜೆಗಳನ್ನು ಮುಂದಿಟ್ಟಳು.

"ನಿಮಗೆ ಪೆಟ್ಟಾಗಿರಬಹುದು. ನಾನು ನಿಮಗೆ ಸಹಾಯ ಮಾಡ್ಲಾ?" ಕೇಳಿದ.

'ಬೇಡ, ಈಗ ಮಾಡಿದ್ದೇ ಸಾಕಾಗುವಷ್ಟಿದೆ. ಇನ್ನು ನನ್ನನ್ನು ಹೋಗಲು ಬಿಡಿ. ನನ್ನ ಹಿಂದೆ ಬರ್ಬೇಡಿ, ನೋಡಿದವರು ತಪ್ಪು ತಿಳ್ಕೋತಾರೆ." ಅವಳು ಅವನ ಉತ್ತರಕ್ಕೆ ನಿಲ್ಲದೇ, ಮುಂದೆ ನಡೆದು ರಾಮರಾಯರ ಮನೆಯ ಕಡೆಗೆ ತಿರುಗಿದಳು. ಇವನು ನಿಂತಲ್ಲಿಂದಲೇ ಎಲ್ಲ ಕಡೆಗೂ ಕಣ್ಣು ಹಾಯಿಸಿದ. ಜೋಷಿ ಮನೆಯ ಹತ್ತಿರ ಹೊರತು ಉಳಿದ ಕಡೆ ಯಾರೂ ಕಾಣಲಿಲ್ಲ, ಅಲ್ಲಿಂದಲೇ, ಟೀಚರ್ ಪಂಕಜಾ, ರಾಮರಾಯರ ಮನೆಯೊಳಗೆ ಹೋದುದನ್ನು ಕಂಡ. ಒಬ್ಬಳೇ ಇರೋದ್ರಿಂದ, ಅವರ ಮನೇಲಿ ಮಲಗ್ತಾಳೇನೋ, ಅಥವಾ ಅವರ ಮನೆಯ ಹುಡುಗೀರನ್ನ ಯಾರನ್ನಾದರೂ ತನ್ನೊಂದಿಗೆ ಇರಲು ಕರೆದುಕೊಂಡು ಹೋಗುತ್ತಾಳೇನೋ ಅಂತ ಅಂದುಕೊಂಡ.

ರಾಮರಾಯರ ಸಂಸಾರ ಇತ್ತೀಚೆಗಷ್ಟೇ ಬಂದಿದೆ... ಮನೆ ತುಂಬಾ ಜನ ಇದಾರೆ ಅಂತ ಅಪ್ಪ ಹೇಳ್ತಿದ್ರು. ಯಾರ್‍ಯಾರು ಇದಾರೋ... ತಾನು ಇಲ್ಲಿ ಇಲ್ಲದೇ ಇದ್ದುದರಿಂದ ತಾನು ಆಸಕ್ತಿ ಇಟ್ಟು ಯಾವ ವಿಷಯವನ್ನು ಕೇಳಿಕೊಂಡಿರಲಿಲ್ಲ. ಮಂಗಳಾ ಅಂತೆ, ಬಾಲು ಅಂತೆ, ಅಪ್ಪ ಹೇಳಿದ ನೆನಪು... ಈ ಮಂಗಳಾ, ಬಾಲು... ಅಲ್ಲದೇ ಮನೆ ತುಂಬಾ ಮಕ್ಕಳಂತೆ... ತಾನು ಇಲ್ಲಿಯೇ ಇದ್ದರೆ ತನಗೆ ಪರಿಚಯ ಚೆನ್ನಾಗಿಯೇ ಆಗುತ್ತದೆ... ತನಗೆ ಇಲ್ಲಿ ಇರುವ ಮನಸ್ಸಿಲ್ಲ. ಅಜ್ಜಿಯ ಬಲವಂತ, ಸಹಸ್ರಾರು ರೂಪಾಯಿ ಬೆಲೆ ಬಾಳುವ ಆಸ್ತಿಗೆ ಮುಂದೆ ನೀನೇ ಒಡೆಯನಾಗ್ತೀಯ. ಇಲ್ಲೇ ಇವರುಗಳ ಜತೇಲಿದ್ದು ನಿನ್ನ ಸಾಕು ತಾಯಿಯ ವಿಶ್ವಾಸವನ್ನು ಗಳಿಸು... ದೂರ ದೂರವೇ ಇದ್ದರೆ, ಹತ್ತಿರವಾಗೋದು ಯಾವಾಗ? ... ಎಂದು ಬುದ್ಧಿವಾದವನ್ನು ಹೇಳಿದ್ದಳು... ಈ ಮುದುಕ ಮುದುಕಿಯರ ಜತೆ ನಾನಿರಬೇಕೆ?.... ಓದಿದ್ದೀನಿ, ಕೆಲಸಕ್ಕೆ ಸೇರಿ ಸಂಪಾದಿಸ್ತೀನಿ. ನಾನು ಎಲ್ಲಿದ್ದರೇನು? ಹೆತ್ತವರಿಗೆ ನಾನು ಬೇಡವಾದೆ, ಸಾಕಿದವರು ನನಗೆ ಬೇಡ. ಇವರ ಮನಸ್ನಲ್ಲಿ ಏನಿದೆಯೋ ಸರಿಯಾಗಿ ಅರ್ಥವಾಗಿಲ್ಲ... ಆಗ ಈಗ ನೆಂಟನಂತೆ ಬಂದು ಹೋಗಿರುವುದುಂಟು. ಇಲ್ಲಿಯೇ ಇದ್ದರೆ, ನಾನು

ಒಂಟಿಯಾಗುವುದಂತೂ ನಿಜ... ಅಲ್ಲಾದರೆ, ನಾರಾಯಣ ಚಿಕ್ಕಪ್ಪನ ಮನೆಯಲ್ಲಿ ಅಭ್ಯಾಸವಾಗಿ ಹೋಗಿದೆ. ಕೆಲವು ಸ್ನೇಹಿತರಿದಾರೆ... ಇಲ್ಲಿ? ಇಲ್ಲಿ ಹೇಗಿರಲಿ...?

ಅಜ್ಜಿ ಹೇಳುತ್ತಿದ್ದಳು,'ಬೇಗ ಮದುವೆ ಮಾಡ್ಕೋ ಅಂತ... ನನಗೆ ನನ್ನ ಇಷ್ಟದ ಹುಡುಗಿ ಸಿಗುತ್ತಾಳೆಯೇ?... ಅಥವಾ ಅಮ್ಮ ಒಪ್ಪುವ ಹುಡುಗಿಯನ್ನು ನಾನು ಮದುವೆಯಾಗಬೇಕಾಗಿ ಬಂದರೇ...? ಹಾಗೇನಾದರೂ ಆದರೆ, ನಾನು ಖಂಡಿತಾ ಸುಖವಾಗಿರಲು ಸಾಧ್ಯವಿಲ್ಲ. ಈ ಆಸ್ತಿಗೆ ಒಡೆಯನಾಗ್ತೀನಿ ಅಂತ ಅಂದ ಮಾತ್ರಕ್ಕೆ, ಸದಾ ಕಾಲವೂ ಇವರು ಹೇಳಿದಂತೆ ಕೇಳಬೇಕೆ?... ಇದು ಈ ಜನ್ಮದಲ್ಲಿ ಸಾಧ್ಯವಿಲ್ಲ... ತನ್ನಲ್ಲೇ ಹೇಳಿಕೊಂಡು ತಲೆಯನ್ನು ಕೊಡವಿಕೊಂಡ.

"ಈ ಕತ್ತಲ್ಯಾಗೆ ನಿಂತು ಏನ್ಮಾಡ್ಲಿಕ್ಕೆ ಹತ್ತೀರಿ ಸರಾ...? ಯಾರಿಗಾದ್ರೂ ಕಾಯ್ಲಿಕ್ಕೆ ಹತ್ತೀರೇನು?... ದತ್ತ ಪಕ್ಕದಲ್ಲಿ ನಿಂತು ಕೇಳಿದಾಗ, ಇವನು ಬೆಚ್ಚಿದ. ತಿರುಗಿದ.

"ಇಲ್ಲ, ಹೀಗೇ ನೋಡ್ತಾ ಇದ್ದೆ... ವಠಾರ ಎಲ್ಲಾ ಬೆಳಕಿನಿಂದ ತುಂಬಿದೆ. ಹೀಗೇ ಸದಾಕಾಲಕ್ಕೂ ಇರೋ ಹಾಗೆ ಒಂದೆರಡು ಕಡೆ, ದೀಪ ಯಾಕೆ ಹಾಕಿಸ್ಬಾರ್ದು ಅಂತ ಯೋಚಿಸ್ತಿದ್ದೆ." ತಕ್ಷಣಕ್ಕೆ ಹೊಳೆದ ಸುಳ್ಳನ್ನು ಹೇಳಿದ.

"ನಿಮ್ಮ ಆಲೋಚನಿ ಭಲೋ ಅದೇರೀ... ಹೆಣಮಕ್ಕಳು ಸಣ ಮಕ್ಕಳು ಕತ್ತಲ್ಯಾಗೆ ತಿರುಗಾಡೋದು ಅಂದ್ರೆ ಅಂಜತಾರ್ರೀ... ಕಳ್ಳರು ಕಾಕರು, ತಿರುಗಾಡಿದ್ರೆ ಹ್ಯಾಂಗ ಗೊತ್ತಾಗ್ತದರೀ... ಬೆಳಕ ಇದ್ದರ ಯಾರೂ ಬರೂ ಹಂಗಿಲ್ಲರೀ..."

"ಕಳ್ಳರು ಯಾರೂ ಬರೋದಿಲ್ಲ ಬಿಡಿ... ರಾತ್ರಿಯ ಹೊತ್ತು ದೊಡ್ಡ ಗೇಟಿಗೆ ಬೀಗ ಹಾಕುತ್ತಾರಲ್ಲ... ಏನಿದ್ದರೂ ಹುಳು ಹುಪ್ಪಟೆ ಹರಿದಾಡಿದ್ರೆ ಕಾಣ್ಸುದಿಲ್ಲ..."

"ಹೌದ್ರೀ... ನಿಮ್ಮ ತಂದ್ಯಾರ ಕೂಡಾ ಮಾತಾಡಿ, ದೀಪದ ಕಂಬ ಹಾಕಿಸಿದ್ರೆ ವಠಾರದ ಮಂದಿಗೆ ಅನುಕೂಲ ಆಗ್ತೈತಿ... ಬಿಲ್ ದುಡ್ಡನ್ನ ಎಲ್ರೂ ಸಮನಾಗಿ ಹಂಚ್ಕೊಂಡ್ರೆ ಆಗ್ತದೆ... ನಾಳೆ ನಾಡಿದ್ದು ನನ ತಂಗಿ ಲಗ್ನಕ್ಕೆ ಬರ್ರಲಾ ಮರೀಬ್ಯಾಡ್ರೀ..."ನೆನೆಪಿಸಿದ.

"ನಾಳೆ ನನಗೆ ಹೊರಗೆ ಹೋಗೋದಿದೆ. ನಾಡಿದ್ದು ಬರ್ತೀನಿ."

"ನೌಕರಿ ಇಲ್ಲೇ ಏನಾದ್ರೂ ಆಯ್ತೇನ್ರಪಾ...."

"ಇಲ್ಲ, ಕೆಲಸ ಸಿಗೋದು ಅಷ್ಟು ಸುಲಭ ಅಲ್ಲ ಜೋಷಿ..."

"ಅದ್ಕ ತಾನ, ನಾನು ಮಿಲಟರಿ ಸೇರಿದ್ದು. ನಾನು ಹೆಚ್ಚಿಗೆ ಓದಲಿಲ್ರೀ... ನನಗ ಯಾವ ಆಫೀಸರ ನೌಕರಿ ಸಿಗ್ತೈತಿ?... ನಮ್ಮದು ದೊಡ್ಡ ಸಂಸಾರರ್ರೀ... ಮನೀ ತುಂಬಾ ಮಂದಿ... ನಮ್ಮ ಕಕ್ಕಗ, ಅಪ್ಪಗ, ವಯಸ್ಸಾಗದ... ದುಡಿಯೋ ತಾಕತ್ತು ಇಲ್ರೀ... ಊರಲ್ಲಿರೋ ಹೊಲದಿಂದ ಒಂದಿಷ್ಟು ಆದಾಯ ಬರ್ರೈತ್ರೀ... ಕಾಳು ಬೇಳಿ ಸಿಗ್ತೈತಿ... ನನ್ನ ತಮ್ಮ ಒಬ್ಬ ಕಾರ್ಖಾನೆಯಾಗ ಕೆಲ್ಸದಲ್ಲಿದಾನ್ರೀ... ಹೆಂಗೋ ನಡೀತೈತ್ರೀ...

"ಮತ್ತೆ? ಈ ಮದುವೆಗೆ ಯಾಕೆ ಇಷ್ಟು ಖರ್ಚು ಮಾಡ್ತಿದೀರಿ?..."

"ಅದನ್ನ ಬಿಡೂ ಹಂಗಿಲ್ರೀ ಮಾಡ್ಲೇ ಬೇಕಾಗ್ತದೆ... ಇಲ್ಲಿದ್ರೆ ಮಂದಿ ಆಡ್ಕೋತಾರ... ವರದಕ್ಷಿಣೆ, ವರೋಪಚಾರ, ಉಡುಗೊರೆ, ಉತ್ಸವ, ಊಟ ಎಲ್ಲಾ ಖರ್ಚು ಹೆಣ್ಣಿನ ಮನೆಯವರೇ ಮಾಡಬೇಕಾಗತದರೀ ಅದು ಪದ್ಧತಿಯಾಗದ... ಬಿಡೂ ಹಂಗಿಲ್ಲರೀ..."

"ಹಾಗಾದ್ರೆ ನೀವೆಷ್ಟು ವರದಕ್ಷಿಮಿ ತಗೊಂಡ್ರಿ?"ನಗುತ್ತಾ ಕೇಳಿದ.

"ಖರೇ ಹೇಳ್ತೀನ್ರೀ... ನಾನು ಒಂದ್ಕಾಸು ವರದಕ್ಷಿಣೆ ತಗೊಂಡಿಲ್ಲ... ನನ್ನ ಹೇಣ್ತಿ ರಾಧಾ, ನನ್ನ ಸೋದರ ಮಾವನ ಮಗಳೇ ಅದಾಳ್ರೀ... ಮಾವಗ ಅನುಕೂಲ ಆಗ್ಲಿ ಅಂತ ಭಾಳ ಸರಳವಾಗಿ ಲಗ್ನ ಆದನ್ರೀ..."ಎದೆ ಉಬ್ಬಿಸಿ ಹೇಳಿದ...

"ಭಾಳ ಒಳ್ಳೇ ಕೆಲಸ ಮಾಡಿದ್ರಿ ಜೋಷಿ... ಹಣ ಕಾಸು, ಆಸ್ತಿ ಅಂತಸ್ತು, ವೈಭವ ಯಾವುದೂ ಮುಖ್ಯವಲ್ಲ, ನೆಮ್ಮದಿ ಮುಖ್ಯ.... ನೀವು ನೆಮ್ಮದಿಯಿಂದ ಇದೀರಲ್ಲ ಅಷ್ಟೇ ಸಾಕು..." ಹಣಕ್ಕಾಗಿ ನಮ್ಮನ್ನ ನಾವು ಮಾರ್ಕೋಬಾರ್ದು."

"ಹೂಂ...ನ್ರೀ... ನನಗೂ ನಿಮ್ಹಾಂಗ... ಯಾವ ಆಸೀನೂ ಇಲ್ರೀ...." ಹಾಗೆ ನಾಲಿಗೆ ಹೇಳಿದರೂ, ಮನಸ್ಸು ಕುಟುಕಿತ್ತು... ಮದುವೆ ಆದರೂ, ನಾನು ಅಲ್ಲಿ, ಇವಳು ಇಲ್ಲಿ... ಗಂಡ ಹೆಂಡತಿ ಒಟ್ಟಿಗೆ ಇರೋಕೆ ಆಗಿಲ್ಲ. ನೆಮ್ಮದಿ ಎಲ್ಲಿ ? ಎಂದು ಹೇಳಬೇಕೆಂದು ಕೊಂಡರೂ, ಇವನು ಬ್ರಹ್ಮಚಾರಿ..., ಇವನಿಗೇನು ಗೊತ್ತು ಆ ಬವಣೆ? ಎಂದುಕೊಂಡ... ಅವನು ಮಾತನ್ನು ನಿಲ್ಲಿಸಿದ ಕೂಡಲೇ ಚಂದ್ರು ಚುರುಕಾದ. "ಬರ್ತೀನಿ' ಎಂದು ಹೇಳಿ ತನ್ನ ಮನೆಯ ಕಡೆಗೆ ತಿರುಗಿದ, ದಾಪುಕಾಲು ಹಾಕಿ ನಡೆದ.

○ ○ ○

ಒಂಭತ್ತು ಗಂಟೆಯ ನಂತರ, ಸುಹಾಸಿನಿಯರಿಗೆ ಎಲೆ ಅಡಿಕೆ ತಾಂಬೂಲ ಕೊಟ್ಟು ಚಪ್ಪರಪೂಜೆ ಮಾಡುವ ಕಾರ್ಯಕ್ರಮವಿತ್ತು. ಅದಕ್ಕೆ ಲಕ್ಷ್ಮೀದೇವಮ್ಮನನ್ನು ಖುದ್ದಾಗಿ ಬಂದು ಕರೆದಿದ್ದರು. ಅರಿಶಿನ ಎಣ್ಣೆಯನ್ನು ಕೊಟ್ಟು ಆಹ್ವಾನಿಸಿದ ಮೇಲೆ, ಲಕ್ಷ್ಮೀದೇವಮ್ಮ ನಿರಾಕರಿಸು ವಂತಿರಲಿಲ್ಲ. ತಾನು ಹಿರಿಯ ಮುತ್ತೈದೆ. ಅಲ್ಲದೇ ಈ ವಠಾರದ ಮಾಲೀಕಳು. ತನಗೆ ಮೊದಲ ಆದ್ಯತೆ ಎಂದು ತಿಳಿದಿತ್ತು. ಬೆಳಿಗ್ಗೆ ಬೇಗನೇ ಎದ್ದು, ಎಣ್ಣೆ ಒತ್ತಿಕೊಂಡು ಶುಭ್ರ ಸ್ನಾನ ಮಾಡಿ, ರೇಶಿಮೆ ಸೀರೆ, ರೇಶಿಮೆ ಕುಪ್ಪುಸವನ್ನು ತೊಟ್ಟಳು. ಒಣಗಿದ ತಲೆಗೂದಲನ್ನು ಒಪ್ಪವಾಗಿ ಬಾಚಿಕೊಂಡು ಹೆರಳು ಹಾಕಿಕೊಂಡು, ಮಲ್ಲಿಗೆ ಹೂವನ್ನು ಮುಡಿದಳು. ಎರಡೂ ಕೈಗಳಲ್ಲಿ ಝಣಝಣವೆನ್ನುವ ಹಸಿರು ಗಾಜಿನ ಬಳೆಗಳೊಂದಿಗೆ, ಹೊಳೆ ಹೊಳೆಯುವ ಚಿನ್ನದ ಬಳೆಗಳನ್ನು ಕಡಗಗಳನ್ನು ತೊಟ್ಟಳು. ಕೊರಳಿಗೆ, ಹೊಳೆಯುವ ಕಂಠೀಹಾರವನ್ನು ಕಾಸಿನ ಸರವನ್ನು ವಿಶೇಷ ದಿನಗಳಲ್ಲಿ ಧರಿಸುವ ಚಿನ್ನದ ಸರಗಳನ್ನು ತೊಟ್ಟಳು. ಹಣೆಯ ಮೇಲೆ, ಬೆವರಿಗೆ

ಅಳಿಸಿ ಹೋಗದಂತೆ, ಅಚ್ಚುಕಟ್ಟಾಗಿ ಕಲೆಸಿದ ಕಂಚಿ ಕುಂಕುಮದ ಬೊಟ್ಟನ್ನು ಇಟ್ಟು ಕೊಂಡಳು. ಕಿವಿಯಲ್ಲಿ ಹೊಳೆಯುವ ವಜ್ರದ ಓಲೆಗಳು, ಮೂಗಿನಲ್ಲಿ ಫಳಫಳವೆನ್ನುವ ವಜ್ರದ ಮೂಗುಬೊಟ್ಟು, ಬಿಳಿ ಕೊರಳಿಗೆ ಒಪ್ಪುವ ಕರಿಮಣಿಸರ ಹಾಗೂ ಇನ್ನಿತರ ಸರಗಳು, ಕೈಯ ಬಳೆಗಳು, ಕಾಲುಂಗುರ ಎಲ್ಲವನ್ನು, ಗಮನಿಸಿಕೊಂಡು, ಕನ್ನಡಿಯ ಮುಂದೆ ನಿಂತು ತನ್ನನ್ನು ತಾನೇ ನೋಡಿಕೊಂಡಳು. ಮುದದಿಂದ ಬೀಗುವಂತಾಗಿತ್ತು. ಗಂಡನನ್ನು ಕರೆದಳು. "ನೋಡಿ, ಎಲ್ಲಾ ಸರಿಯಾಗಿದೆಯಾ ಅಂತ... ಹೇಗೆ ಕಾಣುತ್ತೆ?" ಎಂದು ಕೇಳಿದಳು ಉಲ್ಲಾಸದಿಂದ.

ಗೋಪಾಲ ಮುಡಿಯಿಂದ ಅಡಿಯವರೆಗೆ ಅವಳನ್ನೇ ನೋಡಿದ, ಮೆಚ್ಚುಗೆ ಮೂಡಿತು. ಅವಳಲ್ಲಿ ತುಂಬಿರುವ, ಮೆರೆಯಬೇಕೆಂಬ ಮದವಿರುವುದನ್ನು ಗಮನಿಸಿದ, ಮುಖದ ಭಾವನೆ ಬದಲಾಗಿತ್ತು. "ಸಾಕ್ಷಾತ್ ಲಕ್ಷ್ಮಿದೇವಿ ಥರ ಕಾಣ್ತೆದೀಯ... ಆದರೆ, ಈ ದಿನದ ಸಮಾರಂಭಕ್ಕೆ ಈ ಅಲಂಕಾರ ಸ್ವಲ್ಪ ಜಾಸ್ತಿ ಅಂತ ಅನ್ನಿಸುಲ್ವಾ ಲಕ್ಷ್ಮೀ..."

"ಜಾಸ್ತಿ ಏನಿಲ್ಲ... ಸರಿಯಾಗೇ ಇದೆ. ನಿಮಗೇನು ಗೊತ್ತಾಗುತ್ತೆ ? ಈ ಒಡವೆಗಳನ್ನೆಲ್ಲ ಇಂಥಾ ಸಮಯದಲ್ಲಿ ಅಲ್ಲದೇ ಇನ್ಯಾವಾಗ ಧರಿಸೋದು?..."

"ಹೌದು ಲಕ್ಷ್ಮೀ, ಹೆಂಗಸರ ಅಲಂಕಾರ ಒಡವೆ, ವಸ್ತು ನನಗೇನು ಗೊತ್ತಾಗುತ್ತೆ? ಅಮ್ಮನ್ನ ಕೇಳಿದ್ದರೆ, ಸರಿಯಾಗಿದೆಯೋ ಇಲ್ವೋ ಅಂತ ಹೇಳ್ತಾಳೆ..." ಒಂದ್ಮಾತು ಕೇಳು."

"ಬೇರೆ ಯಾರನ್ನು ನಾನು ಕೇಳುಲ್ಲ. ನಿಮಗೆ ತೋರಿಸಬೇಕಾಗಿತ್ತು ಕರೆದೆ ಜೋಷಿಮನೆಯವರು ಸುಹಾಸಿನಿ ಪೂಜೆಗೆ ಅಂತ ಕರೆದಿದಾರೆ. ಹೋಗ್ಬರ್ತೀನಿ. ಹುಶಾರು, ಉಗ್ರಾಣಕ್ಕೆ ಬೀಗ ಹಾಕಿದೀನಿ. ಯಾವುದೇ ಕಾರಣಕ್ಕೂ ತೆಗೀಬೇಡಿ. ನನಗೆ, ಪಾನಕ ಕೋಸಂಬರಿ ಎಲ್ಲಾ ಅಲ್ಲೇ ಆಗುತ್ತೆ. ನಿಮಗೆಲ್ಲಾ ಅವರ ಮನೆಯಿಂದ ತಿಂಡಿ ಬರುತ್ತೆ... ಇವತ್ತು ನಾನು ಅಡಿಗೆ ಮಾಡುಲ್ಲ. ಎಲ್ಲರಿಗೂ ಊಟಕ್ಕೆ ಹೇಳಿದಾರೆ. ಆದರೆ ನಾನು ಮಾತ್ರ ಮನೇಲೆ ಸ್ವಲ್ಪ ಸಜ್ಜಿಗೆ ಮಾಡ್ಕೊಳ್ತೀನಿ. ಎರಡೂ ಹೊತ್ತಿಗೆ ಆಗುತ್ತೆ." ಅಷ್ಟನ್ನೂ ಉಸುರಿದಳು.

ಯಾಕೆ ಎಂದು ಇವನು ಕೇಳಲಿಲ್ಲ. ಒಂದು ಸಾರಿ ಅವಳು ತೀರ್ಮಾನಿಸಿದರೆ, ಅದರಂತೇ ನಡೆಯುವವಳು... ಎಂದು ಗೊತ್ತು. ಸುಮ್ಮನೇ ನಿಂತ. "ನೀವೂ ಬೇಗನೇ ಸ್ನಾನ ಮಾಡಿ ಹಾಲಿನವನು ಬರ್ತಾನೆ. ಅರ್ಧಸೇರು ಹಾಲು ಜಾಸ್ತಿಯಾಗುತ್ತೆ ಅಷ್ಟು ಬೇಡ ಒಂದು ಪಾವು ಹಾಕಿಸ್ಕೊಳ್ಳಿ... ಹಾಲು ಕಾಯಿಸಿಡಿ. ಉಕ್ಕಿಸಬೇಡಿ... ಕೆನೆ ಎಲ್ಲಾ ಉಕ್ಕಿ ಹೋಗುತ್ತೆ, ಕಾಫಿ ಮಾಡ್ಬೇಡಿ... ನಾನು ಬಂದ ಮೇಲೆ ನನಗೆ ಮಾಡಿಕೊಳ್ತೀನಿ. ನಿಮಗೆಲ್ಲಾ ಮದುವೆ ಮನೆಯಿಂದ ಕಾಫಿ ಬರುತ್ತೆ, ರಾತ್ರಿಯ ಹಾಲಿನಲ್ಲಿ ಸ್ವಲ್ಪ ಮಾತ್ರ ಬೆರೆಸಿದೀನಿ. ನಾನು ಏನನ್ನು ಕುಡಿದಿಲ್ಲ... ಯಾರಿಗೆ ಬೇಕೋ ತಗೊಳ್ಳಿ." ಅವಳು

ಹೇಳಿದುದೆಲ್ಲವೂ ಅವನ ಕಿವಿಯನ್ನು ತಪುಲಿತ್ತು. ಮೆದುಳನ್ನು ಮುಟ್ಟಿತ್ತು. ಇದರಲ್ಲಿ ಯಾವುದೂ ತಪ್ಪಾಗುವಂತಿಲ್ಲ. ತಲೆಯಾಡಿಸಿದ್ದ...

"ಇಷ್ಟು ಮುಂಚೆ ಹೋಗಿ ಏನ್ಮಾಡ್ತೀಯ? ಎಷ್ಟು ಹೊತ್ತು ಕಾಯಬೇಕಾಗುತ್ತೋ ಏನೋ... ? ಅವರು ಹೇಳಿಕಳಿಸಲಿ ಬಿಡು" ಅನುಮಾನಿಸುತ್ತಾ ಹೇಳಿದ.

"ಬೇಗ ಬಂದು ಸ್ವಲ್ಪ ಏನೇನು ಇಡಬೇಕು, ಏನೇನು ಮಾಡ್ಬೇಕು ಅಂತ ಹೇಳಿ ಅಂತ ಹೇಳಿದಾರೆ... ಯಾರಿಗೂ ಏನೂ ಗೊತ್ತಿಲ್ಲ. ನಾನು ಹೋಗಿ ಅವಸರಿಸಿದರೆ ಬೇಗ ಬೇಗೆ ಆಗುತ್ತೆ. ಇಲ್ಲದಿದ್ರೆ ಉರಿ ಮಧ್ಯಾಹ್ನವಾದರೂ ಕೂತೇ ಇರ್ತಾರೆ... ಇದನ್ನೆಲ್ಲ ತಂಪು ಹೊತ್ನಲ್ಲಿ, ಮಧ್ಯಾಹ್ನಕ್ಕೆ ಮುಂಚೆ ಮಾಡಿ ಮುಗಿಸ್ಬೇಕು. ಯಾರಿಗೂ ಯಾವ ಆಚರಣೆಯೂ ಗೊತ್ತಿಲ್ಲ."ಗೋಪಾಲ ಮನದಲ್ಲೇ ನಕ್ಕ.

"ಅವರೆಲ್ಲಾ ಸಂಸಾರದಲ್ಲಿದಾರೆ... ಅವರುಗಳಿಗೆ ಅದರಲ್ಲೇ ಸಮಯ ಹೋಗುತ್ತೆ. ಅದರಲ್ಲೇ ಆನಂದ ಸಿಗುತ್ತೆ. ನಿನ್ನ ಹಾಗೆ ಅವರಿಗೆ ಬಿಡುವೆಲ್ಲಿದೆ' ಅಂತ ಹೇಳಲಾಗದೇ ಸುಮ್ಮನಾದ.

"ಹೇಳಿದ್ದೆಲ್ಲಾ ಅರ್ಥ ಆಯ್ತಲ್ಲ, ನಾನು ಹೋಗ್ಬರ್ತೀನಿ, ಮನೇಲೇ ಇರಿ. ಎಲ್ಲೂ ಹೋಗ್ಬೇಡಿ" ಎಂದು ಹೇಳುತ್ತಾ ಕೈ ಒರೆಸಿಕೊಳ್ಳಲು, ಶುಭ್ರವಾಗಿ ಒಗೆದು ಹರವಿದ್ದ ಬಟ್ಟೆಯೊಂದನ್ನು ಮಡಚಿ, ಸೊಂಟಕ್ಕೆ ಸಿಕ್ಕಿಸಿಕೊಂಡಳು. ಸೀರೆಯ ನೆರಿಗೆಯನ್ನು ಸ್ವಲ್ಪವೇ ಸ್ವಲ್ಪ ಎತ್ತಿ ಹಿಡಿದು ಹೊರಬಂದಳು. ಅತ್ತೆ ಓರೆಗಣ್ಣಿನಲ್ಲಿ ಸೊಸೆಯನ್ನು ನೋಡಿದಳು.

"ಭಾರೀ ರೇಶ್ಮೆ ಸೀರೆ, ಬೆಲೆ ಬಾಳುವ ಒಡವೆಗಳು... ಧರಿಸಿರುವ ವೈಖರಿ, ಈ ಗತ್ತು ಎಲ್ಲಾ ಸರಿ..., ಇದನ್ನೆಲ್ಲ ಒಪ್ಪವಾಗಿ, ಅಪ್ಪನ ಕಾಲದಿಂದ ಕಾಪಾಡಿಕೊಂಡು ಬಂದಿದಾಳೆ. ಯಾರಿಗಾದರೂ ಕೈ ಎತ್ತಿ ಕೊಡುವುದಿರಲಿ, ಕಣ್ತುಂಬಾ ನೋಡುವುದಕ್ಕೂ ಅವಕಾಶ ಕೊಡುವುದಿಲ್ಲ... ಇವೆಲ್ಲಾ ಯಾವ ಹುಡುಗಿಯ ಅದೃಷ್ಟದಲ್ಲಿ ಬರೆದಿದೆಯೋ... ಚಂದ್ರು ಮದುವೆಯಾಗುವ ಹುಡುಗಿ ನಿಜಕ್ಕೂ ಅದೃಷ್ಟವಂತೆಯಾಗಿರಲೇ ಬೇಕು. ಅವನಿಗೆ ಮದುವೆ ಮಾಡುವ ಆಲೋಚನೆಯೇ ಇಲ್ಲ ಇವರಿಬ್ಬರಿಗೆ.... ಅವನೇ ಸ್ವಂತದವನಲ್ಲ... ಬರುವ ಸೊಸೆ ಸ್ವಂತದವಳಾಗಲು ಸಾಧ್ಯವಿಲ್ಲ ಎನ್ನುವ ಧೋರಣೆ ಇವಳಿಗೆ... ಮುಂದೆ ಯಾವ ದತ್ತಿಗೋ ದಾನಕ್ಕೋ ಇವೆಲ್ಲ ಹೋಗುವುದಕ್ಕೆ ಬಿಡಬಾರದು. ಚಂದ್ರುಗೆ ಬೇಗ ಮದುವೆ ಯಾಗು ಅಂತ ಒತ್ತಾಯ ಮಾಡಬೇಕು... ಕೆಲಸದ್ದು ಏನಾಗುತ್ತೋ... ಯಾವಾಗ ಸಿಗುತ್ತೋ... ಅದಕ್ಕಾಗಿ ಯಾಕೆ ಕಾಯ್ಬೇಕು?"

"ಅತ್ತೇ ನಾನು ಜೋಷಿಯವರ ಮನೆಗೆ ಹೊರಟಿದೀನಿ... ನೀವೂ ಬರೋದಾದ್ರೆ ಬನ್ನಿ..." ಲಕ್ಷ್ಮಿದೇವಮ್ಮ ಹೇಳಿದಳು.

"ನಾನು ಬಂದು ಏನು ಮಾಡ್ಲೇ ಲಕ್ಷ್ಮೀ... ಹೇಳಿ ಕೇಳಿ ಅದೂ ಸುಹಾಸಿನಿಯರಿಗೇ

ಸೇರಿದ ಕಲಾಪ. ಅಲ್ಲಿ ನನಗೇನು ಕೆಲಸ ?... ತಿಂಡಿತಿಂದು, ಆರಾಮವಾಗಿ ಕೂತಿರ್ತೀನಿ. ಊಟಕ್ಕೆ ಹೇಳಿ ಕಳಿಸಿದಾಗ, ಬರ್ತೀನಿ... ನೀನು ಅಲ್ಲೀ ತನಕ ಅಲ್ಲೇ ಇರ್ತೀಯೋ ಮನೆಗೆ ಬಂದು ಮತ್ತೆ ಹೋಗ್ತೀಯೋ...?"

"ನಾನು ಹೂವೀಳ್ಯ ತಗೊಂಡು ಬಂದು ಬಿಡ್ತೀನಿ... ಊಟಕ್ಕೆ ಹೋಗುಲ್ಲ. ನೀವುಗಳು ಹೋಗೋರಂತೆ... ನಾನು ಬಂದ್ಮೇಲೆ ಹೋಗೋರಂತೆ."

"ಇಂಥಾ ಸಮಯದಲ್ಲಾದ್ರೂ ಮಡಿ ಮಡಿ ಅಂತ ಅನ್ನೋದನ್ನ ಬಿಡಬಾರ್ದಾ? ಅವರೇ ನಂದ್ಕೊಳ್ತಾರೆ... ಅಲ್ಲದೇ ಮುತ್ತೈದೇರು ಇಷ್ಟು ಮಡಿ ಮಾಡ್ಬಾರ್ದು."

"ನನಗೆ ಮೊದಲ್ನಿಂದ ಇದೇ ಅಭ್ಯಾಸ, ಬೇರೆಯುವರಿಗೋಸ್ಕರ ಬದಲಾಯಿಸ್ಕೊಳ್ಳುಕ್ಕೆ ಆಗುಲ್ಲ... ನನಗೆ ಹೇಗೆ ಬೇಕೋ ಹಾಗೇ ಇರ್ತೀನಿ." ಅಳುಕದೇ ನುಡಿದಳು.

"ಮೊದಲ್ನಿಂದ ಹಾಗೇ ತಾನೇ ಇದೀಯ..." ಅಂತ ಹೇಳಬೇಕೆಂದುಕೊಂಡವಳು ಹೇಳದೇ ಸುಮ್ಮನಾದಳು. ನಿನ್ನ ಈ ಮಡಿಯಿಂದ ನನ್ನ ಮಗನಿಗೆ ಕಷ್ಟ. ಅವನನ್ನು ಅಸ್ಪೃಶ್ಯ ನಂತೆ ಇಟ್ಟಿದೀಯ. ನಿನಗೂ ನಾಲ್ಕು ಮಕ್ಕಳು ಮರಿ ಅಂತ ಇದ್ದಿದ್ರೆ, ಈ ಮಡಿಯೆಲ್ಲಾ ಗಾಳಿಗೆ ಹಾರಿ ಹೋಗ್ತಿತ್ತು" ಅಂತ ಅಂದುಕೊಂಡಳು. ಸೊಸೆ ಹೊರಟು ಹೋಗಿದ್ದಳು, ಆಕೆ ಮಗನನ್ನು ಕರೆದಳು. "ಗೋಪೀ ಬಾಯಿಲ್ಲಿ... ನಿನ್ನ ಹತ್ರ ಸ್ವಲ್ಪ ಮಾತಾಡ್ಬೇಕು."-

-ಗೋಪಾಲ ವಿಧೇಯತೆಯಿಂದ ತಾಯಿಯ ಬಳಿಗೆ ಬಂದ. "ಚಂದ್ರು ಬಗ್ಗೆ ಏನು ಯೋಚನೆ ಮಾಡಿದೀಯ...?" ಕೇಳಿದಳು.

"ಯಾವ ವಿಷಯ ಹೇಳ್ತಿದೀಯ?" ಗೊತ್ತಿಲ್ಲದವನಂತೆ ಕೇಳಿದ.

"ಅವನಿಗೂ ಇಪ್ಪತ್ತೇಳು ವರ್ಷ ತುಂಬಿದೆ... ಮದುವೆಗಿದುವೆ ಮಾಡ್ಬೇಕು ಅಂತ ಅಂದ್ಕೊಂಡಿದೀಯೋ ಇಲ್ವೋ..."

"ಮಾಡೋಣ ಅಮ್ಮಾ... ಕೆಲಸ ಆಗಲಿ... ಅದು ಮುಖ್ಯ."

"ಕೆಲಸ ಆಗ್ಲಿ ಅಂತ ಕಾಯ್ತಾ ಕೂತ್ಕೋ ಬೇಕಾಗಿಲ್ಲ... ನಿಮಗೇನು ಬಡತನವಿಲ್ಲ; ಯಾವುದಕ್ಕೂ ಕಡಿಮೆ ಇಲ್ಲ. ಮಾಡಬೇಕಾದ ವಯಸ್ನಲ್ಲಿ ಮದುವೆ ಮಾಡದಿದ್ದರೆ ಈ ಆಸ್ತಿ ಎಲ್ಲಾ ಪರರ ಪಾಲಾಗಿ ಹೋಗುತ್ತೆ ಅಷ್ಟೇ... ನಿನ್ನ ಹೆಂಡತಿಗಂತೂ ಆ ಆಸೆ ಇದ್ದಂತೆ ಇಲ್ಲ. ನೀನಾದ್ರೂ ತಿಳುವಳಿಕೆ ಹೇಳು..."

"ಹೇಳ್ತೀನಿ. ಬಿಡಮ್ಮ... ಆಸ್ತಿ ಯಾಕೆ ಪರರ ಪಾಲಾಗುತ್ತೆ?"

"ನಿನ್ನ ಹೆಂಡ್ತಿ ಹತ್ತಿರ ಎಷ್ಟೊಂದು ಒಡವೆ ವಸ್ತುಗಳಿವೆ... ನಾರಾಯಣನಿಗೆ ಇಬ್ಬಿಬ್ಬರು ಹೆಣ್ಣು ಮಕ್ಕಳು... ಹಾಗೇ ನಿನ್ನ ಅಣ್ಣಂದಿರಿಗೂ ಮನೆ ತುಂಬಾ ಮಕ್ಕಳು... ಯಾರಿಗಾದರೂ ಏನಾದರೂ, ನೂಲಿನೆಳೆಯಷ್ಟು ಕೊಡಬೇಕು ಅಂತ ಅನ್ನಿಸುಲ್ಲವಲ್ಲ

ನಿನ್ನ ಹಂಡತಿಗೆ..." ಒಂದಿಷ್ಟು ಕೊಟ್ಟರೆ, ಇವಳಿಗೆ ಕಡಿಮೆ ಏನೂ ಆಗುಲ್ಲ."

"ಕೊಡು ಅಂತ ನಾನ್ಹೇಗೆ ಹೇಳಲಮ್ಮ...? ಅದು ಅವಳ ಇಷ್ಟ..."

"ಅಲ್ಲ ಕಣೋ... ಎಲ್ಲರಿಗೂ ಮನೆ ತುಂಬಾ ಮಕ್ಕಳು, ಅನುಕೂಲವಿಲ್ಲ; ನಿನಗೆ ಅನುಕೂಲವಿದೆ. ಮಕ್ಕಳೇ ಇಲ್ಲ, ಚಂದ್ರೂಗೆ ಬೇಗ ಮದುವೆ ಮಾಡಿ, ಮನೆ ತುಂಬಾ ಮಕ್ಕಳಾಗಲಿ... ಅಂದ್ಹಾಗೇ ಚಂದ್ರೂ ಎಲ್ಲಿ ? ಬೆಳಗ್ನಿಂದ ಕಾಣ್ಲೇ ಇಲ್ಲ. ಇನ್ನೂ ಮಲಗಿದಾನಾ? ಬೈಸಿಕೊಳ್ತಾನೆ ಅಷ್ಟೇ..."

"ಇಲ್ಲ, ಬೆಳಿಗ್ಗೆಯ ಬಸ್ಸಿಗೆ, ಹಾಸನಕ್ಕೆ ಹೋದ. ಅವನ ಸ್ನೇಹಿತನ ಮದುವೆಯಂತೆ... ರಾತ್ರಿಗೆ ಬಂದು ಬಿಡ್ತಾನೆ."

"ನನಗೆ ಹೇಳಲೇ ಇಲ್ಲ. ಇವಳಿಗೇನು ಹೇಳೋದು ಅಂತ ಅವನಿಗೂ ಅನ್ನಿಸಿರಬೇಕು, ಅವನ ವಯಸ್ನೋರ್ಗೆಲ್ಲಾ ಮದುವೆಯಾಗ್ತಿದೆ... ಅವನಿಗೂ ಆಸೆ ಆಗುಲ್ವಾ? ಅವನಾಗಿಯೇ ಹೇಗೆ ಹೇಳ್ಕೊಳ್ತಾನೆ? ನಂಗೆ ಮದುವೆ ಮಾಡಿ ಅಂತ... ನನ್ನ ತಮ್ಮನ ಮನೆಯ ಕಡೇಲೂ ಒಂದೆರಡು ಪಸಂದಾದ ಹೆಣ್ಣುಗಳಿವೆ... ವಿಚಾರಿಸು ಅಂತ ಪತ್ರ ಬರಿ."

"ಆಯ್ತಮ್ಮ, ಮೊದ್ಲು ಇವಳ ಹತ್ರ ಮಾತಾಡ್ತೀನಿ."

"ಇಷ್ಟು ವರ್ಷ ಆದ್ರೂ ಇವಳ ಮನಸ್ನಲ್ಲೇನಿದೆ ಅಂತ ನಿನಗೆ ತಿಳಿಯಲೇ ಇಲ್ಲ. ಸುಮ್ನೆ ವ್ರತ ಕತೆ, ಪೂಜೆ, ಮಡಿ ಅಂತ ಇದ್ಬು ಬಿಟ್ಟರೆ ಆಯ್ತೆ...? ಎಲ್ಲರಂತೆ ಇರಬೇಕು ಕಾಲ ಎಷ್ಟು ಬದಲಾಗಿದೆ. ಆಗಲೇ ಡಾಕ್ಟರ ಹತ್ತಿರ ಹೋಗಿ ಸಲಹೆ ಕೇಳಿದ್ದರೆ ನಿಮಗೇ ಮಕ್ಕಳಾಗುತ್ತಿತ್ತು... ಮಕ್ಕಳಿದ್ದರೆ, ಮನಸ್ಸೂ ದೊಡ್ಡದಾಗಿರುತ್ತದೆ... ನಿನ್ನ ಹೆಂಡ್ತಿ ಬದಲಾಗೇ ಇಲ್ಲ. ಆಗ ಹೇಗಿತ್ತೋ ಸ್ವಭಾವ, ಈಗಲೂ ಹಾಗೇ ಇದೆ... ನಾವೆಲ್ಲಾ ಯಾತಕ್ಕೂ ಬೇಡ, ಹೋಗ್ಲಿ ನಿನ್ನ ಬಗ್ಗೇನಾದ್ರೂ ಗೌರವ ಬೇಡ್ವಾ?..."

"ಈಗ ಹೀಗೆ ಮಾತಾಡ್ತೀಯಲ್ಲಮ್ಮ... ಇವಳ ಮನೆಗೆ ಮನೆ ಅಳಿಯನಾಗಿ ಕಳಿಸು ಅಂತ ನಾನು ನಿನ್ನನ್ನು ಕೇಳಿಕೊಂಡಿದ್ನಾ?" ಬಿರುಸಾಗಿ ಕೇಳಿದ.

"ಈಗ ನನ್ನನ್ನ ಪ್ರಶ್ನಿಸಬೇಡ, ಆಗ ನಿನಗೂ ತಿಳುವಳಿಕೆ ಇಲ್ಲದ ವಯಸ್ಸೇನೂ ಆಗಿರ್ಲಿಲ್ಲ. ಬೇಡ ಅನ್ನಬೇಕಾಗಿತ್ತು... ಶ್ರೀಮಂತರ ಮನೆಗೆ, ಅಳಿಯನಾಗಿ ಇರುವ ಆಸೆ ನಿನಗೂ ಇತ್ತು ಅಲ್ವಾ?... ನೀನು ನಿನ್ನ ಹೆಂಡ್ತೀನ ನಿನ್ನ ಅಧೀನದಲ್ಲಿ ಇಟ್ಕೋಬೇಕಾಗಿತ್ತು... ಅದು ಬಿಟ್ಟು ಅವಳ ಕೈಗೊಂಬೆಯಾಗಿ ಬಿಟ್ಟಿದೀಯ... ಕೂತ್ಕೋ ಅಂದರೆ ಕೂತ್ಕೋತೀಯ ನಿಂತ್ಕೋ ಅಂದ್ರೆ ನಿಂತ್ಕೋತೀಯ... ನೀನು ಗಂಡಸು... ಅವಳು ಹೆಂಗಸು... ಅವಳು ನಿನಗೆ ತಗ್ಗಿ ಬಗ್ಗಿ ನಡೀಬೇಕು... ಅದು ಬಿಟ್ಟು..."ರಾಗ ಎಳೆದಳು.

"ಈಗ ಅವಳು ಬದಲಾಗುಲ್ಲಮ್ಮ... ನನ್ನ ಹಣೇ ಬರಹವೇ ಇಷ್ಟು ಅಂತ

ಅಂದ್ಕೋ... ನನ್ನ ಬಗ್ಗೆ ನಿನಗ್ಯಾಕೆ ಕೊರಗು?..."

"ನಾವಾಗಿಯೇ ನಿನ್ನ ಬಾಳನ್ನು ಹಾಳು ಮಾಡಿದೆವೇನೋ ಅಂತ ಅನ್ನುತ್ತೆ ಕಣೋ ಗೋಪಿ... ಯಾವ ಸ್ವಾತಂತ್ರ್ಯವೂ ನಿನಗಿಲ್ಲವಲ್ಲೋ... ಚಂದ್ರೂನೂ ಇದೇ ತರಹ ಆದರೆ... ಏನು ಗತಿಯೋ?..." ನಿಮ್ಮಿಬ್ಬರಿಗೂ ಸುಖವಿಲ್ಲದ ಹಾಗಾಗುತ್ತೆ."

"ಚಂದ್ರು ನಮ್ಮ ಸ್ವಂತ ಮಗನಲ್ಲ; ಅವನಿಗೆ ಯಾವ ಬಂಧನವೂ ಇಲ್ಲ ಅವನಿಗೆ ಬೇಕಾದ ಹಾಗೆ ಅವನು ಇದಾನೆ... ಇರ್ತಾನೆ... ಅದು ಅವನಿಗೆ ಸೇರಿದ್ದು."

"ಅದಕ್ಕೇ ಲಕ್ಷ್ಮಿಗೆ ಅವನನ್ನು ಕಂಡರೆ ಅಕ್ಕರೆಯೇ ಇಲ್ಲ... ನಿನ್ನ ಅಣ್ಣಂದಿರ ಮಕ್ಕಳ ಪೈಕಿ ಯಾವುದಾದ್ರೂ ಮಗುವನ್ನು ದತ್ತು ತೆಗೆದುಕೊಂಡಿದ್ದರೆ, ಚೆನ್ನಾಗಿತ್ತೇನೋ ಅಂತ ಅನ್ನುತ್ತೆ ನಂಗೆ."

"ಇಲ್ಲಮ್ಮ ಅದು ನಿನ್ನ ತಪ್ಪು ಕಲ್ಪನೆ, ಈಗ ಆದದ್ದೇ ವಾಸಿ... ಇಲ್ಲದಿದ್ರೆ ನಾನು ಎಲ್ಲರ ಕೈಲೂ ಅನ್ನಿಸಿಕೊಳ್ಳಬೇಕಾಗ್ತಿತ್ತು. ಈಗ ನನಗೆ ಚಂದ್ರೂ ಬಗ್ಗೆಯೂಅಯ್ಯೋ ಅಂತ ಅನ್ನುತ್ತೆ... ಅವನು ಸುಖವಾಗಿರಲಿ ಅಂತ ನಂಗೂ ಆಸೆ.... ಅವನಿಗೆ ಕೆಲಸ ಸಿಕ್ಕ ಕೂಡಲೇ, ಮದುವೆಯ ಮಾತನ್ನೆತ್ತುತ್ತೀನಿ... ಈ ಸಮಸ್ತ ಆಸ್ತಿಯ ಮೇಲೆ ಅವನಿಗೆ ಹಕ್ಕು ಇರಬಹುದು. .. ಆದರೆ ಅವನಾಗಲೀ, ಅವನ ಹೆಂಡತಿ ಯಾಗಲೀ, ಆಸೆ ಪಡದಿರುವುದೇ ಒಳ್ಳೆಯದು. ಅದರಿಂದ ನೋವೇ ಹೊರತು, ನೆಮ್ಮದಿಯಿಲ್ಲ."

"ಯಾಕೋ ಹೀಗಂತೀಯ...? ಇದಕ್ಕೋಸ್ಕರವೇ ತಾನೇ ಅವನನ್ನು ಸಾಕಿದ್ದು."

"ನೀನು ನಮ್ಮ ಜೊತೆ ಇದ್ದಿದ್ದರೆ, ನನ್ನ ಬದುಕು ಹೇಗಿದೆ ಅಂತ ನಿನಗೇ ತಿಳಿಯುತ್ತಿತ್ತು... ಹೋಗಲಿ ಬಿಡು, ಇಷ್ಟು ವರ್ಷಗಳ ನಂತರ ಆ ಮಾತು ಯಾಕೆ?..."

"ಸರಿ, ನಿನಗೆ ಅಷ್ಟು ಕಷ್ಟವಾಗಿದ್ದರೆ, ಬಿಟ್ಟು ವಾಪಸ್ಸು ಬಂದು ಬಿಡಬೇಕಾಗಿತ್ತು... ಬೇರೆ ಮದುವೆ ಮಾಡಿಕೊಂಡಿದ್ದರೆ, ನೀನೂ ಎಲ್ಲರಂತೆ ಇರುತ್ತಿದ್ದೆ."

"ಎಲ್ಲರಂತೆ ನಾನು ಇರೋದು ಬೇಡ ಅಂತ ತಾನೇ... ನನ್ನನ್ನ ಇವಳ ಮನೆಗೆ ಕಳಿಸಿದ್ದು? ಒಂದು ವೇಳೆ ನಾನು ವಾಪಸ್ಸು ಬಂದಿದ್ದರೆ, ಇವಳಿಗೆ ದ್ರೋಹ ಮಾಡಿದಂತೆ ಆಗ್ತಿರಲಿಲ್ವೇನಮ್ಮಾ... ಅದು ನ್ಯಾಯ ಆಗ್ತಿರಲಿಲ್ಲ... ಅದು ತಪ್ಪಾಗ್ತಿತ್ತು."

"ಹೋಗ್ಲೀ ಒಂದು ದಿನವಾದ್ರೂ ನಿನ್ನ ವ್ಯಥೆಯನ್ನು ಹೇಳಿಕೊಳ್ಳಲಿಲ್ಲ ವಲ್ಲೋ..."

"ಕೇಳಿಸಿಕೊಳ್ಳುವ ಸಹನೆ, ಸಮಯ ನಿನಗಿತ್ತಾ?... ಆಡಿಕೊಳ್ಳುವ ವಸ್ತುವಾಗಿ ಬಿಡುತ್ತಿದ್ದೆ ನಾನು... ನಾನು ಹೆಂಡತಿ ಗುಲಾಮ ಅಂತ ಅನ್ನಿಸಿಕೊಂಡರೂ ಪರವಾಗಿಲ್ಲ... ಅವಳಿಗೆ ನಿಷ್ಠೆಯಿಂದ ಇದೀನಿ... ಪ್ರಾಮಾಣಿಕನಾಗಿದೀನಿ... ನನಗೆ ಯಾವ ಅಳುಕೂ ಇಲ್ಲ."

"ಇದು ಇವಳಿಗೆ ಅರ್ಥವಾಗಿರಬೇಕಲ್ಲ...?"

"ಅರ್ಥವಾಗದೇ ಇರುತ್ತೇನಮ್ಮ ?... ಇಷ್ಟು ವರ್ಷ ಜೊತೆಯಲ್ಲಿ ಸಂಸಾರ ಮಾಡಿದೀವಿ... ಇವಳಿಗೂ ನನ್ನ ಹೊರತು ಬೇರೆ ಯಾರಿದಾರೆ ಹೇಳು?... ಇವಳಿಗಾಗಿ ಎಲ್ಲವನ್ನು ಸಹಿಸಿಕೊಂಡಿದೀನಿ. ಯಾಕೆ ಹೇಳು?... ಇವಳು ನನ್ನ ಧರ್ಮಪತ್ನಿ... ಅವಳ ಕೈ ಹಿಡಿದಿದೀನಿ."

ತಾಯಿ ಮಗನ ಮುಖವನ್ನೇ ವಿಚಿತ್ರವಾಗಿ ನೋಡಿದಳು. "ಇವಳ ಜೊತೆ ಇದ್ದೂ ಇದ್ದೂ ನಿನ್ನ ತಲೆಯೂ ಅತ್ಲಾಗೇ ವಾಲಿದೆ... ಧರ್ಮಪತ್ನಿಯ ಅರ್ಥ ನಿಂಗೆ ಗೊತ್ತಾ?... ಅವಳು ನಿನ್ನ ಧರ್ಮಪತ್ನಿ... ನೀನು ಹೇಳಿದಂತೆ ಅವಳು ಕೇಳಬೇಕು..."

"ಆಯ್ತಲ್ಲ, ಈಗ ನಾನು ಹೇಳುವುದೂ ಇಲ್ಲ. ಅವಳು ಕೇಳುವುದೂ ಇಲ್ಲ, ಆ ಕಾಲ ಬರುವುದೂ ಇಲ್ಲ... ನನಗೆ ಈಗ ಆ ಆಸೆಯೂ ಇಲ್ಲ... ಈಗ ನನಗೆ ಯಾವ ಆಸೆಯೂ ಇಲ್ಲ..." ಅವನು ಸ್ವಲ್ಪ ಗಡುಸಾಗಿ ನುಡಿದಾಗ, ಅವಳು ಮೆತ್ತಗಾದಳು.

"ನಾವು ತಪ್ಪು ಮಾಡಿದೆವು ಅಂತ ಈಗ ಅನ್ನಿಸ್ತಿದೆ ಕಣೋ... ನಮ್ಮನ್ನು ಕ್ಷಮಿಸಿ ಬಿಡು..." ತಲೆ ತಗ್ಗಿಸಿ ನುಡಿದಳು.

"ಈಗ ಈ ಮಾತುಗಳೆಲ್ಲ ಯಾಕೆ?.... ಯಾವುದನ್ನೂ ಬದಲಾಯಿಸಲು ಸಾಧ್ಯ ವಿಲ್ಲ. ಹಂಡೆ ನೀರು ಆರಿ ಹೋಗುತ್ತೆ. ನಾನು ಸ್ನಾನ ಮಾಡಿಬಿಡ್ತೀನಿ... ಮದುವೆ ಮನೆಯಿಂದ ತಿಂಡಿ ತಂದಿಡ್ತಾರಂತೆ..." ಎಂದು ಹೇಳಿ ಮಾತನ್ನು ಬದಲಾಯಿಸಿ ಎದ್ದ... ತಾಯಿಗೆ ಮಗನ ಬಗ್ಗೆ ಮರುಕವೆನಿಸಿತ್ತು... ಅವಳ ಹೃದಯ ಭಾರವಾಗಿತ್ತು.

ಇಷ್ಟು ವರ್ಷಗಳ ನಂತರ, ತಾಯಿ ಈ ಮಾತುಗಳನ್ನೆತ್ತಬಾರದಾಗಿತ್ತೆನಿಸಿತ್ತು. ಈಗ ಹೆಂಡತಿಯನ್ನು ದ್ವೇಷಿಸಲಾರ; ತಾಯಿಯನ್ನು ಪ್ರೀತಿಸಲಾರ. ಈ ಪರಿಸ್ಥಿತಿಗಳಿಗೆ, ಒಂದು ರೀತಿಯಲ್ಲಿ ಒಗ್ಗಿ ಹೋಗಿದ್ದ. ಈಗ ಮತ್ತೆ ಮತ್ತೆ ಅದನ್ನೇ ಆಡುವುದರಲ್ಲಿ ಯಾವ ಪ್ರಯೋಜನವಿಲ್ಲ, ಬರೀ ಬೇಸರ ಎಂದು ಬಲ್ಲ. ಟವೆಲ್ಲನ್ನು ಹಿಡಿದು ಸ್ನಾನಕ್ಕೆ ಹೊರಟ. "ಯಾರಾದ್ರೂ ತಿಂಡಿ, ಕಾಫಿ ತಂದರೆ, ಇಲ್ಲೇ ಇಡಿಸ್ಕೋ... ಅಡಿಗೆ ಮನೆಯ ತನಕ ಬಿಡೋದು ಬೇಡ... ನಾನು ಬಂದು ತೆಗೆದು ಇಡ್ತೀನಿ" ಎಂದು ಹೇಳಿ ಬಚ್ಚಲ ಮನೆಗೆ ನಡೆದ.

೦ ೦ ೦

ಸಾಕ್ಷಾತ್ ಮಹಾಲಕ್ಷ್ಮಿಯೇ ಧರೆಗಿಳಿದು ಬಂದಂತೆ ಗೋಚರಿಸಿದ ಲಕ್ಷ್ಮಿ ದೇವಿಯನ್ನು ಅಲ್ಲಿ ನೆರೆದಿದ್ದವರೆಲ್ಲಾ ಬೆರಗಾಗಿ ಕಣ್ಣರಳಿಸಿ ನೋಡಿ ಮಂದಸ್ಮಿತರಾದರು. ಜೋಷಿಯ ಪತ್ನಿ ಹಾಗೂ ಅವಳ ನಾದಿನಿ, ಗೌರವಾದರಗಳಿಂದ "ಬನ್ನಿ ಬನ್ನಿ" ಎಂದು ಸ್ವಾಗತಿಸಿ, ಆಕೆಗಾಗಿಯೇ ಮೀಸಲಿಟ್ಟಿದ್ದ ಮಣೆಯ ಮೇಲೆ ಕುಳಿತುಕೊಳ್ಳುವಂತೆ ಹೇಳಿದರು. ಅವರುಗಳು ತನಗೆ ತೋರುತ್ತಿರುವ ವಿಶೇಷ ಗೌರವಾದರಗಳಿಂದ ಲಕ್ಷ್ಮಿ

ದೇವಿ ಹೆಮ್ಮೆಗೊಂಡಿದ್ದಳು.

"ಏನನ್ನೂ ಸಿದ್ಧ ಮಾಡ್ಕೊಂಡಿಲ್ವಾ?... ತಂಪು ಹೊತ್ತು ಮೀರಿಹೋಗುತ್ತೆ... ಮುತ್ತೈದೆಯರಿಗೆ ಮಣೆ ಹಾಕಿ ಕಾಲು ತೊಳೆದು, ಅರಿಶಿನ ಕುಂಕುಮ ಹಚ್ಚಿ ಕಣ್ಣಿಗೊತ್ತಿಕೊಂಡು ನಮಸ್ಕರಿಸಿ ಒಳಗೆ ಬರಮಾಡಿಕೊಳ್ಳಿ... ಆನಂತರ ರಂಗೋಲಿಯನ್ನು ಹಾಕಿ ಮಣೆಗಳನ್ನಿಟ್ಟು ಎಲ್ಲರನ್ನು ಕುಳ್ಳಿರಿಸಿ, ದೇವಿಯನ್ನು ಆವಾಹನೆ ಮಾಡಿ, ಷೋಡಷೋಪಚಾರಗಳಿಂದ ಪೂಜಿಸಿರಿ... ಧೂಪದೀಪಗಳನ್ನು ಹಚ್ಚಿ ಆರತಿಯನ್ನೆತ್ತಿರಿ, ಪಾನಕ ಕೋಸಂಬರಿಗಳನ್ನು ಕೊಟ್ಟು ಉಪಚರಿಸಿರಿ. ಎಲ್ಲರ ಮಡಿಲನ್ನು ತುಂಬಿರಿ, ಭಕ್ತಿ ಶ್ರದ್ಧೆಗಳಿಂದ ಮನೆಯವರೆಲ್ಲಾ ಗಂಡಸರಾದಿಯಾಗಿ, ಮುತ್ತೈದೆಯರಿಗೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆಯಿರಿ. ಅವರು ಕೊಡುವ ಮಂತ್ರಾಕ್ಷತೆಯನ್ನು ಭಕ್ತಿಯಿಂದ ಸ್ವೀಕರಿಸಿ, ಪ್ರಾರ್ಥಿಸಿ, ಮಂಗಳ ಕಾರ್ಯ ನಿರ್ವಿಘ್ನವಾಗಿ ನೆರವೇರುತ್ತದೆ ಎಂದಳು. ಎಲ್ಲರೂ ತಲೆದೂಗಿದರು.

ಆಕೆ ಹೇಳಿದಂತೆಯೇ ಸುಹಾಸಿನಿ ಪೂಜಾ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಎಲ್ಲಾ ಮುತ್ತೈದೆಯರಿಗೂ ದೊಡ್ಡ ತಟ್ಟೆತುಂಬಾ ವಿವಿಧ ಬಗೆಯ ಹಣ್ಣುಗಳು, ಎಲೆ ಅಡಿಕೆ, ತಾಂಬೂಲ, ದಕ್ಷಿಣೆ, ಮಂಗಳದ್ರವ್ಯ ಹಾಗೂ ರವಿಕೆ ಖಣಗಳನ್ನಿತ್ತು ಮಡಿಲು ತುಂಬಿದರು. ಮನೆಯ ಸರ್ವರೂ, ಮುತ್ತೈದೆಯರಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದರು. ಲಕ್ಷ್ಮಿದೇವಮ್ಮನನ್ನು ವಿಶೇಷವಾಗಿ ಸತ್ಕರಿಸಿ, ರೇಶಿಮೆಯ ಸೀರೆ ಹಾಗೂ ರೇಶಿಮೆಯ ಖಣವನ್ನಿತ್ತು, ಸನ್ಮಾನಿಸಿದರು. "ಇದೆಲ್ಲಾ ಏನು? ಯಾಕೆ?" ಎಂದು ಬಾಯಿಯಲ್ಲಿ ಔಪಚಾರಿಕವಾಗಿ ಹೇಳಿದರೂ, ಒಳಗೊಳಗೇ ಖುಷಿಯಾಗಿತ್ತು... ಸಂತಸ ಮುಖದಲ್ಲಿ ಗೋಚರಿಸಿತ್ತು. ಸಾಂಪ್ರದಾಯಿಕವಾಗಿ ಆಶೀರ್ವದಿಸಿದಳು. ಎಲೆ ಅಡಿಕೆ, ಮಂಗಳ ದ್ರವ್ಯಗಳಿದ್ದ ತಟ್ಟೆಯನ್ನು ತನ್ನ ಕೈಯಲ್ಲಿ ಹಿಡಿದಳು..." ಇವೆಲ್ಲವನ್ನು ಯಾರಾದರೂ ತಂದುಕೊಡಿ. ಉಳಿದುದನ್ನು" ಎಂದು ಆಜ್ಞೆ ಮಾಡಿ ಮನೆಗೆ ಹೊರಟಳು.

"ಎಲೆ ಹಾಕಿ ಬಡಿಸುವಾಗ, ನಿಮಗೆ ಹೇಳಿಕಳಿಸ್ತೀನ್ರಿ..." ಹಿರಿಯಾಕೆ ಹೇಳಿದಳು.

"ತಪ್ಪು ತಿಳ್ಕೋಬೇಡಿ... ನಾನು ಊಟಕ್ಕೆ ಬರುಕ್ಕಾಗುಲ್ಲ. ನಮ್ಮ ಯಜಮಾನ್ರು ನನ್ನ ಅತ್ತೆ ಅವರೆಲ್ಲಾ ಬರ್ತಾರೆ..." ಎಂದಳು.

"ಹಂಗಂದ್ರೆ ಹೆಂಗ್ರೀ... ಛಲೋತ್ನಾಗ ದೇವಿ ಬಂದಂಗ ಬಂದಿದೀರಿ... ದೇವರ ಸಮಾರಾಧನೆ ಊಟ ಉಂಡು ಹರಸಬೇಕ್ರೀ... ಹೋಳಿಗೀ ಊಟ ಮಾಡಬೇಕು... ಆಗಲೇ ನಮಗೆ ಒಳಿತಾಗ್ತದ." ಆಕೆ ನುಡಿದಳು.

"ಹಾಗಾದ್ರೆ, ಮಡೀಲಿ, ಒಂದಿಷ್ಟು ಹೋಳಿಗೆ, ಪಾಯಸಾನ ಮನೆಗೇ ಕಳಿಸ್ಬಿಡಿ... ನಾನು ಮನೇಲೇ ತಿಂತೀನಿ." ಲಕ್ಷ್ಮಿದೇವಮ್ಮ ಹಾಗೆ ಹೇಳಿದಾಗ, ಅವರು ಮತ್ತೇನನ್ನು ಆಡಲು ಆಗಲಿಲ್ಲ.

"ನಿಮ್ಮ ಮಾತು ಮೀರಬಾರದು ಅಂತ ಒಪ್ಪಿಕೊಂಡೇವ್ರೀ... ಮಾರ್ತಾಂಡ ಬಾರೋ ಅಪ್ಪಾ... ಅತ್ತೀ ಮನೇ ತನಕ ಇದೆಲ್ಲವನ್ನೂ ಜಪನವಾಗಿ ಎತ್ಕೊಂಡು ಹೋಗಿ ಕೊಟ್ಟು ಬಾರ." ತಾಯಿ ಮಗನನ್ನು ಕರೆದಳು.

"ಇವನಿಗೆ ಉಪನಯನ ಆಗಿದೆಯಾ? ಆಗಿಲ್ಲದಿದ್ರೆ ಮಡಿಗೆ ಬರುಲ್ಲ." ಎಂದಳು

"ಎಲ್ಲರೂ ಮುಖ ಮುಖ ನೋಡಿಕೊಂಡರು. ಮಾರ್ತಾಂಡನ ಮುಖ ಪೆಚ್ಚಾಗಿತ್ತು. ದತ್ತ ಮುಂದೆ ಬಂದ. "ಅತ್ತೀ... ನಾನು ತಂದು ಕೊಡ್ತೀನ್ರೀ... ನಂಗ ಮದುವೀ ಕೂಡಾ ಆಗದ" ನಗುತ್ತಾ ನುಡಿದು ಎಲ್ಲರ ಕಡೆ ನೋಡಿದ. ಎಲ್ಲರೂ ಮನದಲ್ಲೇ ನಕ್ಕರು.

"ಲಗ್ನ ಆದ್ರೇನೋ ಬಾಳಾ... ಮಕ್ಕಳಾಗಿಲ್ಲವಲ್ಲ, ಮಡಿಗೆ ಬರ್ತದೋ ಇಲ್ವೋ ಕೇಳ್ಕೋಡು" ಯಾರೋ ಒಳಗ್ನಿಂದ ಹೇಳಿದ್ದು ಕೇಳಿಸಿತು. ಲಕ್ಷ್ಮಿದೇವಮ್ಮನ ಮುಖ ಕೆಂಪಾಗಿತ್ತು.

"ಯಾರದು ? ನನ್ನ ಮಡಿ ಬಗ್ಗೆ ತಮಾಷೆ ಮಾಡಿದ್ದು" ಎಂದು ಕೇಳುವ ತವಕವಾದರೂ, ತಾನು ಆದರ ಆತಿಥ್ಯ ಸ್ವೀಕರಿಸಿದ್ದೇನೆ. ಕೇಳಿಸದವಳಂತೆ ಸುಮ್ಮನಿರ್ತೀನಿ ಈಗ ಕೋಪ ಗೊಂಡರೆ, ಫಲ ಕೆಡುತ್ತದೆ ಅಂತಂದುಕೊಂಡು, "ಪರವಾಗಿಲ್ಲ ಬಿಡಿ, ನಮ್ಮ ಯಜಮಾನ್ರನ್ನೇ ಕಳಿಸ್ತೀನಿ" ಎಂದಳು.

"ಹಂಗಲ್ರೀ... ಅದ್ಯಾವ್ದೋ ಹುಚ್ಚು ಖೋಡಿ ಏನೋ ಆಡ್ತು ಅಂತ ಮುನಿಸ್ಕೋಬ್ಯಾಡ್ರೀ. ತಪ್ಪಾತು ಅಂತ ಕೇಳ್ಕೋಳ್ತೀವ್ರೀ." ಕೆಲವರು ಮುಂದೆ ಬಂದು ಕೈ ಮುಗಿದರು.

ಲಕ್ಷ್ಮೀದೇವಮ್ಮನಿಗೆ ಅವಮಾನವಾದಂತಾಗಿತ್ತು, ತನಗೂ ಮಕ್ಕಳಿಲ್ಲ, ಅದನ್ನು ಆ ಹೆಂಗಸು ಸೂಚ್ಯವಾಗಿ ಹೇಳಿರಬಹುದೇ... ಅಂತ ಅನ್ನಿಸಿದಾಗ, ಅದುವರೆಗೆ ಅನುಭವಿಸಿದ್ದ ಸಂತಸವೆಲ್ಲಾ ಒಮ್ಮೇಗೇ ಮಾಯವಾದಂತಾಯಿತು. ಅದಕ್ಕೇ ತಾನು ಇಂತಹ ಸಮಾರಂಭಗಳಿಗೆ ಬರಲು ಇಷ್ಟಪಡುವುದಿಲ್ಲ ಎಂದುಕೊಂಡಳು... ಸಂಪ್ರದಾಯಕ್ಕೋಸ್ಕರ "ಬರ್ತೀನಿ" ಎಂದು ಹೇಳಿ ಹೊಸಲನ್ನು ದಾಟಿದಳು. ದತ್ತ ಉಳಿದುದೆಲ್ಲವನ್ನು ಎತ್ತಿಕೊಂಡು ಆಕೆಯ ಹಿಂದೆ ಹಿಂದೆ ಹೆಜ್ಜೆ ಹಾಕಿದ. ಮನೆಯ ಮುಂಬಾಗಿಲ ಬಳಿ ಗೋಪಾಲ ನಿಂತಿದ್ದ... ದತ್ತ, "ನಮಸ್ಕಾರ್ರೀ..." ಎಂದು ಹೇಳಿ, "ಇದ್ನೆಲ್ಲಾ ಎಲ್ಲಿಡೂದ್ರೀ" ಎಂದು ಕೇಳಿದ. ಗೋಪಾಲ ಏನಾದ್ರೂ ಹೇಳುವ ಮೊದಲೇ ಲಕ್ಷ್ಮಿದೇವಮ್ಮ ನುಡಿದಳು. "ಎಲ್ಲಾದನ್ನೂ ಇವರ ಕೈಗೆ ಕೊಡಪ್ಪಾ... ಇವರು ಒಳಗಿಡ್ತಾರೆ." ಎಂದಳು ಗೋಪಾಲ ಎಲ್ಲವನ್ನು ತನ್ನ ಕೈಗೆ ತೆಗೆದುಕೊಂಡ.

"ನಿಮಗೆ ತೊಂದರೆ ಆಯ್ತು." ಎಂದ ದೇಶಾವರಿ ನಗೆಯನ್ನು ನಕ್ಕು.

"ಇಲ್ರೀ. ಇದ ನಮ್ಮ ಕೆಲಸಾನ್ರೀ." ಎಂದವನು ಲಕ್ಷ್ಮಿದೇವಮ್ಮನ ಕಡೆ ತಿರುಗಿದ." ಅತ್ತೀ ಹೀಂಗ ಬನ್ರೀ ಇವರ ಕೂಡಾ ನಿಲ್ರೀ.ನಾನು ಇಬ್ರಿಗೂ ನಮಸ್ಕಾರ ಮಾಡ್ತೇನ್ರೀ... ಆಶೀರ್ವಾದ ಮಾಡ್ರೀ..." ಎಂದು ಕೇಳಿಕೊಂಡ.

"ಮನೇಲಿ ಆಗಿತ್ತಲ್ಲಪ್ಪಾ... ಮತ್ಯಾಕೆ?"

"ಹಂಗಲ್ರೀ... ಲಕ್ಷ್ಮೀನಾರಾಯಣ ಇದ್ದಾಂಗ ಜೋಡಿ ಆದೀರ್ರೀ... ನಮಗ

"ತಡಿಯಪ್ಪಾ... ಮಂತ್ರಾಕ್ಷತೆ ತರ್ತೀನಿ" ಎಂದು ಹೇಳಿದಾಗ, ಗೋಪಾಲ ತಾನೇ ಬೇಗ ಬೇಗ ದೇವರ ಮನೆಗೆ ಬಂದು, ಮಂತ್ರಾಕ್ಷತೆಯ ಬಟ್ಟಲನ್ನು ತಂದ. ಇಬ್ಬರೂ ಒಟ್ಟಿಗೇ ನಿಂತರು. ದತ್ತ, ಅತೀ ಶ್ರದ್ಧೇಯಿಂದ ಇಬ್ಬರ ಕಾಲುಗಳನ್ನು ಮುಟ್ಟಿ ಮುಟ್ಟಿ ಕಣ್ಣಿಗೊತ್ತಿಕೊಂಡ. ಇಬ್ಬರೂ ಮಂತ್ರಾಕ್ಷತೆ ಕಾಳನ್ನು ಅವನ ತಲೆಯ ಮೇಲೆ ಹಾಕಿ ಆಶೀರ್ವದಿಸಿದರು. "ನೂರು ಕಾಲ ಸುಖವಾಗಿರು" ಎಂದು ಲಕ್ಷ್ಮೀದೇವಮ್ಮ ಹರಸಿದಳು.

"ಆದಷ್ಟು ಬೇಗ ಮಗುವಿನ ತಂದೆಯಾಗು" ಎಂದ ಗೋಪಾಲ ಲಕ್ಷ್ಮೀದೇವಮ್ಮ ಸರ್‍ರನೆ ಗಂಡನ ಕಡೆ ನೋಡಿದಳು.

"ನಾನು ಹೀಂಗತೀನಿ ಅಂತ ತಪ್ಪು ತಿಳ್ಕೋಬೇಡ... ನಿನ್ನ ಹೆಂಡ್ತಿಗೆ ಮಕ್ಕಳಾಗುವುದು ಅನುಮಾನ" ಎಂದು ಬಿಟ್ಟಳು. ದತ್ತನ ಮುಖ ಕಪ್ಪಾಗಿತ್ತು. ಗೋಪಾಲ ಬೆಚ್ಚಿದ. "ದೇವಿ ನನ್ನ ನಾಲಿಗೇಲಿ ನುಡಿಸಿದಾಳೆ, ನಿನ್ನ ನಿನ್ನ ಹೆಂಡತಿಯ ಜಾತಕವನ್ನು ಜ್ಯೋತಿಷಿಗಳಲ್ಲಿ ತೋರಿಸ್ಕೋ... ಅವರೂ ಇದೇ ಮಾತನ್ನು ಹೇಳ್ತಾರೆ..." ಎಂದುಬಿಟ್ಟಳು. ದತ್ತ ಪೆಚ್ಚಾಗಿ ಗೋಪಾಲನ ಕಡೆ ನೋಡಿದ. ಅವನು, "ನೀನು ಇನ್ನು ಹೋಗ ಬಹುದು ಎನ್ನುವಂತೆ ಸಂಜ್ಞೆ ಮಾಡಿದ. ದತ್ತ ಇಬ್ಬರ ಕಡೆಯೂ ನೋಡುತ್ತಾ ಹೊರಟುಹೋಗಿದ್ದ. ಇವಳ್ಯಾಕೆ ಹೀಗೆ ಹೇಳಿದಳು ಅಂತ ಗೋಪಾಲ ಯೋಚಿಸಿದರೂ ಪ್ರಶ್ನಿಸಲಿಲ್ಲ. ಒಳಗೆ ಕುಳಿತಿರುವ ತಾಯಿಯ ಎದುರಿಗೆ ಅನಗತ್ಯ ಚರ್ಚೆ ಮಾಡುವ ಮನಸ್ಸಾಗಲಿಲ್ಲ, ತಡೆದು ಕೊಂಡ. ಆದರೂ ಕಸಿವಿಸಿಗೊಂಡಿದ್ದ.



ಚಂದ್ರು ಊರಿಗೆ ಹಿಂತಿರುಗಿದಾಗ ರಾತ್ರಿ ಹನ್ನೆರಡೂವರೆ ಗಂಟೆಯ ಸಮಯವಾಗಿತ್ತು. ಸಮೀಪದಲ್ಲೇ ಇದ್ದ ಮನೆಗೆ ನಡದೇ ಬಂದ. ದೂರದಿಂದಲೇ, ತಮ್ಮ ಮನೆಯ ದೀಪಗಳು ಆರಿದುದನ್ನು ಕಂಡ. ಮದುವೆಯ ಚಪ್ಪರದಲ್ಲಿ ಕೆಳಗೆಲ್ಲಾ ಬೆಳಕು ಹರಡಿತ್ತು... ಜೋಷಿ ಮನೆಯಲ್ಲಿ ಹಾಗೂ ಅವರು ಬಿಡಿಸಿಕೊಂಡಿದ್ದ ಮನೆಯಲ್ಲೂ ದೀಪಗಳು ಉರಿಯುತ್ತಿದ್ದವು. ಮನೆಯ ಮುಂಬಾಗಿಲಿಗೆ ಬಂದು, ಬೆರಳಿನಿಂದ ಬಾಗಿಲನ್ನು ಬಡಿದ. ಯಾರೂ ಬಂದು ಬಾಗಿಲನ್ನು ತೆರೆಯದಿದ್ದಾಗ ಆಶ್ಚರ್ಯವಾಗಿತ್ತು. ಎಲ್ಲರಿಗೂ ಅಂಥಾ ಗಾಢ ನಿದ್ರೆಯೇ ಅಥವಾ ಬಾಗಿಲ ಬಡಿತ ಕೇಳಿಸುತ್ತಿಲ್ಲವೋ ಎಂದುಕೊಂಡು, ಹಾಲಿನ ಕಿಟಕಿಯ ಬಳಿ ಆಚೆ ನಿಂತು, 'ಅಜ್ಜೀ ಅಜ್ಜೀ' ಎಂದು ಮೆಲ್ಲನೆ ಕರೆದ. ಉತ್ತರವಿಲ್ಲ. ದೀಪವನ್ನು ಸಹ ಹಾಕಲಿಲ್ಲ. ತಾನು, ತನ್ನ ಮನೆಯ ಆಚೆ ಕಳ್ಳನಂತೆ ಕಿಟಕಿಯ ಬಳಿ ನಿಂತುದುದು ಅವನಿಗೆ ಹೀನಾಯವೆನಿಸಿತ್ತು ಕತ್ತಲೆಯಲ್ಲೇ ಹಿಂಬಾಗಿಲ ಬಳಿಗೆ ಬಂದು ಹಿಂಬಾಗಿಲನ್ನು ಬಡಿದು, 'ಅಪ್ಪಾ.... ಅಪ್ಪಾ....' ಎಂದು ಕರೆದ. ಯಾರೂ ಬಂದು ಬಾಗಿಲನ್ನು ತೆರೆಯಲಿಲ್ಲ... ಮತ್ತೆ ಮುಂಬಾಗಿಲಿಗೆ ಬಂದು, ಮನೆ ಬಾಗಿಲಿಗೆ ಬೀಗವನ್ನೇನಾದರೂ ಹಾಕಿದೆಯೇ ಅಂತ ನೋಡಿದ. ಹಾಗೇನಿರಲಿಲ್ಲ.

ಒಳಗಿನಿಂದಲೇ ಬಾಗಿಲನ್ನು ಭದ್ರಪಡಿಸಿತ್ತು... ಅಲ್ಲಿಯೇ ಮೆಟ್ಟಿಲ ಮೇಲೆ ಕುಳಿತು ಆ ಕಡೆ ಈ ಕಡೆ ನೋಡಿದ. ಜೋಷಿಯ ಮನೆ ಮಂದಿ ಎಚ್ಚರವಾಗಿರುವರೆಂದು ತೋರುತ್ತಿತ್ತು. ಗುಜುಗುಜು ಮಾತು, ದಡಬಡ ಸದ್ದು ಇತ್ಯಾದಿ ಕೇಳಿಬರುತ್ತಿತ್ತು. ಸಾಯಂಕಾಲ ವರನ ಕಡೆಯವರು ಬರುವವರಿದ್ದರು. ಬಂದಿರಬಹುದು. ಊಟ ಉಪಚಾರ ಮುಗಿದಿರಬಹುದು, ಈಗಾಗಲೇ ಒಂದು ಗಂಟೆಯಾಗಿದೆ... ಹುಡುಗಿಯ ಮನೆಯವರು ಮಲಗುತ್ತಾರೋ ಇಲ್ಲವೋ..... ಬೆಳಿಗ್ಗೆಯ ಕಾರ್ಯಗಳಿಗಾಗಿ ತಯಾರಿ ನಡೆಸುವುದು ಬಾಕಿ ಇರಬಹುದು.... ಎಲ್ಲರೂ ಅವರವರ ಕೆಲಸದಲ್ಲಿ ಮಗ್ನ ರಾಗಿದ್ದಾರೆ.... ತಾನು ರಾತ್ರಿಯೆಲ್ಲಾ ಈ ಮೆಟ್ಟಿಲ ಮೇಲೇ ಕುಳಿತು ಕಳೆಯಬೇಕೆ? ನಾನು ಬರುತ್ತೇನೆಂದು ತಿಳಿಸಿದ್ದೆನಲ್ಲ... ಅಪ್ಪ ಕೂಡಾ ಯಾಕೆ ಬಾಗಿಲನ್ನು ತೆರೆಯಲಿಲ್ಲ....?

"ಯಾರಪ್ಪಾ ತಮ್ಮಾ ಅಲ್ಲಿ ಕೂತಿದೀರಿ ?' ಯಾರೋ ಆ ಕಡೆ ಬಂದ ವ್ಯಕ್ತಿಯೊಬ್ಬ ಪ್ರಶ್ನಿಸಿದಾಗ ಅವನು ಬೆಚ್ಚಿದ. ಉತ್ತರಿಸುವ ಗೋಜಿಗೆ ಹೋಗಲಿಲ್ಲ. ಸುಮ್ಮನೇ ಕುಳಿತಿದ್ದ. ಆತ ಮತ್ತೆ ಪ್ರಶ್ನಿಸದೇ ತಾವು ಇಳಿದುಕೊಂಡಿದ್ದ ಮನೆಯ ಕಡೆಗೆ ನಡೆದಾಗ ಇವನು ಜೋಷಿಯ ಮನೆ ಕಡೆಗೆ ಬಂದ. ಪರಿಚಯದವರು ಯಾರೂ ಕಾಣಲಿಲ್ಲ. ದಿಬ್ಬದ ಮೇಲಿದ್ದ ಮನೆಯ ದೀಪಗಳು ಉರಿಯುತ್ತಿದ್ದವು. ಅಲ್ಲಿಗೆ ಹೋಗೋಣ ಎಂದುಕೊಂಡು, ಕಾಲು ಹಾದಿಯಲ್ಲಿ ನಾಲ್ಕು ಹೆಜ್ಜೆ ನಡೆದ.... ಇಲ್ಲಿಯೂ ಮದುವೆಗೆ ಬಂದಿರುವ ನೆಂಟರಿಷ್ಟರು ಮಲಗಿರುತ್ತಾರೆ. ತನ್ನ ಪರಿಚಯ ಅವರುಗಳಿಗೆ ಇದೆಯೋ ಇಲ್ಲವೋ, ಈ ನಡುರಾತ್ರಿಯಲ್ಲಿ ಪರೀಕ್ಷಿಸುವುದು ಯಾಕೆ ಎಂದುಕೊಂಡು ಅಲ್ಲಿಯೇ ನಿಂತು ಸುತ್ತಲೂ ನೋಡಿದ. ರಾಮರಾಯರ ಮನೆಯ ಜಗುಲಿ ವಿಶಾಲವಾಗಿದೆ. ಅಲ್ಲಿಯೇ ಏಕೆ ಮಲಗಿರಬಾರದು ಎಂದುಕೊಂಡು, ತಕ್ಷಣವೇ ಬೇಡ ಎನ್ನುವಂತೆ ತಲೆ ಕೊಡವಿಕೊಂಡ. ಈ ಎಲ್ಲಾ ಮನೆಗಳ ಮಾಲೀಕರ ಮಗ ನಾನು, ಅಬ್ಬೇಪಾರಿಯಂತೆ ಜಗುಲಿಯ ಮೇಲೆ ಮಲಗಿರಬೇಕೆ ?.... ಬೇಡ.... ತಾನು ಮತ್ತೆ ವಾಪಸ್ಸು ಬಸ್‌ಸ್ಟ್ಯಾಂಡ್‌ಗೇ ಹೋಗಿ, ಯಾವುದಾದರೂ ಊರಿಗೆ ಹೊರಟು ಹೋದರೇ?... ಎಂದುಕೊಂಡು ಒಂದು ಗಳಿಗೆ ಯೋಚಿಸುತ್ತಾ ನಿಂತ. ಅಷ್ಟರಲ್ಲಿ ಪಂಕಜಾ ಟೀಚರ್ ಮನೆಯ ಒಳಗಿನ ದೀಪ ಹೊತ್ತಿಕೊಂಡಿತು.... ಅವರು ಎಚ್ಚರಗೊಂಡಿದ್ದಾರೆ, ತಾನೇಕೆ ಹೋಗಿ ನೋಡಬಾರದು ಎಂದುಕೊಂಡು ಅತ್ತ ನಡೆದ. ಮನೆಯ ಮುಂಬಾಗಿಲಿನಲ್ಲಿ ನಿಂತು ಕಳ್ಳನಂತೆ, ಸುತ್ತಲೂ ಒಮ್ಮೆ ನೋಡಿ, ಬಾಗಿಲ ಮೇಲೆ ಬೆರಳುಗಳನ್ನು ಲಘುವಾಗಿ ಬಡಿದ. ತಕ್ಷಣ ಒಳಗಿದ್ದವರು ದೀಪವನ್ನಾರಿಸಿದರು. ಆದರೆ, ಬಾಗಿಲ ತನಕ ಬಂದಂತೆ ಹೆಜ್ಜೆ ಸದ್ದು ಕೇಳಿಸಿತ್ತು... "ಯಾರದು?... ಯಾರು ಹೊರಗೆ?" ಟೀಚರ್ ಕೇಳಿದ್ದು ಕೇಳಿಸಿತ್ತು...

"ನಾನು... ನಾನು ಟೀಚರ್" ಎಂದು ಪಿಸುದನಿಯಲ್ಲಿ....

"ನಾನು ಅಂದ್ರೇ.... ಹೆಸರ್ಹೇಳ್ರೀ.... ಏನ್ಬೇಕು?..." ಗದರಿಕೆಯ ಧ್ವನಿ ಕೇಳಿ ಬಂತು.

"ದಯವಿಟ್ಟು ಬಾಗಿಲು ತೆಗೀತೀರಾ?....

"ನೀವ್ಯಾರು ಅಂತ ಮೊದಲು ಹೇಳಿ...."

"ನಾನು ಚಂದ್ರಮೌಳಿ. ಮನೆ ಮಾಲೀಕರ ಮಗ.... ನನ್ನ ಧ್ವನಿಯ ಗುರುತು ಸಿಗಲಿಲ್ವಾ ನಿಮಗೆ?"

"ಇಷ್ಟೊತ್ನಲ್ಲಿ ಏನ್ಮಾಡ್ತಿದೀರಿ ಇಲ್ಲಿ ?...." ಒರಟಾಗಿ ಕೇಳಿದಳು.

"ಬಾಗಿಲು ತೆಗೀರಿ ಟೀಚರ್.... ಹೇಳ್ತೀನಿ..."

"ಏನ್ರೀ ನೀವು ಇಷ್ಟೊತ್ನಲ್ಲೆಲ್ಲಾ ಬಂದು ತೊಂದರೆ ಕೊಡ್ತಿದೀರಾ..."ಎನ್ನುತ್ತಾ ಪಕ್ಕದಲ್ಲಿದ್ದ ಕಿಟಕಿಯನ್ನು ತೆಗೆದು ಇಣುಕಿದಳು. ಅವನು ಕಿಟಕಿಯ ಬಳಿಗೆ ಸರಿದ.

"ನಾನು ಊರ್ನಿಂದ ಬರ್ತಾ ಇದೀನಿ. ಬಸ್ಸು ಕೆಟ್ಟು ಹೋಗಿ ತಡವಾಯಿತು.... ಮನೇಲಿ ಯಾರೂ ಇದ್ದಂತಿಲ್ಲ. ಎಷ್ಟೇ ಬಡಿದರೂ ಬಾಗಿಲನ್ನು ತೆಗೀಲಿಲ್ಲ...

"ಅದಕ್ಕೇ...??"

"ಮೆಟ್ಟಿಲುಗಳ ಮೇಲೆ ಕುಳಿತಿರ್ಲಾ? ಇವರ ಮನೆ ಜಗುಲಿ ಮೇಲೆ ಮಲಗ್ಲಾ?... ಬಟ್ಟೆ, ಹೊದಿಗೆ ಏನೂ ಇಲ್ಲ.... ಪಿಶಾಚಿ ಥರ ಎಲ್ಲಿ ಸುತ್ತಾಡ್ಲೀ.... ಮರಹತ್ತಿ ಮರದ ಮೇಲೆ ಕುಳಿತುಕೊಳ್ಳಲಾ?...

"ಇದನ್ನು ಕೇಳುಕ್ಕೆ ನಾನೇ ಬೇಕಾ ? ಏನಾದ್ರೂ ಮಾಡ್ಕೊಳ್ಳಿ.... ಮದುವೆಗೆ ಬಂದಿರುವ ನೆಂಟರುಗಳು ಎಷ್ಟೋ ಜನ ಇದಾರೆ.... ಅವರುಗಳೊಂದಿಗೆ ಹೋಗಿ ಮಲಕ್ಕೊಳ್ಳಿ..."

"ಯಾರಿಗೂ ನನ್ನ ಪರಿಚಯವಿಲ್ಲ. ಕಳ್ಳ ಅಂತ ಅಂದ್ಕೊಂಡ್ರೆ....?

"ನಿಮ್ಮ ಪರಿಚಯ ಹೇಳಿಕೊಳ್ರೀ.... ನಂಬ್ತಾರೆ..."

"ನನ್ನ ಪರಿಚಯ ಇರೋ ನೀವೇ.... ನನ್ನನ್ನು ಬಾಗಿಲು ತೆರೆದು ಒಳಗೆ ಸೇರಿಸ್ಕೊಳ್ಳೋಕೆ ಹೆದರ್ಕೊಳ್ತಿದೀರಿ... ಅವರುಗಳು ಯಾರೋ... ಹೊಡೆದು ಬಡಿದು ಮಾಡಿದರೇ"

"ಅಂದರೆ ? ಏನು ನಿಮ್ಮ ಮಾತಿನ ಅರ್ಥ?.... ನಾನು ಬಾಗಿಲು ತೆಗೆದು ಒಳಗೆ ಬನ್ನಿ ಅನ್ನಬೇಕಾ?"

"ತುಂಬಾ ಉಪಕಾರ ಆಗುತ್ತೆ ಟೀಚರ್.... ಅಲ್ಲದೇ ಹೊಟ್ಟೆ ಬೇರೆ ಹಸೀತಿದೆ."

"ಮದುವೆಯ ಮನೆಗೆ ಹೋಗಿ ಹೊಟ್ಟೆ ತುಂಬಾ ಊಟವೂ ಸಿಗುತ್ತೆ. ಮಲಗಿಕೊಳ್ಳುಕ್ಕೆ ಜಾಗವೂ ಸಿಗುತ್ತೆ..."

"ಅಂದರೇ.... ಕರೆಸಿಕೊಳ್ಳದೇ ನಾನು ಅಲ್ಲಿಗೆ ಹೋಗಲಿ ಅಂತ ನಿಮ್ಮ ಮಾತಿನ ಅರ್ಥನಾ ? ಸರಿ ಬಿಡಿ.... ನಿಮಗ್ಯಾಕೆ ತೊಂದರೆ ? ನನಗೇನಾದ್ರೆ ನಿಮಗೇನು ?.... ಎನ್ನುತ್ತಾ ಅವಳಿಗೆ ಬೆನ್ನು ಮಾಡಿದ ಅವಳಿಗೆ ಏನನ್ನಿಸಿತೋ ಏನೋ... "ನಿಂತ್ಕೊಳ್ಳಿ" ಎಂದು ಹೇಳಿ ಬಾಗಿಲನ್ನು ತೆರೆದಳು. ಅವನು ಹಿಂತಿರುಗಿ ನೋಡಿದ. ಬಾಗಿಲ ಮರೆಯಲ್ಲಿ ಅವಳು ನಿಂತಿದ್ದಳು. ಅವನು ಒಂದುಗಳಿಗೆ ಅನುಮಾನಿಸಿ, ಮನೆಯೊಳಗೆ ಬಂದ... ಅವಳು ಬಾಗಿಲನ್ನು ಭದ್ರಪಡಿಸಿ, ನಂತರ ದೀಪವನ್ನು ಹಾಕಿ, ಕಿಟಕಿಯನ್ನು ಮುಚ್ಚಿದಳು. ನೀವು ಇಲ್ಲಿಗೆ ಬಂದದ್ದು ಸರೀನಾ ? ಯಾರಾದ್ರೂ ನೋಡಿದ್ರೆ ಏನಂದ್ಕೊಳ್ತಾರೆ?.... ಇವತ್ತು ಇಲ್ಲಿ ತುಂಬಾ ಜನರೂ ಓಡಾಡ್ತಿದ್ದಾರೆ...

"ಕ್ಷಮಿಸಿ ಟೀಚರ್.... ನನ್ನಿಂದ ತೊಂದರೆ ಆಯ್ತು... ನಮ್ಮ ಮನೇಲಿ ಬಾಗಿಲು ತೆಗೆದಿದ್ರೆ ನಾನು ಇಲ್ಲಿಗೆ ಬರ್ತಿದ್ನಾ?...." ಎನ್ನುತ್ತಾ ತನ್ನ ಕೈಯಲ್ಲಿದ್ದ ಕಿಟ್ ಬ್ಯಾಗ್‌ನ್ನು ಕುರ್ಚಿಯ ಮೇಲಿಟ್ಟ. ತಿನ್ನೋಕ್ಕೆ ಏನಾದ್ರೂ ಸಿಗುತ್ತಾ ಟೀಚರ್ ?" ಕೇಳಿದ.

"ಮದುವೆ ಮನೆಯವರು ಕಳಿಸಿಕೊಟ್ಟ ಊಟ ಹಾಗೇ ಇದೆ ತಿಂತೀರಾ?"

:ಕೊಟ್ಟರೆ ತಿಂತೀನಿ. ಯಾಕೆ ನೀವು ತಿನ್ನಿಲ್ವಾ?"

"ಇಬ್ಬರಿಗೆ ಆಗುವಷ್ಟು ಕಳಿಸಿದ್ರು, ಮೊದಲು ಕೈಕಾಲು ತೊಳ್ಕೊಳ್ಳಿ... ನಾನು ತಟ್ಟೆಗೆ ಹಾಕಿ ಕೊಟ್ಟೇನಿ..." ಎಂದಳು. ಇವನು ಕಿಟ್‌ಬ್ಯಾಗ್‌ನಿಂದ ಟವೆಲ್ಲನ್ನು ತೆಗೆದು ಕೊಂಡು ಬಚ್ಚಲು ಮನೆಗೆ ಹೋಗಿ ಕೈ ಕಾಲು ತೊಳೆದು ಬರುವಷ್ಟರಲ್ಲಿ, ಅವಳು ತಟ್ಟೆಯನ್ನು ಸಿದ್ಧಗೊಳಿಸಿದ್ದಳು. ಅವನು ತಟ್ಟೆಯನ್ನು ಕೈಯಲ್ಲಿ ಹಿಡಿದು ತಿನ್ನತೊಡಗಿದ. ಅಷ್ಟರೊಳಗೆ ರೂಮಿನಿಂದ ಯಾರೋ ಕನವರಿಸಿಕೊಂಡಿದ್ದು ಕೇಳಿಸಿತ್ತು... ಅವಳ ಕಡೆ ನೋಡಿದ.

"ನಾನು ಹೋಗಿ ಮಲಗ್ತೀನಿ. ಇಲ್ಲದಿದ್ರೆ ಆ ಹುಡುಗಿಗೆ ಎಚ್ಚರವಾಗಿ ಬಿಡುತ್ತೆ ನೀವು ತಟ್ಟೆ ತೊಳೆದು, ಇಟ್ಟು ಬಿಡಿ... ಇಲ್ಲಿ ಹಾಸಿಗೆ ದಿಂಬು, ಹೊದ್ದಿಗೆ ಎಲ್ಲಾ ಇದೆ.... ಮಲಗಿಕೊಳ್ಳಿ....

"ಯಾವ ಹುಡುಗಿ ?.... ಮದುವೆ ಮನೆಗೆ ಬಂದಿರೋರಾ?"

"ಅಲ್ಲ... ರಾಮರಾಯರ ಮಗಳು ವನಜಾ ಅಂತ. ಒಬ್ಬಳೇ ಇರ್ತೀನಲ್ಲ ಅಂತ ಬಂದು ಜೊತೆಗೆ ಮಲಗುವಂತೆ ಹೇಳಿದೀನಿ... ಮಾತಾಡ್ತಿದ್ರೆ ಆ ಹುಡುಗಿಗೆ ಎಚ್ಚರವಾಗುತ್ತೆ. ಬೆಳಿಗ್ಗೆ ಮಾತನಾಡೋಣ" ಎಂದು ಹೇಳಿ, ಆ ರೂಮಿಗೆ ಹೋಗಿ ಬಾಗಿಲನ್ನು ಮುಂದೆ ಮಾಡಿ ಮಲಗಿಕೊಂಡಳು.

ಇವನು ಹೊಟ್ಟೆ ತುಂಬಾ ಉಂಡು, ತಟ್ಟೆ ಬಟ್ಟಲನ್ನು ತೊಳೆದಿಟ್ಟು, ಹಾಸಿಗೆಯನ್ನು ಹಾಸಿಕೊಂಡು, ದೀಪವನ್ನು ಆರಿಸಿ, ಹೊದ್ದಿಕೆಯನ್ನು ಹೊದ್ದು ಮಲಗಿದ. ಆದರೆ ನಿದ್ದೆ ಬರಲಿಲ್ಲ. ತನ್ನ ಬಗ್ಗೆ ಈ ಟೀಚರ್ ಏನಂದುಕೊಂಡಿರಬಹುದು?.... ನನ್ನಲ್ಲಿ

ಯಾವ ಕೆಟ್ಟ ಭಾವನೆಯೂ ಇಲ್ಲ ಅಂತ ಅವಳಿಗೆ ತಿಳಿಸುವುದು ಹೇಗೆ?.... ಎಂದು ಯೋಚಿಸುತ್ತಾ ಮಲಗಿದವನಿಗೆ ತಡವಾಗಿ ನಿದ್ದೆ ಹತ್ತಿತ್ತು.

ವಾಲಗದ ಸ್ವರ ವಠಾರದವರೆಲ್ಲರನ್ನೂ ಎಚ್ಚರಿಸಿತ್ತು. ಇವನೂ ಎಚ್ಚರಗೊಂಡ. ಒಂದು ಗಳಿಗೆ ತಾನು ಎಲ್ಲಿದ್ದೀನಿ ಅಂತ ಅರ್ಥವಾಗಲಿಲ್ಲ. ಎದ್ದು ಕಿಟಕಿಯಿಂದಾಚೆ ನೋಡಿದ. ಬೆಳಕು ಹರಿಯಲು ಇನ್ನು ಸಮಯವಿತ್ತು. ಈ ವಾಲಗದವರಿಗೆ ಏನು ಆತುರು? ಅಂತ ಬೇಸರಿಸಿ, ಮತ್ತೆ ಮುಸುಕನ್ನು ಬೀರಿ ಮಲಗಿದ.

"ವನಜಾ ಏಳು... ಬೆಳಕಾಗಿದೆ" ಪಂಕಜಾ ತನ್ನೊಂದಿಗೆ ಮಲಗಿದ್ದವಳನ್ನು ಎಬ್ಬಿಸುತ್ತಿದುದು ಅವನಿಗೆ ಕೇಳಿಸಿತು. ವನಜಾ ಅನ್ನೋ ಹುಡುಗಿ?.... ಯಾರಿರಬಹುದು? ಚಿಕ್ಕವಳೋ ದೊಡ್ಡವಳೋ ತನಗ್ಯಾಕೆ ?... ರಾತ್ರಿ, ಬೇಸರಗೊಂಡಿರಬಹುದು. ಆದರೂ ಬಾಗಿಲನ್ನು ತೆಗೆದು ಒಳಗೆ ಕರೆದು ತಿನ್ನಲು ಕೊಟ್ಟು, ಮಲಗಲು ಬಿಟ್ಟು ಉಪಚರಿಸಿದ್ದಾಳೆ. ಅಂದರೆ, ನನ್ನ ಮೇಲೆ ನಂಬಿಕೆ ಇದೆ ಅಂತಾಯ್ತು.... ರಾತ್ರಿ ತಾನು ಮಲಗಿದ್ದ ರೂಮಿನ ಬಾಗಿಲನ್ನು ಬರಿದೇ ಮುಂದು ಮಾಡಿದ್ದಳು. ಅಂದರೆ ನನ್ನ ಬಗ್ಗೆ ಯಾವ ಕೆಟ್ಟ ಭಾವನೆಯೂ ಇಲ್ಲ ಅಂತಾಯ್ತು... ಅಲ್ಲದೇ ನನಗೂ ಯಾವ ಕೆಟ್ಟ ಉದ್ದೇಶಗಳಿರಲಿಲ್ಲ. ಅದು ಅವಳಿಗೆ ತಿಳಿದರೆ ಸಾಕು.... ಆ ಹುಡುಗಿ ಎದ್ದು ಹೋದ ಮೇಲೆ, ನಾನೂ ಎದ್ದು ಹೋಗ್ತೀನಿ. ಬೆಳಗಾದ ಮೇಲಾದ್ರೂ ಮನೆಯವರು ಬಾಗಿಲನ್ನು ತೆಗೆಯಲೇಬೇಕು.... ಎಂದು ಯೋಚಿಸುತ್ತಾ ಮಲಗಿದ್ದ.

"ಬರ್ತೀನಿ ಟೀಚರ್" ಎಂದು ಹೇಳಿ ಆ ಹುಡುಗಿ ಹೊರಟಿದ್ದು ತಿಳಿಯಿತು. ಟೀಚರ್ ಮುಂಬಾಗಿಲನ್ನು ಹಾಕಿ, ಇವನು ಮಲಗಿದ್ದೆಡೆಗೆ ಬಂದಳು.

"ಚಂದ್ರಮೌಳಿಯವರೇ ಎದ್ದು ನಿಮ್ಮ ಮನೆಗೆ ಹೋಗಿ... ಬೆಳಗಾಗಿದೆ... ಯಾರಾದ್ರೂ ನಿಮ್ಮನ್ನು ನಮ್ಮ ಮನೆಯಲ್ಲಿ ಕಂಡರೆ ಅಭಾಸವಾಗುತ್ತೆ..."

ಚಂದ್ರು ನಿಧಾನವಾಗಿ ಮುಸುಕನ್ನು ಸರಿಸಿದ್ದ. ಅವಳು ರೂಮಿನ ಬಾಗಿಲ ಬಳಿ ನಿಂತಿದ್ದಳು. ಬಲಗಡೆಯಿಂದ ಎದ್ದ... "ಬೇರೆಯವರಿಗೆ ಹೆದರ್ತೀರಾ ಟೀಚರ್?" ಕೇಳಿದ.

"ಹೂಂ.... ಹೆದರಲೇ ಬೇಕಾಗುತ್ತೆ. ಅದಕ್ಕೆ ಆಸ್ಪದ ಕೊಡಬಾರದು..."

"ಹಾಗಾದ್ರೆ ರಾತ್ರಿ ಯಾವ ಧೈರ್ಯದ ಮೇಲೆ ನನಗೆ ಬಾಗಿಲನ್ನು ತೆರೆದಿರಿ."

"ನಿಮಗೆ ಸಹಾಯವಾಗಲಿ ಅಂತ ತೆಗೆದೆ.... ಆದರೆ ಹಾಗಂತ..."

"ನನ್ನ ಮೇಲೆ ನಂಬಿಕೆ ಇತ್ತು ನಿಮಗೆ.... ರಾತ್ರಿ ಹೊಟ್ಟೆಯನ್ನು ತುಂಬಿಸಿದ್ದೀರಿ. ಸುಮಾರಾಗಿ ನಿದ್ದೆಯೂ ಬಂದಿತು. ನಿಮ್ಮ ಈ ಉಪಕಾರವನ್ನು ನಾನು ಎಂದೆಂದಿಗೂ ಮರೆಯುವುದಿಲ್ಲ... ಎದ್ದು ನಿಂತು, ಹೊದಿಕೆಗಳನ್ನು ಮಡಿಸಿಟ್ಟು, ಹಾಸಿಗೆಯನ್ನು

ಸುತ್ತಿಟ್ಟ. ಅವಳು ಇರಲಿ ಪರವಾಗಿಲ್ಲ ನಾನು ಮಾಡ್ತೀವಿ ಎಂದು ಹೇಳಲಿಲ್ಲ ಎನ್ನುವುದು ಗಮನಕ್ಕೆ ಬಂತು. ಒಂದು ಕಪ್ ಕಾಫಿ ಏನಾದ್ರೂ ಸಿಗುತ್ತಾ ಟೀಚರ್.... ನಮ್ಮ ಮನೇಲಿ ಯಾರಾದರೂ ಇದಾರೋ ಇಲ್ಲವೋ.... ಇದ್ದರೂ ಎದ್ದಿರುಲ್ವೋ.... ? ಆಕಳಿಸಿದ.

"ಸರಿ, ಬಾಯಿ ತೊಳೆದುಕೊಂಡು ಬನ್ನಿ, ಬಿಸಿ ಬಿಸಿ ಕಾಫಿ ಕೊಡ್ತೀನಿ. ಕುಡಿದ ತಕ್ಷಣ ಹೊರಟು ಬಿಡ್ಬೇಕು.... ನನಗೆ ತುಂಬಾ ಕೆಲಸಗಳಿವೆ..."

"ಯಾಕೆ ಇಷ್ಟು ಕಟ್ಟು ನಿಟ್ಟಾಗಿ ಮಾತಾಡ್ತೀರಿ ಟೀಚರ್? ಮರೆತಿದ್ದೆ... ನೀವು ಟೀಚರ್ ಅಲ್ವಾ ?.... ಆದರೆ ನಾನು ನಿಮ್ಮ ಶಿಷ್ಯ ಅಲ್ಲ..." ನಸುನಕ್ಕ.

"ನಾನು ಮಾತಾಡೋದೇ ಹೀಗೆ." ಎಂದು ಹೇಳಿ ಅಡಿಗೆ ಮನೆಗೆ ನಡೆದಳು. ಅವನು ಬಚ್ಚಲ ಮನೆಯೊಳಗೆ ಹೋಗಿ, ತಣ್ಣೀರಿನಲ್ಲೇ ಬಾಯಿ ಮುಕ್ಕಳಿಸಿ ತೊಳೆದು ಬಂದ ಅವಳು ಕಾಫಿಯ ಕಪ್‌ನ್ನಿಟ್ಟಿದ್ದಳು.

'ನೀವು ಕುಡಿಯೋಲ್ವಾ ಟೀಚರ್?" ಕೇಳಿದ.

"ಇರ್ಲಿ, ತಿಂಡಿಯ ಜತೇಲಿ ಒಟ್ಟಿಗೇ ತಗೋತೀನಿ...." ಎಂದು ಹೇಳಿ ಅವನು ಕಾಫಿಯನ್ನು ಕುಡಿದು ಮುಗಿಸುವುದನ್ನೇ ಕಾಯುತ್ತಾ ನಿಂತಿದ್ದಳು. ಅವನು ಕಪ್‌ನ್ನು ತೊಳೆದಿಡಲೆಂದು ಎದ್ದ. ಅವಳು ಬೇಡ ಎನ್ನಲಿಲ್ಲ. ಬಚ್ಚಲ ಮನೆಯ ನೀರಿನಲ್ಲಿ ಕಪ್‌ನ್ನು ಗಲಬರಿಸಿ ತಂದಿಟ್ಟ.

"ಕಾಫಿ ತುಂಬಾ ರುಚಿಯಾಗಿ ಹಿತವಾಗಿತ್ತು ಟೀಚರ್?.. ಹಾಗೇ ಇದರಲ್ಲಿ ನಿಮ್ಮ ಆತ್ಮೀಯತೆ ಬೆರೆತಿತ್ತು... ಇಂಥಾ ಕಾಫಿಯನ್ನು ಕುಡಿದಿದ್ದು ಇದೇ ಮೊದಲು" ಎಂದ.

"ಹೊಗಳಿದ್ದು ಆಯ್ತಲ್ಲ. ಇನ್ನೂ ನೀವು ಹೊರಡಬಹುದು... ನಾನು ಸ್ಕೂಲಿಗೆ ಹೋಗಲು ಸಿದ್ಧವಾಗ್ಬೇಕು.... ಬೇಕಾದಷ್ಟು ಕೆಲಸಗಳಿವೆ..."

"ಇವತ್ತು ರಜ ಹಾಕಿಲ್ವಾ ಟೀಚರ್... ಮದುವೆಗೆ ಹೋಗುಲ್ವಾ?" ಪ್ರಶ್ನಿಸಿದ.

"ಅವಳ ಮುಖ ಪೆಚ್ಚಾಗಿತ್ತು." ಇಲ್ಲ ನಂಗೆ ರಜ ಇಲ್ಲ. ಅಲ್ಲದೇ.... ನಾನು ಸಮಾರಂಭಗಳಿಗೆ ಹೋಗುವುದಿಲ್ಲ..."

"ಯಾಕೆ ಅಂತ ಕೇಳಬಹುದಾ?"

"ಅದು ನನ್ನ ಸ್ವಂತ ವಿಷಯ. ನೀವು ತುಂಬಾ ಪ್ರಶ್ನೆಗಳನ್ನು ಕೇಳ್ತೀರಿ. ಹಾಗೇ ನನ್ನದೊಂದು ವಿನಂತಿ. ರಾತ್ರಿ ನೀವು ಇಲ್ಲಿ ಕಳೆದುದನ್ನು ದಯವಿಟ್ಟು ಯಾರಿಗೂ ಹೇಳಬೇಡಿ. ಅದು ನನ್ನ ಮರ್ಯಾದೆಯ ಪ್ರಶ್ನೆ."

"ಸರಿ, ನಾನು ಯಾರಿಗೂ ಹೇಳುಲ್ಲ. ಆದರೆ ಆ ಹುಡುಗಿ.... ಇಲ್ಲಿದ್ದಳಲ್ಲ ಅವಳಿಗೆ ಗೊತ್ತಾಗಿರಬಹುದು ಅಲ್ವಾ?"

"ಇಲ್ಲ, ಗೊತ್ತಿಲ್ಲ ಗೊತ್ತಾದರೂ, ನಾನು ಏನೋ ಹೇಳ್ಕೋತೀನಿ... ಈಗ ನೀವು

ಆದಷ್ಟು ಬೇಗ ಹೋಗುವುದೇ ಒಳ್ಳೆಯದು... ಪಕ್ಕದಲ್ಲಿರುವ ಸಣ್ಣ ಗೇಟ್‌ನಿಂದ, ರಸ್ತೆಗೆ ಹೋಗಿ, ಅಲ್ಲಿಂದ ನಿಮ್ಮ ಮನೆಗೆ ಹೋಗಿ... ಯಾಕೆ ಅಂತ ಕೇಳಬೇಕಾಗಿಲ್ಲ... ನಿಮಗೇ ಅರ್ಥವಾಗದ ವಯಸ್ಸೇನಲ್ಲ..." ಅವಳು ಖಂಡ ತುಂಡವಾಗಿ ಮಕ್ಕಳಿಗೆ ಪಾಠ ಮಾಡುವಂತೆ ಹೇಳಿದಾಗ ಮೌನವಾಗಿ, ತನ್ನ ಕಿಟ್‌ಬ್ಯಾಗ್‌ನ್ನೆತ್ತಿಕೊಂಡು ಬಾಗಿಲನ್ನು ತೆರೆದು ಹೊರಗೆ ಅಡಿ ಇಟ್ಟ. ತಕ್ಷಣವೇ ಅವಳು ಬಾಗಿಲನ್ನು ಮುಚ್ಚಿಕೊಂಡಳು. ಇವನಿಗೆ ರೇಗಿತ್ತು. ಆದರೂ ಬಾಗಿಲಲ್ಲಿ ನಿಲ್ಲದೇ, ಅವಳು ಹೇಳಿದಂತೆ ಸಣ್ಣ ಗೇಟಿನ ಮುಖಾಂತರ ರಸ್ತೆಯನ್ನು ಸೇರಿದ.... ಅಲ್ಲಿಂದ ದೊಡ್ಡ ಗೇಟಿನ ಮುಖಾಂತರ ವಠಾರದೊಳಕ್ಕೆ ಮತ್ತೆ ಬಂದ.

ವೆರಾಂಡದಲ್ಲಿ ದಿಕ್ಕು ತೋಚದವಳಂತೆ, ಉದಾಸೀನ ಭಾವದಿಂದ ಕುಳಿತಿದ್ದ ಲಕ್ಷ್ಮೀದೇವಮ್ಮನನ್ನು ಕಂಡ. ಅಗತ್ಯಕ್ಕಿಂತ ಹೆಚ್ಚಿನ ಅಚ್ಚರಿ ಉಂಟಾಗಿತ್ತು.... ಮನೆಯ ಮುಂದೆ ಕಸ ಗುಡಿಸಿಲ್ಲ. ರಂಗೋಲಿ ಹಾಕಿಲ್ಲ... ಹೀಗೆ ಒಬ್ಬಳೇ ಕುಳಿತಿರುವುದೆಂದರೇ.... ಏನಾಗಿರಬಹುದು. ಭೀತಿಯಿಂದ ಎದೆ ಹೊಡೆದುಕೊಂಡಿತು. ಹೆಜ್ಜೆಯ ಸದ್ದನ್ನು ಕೇಳಿ ಆಕೆ ಇತ್ತ ತಿರುಗಿದಳು. "ಈಗ ಬರ್ತಾ ಇದ್ದೀಯಾ?.... ರಾತ್ರೀನೇ ಬರ್ತೀನಿ ಅಂತ ಅಂದಿದ್ಯಂತೆ..." ಭುಸುಗುಟ್ಟಿದ್ದಳು... ಇವನ ಹುಬ್ಬುಗಳು ಗಂಟಿಕ್ಕಿದವು...

"ಸರಿಯಾದ ಬಸ್ಸು ಸಿಗಲಿಲ್ಲ... ಬಸ್ಸು ಕೆಟ್ಟು ಬೇರೆ ಹೋಯ್ತು... ಬಸ್ ಸ್ಟ್ಯಾಂಡ್‌ನಲ್ಲೇ ಮಲಗಿದ್ದು ಈಗ ಬರ್ತಾ ಇದೀನಿ...." ಸುಳ್ಳು ಹೇಳಿದ ಬಾಗಿಲು ಬಡಿದರೂ ಯಾರೂ ತೆಗೆಯಲಿಲ್ಲ ಎಂದು ನಿಜ ಹೇಳಲು ಹಿಂಜರಿದ...

"ನೀನು ಬರ್ತೀಯ ಅಂತ ನನ್ನೊಬ್ಬಳನ್ನೇ ಬಿಟ್ಟು ಹೋದರು...."

"ಯಾರು ? ಅಜ್ಜೀನಾ ? ಅಪ್ಪನಾ?..."

"ಇಬ್ಬರೂ ಹೋದ್ರು.... ದೊಡ್ಡ ಮಾವನವರು ತೀರಿಕೊಂಡ್ರಂತೆ. ನೆನ್ನೆ ಸಾಯಂಕಾಲದ ಹೊತ್ತಿಗೆ ಟೆಲಿಗ್ರಾಂ ಬಂತು. ತಕ್ಷಣವೇ ಇಬ್ಬರೂ ಟ್ಯಾಕ್ಸಿ ಮಾಡ್ಕೊಂಡು ಹೊರಟು ಬಿಟ್ರು....

"ನಿಮಗೂ ಹೋಗಬೇಕು ಅಂತ ಇದ್ದರೆ ಹೇಳಿ, ನಾನು ಕರ್ಕೊಂಡು ಹೋಗ್ತೀನಿ."

"ಈಗ ಹೋಗಿ ಏನು ಪ್ರಯೋಜನ ? ಎಲ್ಲಾ ಮುಗಿದು ಹೋಗಿರುತ್ತೆ.... ಏನೂ ಬೇಡ. ಟ್ಯಾಕ್ಸಿಗೆ ದುಡ್ಡು ದಂಡ...

"ಅಪ್ಪ ಯಾವಾಗ ವಾಪಸ್ಸು ಬರ್ತಾರೆ?"

"ಏನ್ಮಾಡ್ತಾರೋ.... ಗೊತ್ತಿಲ್ಲ... ನೀನು ಇಲ್ಲಿ ಜತೆಗಿದೀಯ ಅಂತ ಅಲ್ಲೇ ಇದ್ದರೂ ಇರಬಹುದು... ತಿಳಿಸೋರು ಯಾರು ?" ಅಸಹನೆಯಿಂದ ನುಡಿದಳು...

"ಹಾಗಾದ್ರೆ ಈಗ ನಾನೇನ್ಮಾಡ್ಬೇಕು?..."

"ಏನೂ ಇಲ್ಲ. ಸುಮ್ಮನೇ ಇಬ್ಬರೂ ಕುಕ್ಕುರು ಬಡಿದಿರೋದು. ಒಳಗೆಲ್ಲಾ

ಓಡಾಡಿ, ಏನನ್ನು ಮುಟ್ಟಿಕೊಳ್ಳುವ ಹಾಗಿಲ್ಲ.... ಒಂಭತ್ತು ಗಂಟೆಯಾದ್ಮೇಲೆ, ವಠಾರದ ಯಾರನ್ನಾದ್ರೂ ಹೆಂಗಸರನ್ನು ಕರೆದು, ನೀರು ಹೊಯ್ಸಿಸಿಕೊಳ್ತೀನಿ. ಆಮೇಲೆ ನಿಂಗೂ ಹಾಕ್ತೀನಿ.... ಹೇಗೂ ಜೋಷಿ ಮನೆಯವರು, ತಿಂಡಿ ಕಾಫಿನ ತಂದುಕೊಡ್ತೀನಿ ಅಂತ ಹೇಳಿದಾರೆ. ತಿನ್ನೋದು ಕೂತಿರೋದು ಅಷ್ಟೇ..." ನಿರಾಸೆ, ನಿರ್ಭಾವ ಎಲ್ಲವೂ ತುಂಬಿತ್ತು.

"ಹಾಗಾದ್ರೆ ನಂಗೂ ಸೂತಕ ಇದೆಯಾ?..."

"ಇದೇನೋ ಹೀಗೆ ಕೇಳ್ತೀಯ ಏನೂ ತಿಳಿದೋನ ಹಾಗೆ.... ಈ ಮನೆಗೆ ಸೇರಿದವನು ಅಂದ್ಮೇಲೆ, ನಮಗೆ ಹೇಗೋ ಹಾಗೇ... ಇಷ್ಟೂ ಗೊತ್ತಿಲ್ವಾ?..... ಅವನು ಸುಮ್ಮನೇ ಅವಳ ಕಡೆ ನೋಡಿದ ಆಕೆಯ ಎದುರಿಗೆ ಇರಲು ಮುಜುಗರ ವೆನಿಸಿತ್ತು. .. ಒಳಗೆ ಹೋಗುವಂತಿರಲಿಲ್ಲ... ಆದರೆ ಮಾತಿಗೂ ಏನಿರಲಿಲ್ಲ. ರಾತ್ರಿ ಎಲ್ಲಿ ಮಲಗಿದ್ದಿರಿ ಎಂದು ಕೇಳುವ ಸಲುಗೆ ಇರಲಿಲ್ಲ. ಒಬ್ಬಳಿಗೇ ಭಯವಾಯಿತೆ ಎಂದು ಕೇಳುವ ಕುತೂಹಲವೂ ಇರಲಿಲ್ಲ.

"ಸಣ್ಣಗೆ ತಲೆ ನೋಯ್ತಿದೆ.... ಹೋಟೆಲ್ಲಿಗೆ ಹೋಗಿ ಕಾಪಿ ಕುಡ್ಕೊಂಡು ಬರ್ತೀನಿ."ವೆರಾಂಡದಿಂದ ಆಚೆ ಬಂದ.

"ಏನೂ ಬೇಡ, ಸುಮ್ಮನೇ ದುಡ್ಡು ದಂಡ. ಮದುವೆ ಮನೇಲಿ ತಪ್ಪಲೆ ತಪ್ಪಲೆ ಕಾಫೀನ ಬೆರೆಸ್ತಾನೇ ಇರ್ತಾರೆ, ಹೋಗಿ ಕೇಳಿದ್ರೆ ಅಡ್ಗೆಯೋರೇ ಕೊಡ್ತಾರೆ..."

"ಅವರುಗಳು ಚಹಾ ಕುಡಿಯೋರು. ಅದು ನಂಗೆ ಸೇರುಲ್ಲ..."

"ಸೇರುಲ್ಲ ಅಂತಂದ್ರೆ? ಅದನ್ನೇ ಕುಡಿದರೆ ಆಯ್ತು. ಅವರುಗಳೆಲ್ಲ ಕುಡಿಯೋ ದಿಲ್ವಾ ? ಕೇಳಿ ನೋಡು ಕಾಫಿಯೂ ಇರುತ್ತೆ."

"ನಂಗೆ ಮುಜುಗರವಾಗುತ್ತೆ. ನಾನು ಕೇಳುಲ್ಲ. ಹೋಗ್ಲಿ ಸ್ವಲ್ಪ ಹೊತ್ತು ಮಲಗಿರ್ಲಾ... ನಿದ್ದೆ ಸಾಲದು...

"ಒಳಗೆ ಹೋಗಿ ಎಲ್ಲಾ ಬೆರೆಸ್ಬೇಡ. ಇಲ್ಲಿ ಹಾಲಿನ ಮೂಲೇಲಿ ಚಾಪೆ ದಿಂಬು ಇದೆ. ಮಲಕ್ಕೋ...." ಎಂದವಳನ್ನೇ ಒಂದು ಗಳಿಗೆ ದಿಟ್ಟಿಸಿದ. ಏನೋ ನೆನಪಾದಂತಾ ಯಿತು...

"ಕಾಫಿ ಇದ್ದರೆ ಕುಡಿದ್ಬಿಟ್ಟೇ ಬರ್ತೀನಿ..."ಎನ್ನುತ್ತಾ ಹೊರಟ.

"ದೂರದಲ್ಲಿ ನಿಂತ್ಕೊಂಡು ಕೇಳು. ಸೀದಾ ಅಡಿಗೆ ಮನೆಗೆ ನುಗ್ಗಿ ಮೈಲಿಗೆ ಮಾಡಿ ಬಿಡ್ಬೇಡ" ಎಂದು ಹೇಳಿದ್ದು ಕಿವಿಗೆ ಬಿದ್ದಿತ್ತು. ಹ್ಞಾ....ಹ್ಞೂ.... ಎನ್ನದೇ ಸೀದಾ ಪಂಕಜಳ ಮನೆಗೆ ಬಂದ. ಮುಂಬಾಗಿಲು ಹಾಕಿತ್ತು. ಪಕ್ಕದ ಓಣಿಯಲ್ಲಿ ಹಾದು, ಹಿತ್ತಿಲ ಕಡೆಗೆ ಬಂದ. ಅವಳು ಬಟ್ಟೆಗಳನ್ನು ಒಗೆಯುತ್ತಿದ್ದಳು. ನೆರಳು ಬಿದ್ದಂತಾಗಲು ಬೆಚ್ಚಿ, ನೆಟ್ಟಗೆ ನಿಂತಳು. ಮುಖದಲ್ಲಿ ಭೀತಿ ಕಾಡಿತ್ತು. ಕೈಯಲ್ಲಿ ಹಿಡಿದ ಬಟ್ಟೆಯನ್ನು

ಒಗೆಯುವ ಕಲ್ಲಿನ ಮೇಲೆ ಹಾಕಿ, ಸೆರಗನ್ನು ಸರಿಪಡಿಸಿಕೊಂಡು, ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದ ಸೀರೆಯ ನೆರಿಗೆಗಳನ್ನು ಸರಿ ಮಾಡಿಕೊಂಡಳು.

"ನೀವಾ ! ಮತ್ತೇನ್ಬೇಕಾಗಿತ್ತು? ತುಸು ಖಾರವಾಗಿ ಕೇಳಿದಳು.

"ಬೇಜಾರು ಮಾಡ್ಕೋಬೇಡಿ ಟೀಚರ್. ಇನ್ನೊಂದು ಕಪ್ ಕಾಫಿ ಕೊಡ್ತೀರಾ ಸಣ್ಣಗೆ ತಲೆ ನೋಯ್ತಿದೆ."

"ಕಾಫೀನಾ ! ನಿಮ್ಮ ಮನೆಗೆ ಹೋಗಲಿಲ್ವಾ?... ಅಥವಾ ಯಾರೂ ಇಲ್ವಾ?"

"ಅಮ್ಮ ಒಬ್ಬರೇ ಇರೋದು..." ಎನ್ನುತ್ತಾ ಮುಂದೆ ಬಂದ. ತಪ್ಪು ತಿಳ್ಕೋಬೇಡಿ ಟೀಚರ್. ಯಾವುದೋ ಸೂತಕ ಅಂತೆ.... ಒಳಗೆ ಹೋಗುವ ಹಾಗಿಲ್ಲವಂತೆ... ನಂಗೆ ಖಂಡಿತಾ ಗೊತ್ತಿರಲಿಲ್ಲ. ನಿಮ್ಮ ಮನೆಯೊಳಗೆ ಬಂದು, ಹಾಸಿಗೆ, ಹೊದ್ದಿಗೆ ಎಲ್ಲವನ್ನು ಮುಟ್ಟಿಬಿಟ್ಟಿದ್ದೆ. ಹೇಳಿ ಹೋಗೋಣ ಅಂತ ಬಂದೆ.... ಹಾಸಿಗೇನ ಬಿಸಿಲಿಗೆ ಹಾಕಿ, ಹೊದಿಕೆಗಳನ್ನು ನೀರಿನಲ್ಲಿ ನೆನೆಸಿ ಇಡ್ತೀನಿ." ಅವಳು ವಿಚಿತ್ರ ದೃಷ್ಟಿಯನ್ನು ಬೀರಿದಳು.

"ಪರವಾಗಿಲ್ಲ ಬಿಡಿ... ಸ್ನಾನಕ್ಕೆ ಮುಂಚೆ ನಾನೇ ನೆನೆಸಿಡ್ತೀನಿ... ಗೊತ್ತಿಲ್ಲದ್ದಕ್ಕೆ ಏನು ಮಾಡ್ತೀರಿ ?.... ನಿಮ್ಮ ತಾಯಿಗೂ ಕಾಫಿ ಬೇಕಾ?..."

"ಬೇಡ... ಅವರು ಸ್ನಾನ ಮಾಡದೇ ಕುಡಿಯುವುದಿಲ್ಲ... ನನಗೆ ಮಾತ್ರ ಕೊಡಿ... ಹೋಟೆಲ್ಲಿಗೆ ಹೋಗಬಹುದಾಗಿತ್ತಲ್ಲ ಅಂತ ನೀವು ಅಂದ್ಕೊಳ್ಳಬಹುದು..."

"ಇಲ್ಲ... ನಾನು ಏನೂ ಅಂದ್ಕೋಳುಲ್ಲ. ನೀವೇ ಹೇಳ್ಬಿಡಿ... ಎನ್ನುತ್ತಾ ಮನೆ ಯೊಳಗೆ ನಡೆದಳು. ಅವನು ಹಿಂದೆ ನಡೆದು ಒಳಬಾಗಿಲಲ್ಲಿ ನಿಂತ... ತನಗೆಂದು ಮಾಡಿಟ್ಟುಕೊಂಡಿದ್ದ ಕಾಫಿಯನ್ನು ಸ್ಟವ್ ಹೊತ್ತಿಸಿ, ಬಿಸಿ ಮಾಡಿ ಕಪ್‌ಗೆ ಬಗ್ಗಿಸಿ ತಂದು ಕೆಳಗಿಟ್ಟಳು. ಅವನು ಕಪ್‌ನ್ನೆತ್ತಿಕೊಂಡ.

"ಮದುವೆ ಮನೇಲಿ ಹೋಗಿ ಇಸ್ಕೊಂಡು ಕುಡಿ ಅಂತ ಅಮ್ಮ ಹೇಳಿದ್ರು. ಆದರೆ, ಹೋಗಿ ಕೇಳುಕ್ಕೆ ಮುಜುಗರವಾಯಿತು" ಎನ್ನುತ್ತಾ ಕಾಫಿಯನ್ನು ಹೀರಿದ. "ನೀವೂ ತಗೋ ಬಹುದಾಗಿತ್ತಲ್ಲ ಟೀಚರ್..."ಸೌಜನ್ಯ ಎಂಬಂತೆ ಹೇಳಿದ.

"ನಾನು ತಿಂಡಿ ಜತೆ ತಗೋತೀನಿ...." ಅವನು ಕಾಫಿಯನ್ನು ಕುಡಿದು ಮುಗಿಸುವು ದನ್ನೇ ಕಾದಳು... ಅವನು, ಅವಳು ಹಾಕಿದ ನೀರಿನಿಂದ ಕಪ್‌ನ್ನು ಗಲಬರಿಸಿ, ನಲ್ಲಿ ಕಟ್ಟೆಯ ಬಳಿ ದಬ್ಬಿ ಹಾಕಿದ.

"ನಿಮಗೆ ತೊಂದರೆ ಆಯ್ತು ಟೀಚರ್, ಕಾಫಿ ಹಿತವಾಗಿತ್ತು..." ಎಂದ.

"ತಿಂಡೀನ ಇನ್ನೂ ಮಾಡಿಲ್ಲ. ಇಲ್ದಿದ್ರೆ ಕೊಡ್ತಿದ್ದೆ. ರಾತ್ರಿ ಊಟ ಕೂಡಾ ಸರಿಯಾಗಿ ಮಾಡಲಿಲ್ವೇನೋ ನೀವು."

"ಇಲ್ಲ ಟೀಚರ್, ರಾತ್ರಿ ಹೊಟ್ಟೆಯೂ ತುಂಬಿತು. ಚೆನ್ನಾಗಿ ನಿದ್ದೆಯೂ ಬಂದಿತು. ನಿಮ್ಮ ಆತಿಥ್ಯಕ್ಕೆ ಧನ್ಯವಾದಗಳು.... ಎಂದ.

"ಪರವಾಗಿಲ್ಲ...." ಸಂಕೋಚದಿಂದ ನುಡಿದು, ಅವನು ಹೋದರೆ ಸಾಕು ಎಂಬಂತೆ ಕಾಯುತ್ತಾ ನಿಂತಿದ್ದುದು ಅವನ ಗಮನಕ್ಕೆ ಬಂತು.

"ನಾನು ತೊಂದ್ರೆ ಕೊಟ್ಟಿದ್ದರೆ ಕ್ಷಮಿಸಿ ಟೀಚರ್" ಎಂದ.

"ತೊಂದ್ರೆ ಏನಿಲ್ಲ ಬಿಡಿ.... ಒಂದ್ಮಾತು.... ಟೀಚರ್ ಅಂತ ಕರೀಬೇಡಿ... ನಾನು ನಿಮಗೆ ಟೀಚರ್ ಅಲ್ಲ. ಬರೀ, ಪಂಕಜಾ ಅಂತ ಕರೆದ್ರೆ ಸಾಕು."

"ಈ ವಠಾರದವರೆಲ್ಲಾ ನಿಮ್ಮನ್ನು ಹಾಗೇ ಅಲ್ಲವಾ ಕರೆಯೋದು?..."

"ಇರಬಹುದು, ಆದರೆ ನಾನು ಸ್ಕೂಲ್ನಲ್ಲಿ ಮಾತ್ರ ಟೀಚರ್ ಬೇರೆಯವರೆಲ್ರೂ ಟೀಚರ್ ಅಂತ ಕರೆದ್ರೆ ಒಂಥರಾ ಆಗುತ್ತೆ."

"ಸರಿ ಬಿಡಿ ಇನ್ನು ಮುಂದೆ ಹಾಗೆ ಕರೆಯೋಲ್ಲ..."

"ಈಗ ನೀವು ಹೋಗ್ತೀರಾ? ನನಗೆ ತುಂಬಾ ಕೆಲಸ ಇದೆ. ಟೈಮಿಗೆ ಸರಿಯಾಗಿ ಸ್ಕೂಲಿಗೆ ಹೋಗ್ಬೇಕು."

"ಇವತ್ತು ರಜ ಹಾಕಿಲ್ವಾ?.... ಮದುವೆಗೆ ಹೋಗುಲ್ವಾ?... ಅಚ್ಚರಿಯಿಂದ ಮತ್ತೆ ಕೇಳಿದ.

"ಇಲ್ಲ. .. ನಾನು ಇಂಥ ಸಮಾರಂಭಗಳಿಗೆ ಹೋಗುವುದಿಲ್ಲ. ನನಗೆ ಇಷ್ಟವಿಲ್ಲ. ಅಲ್ಲದೇ ರಜವೂ ಇಲ್ಲ." ಎತ್ಲಾಗೋ ನೋಡುತ್ತಾ ಹೇಳಿದಳು.

"ನನಗೂ ಅಷ್ಟೇ.... ಹೋಗುಕ್ಕೆ ಇಷ್ಟವಿರಲಿಲ್ಲ. ಈಗ ಈನೆಪ ಸಿಕ್ತು. ತಂಟೆಯೇ ಇಲ್ಲ... ಆದರೆ, ತಿಂಡಿ, ಊಟಾನೆಲ್ಲ ಮನೆಗೇ ಕಳಿಸಿಕೊಡ್ತಾರಂತೆ.... ನಿಮಗೂ ಕಳಿಸುಕ್ಕೆ ಹೇಳ್ತೀನಿ. ತಿಂಡಿ ಸಿದ್ಧ ಆಗಿರುತ್ತೆ."

"ಏನೂ ಬೇಡ. ನೀವು ಈಗ ದಯವಿಟ್ಟು ಹೊರಡಿ. ನನಗೆ ಹೊತ್ತಾಗ್ತಿದೆ."

"ನೀವು ನಿಜವಾದ ಟೀಚರ್ ಕಣ್ರೀ.... ಬಹಳ ಕಟ್ಟುನಿಟ್ಟು."

"ಹಾಗಿಲ್ಲದಿದ್ರೆ ಮಕ್ಕಳ ಜೊತೆ ಏಗುಕ್ಕೆ ಆಗುತ್ತಾ?" ಎನ್ನುತ್ತಾ ತನ್ನ ಬಟ್ಟೆ ಜಾಲಾಡುವ ಕೆಲಸವನ್ನು ಮುಂದುವರೆಸಿದಳು. ಇವನು ತನ್ನಲ್ಲೇ ನಕ್ಕೊಂಡು, ಅವಳ ಕಡೆ ನೋಡುತ್ತಾ ನೋಡುತ್ತಾ ಅಲ್ಲಿಂದ ಸರಿದ.

ಮದುವೆ ಮನೆಯ ಕಲಾಪಗಳು ಪ್ರಾರಂಭವಾಗಿದ್ದವು. ಬೀಗರ ಮನೆಗೆ ತಿಂಡಿ ಕಾಫಿಯನ್ನು ಕಳಿಸಿದ್ದರು. ಅವರುಗಳು ಸ್ನಾನ ಮುಗಿಸಿ, ಅಲಂಕಾರ ಮಾಡಿಕೊಂಡು, ಮದುವೆ ಮಂಟಪಕ್ಕೆ ಬರಲು ಸಿದ್ಧರಾಗುತ್ತಿದ್ದರು. ವರ ಮಹಾಶಯನನ್ನು ಚುಡಾಯಿಸುತ್ತಾ, ಕಾಶೀಯಾತ್ರೆಗೆ ಕರೆದುಕೊಂಡು ಹೋಗಲು ಸಿದ್ಧಗೊಳಿಸುತ್ತಿದ್ದರು. ಜೋಷಿ ಮನೆಯವರು, ಅತ್ತಿಂದಿತ್ತ, ಬೀಗರ ಬೇಕು ಬೇಡಗಳ ಕಡೆ ಗಮನ ಕೊಡುತ್ತಾ ಎತ್ತರದ ಧ್ವನಿಯಲ್ಲಿ ಮಾತನಾಡುತ್ತಾ ಗಲಿಬಿಲಿಯಿಂದ ಓಡಾಡುತ್ತಿದ್ದರು.

"ಮುಹೂರ್ತದ ವೇಳೆ ಮೀರಲಿಕ್ಕೆ ಬಂದದ.... ಇನ್ನೂ ಹಂಗಂಗೆ ಕುಳಿತೀರಲ್ಲ...

ಏಳ್ರೀ ಲಗೂನೇ.... ಓಲಗದವರಿಗೆ ಊದ್ಲಿಕ್ಕೆ ಹೇಳ್ರಲಾ..." ಎಂದು ಪುರೋಹಿತ ಆಚಾರ್ಯರು ಕೂಗಿ ಕೂಗಿ ಹೇಳುತ್ತಿದ್ದರು.

ತಲೆ ಬಗ್ಗಿಸಿ, ಚಂದ್ರು ವೇಗವಾಗಿ ನಡೆದು ತನ್ನ ಮನೆಗೆ ಬಂದ. "ಕಾಫಿ ಕುಡ್ಯೋಕೆ ಅಂತ ಹೋದೋನು ಹೋಗೇ ಬಿಟ್ಟಲ್ಲಾ.... ತಿಂಡಿ ಕಳಿಸಿಕೊಡಿ ಅಂತ ಹೇಳಿದೆ ತಾನೇ...?" ಲಕ್ಷ್ಮಿದೇವಮ್ಮ ಕೇಳಿದಳು.

'ಹುಂ' ಎಂದಷ್ಟೇ ಹೇಳಿದ.... ಒಳಗೆ ಬಂದು ಆಕೆಯ ಎದುರಿಗೆ ಕುಳಿತುಕೊಳ್ಳುವ ಮನಸ್ಸಾಗದೇ ಆಕೆಗೆ ಬೆನ್ನು ಮಾಡಿ ನಿಂತ.

"ಗಂಟೆ ಒಂಭತ್ತಾಯ್ತೇನೋ.... ಅಲ್ಲಿ ಎಲ್ಲಾ ಮುಗಿದಿರುತ್ತೆ. ನಾನು ನೀರು ಹಾಕಿಸ್ಕೋ ಬೇಕು... ಹೋಗಿ ಮಂಗಳನನ್ನು ಕರೆದು ಬರ್ತೀಯಾ?.... ಬಟ್ಟೆಗಳನ್ನು ತೆಗೆದುಕೊಡ್ಬೇಕು... ನೀನೂ ಅಷ್ಟೇ.... ಯಾರ ಕೈಲಾದ್ರೂ ನೀರನ್ನು ಹಾಕಿಸ್ಕೋ.... ನೀನೇ ಎಲ್ಲವನ್ನು ಮುಟ್ಟಿ ಬಿಡ್ಬೇಡ....

"ನಾನು ನಲ್ಲಿ ಕಟ್ಟೆಯ ಹತ್ರಾನೇ ತೊಟ್ಟಿಯ ನೀರನ್ನು ಹುಯ್ಕೋತೀನಿ. ಯಾರೂ ಹಾಕೋದೇನು ಬೇಡ...

"ತೊಟ್ಟಿ ನೀರೆಲ್ಲಾ ಮೈಲಿಗೆ ಆಗುಲ್ವೇನೋ? ರಾಮರಾಯರ ಮನೇಲಿ ಗಂಡು ಹುಡುಗ್ರು ಇದಾರೆ. ಕರೆದ್ರೆ ಬರ್ತಾರೆ. ಸ್ಕೂಲಿಗೆ ಹೋಗೋಕ್ಮುಂಚೆ ಕರೆದು ಹಾಕಿಸ್ಕೊಂಡ್ಬಿಡು..."ಆಜ್ಞೆ ಮಾಡಿದಳು. ಚಂದ್ರು ಕೆಟ್ಟ ಮುಖ ಮಾಡಿ, ರಾಮರಾಯರ ಮನೆ ಕಡೆಗೆ ಬಂದ. ಅತ್ತಿಂದಿತ್ತ ಓಡಾಡುತ್ತಿದ್ದ. ಮದುವೆಗೆ ಬಂದಿದ್ದವರ ನಡುವೆ ಅವರಿಗೆ ಮೈ ತಗಲದಂತೆ ದೂರ ದೂರವಾಗಿ ನಡೆದು, ಅವರ ಮನೆಯನ್ನು ಸಮಪೀಸಿದ.

ಜಗುಲಿಯ ಮೇಲೆ ಕುಳಿತು, ಮದುವೆ ಚಪ್ಪರದ ಆಗುಹೋಗುಗಳನ್ನು ನೋಡುತ್ತಿದ್ದ ಸಚ್ಚಿ ಇವನನ್ನು ಕಂಡು ಎದ್ದು ನಿಂತ. ಸ್ವಲ್ಪ ರೂಪದಲ್ಲಿ ನಿಂತು ಕೈ ಸನ್ನೆ ಮಾಡಿ ಕರೆದ ಚಂದ್ರು. ಸಚ್ಚಿ ಜಗುಲಿಯಿಂದ ಕೆಳಗಿಳಿದ. "ಅತ್ತೆ ಕರೀತಿದ್ದಾರೆ, ಬರ್ಬೇಕಂತೆ ಅಂತ ನಿಮ್ಮಕ್ಕಂಗೆ ಹೇಳ್ತೀಯಾ?" ಕೆಳದನಿಯಲ್ಲಿ ಹೇಳಿದ.

ಸಚ್ಚಿ, ಮೆಟ್ಟಿಲುಗಳನ್ನು ಹಾರುತ್ತಾ ಒಳಗೆ ಹೋದ. ಕೆಲವೇ ನಿಮಿಷಗಳಲ್ಲಿ ಅವನೊಂದಿಗೆ ಮಂಗಳಾ ಆಚೆಗೆ ಬಂದು, ಪ್ರಶ್ನಾರ್ಥಕವಾಗಿ ಅವನ ಕಡೆ ನೋಡಿದಳು.

"ಅತ್ತೆ ಕರೀತಿದ್ದಾರೆ ಈಗ್ಲೇ ಬರ್ಬೇಕಂತೆ..."

"ಸಚ್ಚೀ.... ಏನಾದ್ರೂ ಮಾಡಿದ್ಯೇನೋ.... ಮರಗಿರ ಹತ್ತಿದ್ಯಾ?" ಕೆಳದನಿ ಯಲ್ಲಿ ಹೇಳಿದ್ದು ಇವನಿಗೆ ಕೇಳಿಸಿತ್ತು.

"ನಮಗೆ ಸೂತಕ ಇದೆ. ಒಳಗೆ ಹೋಗುವ ಹಾಗಿಲ್ಲ. ಒಗೆದ ಬಟ್ಟೆಗಳನ್ನು ತೆಗೆದು ಕೊಡ್ಬೇಕಾಗಿತ್ತು...."ಮತ್ತೆ ಹೇಳಿದ.

"ಸರಿ. ನಡೀರಿ... ನಾನು ಈಗ್ಲೇ ಬರ್ತೀನಿ" ಎಂದು ತಮ್ಮನಿಗೆ ಹೇಳಿ ಚಂದ್ರು

ಹಿಂದೆ ನಡೆದಳು. ವೆರಾಂಡದಲ್ಲಿ ಕುಳಿತಿದ್ದ ಲಕ್ಷ್ಮಿದೇವಮ್ಮ, ಸೀರೆಯನ್ನು ಮುದುರಿ ಹಿಂದೆ ಸರಿದು ನಿಂತಳು "ಅತ್ತೇ..... ಕರೆದ್ರಂತೆ...."

"ಹೂಂ.... ಗೂಡಿನಲ್ಲಿ ಮಡಿಸಿಟ್ಟಿರುವ ಬಟ್ಟೆಗಳಿವೆ... ಸೀರೆ ರವಿಕೆ ಹಾಗೇ ಮೈ ಒರೆಸ್ಕೊಳ್ಳುಕ್ಕೇ ಹಳೇ ಸೀರೆ ಎಲ್ಲವೂ ಬೇಕು.... ಹಿಂದ್ಗಡೆ ಬಾಗ್ಲಿಂದ ಬರ್ತೀನಿ. ಸ್ವಲ್ಪ ನೀರು ಹಾಕಿ ಬಿಡಮ್ಮ.... ನಮಗೆ ಮೈಲಿಗೆ ಇದೆ..."

ಬಿಸಿ ನೀರು ಕಾದಿದೆಯಾ ಅತ್ತೆ?....

"ಎಲ್ಬಂತಮ್ಮ...? ಹಂಡೆಗೆ ಒಲೆ ಉರಿ ಹಾಕೋರ್‍ಯಾರು? ತಣ್ಣೀರ್ನೇ ಸುರಿ. ರಾತ್ರಿಯಿಂದ ಏನನ್ನು ತಿಂದಿಲ್ಲ... ಕುಡಿದಿಲ್ಲ... ಆಮೇಲೆ ಕಾಫೀನಾದ್ರೂ ಕುಡೀತೀನಿ...."

"ನಮ್ಮ ಮನೇಲಿ ಕಾದ ನೀರಿದೆ... ತರ್‍ಲಾ ಅತ್ತೆ?.....

"ಸರಿ.... ಕೊಡ ಇದ್ದರೆ ತುಂಬ್ಕೊಂಡು ಬಾ... ಬಕೆಟ್‌ನಲ್ಲಿ ತಂದ್ರೆ ಬೇಗ ಆರಿ ಹೋಗುತ್ತೆ" ಮಂಗಳ ಚಂದ್ರು ಕಡೆ ನೋಡಿದಳು. ಬಿಸಿ ನೀರಿನ ಕೊಡವನ್ನು ಸೊಂಟದ ಮೇಲೆ ಇಟ್ಟುಕೊಳ್ಳುವುದು ಹೇಗೆ ಅಂತ ಯೋಚಿಸುತ್ತಿದ್ದಳು.... ಗೂಡಿನಿಂದ ಬಟ್ಟೆಗಳನ್ನು ತೆಗೆದು ಬಚ್ಚಲು ಮನೆಯ ಹಗ್ಗದ ಮೇಲೆ ಹಾಕಿ ತನ್ನ ಮನೆಗೆ ಬಂದಳು. ಎಲ್ಲರೂ ಮಂಗಳನನ್ನು ಸುತ್ತುವರೆದರು.

"ಯಾಕೆ ಕರೆದಿದ್ರೇ ಮಂಗಳಾ!.... ಯಾರ ಮೇಲೆ ಏನು ಹೇಳಿದ್ರು?... ನನಗೆ ಒಂದ್ಮಾತು ಹೇಳ್ಬಿಟ್ಟಲ್ವಾ ಹೋಗೋದು? ಕರೆದ ಕೂಡ್ಲೇ ಹೋಗಿ ಬಿಡೋದಾ ?"

"ಅತ್ತೆ ಸ್ವಭಾವ ನಿಂಗೆ ಗೊತ್ತಿಲ್ಲಮ್ಮ ಕರೆದ ತಕ್ಷಣ ಹೋಗದಿದ್ರೆ ಅವರಿಗೆ ಕೋಪ ಬರುತ್ತೆ...."

"ಅವರೇನು ನಿನ್ನ ಸ್ವಂತ ಅತ್ತೇನಾ ಹೆದರುಕ್ಕೆ ! ಏನಂತೆ ಅವರ್ಕತೆ?"

"ಸೂತಕ ಅಂತೆ. ತಲೆಗೆ ನೀರು ಹಾಕ್ಬೇಕು ಅಂತಂದ್ರು.... ಹಂಡೇಲಿ ತಣ್ಣೀರು ಇದೆ... ನಮ್ಮನೆಯಿಂದ ಬಿಸಿನೀರನ್ನು ತಗೊಂಡು ಹೋಗೋಣ ಅಂತ ಬಂದೆ."

"ಏನು ಇಲ್ಲಿಂದ ಬಿಸಿ ನೀರನ್ನು ತಗೊಂಡು ಹೋಗ್ತೀಯಾ? ಅವರ ಮನೆಯ ಒಲೇನ ಹಚ್ಚಿದರೆ, ಹತ್ತು ನಿಮಿಷಗಳೊಳಗೆ ನೀರು ಕಾಯುತ್ತೆ. ಬೆಳಿಗ್ಗೇನೇ ಹೇಳ್ಬಾರ್ದಾಗಿತ್ತಾ?... ನೀನು ಅಲ್ಲಿ ಹೋದ್ರೆ ಇಲ್ಲಿ ನೋಡೋರ್‍ಯಾರು?"

"ವನಜಾ ನೀನು ಹೋಗಿ, ಅತ್ತೆಗೆ ನೀರು ಹಾಕ್ತೀಯೇನೆ?"

"ಇಲ್ಲಪ್ಪಾ, ಅತ್ತೇನ ನೋಡಿದ್ರೇ ನಂಗೆ ಹೆದರಿಕೆ ಆಗುತ್ತೆ. ನೀನೇ ಹೋಗು ಅವರು ನಿನ್ನನ್ನು ತಾನೇ ಕರೆದಿರೋದು?

"ಸರಿ.... ಡಬ್ಬಿಗಳಿಗೆ ತಿಂಡಿ ಗಿಂಡಿ ತುಂಬಿಸ್ಕೊಳ್ಳಿ... ನೀರು ತುಂಬಿಸ್ಕೊಳ್ಳಿ... ಶಂಕ್ರೂ ಒಂದು ಬಕೆಟ್ ನೀರು ಹಂಡೆಯಿಂದ ತುಂಬಿ, ಅತ್ತೆ ಮನೆಯ ಹಿತ್ತಿಲ ಬಾಗಿಲ

ಹತ್ರ ಇಟ್ಬಿಡು.... ವನಜಾ, ನೀನೇ ಇವರಿಬ್ಬರಿಗೂ ತಲೆ ಬಾಚಿ ಜಡೆ ಹಾಕು. ನಾನು ಬೇಗ ಬೇಗ ನೀರು ಹಾಕಿ ಬಂದ್ಬಿಡ್ತೀನಿ."

"ಅತ್ತೆ ಸೇವೆ ಜೋರಾಗಿಯೇ ಇದೆ.... ಭಾವಂಗೆ ಹೇಳ್ತೀನಿ ತಡೀ..."

"ಹೇಳ್ಕೋ ಹೋಗೇ.... ನಾನೇ ಹೋಗಿದ್ನಾ....? ಅವರೇ ಹೇಳಿ ಕಳಿಸಿದ್ರು, ಅತ್ತೆಗೂ ಮಕ್ಕಳಿದ್ದಿದ್ದರೆ, ನಮಗ್ಯಾಕೆ ಹೇಳಿ ಕಳಿಸ್ತಿದ್ರು ?... ಹೇಗೂ ಅವರಿಗೆ ಹೆಣ್ಣು ಮಕ್ಕಳಿಲ್ಲ. ನೀನು ಹೋಗಿ ಅವರ ಮನೇಲೇ ಇದ್ಬಿಡೇ ಜಲಜಾ. ಸೀಬೆಹಣ್ಣು, ಮಾವಿನಹಣ್ಣು, ಆಟದ ಸಾಮಾನುಗಳು ಸಿಹಿ ತಿಂಡಿಗಳು ಎಲ್ಲಾ ನಿನಗೇ ಸಿಗುತ್ತೆ. ಉಳಿದವರು ನಕ್ಕಾಗ ಅವಳ ಮುಖ ಕೆಂಪಾಗಿತ್ತು. ಅಳು ಬಂದಿತ್ತು.

"ನೋಡಮ್ಮ.... ಅತ್ತೇ ಮನೆಗೆ ಹೋಗಿರು ಅಂತ ಅಕ್ಕ ಹೇಳ್ತಾಳೆ..."

ನಿಮಗ್ಯಾರಿಗೂ ಮಾಡುಕ್ಕೆ ಕೆಲಸ ಇಲ್ಲ. ಒಬ್ಬರನ್ನೊಬ್ಬರು ತಮಾಷೆ ಮಾಡ್ಕೊಂಡು ಕಾಲ ಕಳೀತೀರಿ.... ಸ್ಕೂಲಿಗೆ ಹೊತ್ತಾಯ್ತು... ಹೊರಡಿ ಸುಮ್ನೇ...."
"ಅಮ್ಮಾ ರಜಾ ಹಾಕೋಣ್ವೇನಮ್ಮಾ... ಎದುರು ಮನೇಲಿ ಮದುವೆ ಇದೆಯಲ್ಲ..."

"ಮದುವೆಗೆ ಸಾಯಂಕಾಲ ಸ್ಕೂಲ್ನಿಂದ ಬಂದ್ಮೇಲೆ ಹೋಗೋರಂತೆ... ಈಗ ಸ್ಕೂಲಿಗೆ ಹೋಗಿ..."

"ಅಮ್ಮಾ... ಹೊಸ ಲಂಗಾನೇ ಇಲ್ವಲ್ಲಮ್ಮಾ.... ಅದೇ ಹಳೇದು...."

"ಅವರ್ಮನೇ ಮದುವೆಗೋಸ್ಕರ ಹೊಸ ಲಂಗ ಬೇಕಾ ?.... ಯಾವುದು ಇದೆಯೋ ಅದನ್ನೇ ಹಾಕ್ಕೊಂಡು ಹೋಗ್ಬನ್ನಿ. ನಿಮ್ಮನ್ನೇನೂ ಯಾರೂ ನೋಡುಲ್ಲ. ಕೇಳುಲ್ಲ. ನಮ್ಮ ಮನೆ ಮದುವೆ ಹೊತ್ತಿಗೆ ಹೊಸ ಬಟ್ಟೇನ ಎಲ್ರಿಗೂ ಹೊಲಿಸಲೇ ಬೇಕು."

"ಹಾಗಾದ್ರೆ, ನಾನು ಮದುವೆಗೆ ಹೋಗುಲ್ಲ."

"ನನ್ನ ಲಂಗಾನ ಹಾಕ್ಕೊಂಡು ಹೋಗೇ ಜಲಜೇ... ಹೇಗೂ ನನಗೆ ಮೇಲಕ್ಕೆ ಹೋಗಿದೆ. ನಾನು ಅಕ್ಕನ ಸೀರೇನ ಉಟ್ಕೊಂಡು ಹೋಗ್ತೀನಿ." ವನಜ ನಗುತ್ತಾ, ಹೇಳಿದಳು.

"ಸುಮ್ನೆ ಮಾತಾಡ್ತಾನೇ ಇರ್ತೀರೋ, ಬೇಗ ಬೇಗ ಹೊರಡ್ತೀರೋ.... ತಾಯಿ ಗದರಿದಾಗ ಎಲ್ಲರೂ ತೆಪ್ಪಗಾದರು. ಶಂಕರ, ಹಂಡೆಯಿಂದ ಬಿಸಿನೀರನ್ನು ತೋಡಿ, ಬಕೆಟ್ಟನ್ನು ಎತ್ತಿಕೊಂಡು ಹೊರಟ. ಮಂಗಳ ಅವನೊಂದಿಗೇ ಹೊರಟಳು.

"ಅತ್ತೇ ಬಿಸಿನೀರು ತಂದಿದ್ದೀನಿ... ಎಲ್ಲಿಡ್ಲೀ?" ಶಂಕರ ಕೇಳಿದ.

"ಬಚ್ಚಲು ಮನೇಲೇ ಇಟ್ಬಿಡು.... ನಿಮ್ಮಕ್ಕ ಎಲ್ಲಿ?.... ಎನ್ನುತ್ತಾ ಬಚ್ಚಲು ಮನೆಗೆ ನಡೆದಳು... "ನೀ ಹೋಗು ಇಲ್ಲೇ ನಿಂತ್ಕೋ ಬೇಡ" ಎಂದು ಹೇಳಿ ಅವನನ್ನು ಕಳಿಸಿ, ಬಾಗಿಲನ್ನು ಓರೆ ಮಾಡಿ ಮಂಗಳನನ್ನು ಕರೆದಳು.

ಮಂಗಳ ಆಕೆ ಹೇಳಿದಂತೆ, ನೀರನ್ನು ಹಾಕಿ, ಬಟ್ಟೆಗಳನ್ನು ನೆನೆಸಲು ನೀರನ್ನು ಸುರಿದು, ಒಣಗಿದ ಬಟ್ಟೆಗಳನ್ನು ಆಕೆಯ ಕೈಗೆ ಸಿಗುವಂತೆ ಇಟ್ಟು ಹೊರಬಂದಳು. ಹೊರಗಡೆ ಚಂದ್ರು ನಿಂತಿದ್ದ." ಶಂಕರನ್ನ ಕಳಿಸ್ಲಾ? ಅವನು ನೀರು ಹಾಕ್ತಾನೆ.... ಬಿಸಿ ನೀರು ಇದೆ. ತರ್ತಾನೆ."

"ಬೇಡ ಸುಮ್ನೆ ನಿಮಗ್ಯಾಕೆ ತೊಂದ್ರೆ! ಒಗೆಯುವ ಕಲ್ಲಿನ ಹತ್ರ ಇರೋ ನಲ್ಲಿಯ ಕೆಳಗೆ ಬಕೆಟನ್ನು ಇಟ್ಟು ಸಣ್ಣಗೆ ನೀರನ್ನು ಬಿಟ್ಟುಬಿಡಿ. ಒಂದು ಚೂರು ಇದೆ. ನಾನೇ ಹಾಕ್ಕೋತೀನಿ.... ಒದ್ದೆ ಟವೆಲ್ಲನ್ನು ಸುತ್ಕೊಂಡು ಬರ್ತೀನಿ..."

"ಮತ್ತೆ ಒಣಗಿದ ಬಟ್ಟೆಗಳು?....

'ಕಿಟ್‌ಬ್ಯಾಗ್‌ನಲ್ಲಿದೆ ನಾನೇ ತಗೋತೀನಿ ಬಿಡಿ...."ಅವನು ಸಂಕೋಚದಿಂದ ಹೇಳಿದಾಗ, ಅವಳಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಬಕೆಟನ್ನು ಇಟ್ಟು ನಲ್ಲಿಯನ್ನು ಸಣ್ಣಗೆ ಬಿಟ್ಟಳು. "ಏನಾದ್ರೂ ಬೇಕಾಗಿದ್ರೆ ಕರೀರಿ.... ಅತ್ತೆಗೆ ಹೇಳ್ಬಿಡಿ... ನಾನು ಹೋಗ್ತೀನಿ" ಎಂದು ಹೇಳಿ ತನ್ನ ಮನೆಯ ಕಡೆಗೆ ನಡೆದಳು. ಚಂದ್ರು ಮುಜುಗರಗೊಂಡಿದ್ದ. ಹೀಗೆ ಹತ್ತು ದಿನಗಳನ್ನು ಇಲ್ಲಿ ಕಳೆಯುವ ಬದಲು ಊರಿಗೇ ವಾಪಸ್ಸು ಹೊರಟು ಹೋಗಿದ್ದರೆ ಚೆನ್ನಾಗಿತ್ತೆನಿಸಿತ್ತು. ಇಲ್ಲಿಗೆ ಬಂದು ಹೀಗೆ ಸಿಕ್ಕಿ ಹಾಕಿಕೊಂಡೆನಲ್ಲ... ಊಟ ತಿಂಡಿಗೆ, ಪ್ರತಿಯೊಂದಕ್ಕೂ ಅಮ್ಮ ಹೇಳಿದಂತೆ ಕೇಳಬೇಕು... ಎಂದು ಗೊಣಗಿಕೊಳ್ಳುತ್ತಾ, ಚೊಂಬಿನಿಂದ ತಣ್ಣೀರನ್ನು ತುಂಬಿಕೊಂಡು ತಲೆಯ ಮೇಲೆ ಸುರಿದುಕೊಂಡ. ಲಕ್ಷ್ಮೀದೇವಮ್ಮ ಒಣಗಿದ ಸೀರೆಯನ್ನು ಉಟ್ಟು ಬುರವಷ್ಟರಲ್ಲಿ ಇವನು ತನ್ನ ಸ್ನಾನವನ್ನು ಮುಗಿಸಿಕೊಂಡಿದ್ದ.

"ಏ ಹುಡ್ಗಾ ಬಾಪ್ಪಾ ಇಲ್ಲಿ..." ಲಕ್ಷ್ಮೀದೇವಮ್ಮ ಮುಂಬಾಗಿಲಿನಲ್ಲಿ ನಿಂತು ಅಡಿಗೆ ಭಟ್ಟರ ಪೈಕಿಯ ಹುಡುಗನೊಬ್ಬನನ್ನು ಕರೆದಳು. ಅವನು ಅಳುಕುತ್ತಾ ಬಂದ. ನೋಡು, ಜೋಷಿ ಮನೆಯವರಿಗೆ ಹೇಳು.... ವಠಾರದ ಮಾಲೀಕರ ಮನೆಗೆ ತಿಂಡಿ ಕಾಫೀನ ಕಳಿಸ್ಬೇಕಂತೆ ಅಂತ..."| ಆಜ್ಞೆ ಮಾಡಿದಳು. ಅವನು ಓಡಿದ್ದ. ಎಷ್ಟು ಹೊತ್ತಾದರೂ ಅವನು ಬಾರದಿದ್ದಾಗ, ಚಂದ್ರೂನ ಕರೆದಳು.

"ಅವನ್ಯಾರೋ ಎಡಬಿಡಂಗಿ... ಹೋದೋನು ಹೊರಟೇ ಹೋದ. ನೀನಾದ್ರೂ ಹೋಗಿ ಕೇಳು.... ಜೋಷಿ ಮಗ ಬಂದಿದಾನಲ್ಲ ಅವನಿಗೆ ಹೇಳು.... ಬೆಳಗ್ನಿಂದ ಕಾಫಿ ಕೂಡಾ ತಂದು ಕೊಟ್ಟಿಲ್ಲ."

"ಆಯ್ತು ನೋಡ್ತೀನಿ" ಎನ್ನುತ್ತಾ ಬಟ್ಟೆ ಧರಿಸಿ, ಜೋಷಿ ಮನೆಯ ಕಡೆಗೆ ಬಂದ. ಅವರ ಮನೆಯವರು ಯಾರೂ ಕಾಣಲಿಲ್ಲ. ಯಾರನ್ನು ಕರೆಯುವುದು ? ಒಳಗೆ ಹೋಗುವಂತಿಲ್ಲ. ಕೇಳುವಂತಿಲ್ಲ. ಬರೀ ಕೈಯಲ್ಲಿ ಹೋದರೆ, ಅಮ್ಮ ಎಲ್ಲರನ್ನು ಅನ್ನುವುದು ಖಂಡಿತಾ ಅಂತೆನ್ನಿಸಿತು. ಅತ್ತಿತ್ತ ನೋಡುವಾಗ, ಮಂಗಳಾ ತನ್ನ ತಮ್ಮ

ನನ್ನೆತ್ತಿಕೊಂಡು ತಿಂಡಿಯನ್ನು ತಿನ್ನಿಸುತ್ತಿದ್ದುದನ್ನು ಕಂಡ. ಅನುಮಾನಿಸುತ್ತಾ ಅಲ್ಲಿಗೆ ಬಂದ.

"ಏನಾದ್ರೂ ಬೇಕಿತ್ತಾ?" ಅವಳು ಕೇಳಿದಳು.

"ಜೋಷಿ ಮನೆಯವ್ರು ತಿಂಡಿ ಕಾಫಿ ಕಳಿಸ್ತೀನಿ ಅಂತ ಅಂದಿದ್ರಂತೆ.... ಇದು ವರೆಗೂ ಯಾರೂ ಬಂದಿಲ್ಲ. ಹೇಳಿ ಕಳಿಸಿದ್ರೂ ಬರಲಿಲ್ಲ. ಇನ್ನು ಅದೇ ಒಂದು ರಂಪವಾಗಿ ಬಿಡುತ್ತೆ ಅಂತ ದಿಗಿಲಾಗ್ತಿದೆ. ನಾನು ಅಲ್ಲಿಗೆ ಹೋಗುವ ಹಾಗಿಲ್ಲ. ನಾನೇನೋ ಹೋಟೆಲ್ಲಿಗೆ ಹೋಗಿ ತಿಂದು ಬರ್ತೀನಿ. ಆದರೆ ಅಮ್ಮ ಕಾಯ್ಕೊಂಡು ಇದಾರೆ.... ಏನು ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ...

"ನಮ್ಮ ಮನೆಗೆ, ಎಲ್ರಿಗೂ ಆಗುವಷ್ಟು ಕಳಿಸಿದ್ರು... ತಿಂಡಿ ಮಿಕ್ಕಿದೆ... ಕೊಡ್ತೀನಿ. ಅಲ್ಲಿ ಇದೆಯೋ ಇಲ್ವೋ ಯಾರಿಗೆ ಗೊತ್ತು?...

"ಅಮ್ಮಂಗೆ ಆಗುವಷ್ಟು ಕೊಡಿ ಸಾಕು.... ಕಾಫಿ ಇದೆಯಾ?"

"ಕಾಫೀನ ಬೆರೆಸಿಕೊಡ್ತೀನಿ. ಡಿಕಾಕ್ಷನ್ ಇದೆ... ನೀವು ಮನೆಗೆ ಹೋಗಿ ನಾನು ತಂದುಕೊಡ್ತೀನಿ..."ಅವಳು ಒಳಗೆ ಹೋದಳು. ಚಂದ್ರು, ಬಾಲುನ ಎತ್ತಿಕೊಂಡು ಮನೆಗೆ ಬಂದ.

"ಇವನನ್ಯಾಕೆ ಕರ್ಕೊಂಡು ಬಂದ್ಯೋ.... ತಿಂಡಿ ಕಾಫಿ ಎಲ್ಲಿ? ರಾತ್ರಿಯಿಂದ ಬಾಯೆಲ್ಲಾ ಒಣಗಿ ಹೋಗಿದೆ..."

"ಬಿಸಿ ಕಾಫಿ ಬೆರೆಸ್ತಿದಾರೆ.... ಕಳಿಸಿ ಕೊಡ್ತಾರಂತೆ.... ಇವನು ನನ್ನನ್ನು ನೋಡಿ ಓಡಿ ಬಂದ. ಎತ್ಕೊಂಡು ಬಂದೆ..."

"ಮೈಲಿಗೆ ಆಗುತ್ತಲ್ಲೋ.... ಅವರು ಏನಂದ್ಕೊಳ್ತಾರೋ?"

"ಬಟ್ಟೆ ಬದಲಾಯಿಸಿದರೆ ಆಯ್ತು.... ನೀವು ಮಾತಾಡಿಸ್ತಾ ಇರಿ. ನಾನು ಹೋಗಿ ತಿಂಡೀನ ಇಸ್ಕೊಂಡು ಬರ್ತೀನಿ." ಎಂದು ಹೇಳಿ ಹೊರಗೆ ಬಂದು ನಿಂತ. ಅಷ್ಟರಲ್ಲಿ ಅಡಿಗೆಯವರ ಕಡೆಯ ಹುಡುಗನೊಬ್ಬ ಬಿಸಿ ಬಿಸಿ ಇಡ್ಲಿಯನ್ನು, ಹೊಗೆಯಾಡುವ ಕಾಫಿಯನ್ನು ತೆಗೆದುಕೊಂಡು ಬಂದ... ಚಂದ್ರು ಸಿಹಿತಿಂಡಿ ಏನೂ ಇಲ್ಲದುದನ್ನು ಗಮನಿಸಿದ. "ಏನಪ್ಪಾ ಸಿಹಿ ತಿಂಡಿ ಮಿಕ್ಕಿರಲಿಲ್ವಾ?...." ಅಂತ ಕೇಳಿದ್ದ.

"ಬರೀ ಇಡ್ಲಿ ಚಟ್ನಿ, ಕಾಫಿ ಸಾಕು... ಸಿಹಿ ಸಜ್ಜಿಗೆ ಬೇಡ ಅಂತ ಯಜಮಾನ್ರು ಹೇಳಿದ್ರು... ಬೇಕಿದ್ರೆ ಈಗ್ಲೇ ತಂದು ಕೊಡ್ತೀವಿ." ಎಂದ.

"ಬೇಡ ಬಿಡು...." ಎಂದ. ಸಿಹಿ ತಿನ್ನುಂತಿಲ್ಲ ಅಂತ ಕಳಿಸಿಲ್ಲವೇನೋ ಅಂತ ಅಂದುಕೊಂಡು, ಎಲ್ಲವನ್ನು ಒಳಗೆ ತಂದಿಡುವಂತೆ ಹೇಳಿದ. ಅವನು ಎಲ್ಲವನ್ನು ಇಟ್ಟು ಅತ್ತ ಹೋಗುತ್ತಿದ್ದಂತೆಯೇ... ಮಂಗಳೂ, ತಿಂಡಿಯ ಡಬ್ಬಿಯನ್ನು ಫ್ಲಾಸ್ಕಿನಲ್ಲಿ ಕಾಫಿಯನ್ನು ತಂದಳು.

"ಅಡಿಗೆಯವರೂ ಕಳ್ಸಿದಾರೆ... ನೀವು ವಾಪಸ್ಸು ತಗೊಂಡು ಹೋಗಿ.... ಅಮ್ಮ ಏನಂತಾರೋ?" ಎಂದ ಕೆಳದನಿಯಲ್ಲಿ.

"ತಂದದ್ದಾಗಿದೆ.... ಇನ್ನೊಂದು ಸ್ವಲ್ಪ ಹೊತ್ತು ಬಿಟ್ಟು ತಿನ್ನಿ... ಏನು ತಿಂಡಿ ಕಳ್ಸಿದಾರೆ?"

"ಇಡ್ಲಿ.... ಚಟ್ನಿ.... ನೀವು ಬೇರೆ ಏನನ್ನಾದರೂ ತಂದಿದೀರಾ?"

"ಸ್ಕೂಲಿಗೆ ಡಬ್ಬಿಗೆ ಹಾಕುಕ್ಕೆ ಅಂತ ಉಪ್ಪಿಟ್ಟು ಮಾಡಿದ್ದೆ. ಅತ್ತೆ ಬೇಡ ಅಂತಂದ್ರೆ ಹಾಗೇ ತಗೊಂಡು ಹೋಗ್ತೀನಿ." ಎನ್ನುತ್ತಾ ಒಳಗೆ ಬಂದಳು.

"ನೀನೇನಮ್ಮ ತಂದೆ? ಮದುವೆ ಮನೆಯಿಂದ ತಿಂಡಿ ಕಾಫಿ ಬಂದಿತ್ತು... ಅದೇ ತುಂಬಾ ಇರಬಹುದು... ಹೇಗೂ ಬಂದಿದೀಯಲ್ಲ... ನಮ್ಮಿಬ್ಬರಿಗೂ ತಟ್ಟೆಗಳಿಗೆ ಹಾಕಿಕೊಟ್ಟು ಉಳಿದುದನ್ನು ನಿಮ್ಮ ಮನೆಗೆ ತಗೊಂಡ್ಹೋಗು.... ಮಕ್ಕಳಿಗೆ ಆಗುತ್ತೆ..."ಅವಳು ಚಂದ್ರು ಕಡೆ ನೋಡಿದಳು.

"ಮದುವೆ ಮನೆಯಿಂದ ಊಟ ಎಷ್ಟೊತ್ತಿಗೆ ಬರುತ್ತೋ.... ಅಲ್ಲಿ ಈಗಿನ್ನು ಕಾರ್ಯಕ್ರಮಗಳು ಪ್ರಾರಂಭವಾಗಿದೆ. ನಾನು ತಿಂತೀನಿ ಬಿಡಿ" ಎಂದ ಚಂದ್ರು. ಲಕ್ಷ್ಮೀದೇವಮ್ಮ ಅವನನ್ನು ದುರು ದುರು ನೋಡಿದಳು. ತನ್ನ ಮಾತಿಗೆ ಅವನು ಅಡ್ಡ ಮಾತು ಆಡಿದ್ದು ಅವಳಿಗೆ ಸರಿ ಹೋಗಿಲ್ಲ ಎನ್ನುವುದು ಮಂಗಳನಿಗೆ ಅರ್ಥವಾಯಿತು.

"ತುಂಬಾ ಇಲ್ಲ ಅತ್ತೆ... ಒಂದು ವೇಳೆ ಮಿಕ್ಕರೆ ತಗೊಂಡು ಹೋಗ್ತೀನಿ."

"ಸರಿ... ಈಗ ಹಾಕಿಕೊಡು" ಎಂದಳು. ಮಂಗಳ ಒಳಗಿನಿಂದ ತಟ್ಟೆಗಳನ್ನು ತಂದು ಇಡ್ಲಿ ಚಟ್ನಿಯನ್ನು ಉಪ್ಪಿಟ್ಟನ್ನು ಹಾಕಿ ಕೊಟ್ಟಳು. ಒಳಗೆ ಚಿಕ್ಕ ಸ್ಟೀಲ್ ಡಬ್ಬಿಯಲ್ಲಿ ತುಪ್ಪ ಇದೆ ಹಾಕು.... ತುಪ್ಪ ಹಾಕಿಕೊಳ್ಳದೇ ತಿಂದು ರೂಢಿ ಇಲ್ಲ... ಉಪಯೋಗಿಸದೇ ಇದ್ದರೆ ತುಪ್ಪ ವಾಸನೆ ಬಂದು ಬಿಡುತ್ತೆ..." ಮಂಗಳ ಅಡಿಗೆ ಮನೆ ಯಲ್ಲಿ ಹುಡುಕಿ, ತುಪ್ಪದ ಡಬ್ಬಿಯನ್ನು ಹೊರಕ್ಕೆ ತಂದು ಇಬ್ಬರ ತಟ್ಟೆಗೂ ಒಂದೊಂದು ಚಮಚದಷ್ಟು ಹಾಕಿದಳು.... ನೆನ್ನೆ ದಿನದ್ದು ಮಿಕ್ಕ ಹಾಲು ಇದೆ. ತಗೊಂಡ್ಹೋಗಿ ಹೆಪ್ಪು ಹಾಕಿ ಉಪಯೋಗಿಸ್ಕೊಳ್ಳಿ... ಇವತ್ತು ಹಾಲು ಬೇಡ ಅಂತ ಹೇಳಿ ಕಳಿಸ್ದೆ..." ಲಕ್ಷ್ಮೀದೇವಮ್ಮ ತಟ್ಟೆಯನ್ನು ಕೈಗೆತ್ತಿಕೊಂಡು ನುಡಿದಳು.

"ನಿಮಗೆ ಕುಡಿಯೋಕೆ ಹಾಲನ್ನು ತಂದು ಕೊಡ್ಲಾ ಅತ್ತೆ?"

"ಬೇಡ ಹಾಲನ್ನು ಕುಡೀ ಬಾರ್ದು.... ನನಗೋಸ್ಕರ ಒಂದು ಕೆಲಸ ಮಾಡು ಮಂಗಳಾ, ಸ್ನಾನ ಆಗಿದೆಯಲ್ಲ, ತುಳಸೀ ಗಿಡಕ್ಕೆ ನೀರು ಎರೆದು, ಒಂದು ಒಳಲೆ ಹಾಲನ್ನೂ, ನಾಲ್ಕು ದ್ರಾಕ್ಷಿಯನ್ನು ಇವನಿಗೆ ಕೊಡು. ನಿಮ್ಮನೇಲಿ ದ್ರಾಕ್ಷಿ ಇದೇ ತಾನೇ? ಇಲ್ಲದಿದ್ರೆ, ಇಲ್ಲಿಂದ, ದಿನಾ ನಾಲ್ಕು ನಾಲ್ಕು ದ್ರಾಕ್ಷೀನ ತಗೊಂಡು ಹೋಗು.... ತುಳಸಿಗೆ ಮಾತ್ರ ನೀರನ್ನು ತಪ್ಪಿಸ್ಬೇಡ. ಒಣಗಿ ಹೋಗುತ್ತೆ..."

"ಸರಿ ಅತ್ತೆ, ನಾನಿನ್ನು ಬರ್ತೀನಿ... ಅಮ್ಮ ಒಬ್ಬಳೇ ಇದಾಳೆ.... ಅವಳಿಗೆ ಏನಾದ್ರೂ ಬೇಕಾಗಬಹುದು ಏಳುಕ್ಕಾಗುಲ್ಲವಲ್ಲ..."

"ಇನ್ನೂ ಎಷ್ಟು ದಿನ ಹೀಗೆ ಮಲಗಿದ್ದಲೇ ಸೇವೆ ಮಾಡಿಸ್ಕೋಬೇಕೋ.... ಅಲ್ಲಾ. ಸೊಂಟದ ಮೂಳೆ ಮುರಿಯಷ್ಟೇ ಜೋರಾಗಿ ಪೆಟ್ಟು ಬಿತ್ತಾ?"

"ಜೊತೆ ಜೊತೆಗೆ ಮರದ ತೊಲೆ ಕೂಡಾ ಅಮ್ಮನ ಮೇಲೆ ಬಿತ್ತು.

"ಅದೆಂಥಾ ಗೋಡೆ? ಗಟ್ಟಿ ಭದ್ರವಿಲ್ಲದ್ದು?.... ಚೆನ್ನಾಗಿ ಗಾರೆ ಗಚ್ಚು ಮಾಡಿ ಕಟ್ಟಿಸಿದ್ರೆ ಗೋಡೆ ಯಾಕೆ ಬೀಳ್ತಿತ್ತು... ಎಲ್ಲೋ ಮಣ್ಣಿನ ಗೋಡೆ ಇರ್ಬೇಕು.... ಅದಕ್ಕೇ ಬಿದ್ದಿದೆ.. ಓನರ್ ಹತ್ರ ಆಸ್ಪತ್ರೆ ಖರ್ಚನ್ನಾದ್ರೂ ಇಸ್ಕೋಬೇಕಾಗಿತ್ತು..."

"ನಮ್ಮ ತಂದೆ ಹಾಗೆಲ್ಲ ದುಡ್ಡನ್ನು ಕೇಳುಲ್ಲ ಅತ್ತೇ.... ಅಲ್ಲದೇ ಇದು ಗವರ್ನಮೆಂಟ್ ಆಸ್ಪತ್ರೆ, ಖರ್ಚು ಜಾಸ್ತಿ ಬಿದ್ದಿಲ್ಲ."

"ಆಸ್ಪತ್ರೆ ಖರ್ಚಿಗಲ್ಲದೇ ಇದ್ದಿದ್ರೆ, ಹಣ್ಣು ಹಂಪಲುಗಳಿಗೆ ಆಗ್ತಿತ್ತು. ಮನೆ ತುಂಬಾ ಮಕ್ಕಳಿದೀರಿ.... ಹಾಲು, ಹಣ್ಣು, ಏನು ದಿನಾ ಕೊಡ್ತೀರಾ?....." ಅವಳಿಗೆ ಪೆಚ್ಚಾಗಿತ್ತು. ಮತ್ತೆ ಅವನ ಕಡೆ ನೋಡಿದಳು. ಅವನು ನಕ್ಕಂತೆ ಅನ್ನಿಸಿತ್ತು. ಅದು ಲಕ್ಷ್ಮಿದೇವಮ್ಮನ ಮಾತಿಗೋ, ಇವರುಗಳ ಅಸಹಾಯಕತೆಗೋ ಅರ್ಥವಾಗಲಿಲ್ಲ.
"ಹಾಗಾದ್ರೆ ನಿಮ್ಮ ಮನೆಯಿಂದ ಮದುವೆ ಮನೆಗೆ ಯಾರೂ ಹೋಗ್ತಿಲ್ಲ ಅನ್ನು..."

ನೆನ್ನೆ ರಾತ್ರಿ ನಮ್ಮ ತಂದೆ ಹಾಗೂ ನನ್ನ ತಮ್ಮ ತಂಗೀರು ಹೋಗಿದ್ರು. ಸಾಯಂಕಾಲ ನಾನು ಮತ್ತೆ ನನ್ನ ತಮ್ಮ ತಂಗೀರು ಹೋಗ್ಬರ್ತೀವಿ. ಅಮ್ಮಂಗೆ ಆಗೋದಿಲ್ಲ. ಅವಳನ್ನು ಒಬ್ಬಳನ್ನೇ ಬಿಟ್ಟು ಹೋಗುಕ್ಕಾಗುಲ್ಲ. ನಾನಿನ್ನು ಬರ್ಲಾ ? ಎಂದು ಕೇಳುತ್ತಾ ಅಲ್ಲಿಂದ ಹೊರಬಿದ್ದಳು ಚಂದ್ರು, ಅಲ್ಲಿ ಕುಳಿತಿದ್ದ ಬಾಲುನ ಎತ್ತಿ ಕೊಂಡು ಅವಳ ಹಿಂದೆ ಬಂದ.

"ನಿಮ್ಮ ತಮ್ಮನನ್ನು ಮರತೇ ಹೋಗ್ತಿದೀರಲ್ಲ."ನಗುತ್ತಾ ಎಂದ.

"ನಿಮ್ಮ ತಾಯಿಗೆ ಇವನನ್ನು ಕಂಡರೆ ಅಕ್ಕರೆ, ಇದ್ದರೆ ಇರಲಿ ಅಂತ ಸುಮ್ಮನಾಗಿದ್ದೆ. ಕೊಡಿ ಎತ್ಕೋತೀನಿ" ಕೈ ನೀಡಿದಳು.

"ಇವನ ಬಟ್ಟೆಗಳನ್ನು ಬಿಚ್ಚಬೇಕು... ನಾನು ಮುಟ್ಟಿದೀನಲ್ಲ. ಬನ್ನಿ ನಿಮ್ಮ ಮನೇ ತನಕ ಕರ್ಕೊಂಡ್ಬರ್ತೀನಿ" ಎನ್ನುತ್ತಾ ಅವಳ ಜೊತೆಯಲ್ಲಿ ನಡೆದ."

"ಅಮ್ಮನ ಮಾತಿಗೆ ಬೇಜಾರು ಮಾಡ್ಕೋಬೇಡಿ.... ಅನ್ನಿಸಿದ್ದನ್ನು ಆಡಿ ಬಿಡ್ತಾರೆ..." ಎಂದ.

"ಪರವಾಗಿಲ್ಲ... ನನಗೀಗ ಅಭ್ಯಾಸವಾಗಿದೆ." ಎಂದಳು ನಗುತ್ತಾ.

ಜಗುಲಿಯ ಮೇಲೆ ನಿಲ್ಲಿಸಿ, ಮಗುವಿನ ಉಡುಪುಗಳನ್ನು ಬಿಚ್ಚಿದ... ಅವನು ಹಠ ಮಾಡಿ ಅತ್ತ. ಮಂಗಳಾ ಅವನನ್ನು ಎತ್ತಿಕೊಂಡಳು. ಪಕ್ಕದ ನಲ್ಲಿಯ ಬಳಿಗೆ

ಹೋಗಿ, ಒಗೆಯುವ ಕಲ್ಲಿನ ಮೇಲೆ ಆ ಬಟ್ಟೆಯನ್ನು ಇಟ್ಟು ಬಂದ. ಕುಡಿಯೋಕೆ ಒಂದು ಚೊಂಬು ನೀರು ಕೊಟ್ಬಿಡಿ. ಮತ್ತೆ ಮತ್ತೆ ಬಂದು ತೊಂದರೆ ಕೊಡೋದಿಲ್ಲ." ಎಂದು ನಗುತ್ತಾ ಅವಳು ಒಳಗಿನಿಂದ ನೀರಿನ ಚೊಂಬನ್ನು ತಂದುಕೊಟ್ಟಳು. ಅವನು ಮನೆಗೆ ಬಂದ.

೦ ೦ ೦

ಕಾಶೀಯಾತ್ರೆಗೆ ಹೊರಟ ಮದುಮಗನನ್ನು ಕರೆದು ಕುಳ್ಳಿರಿಸಿ, ಆದರಿಸಿ ಉಪಚರಿಸಿ, ಹೆಣ್ಣು ಕೊಟ್ಟು ಸಂಸಾರವಂದಿಗನನ್ನಾಗಿ ಮಾಡುತ್ತೇನೆಂದು ಪುಸಲಾಯಿಸಿ, ಮದುವೆ ಮಂಟಪಕ್ಕೆ ಕರೆತಂದರು. ವರನಿಗೆ, ವರನ ತಂದೆ ತಾಯಿ ಹಾಗೂ ಅವರ ನೆಂಟರುಗಳಿಗೆ ಯಥಾಶಕ್ತಿ ಉಪಚಾರಗಳನ್ನು ಮಾಡಿ, ಕನ್ಯಾದಾನಕ್ಕೆ ಸಿದ್ಧ ಮಾಡಿದರು.

ಮದುಮಗಳಾಗಿ ಅಲಂಕಾರಗೊಂಡಿದ್ದ ಸುಧಾ ಸೋದರ ಮಾವನೊಂದಿಗೆ, ಮದುವೆ ಮಂಟಪಕ್ಕೆ ಆಗಮಿಸಿದಳು. ಅಂತರಪಟ ಹಿಡಿದರು. ವೇದಮಂತ್ರ ಪಠಣ ನಡೆಯಿತು. ಅಂತರಪಟ ಸರಿಯಿತು. ವಧೂವರರು ಪರಸ್ಪರ ನೋಡಿ, ಜೀರಿಗೆ ಬೆಲ್ಲ ವನ್ನು ತಲೆಯ ಮೇಲೆ ಹಾಕಿದರು. ಆ ನಂತರ ಅಕ್ಕಿಧಾರೆ, ವರಮಾಲೆಯ ನಂತರ ಕನ್ಯೆಯನ್ನು ವರನಿಗೆ ಧಾರೆ ಎರೆದುಕೊಟ್ಟರು. ಗಟ್ಟಿಮೇಳ ಮೊಳಗಿತು. ಮಂತ್ರಘೋಷ ಹರಿಯಿತು. ಸುಮುಹೂರ್ತದಲ್ಲಿ ಸುಧಾಳ ಕೊರಳಿಗೆ ಮಹೇಶ ಮಾಂಗಲ್ಯವನ್ನು ಕಟ್ಟಿದ. ಮುತ್ತೈದೆಯರು ಹಾಡಿದರು. ಹರಸಿದರು. ಜೋಷಿ ದಂಪತಿಗಳು ಗೆದ್ದೆವು ಎಂದುಕೊಂಡು ಭಾರವಾದ ಉಸಿರನ್ನು ಹೊರಬಿಟ್ಟು, ಹಗುರವಾದರು.

ಉಡುಗೊರೆಗಳು ರಾಶಿ ರಾಶಿಯಾಗಿ ಬಂದವು. ಆಹ್ವಾನಿತರಿಗೆ ತಾಂಬೂಲವನ್ನು ಕೊಟ್ಟು ಊಟಕ್ಕೆ ಎಬ್ಬಿಸಿದರು... ಮದುವೆ ಚಪ್ಪರದಲ್ಲಿ ಸಂಭ್ರಮ ಸಡಗರಗಳು ತುಂಬಿ ಹರಿದಿದ್ದವು. ಆದರೆ ಆ ಸಮಯದಲ್ಲಿ ವಠಾರದ ಉಳಿದ ಮನೆಯವರ್ಯಾರೂ ಸಮಾರಂಭದಲ್ಲಿ ಪಾಲ್ಗೊಂಡಿಲ್ಲ ಎನ್ನುವುದು ಯಾರ ಗಮನಕ್ಕೂ ಬರಲಿಲ್ಲ.

ಹಿಂದಿನ ದಿನ ಸಡಗರದಿಂದ ಹೂವೀಳ್ಯಕ್ಕೆ ಹೋಗಿ ಬಂದ ಲಕ್ಷ್ಮಿದೇವಮ್ಮ ಈ ದಿನ ಮನೆಯಲ್ಲೇ ಕುಳಿತಿರಬೇಕಾದ ಪರಿಸ್ಥಿತಿ.... ಪಕ್ಕದಲ್ಲೇ ವಾಸವಾಗಿದ್ದ ಪಂಕಜಳಿಗೆ ಆಹ್ವಾನ ಸಿಕ್ಕಿದ್ದರೂ, ಹೋಗಲೇ ಬೇಕು ಅಂತ ಅನ್ನಿಸದ ಮನಃಸ್ಥಿತಿ, ಎದುರುಗಡೆಯೇ ವಾಸವಾಗಿದ್ದರೂ, ತಾಯಿಯನ್ನು ಬಿಟ್ಟು ಒಬ್ಬಳೇ ಅಲ್ಲಿಗೆ ಹೋಗಲಾರದಂತಹ ಸ್ಥಿತಿ ಮಂಗಳಳಿಗೆ... ಹೋಗುವ ಮನಸ್ಸಿಲ್ಲದಿದ್ದರೂ, ಯಾವ ಕೆಲಸ ಕಾರ್ಯಗಳಿಲ್ಲದೇ ಬೇಸರದಿಂದ ಕಾಲ ಕಳೆಯುವ ಸ್ಥಿತಿ ಒದಗಿದ್ದಕ್ಕೆ ಚಂದ್ರು ಚಡಪಡಿಸಿದ್ದ. ಹೀಗೆ ಮನೆ ಯೊಳಗೆ ಸೆರೆವಾಸದಲ್ಲಿರುವವನಂತೆ, ಇರುವ ಬದಲು, ಮದುವೆ ಚಪ್ಪರದಲ್ಲಿ ಕುಳಿತಿದ್ದರೆ ಚೆನ್ನಾಗಿತ್ತೇನೋ ಅಂತ ಅನ್ನಿಸಿತ್ತು...

"ಕಲಾಪ ಎಲ್ಲಾ ಮುಗಿದಿರಬಹುದು. ಎಲ್ಲರೂ ಮೊದಲನೇ ಪಂಕ್ತಿಯ ಊಟಕ್ಕೆ

ಎದ್ದಿರಬಹದು. ವಾಲಗದವರ ಸದ್ದು ಕೇಳುಸುತ್ತಿಲ್ಲ." ಸ್ವಗತ ಎಂಬಂತೆ ಲಕ್ಷ್ಮಿದೇವಮ್ಮ ಹೇಳಿಕೊಂಡಳು. ಚಂದ್ರು ಕೇಳಿಸಿದರೂ ಕೇಳಿಸದವನಂತೆ ಕಣ್ಣುಗಳನ್ನು ಮುಚ್ಚಿ ಕುಳಿತಿದ್ದ. ತಿಂದ ತಿಂಡಿಯೇ ಅರಗಿಲ್ಲ. ಊಟ ಯಾರಿಗೆ ಬೇಕಾಗಿದೆ ? ಅಂತಂದುಕೊಂಡ.... ಎರಡು ಪಂಕ್ತಿ ಊಟ ಮುಗಿದ ಮೇಲೆ, ಮದುವೆ ಮನೆಗೆ ಬಂದಿದ್ದ ನೆಂಟರ ಪೈಕಿಯವಳೊಬ್ಬಳು ಬಂದಳು. ಇವರ ಮನೆಯ ಕೆಲವು ಪಾತ್ರೆಗಳನ್ನು ತೆಗೆದುಕೊಂಡು ಹೋಗಿ, ಅಡಿಗೆ ಪದಾರ್ಥಗಳನ್ನು ತುಂಬಿಸಿಕೊಂಡು ತರುವುದಾಗಿ ಹೇಳಿದಳು. ಲಕ್ಷ್ಮಿದೇವಮ್ಮನಿಗೆ ಇಷ್ಟವಾಗಲಿಲ್ಲ. "ಪಾತ್ರೆಗಳು ಜ್ಞಾಪಾನ ಸರಿಯಾಗಿ ನೋಡಿ, ಎಣಿಸಿಟ್ಟುಕೊಳ್ಳಿ. ಎಲ್ಲಾ ಪಾತ್ರೆಗಳೂ ಸರಿಯಾಗಿ ವಾಪಸ್ಸು ಬರ್ಬೇಕು.... ಮದುವೆ ಮನೆಯ ಪಾತ್ರೆಗಳೊಂದಿಗೆ ಬೆರೆತು ಹೋದರೆ ಹೋದಂತೆಯೇಃ... ಮತ್ತೆ ವಾಪಸ್ಸು ಸಿಗುಲ್ಲ" ಆಕೆಗೆ ಎಚ್ಚರ ಹೇಳಿದಳು.

ಇಲ್ರೀ ವೈನೀ... ನಾನೇ ಕೊಂಡೊಯ್ದು, ನಾನೇ ತುಂಬಿಸ್ಕೊಂಡು ತರ್ತೀನಿ ನಾನು ತುಂಗಾಬಾಯಿಯ ತಂಗೀರೀ.... ಆಕೀನೇ ನನ್ನನ್ನ ಕಳಿಸ್ಯಾಳ..." ಎನ್ನುತ್ತಾ ಕೆಲವು ಪಾತ್ರೆಗಳನ್ನು ಜೋಡಿಸಿಕೊಂಡಳು."ಈಗ ಬಂದೇನ್ರೀ" ಎಂದು ಹೇಳಿ ಹೊರಟಿದ್ದಳು.

ಲಕ್ಷ್ಮಿದೇವಮ್ಮ ಈವರೆಗೆ ಅಡಿಗೆ ಮನೆಗೆ ಯಾರನ್ನೂ ಬಿಟ್ಟಿರಲಿಲ್ಲ. ಈ ಸಮಯದಲ್ಲೇ ಈ ಸೂತಕವೇ ?.... ಊಟ ಬೇಕು ಎನ್ನಲಾರಳು ; ಬೇಡ ಎಂದು ಹೇಳಲಾರಳು.... ಈ ಸಮಯದಲ್ಲಿ ಗಂಡನೂ ಊರಲಿಲ್ಲ. ಅತ್ತೆಯೂ ಇಲ್ಲ. ಮೈದುನನಿಗೆ ಬರಹೇಳಿದ್ದಳು ಅವನೂ ಬರಲಿಲ್ಲ. ಈ ಚಂದ್ರೂನೋ, ಆಟಕ್ಕುಂಟು ಲೆಖ್ಖಕ್ಕಿಲ್ಲ ಎನ್ನುವ ಹಾಗೆ.... ಎಲ್ಲವನ್ನು ಹೇಳಬೇಕು. ಅದೇನು ಬೇಕು ಅಂತ ಮಾಡ್ತಾನೋ. .. ಅಥವಾ ಸ್ವಭಾವವೇ ಹಾಗೋ.... ಇವನ ಗೋತ್ರ ಪ್ರವರ ಒಂದೂ ಗೊತ್ತಿಲ್ಲ. ದತ್ತು ತೆಗೆದುಕೊಂಡಿರುವ ಕಾರಣದಿಂದ ನಮ್ಮ ಕುಲಕ್ಕೆ ಸೆರಿದವನು.... ರಕ್ತ ಸಂಬಂಧವಿಲ್ಲದಿದ್ದರೂ, ಇವನಿಗೂ ಸೂತಕ.... ಇಲ್ಲದಿದ್ದರೆ, ಇವನ ಕೈಯಲ್ಲೇ ಕೆಲವು ಕೆಲಸಗಳನ್ನು ಮಾಡಿಸಿಕೊಳ್ಳಬಹುದಾಗಿತ್ತು... ಕಣ್ಣೆದುರಿಗೇ ಕುಳಿತಿದ್ದರೂ, ಪ್ರಯೋಜನವಿಲ್ಲ.... ತ್ಚು ತ್ಚು ಎಂದುಕೊಂಡಳು.... ಚಂದ್ರು ತಿರುಗಿ ನೋಡಿದ. ಅವನಿಗೆ ಕೇಳಿಸಿತ್ತು.

"ಬೇಕೋ ಬೇಡವೋ... ಏನೇನೋ ಪಾತ್ರೆಗಳನ್ನು ತಗೊಂಡು ಹೋದಳು. ಎಲ್ಲವೂ ಸರಿಯಾಗಿ ವಾಪಸ್ಸು ಬರುತ್ತೋ ಇಲ್ಲವೋ.... ನೋಡೋರಿಲ್ಲ. ಮಾಡೋರಿಲ್ಲ." ಗೊಣಗಿದಳು.

"ನಂಗ್ಹೇಳಿದ್ರೆ ತೆಗೆದು ಕೊಡ್ತಿದ್ದೆ. ನಂಗೇನ್ಗೊತ್ತು?" ರೇಗಿದ.

"ನೀನೊಬ್ಬ.... ನೀನು ಅಡಿಗೆ ಮನೆಗೆ ಹೋಗ್ತಿದ್ಯಾ? ಮಂಗಳನ್ನಾದ್ರೂ ಕರೆಯ ಬಹುದಾಗಿತ್ತು...

"ಪದೇ ಪದೇ ಅವರನ್ನು ಕರೆಯೋಕೆ ಆಗುತ್ತಾ?...."

"ಸಮಯ ಅಂದ್ರೆ ಮಾಡ್ಬೇಕು. ಯಾರೂ ಉಪಯೋಗವಿಲ್ಲ. ಪಂಕಜಾ.... ಟೀಚರ್ರು.... ಸಾಲದ್ದಕ್ಕೆ ವಿಧವೆ.... ಈ ಮಂಗಳಂಗೆ ತಾಯಿಯನ್ನು ನೋಡಿಕೊಳ್ಳುವ ಕೆಲಸ.... ಈ ಜೋಷಿ ಮನೆಯವರು, ಛತ್ರಾನ ಗೊತ್ತು ಮಾಡ್ಕೊಂಡಿದ್ದಿದ್ರೇ ಚೆನ್ನಾಗಿತ್ತು. ದುಡ್ಡು ಉಳಿಸುವ ನೆಪದಲ್ಲಿ, ವಠಾರನೆಲ್ಲಾ ಆಕ್ರಮಿಸಿಕೊಂಡಿದ್ದಾರೆ.... ನಮಗೆ ಮಾತ್ರ ಯಾವ ಲಾಭವೂ ಇಲ್ಲ." ಚಂದ್ರು ಸುಮ್ಮನೇ ಆಕೆಯ ಕಡೆ ನೋಡಿದ.

ಪಂಕಜ, ಟೀಚರ್ರು ಎನ್ನುವುದು ಚಂದ್ರುಗೆ ಗೊತ್ತಿತ್ತು. ವಿಧವೆ ಎನ್ನುವುದು ಗೊತ್ತಿಲ್ಲದ ವಿಷಯ. ಅವಳು ವಿಧವೆ ಆಗಿರೋದು ಅವಳ ತಪ್ಪು ಎನ್ನುವಂತೆ ಮಾತಾಡುತ್ತಾರಲ್ಲ... ಗಂಡ ಇಲ್ಲ. ತಂದೆ ತಾಯಿಯೂ ಜತೆಯಲ್ಲಿಲ್ಲ. ಒಂಟಿಯಾಗಿದ್ದಾಳೆ. ಅವಳ ಬಗ್ಗೆ ಇವರಿಗೆ ಅಯ್ಯೋ ಅಂತ ಖಂಡಿತಾ ಅನ್ನಿಸುವುದಿಲ್ಲ.... ಮಂಗಳ ಹೇಳಿದಂತೆ ಕೇಳುವುದರಿಂದ ಒಳ್ಳೆಯ ಹುಡುಗಿ, ಅಂತ ಒಪ್ಪಿಕೊಂಡರೂ, ಅವಳು ತಾಯಿಯ ಸೇವೆ ಮಾಡುವುದು ತಪ್ಪೇ ? ಒಟ್ನಲ್ಲಿ ಎಲ್ಲವನ್ನೂ ತನ್ನ ದೃಷ್ಟಿಕೋನಗಳಿಂದ ಮಾತ್ರ ನೋಡುವ ಹೆಂಗಸು ಈಕೆ.... ನನಗೆ ಹೆಂಡತಿಯಾಗಿ ಬರುವವಳನ್ನು ಈಕೆ ಸತಾಯಿಸದೇ ಬಿಡುವುದಿಲ್ಲ. ತಾನು ಅತ್ತೆ, ತಾನು ಹೇಳಿದಂತೆಯೇ ಕೇಳಲಿ, ತನ್ನ ಸೇವೆ ಮಾಡಲಿ ಅಂತ ಹೆಚ್ಚು ಅಪೇಕ್ಷೆ ಪಡುವುದು ಖಚಿತ. ಈಕೆ ನನ್ನ ಸ್ವಂತ ತಾಯಿಯಲ್ಲ ಅಂತ ತಿಳಿದರೆ, ಅವಳ್ಯಾಕೆ ಇವರ ಸೇವೆ ಮಾಡ್ತಾಳೆ? ಇವರ ಜತೇಲಿ ಇರುಕ್ಕೇ ಇಷ್ಟಪಡುವುದಿಲ್ಲ.... ಆಗ ನನ್ನ ಗತಿ?.... ತನ್ನ ಆಲೋಚನೆಗೆ ತನಗೇ ನಗು ಬಂದಿತ್ತು.

ಂ ಂ ಂ

ಮದುವೆ ಮನೆಯಿಂದ, ಕೇಕೆ, ನಗು, ಕೂಗಾಟ ಗದ್ದಲ ಕೇಳಿ ಬರುತ್ತಿತ್ತು. ಉರುಟಣೆ ಉಯ್ಯಾಲೆಯ ಹಾಡುಗಳು, ಚಟಾಕಿಗಳು ಕೇಳಿ ಬರುತ್ತಿದ್ದವು. ಇದ್ದಕ್ಕಿದ್ದಂತೆ ಸ್ವಲ್ಪ ಮಟ್ಟಿಗೆ ಮೌನ ಆವರಿಸಿತ್ತು. ಹುಡುಗಿಯನ್ನು ಗಂಡನ ಮನೆಯವರಿಗೆ ಒಪ್ಪಿಸಿ ಕಳಿಸಿಕೊಡುವ ಸಂಭ್ರಮ. ಹೆಣ್ಣು ಹೆತ್ತವರ ಹೃದಯ ಭಾರವಾಗಿತ್ತು."ಎಮ್ಮ ಮನೆ ಅಂಗಳದಿ ಬೆಳೆದೊಂದು ಕೂಸನು ನಿಮ್ಮ ಮಡಿಲಿಗೆ.... ಹಾಡನ್ನು ಯಾರೋ ಮಧ್ಯೆ ಮಧ್ಯೆ ನಿಲ್ಲಿಸಿ ಹಾಡುತ್ತಿದ್ದರು. ಸುಧಾಳನ್ನು ಸಾಂಪ್ರದಾಯಿಕಾಗಿ ಮಹೇಶನ ತೊಡೆಯ ಮೇಲೆ ಕೂರಿಸಿ ಒಪ್ಪಿಸಿದ್ದರು. ಅವನ ತಂದೆ ತಾಯಿಯರಿಗೆ ನಿಮ್ಮ ಮನೆಯ ಸೊಸೆ, ಅವಳ ತಪ್ಪು ಒಪ್ಪುಗಳೇನೇ ಇದ್ದರೂ, ಮನದೊಳಗೆ ನುಂಗಿ, ನಿಮ್ಮ ಮಗಳೆಂದೇ ನೋಡಿಕೊಳ್ಳಿ ಎಂದು ಹೇಳಿ ಮಗಳನ್ನು ಒಪ್ಪಿಸಿಕೊಟ್ಟಿದ್ದರು. ಹೆಂಗಸರ ಕಣ್ಣುಗಳು ತೇವವಾಗಿ ಹನಿ ಉದುರಿದ್ದರೆ, ಗಂಡಸರು ದುಗುಡವನ್ನು ಮುಚ್ಚಿಡಲು ಆಗದೆ ಅತ್ತಿತ್ತ ನೋಡಿ, ಚಡಪಡಿಸುತ್ತಿದ್ದರು. ವಧೂವರರನ್ನು ಕೂರಿಸಿ ಆರತಿ ಎತ್ತಿ, ನಿವಾಳಿಸಿ ದೃಷ್ಟಿ

ನಿವಾಳಿಸಿ ತೆಗೆದರು. ನವದಂಪತಿಗಳು ಹಿರಿಯರೆಲ್ಲರಿಗೂ ನಮಸ್ಕರಿಸಿ ಆರ್ಶೀರ್ವಾದವನ್ನು ಪಡೆದರು. ಪರಸ್ಪರ ಉಡುಗೊರೆಗಳ ವಿನಿಮಯವಾಯಿತು... ಮಾಮೂಲಿನಂತೆ, ಸ್ವಲ್ಪ ಗುಸು ಗುಸು ಮುನಿಸು ಇತ್ಯಾದಿ ನಡೆದರೂ ಅಲ್ಲಲ್ಲೇ ಅಷ್ಟಷ್ಟರಲ್ಲೇ ನಿಂತಿತು.

ಸಾಯಂಕಾಲ ಆರತಕ್ಷತೆಯ ಕಾರ್ಯಕ್ರಮ ಇರಲಿಲ್ಲ. ವಧೂವರರನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಬೇಕಾಗಿದ್ದಿತು. ಬಂದಿದ್ದ ಕೆಲವು ನೆಂಟರು, ಆ ರಾತ್ರಿಯೇ ಊರಿಗೆ ಹೊರಡುವುದು ಇತ್ತು. ದತ್ತಾತ್ರೇಯ ಆ ರಾತ್ರಿಯ ರೈಲಿಗೆ ವಾಪಸ್ಸು ಹೋಗಬೇಕಾಗಿತ್ತು. ಅವನು ತನ್ನ ಅತ್ತೆ ಮಾವರನ್ನು ಕಂಡು ಮಾತನಾಡಿಸಲು ಬಂದ. "ಮಾವಾ ನಾನು ಈ ರಾತ್ರಿ ವಾಪಸ್ಸು ಹೊಂಟೇನಿ ರಾಧಾ ನಿಮ್ಮ ಕೂಡೆ ಬರೋಳಿದ್ದಾಳ್ರೀ ಹತ್ತು ದಿನ ಇಟ್ಕೊಂಡು ಕಳಿಸ್ರೀ..." ಎಂದ.

"ನಿಮ್ಮವ್ವ ಒಪ್ಯಾಳೇನೋ ದತ್ತಾ. ಆಮ್ಯಾಲೆ ಕಿರಿಪಿರಿ ಮಾಡಿದ್ರೆ ಏನ್ಮತಿ?

"ಹಂಗಲ್ರೀ ಮಾವ.... ರಾಧಾನ್ನ ನೋಡೀರೋ ಇಲ್ರೋ.... ಆಕಿ ಬಾಯಿಬಿಟ್ಟು ಏನೂ ಹೇಳೂದಿಲ್ಲ. ಮನದೊಳಗಾ ಕೊರಗ್ತಾಳ್ರೀ... ಅವಳೂ ತುಸು ಗೆಲುವಾಗ್ತಾಳ ನಾ ಅವ್ವಗ ಹೇಳೀನ್ರೀ...."

"ಕೊರಗು ಇಲ್ದೇ ಇರ್ತದೇನೋ ದತ್ತಾ.... ನೀ ಅಲ್ಲೆಲ್ಲೋ ದೇಶ ಕಾಯೋಕೆ ಹೋಗೀಯ. ... ಆಕಿ ಇಲ್ಲಿ ಅತ್ತೀ ಮಾವನ ಸೇವೆ ಮಾಡ್ಕೊಂಡ ಕಾಲ ಕಳೀತಾಳ ಎಷ್ಟೇ ಬ್ಯಾಸ್ರ ಇದ್ರೂ ಗಂಡನ ಮಾರೀ ನೋಡಿದ್ರ ಗೆಲವು ಬರ್ತದ. ಅದೇ ಇಲ್ಲ ಅಂತಂದ್ರ ಹೆಂಗಪ್ಪಾ.... ಲಗ್ನ ಆಗಿ ಎರಡು ವರ್ಷ ಆತು ಒಂದು ಕೂಸಾದ್ರೂ ಹುಟ್ಟಿದ್ದಿದ್ರೇ.... ಆಕಿ ಆಡಿಸ್ಕೊಂಡು ವ್ಯಾಳಿ ಕಳೆಯೋಳು."

"ಇದಕ ನಾ ಏನ ಹೇಳಲಿ ಮಾವಾರ..."ಅವನು ಕಸಿವಿಸಿಯಿಂದ ಹೇಳಿದ.

"ಸರೀಪ್ಪ. ನಾ ಈಕೀನ ನನ್ನೊಂದಿಗೆ ಕರೆದೋಯ್ತೇನ ಒಂದು ತಿಂಗಳ ದಿನನಾದ್ರೂ ನಮ್ಮ ಸಂಗ ಇರಲಿ.... ಯಾಕೋ ಏನೋ ಅವಳ ಆರೋಗ್ಯ ನೆಟ್ಟಗದ ಅಂತ ಅನ್ನಿಸೂದಿಲ್ಲ. ಸಣಕಲ ಕಡ್ಡಿ ಆಗ್ಯಾಳ ಡಾಕ್ಟರ ಷಾಪಿಗೆ ಕರೆದೊಯ್ದು ಟಾನಿಕ್‌ನಾರ ಕೊಡಿಸ್ಬೇಕು.... ನಿಮ್ಮವ್ವನ ಕೇಳಿದ್ರ, ಈಕಿಗೇನ ಕಡಿಮೆ ಆಗದ ಅಂತಾಳ...

ನಾ ರೊಕ್ಕ ಕೊಡ್ತೀನಿ ಮಾವಾರ... ಛಲೋ ಡಾಕ್ಟರ ಷಾಪಿಗೆ ಕರೆದೊಯ್ಯಿರಿ. ನಾನು ಆಕಿಗೆ ಪತ್ರ ಬರೆದು ವಿಚಾರಿಸ್ತೀನಂತ...ಹೇಳ. ಈಗ ನಾನು ಉಂಡು, ರೈಲ್ವೇ ಸ್ಟೇಷನ್ನಿಗೆ ಬಿರ್ರನೆ ಓಡಬೇಕಾಗದ.... ನಾ ಬರ್ಲೇನ ಮಾವಾ.... ಎನ್ನುತ್ತಾ ಅತ್ತೆ ಮಾವರ ಕಾಲಿಗೆ ನಮಸ್ಕರಿಸಿದ....

"ರಾಧಾ ಒಂಟಿಯಾಗ್ಯಾಳ, ಅವಳ ಕೈಯಿ ನಿನ್ನ ಕೈಯಾಗದ. ಅವಳ ರಕ್ಷಣೆ ಭಾರ ನಿನ್ನ ಮೇಲದ.... ಅವಳ ಕೈ ಬಿಡಬೇಡಪ್ಪಾ.... ಆಗ ಈಗ ಬಂದು ವಿಚಾರಿಸ್ಕೊಂಡು ಹೋಗಪ್ಪಾ...."ಅತ್ತೆ ಹೇಳಿದಳು.

"ಆಯ್ತು ಅತ್ತೀ..... ನೀವು ಚಿಂತಿ ಮ್ಯಾಡಬೇಡ್ರೀ...." ಎನ್ನುತ್ತಾ ಮಾನವ ಕೈಗೆ ಒಂದಿಷ್ಟು ಹಣವನ್ನು ಕೊಟ್ಟ. ಈಗ ಇಷ್ಟನ್ನು ಒಯ್ಯಿರಿ. ನಾನು ಮತ್ತ ನಿಮಗ ಮನಿ ಆರ್ಡರ್ ಮಾಡ್ತೀನ್ರೀ" ಎಂದು ಹೇಳಿದ. ಅಲ್ಲಿಂದ ರಾಧಾಳನ್ನು ಅರಸಿಕೊಂಡು ಬಂದ. ಕೆಲವು ಹೆಂಗೆಳೆಯರ ಮಧ್ಯೆ ಕುಳಿತಿದ್ದ ರಾಧಾ ಅವನ ಕಣ್ಣು ಸಂಜ್ಞೆಯನ್ನರಿತು ಅವನ ಬಳಿಗೆ ಬಂದಳು. ಅವಳನ್ನು ತೆರವಾಗಿದ್ದ ದಿಬ್ಬದ ಮನೆಗೆ ಕರೆದುಕೊಂಡು ಬಂದ. ಅವಳ ಮುಖ ದುಗುಡದಿಂದ ದಪ್ಪವಾಗಿತ್ತು. ಅವನು ಏನಾದರೂ ಮಾತನಾಡುವ ಮೊದಲೇ ಅತ್ತಳು.

"ಅಳ ಬೇಡ್ವೇ ನನ್ನ ರಾಧಾ.... ಹತ್ತು ದಿನ ಅಪ್ಪನ ಮನೇಲಿ ಹಾಯಾಗಿರು. ನಾನು ಅಲ್ಲಿಗೇ ಪತ್ರ ಬರೀತೀನಿ.... ರೊಕ್ಕ ಕಳಿಸ್ತೀನಿ ನಿಂಗ ಏನಬೇಕೋ ಆ ವಸ್ತು ತಗೋ.... ನಾನು ಮತ್ತೆ ವಾಪಸ್ಸು ಬರೋ ಹೊತ್ತಗೆ, ಗುಂಡಗೆ ಸೇಬಿನ ಹಣ್ಣಿನ ಥರ ಆಗಿರ್ಬೇಕು ನೋಡ... ಇಲ್ದಿದ್ರೆ ನಾನು ಮಾತನಾಡೋದೇ ಇಲ್ಲ...

"ನಂಗೇನಾಗಾತ್ರೀ ಜೋಪ್ಪಾರಾ... ಎಲ್ರೂ ಯಾಕ್ಹಿಂಗೆ ಆಗೀಯೇ ಅಂತ ಕೇಳೋವ್ರೇ.... ಅವ್ವ ಕೂಡಾ ಕೇಳಿದ್ಲು.... ನೀವು ಹೋಗಬ್ಯಾಡ್ರೀ... ಇಲ್ಲೇ ಇಲ್ರಿ..."

"ಹೋಗದಿದ್ರ ಹೆಂಗಾಗ್ತದಾ ಹುಚ್ಚೀ.... ನನ್ನ ಆಮದನಿ ಅಲ್ಲದ.ತಗೋ ಈ ರೊಕ್ಕ ಇಟ್ಕೋ... ಯಾರ್ಗೂ ಹೇಳೂದು ಬ್ಯಾಡಾ.... ನಾನು ಮತ್ತಷ್ಟು ಕಳಿಸ್ತೀನಿ... ಚೆನ್ನಾಗಿ ಹಾಲು ಕುಡಿ. ಹಣ್ಣು ತಿನ್ನು... ಲೇಡಿ ಡಾಕ್ಟರಗೆ ಹೋಗಿ ತಪಾಸಣೆ ಮಾಡಿಸ್ಕೋ.... ನವಮಿ ಹಬ್ಬಕೆ ಸೂಟಿ ಇರತದ. ಆಗ ಬರ್ತೀನಿ.... ಈಗ ನಾನು ಹೊರಡ್ಲೇನ ರಾಧಾ.... ಎನ್ನುತ್ತಾ ಅವಳ ಕೈ ಹಿಡಿದು ಅದುಮಿ, ಅವಳನ್ನು ತನ್ನ ಎದೆಗೊತ್ತಿಕೊಂಡ. ಅವಳ ಬೆನ್ನ ಮೇಲೆ ಕೈಯಾಡಿಸಿದ. ಅವಳು ಸೊರ ಸೊರ ಅಳುತ್ತಿರುವಳೆಂದು ಅರಿವಾಗಿತ್ತು. ನೀ ಹೀಗ ಅತ್ಕೊತ್ತಾ ಕೂತರೆ, ನಾ ಹೊರಡೋದು ಕಷ್ಟ ಆಗ್ಕೈತಿ.... ನಗುನಗ್ತಾ ಕಳಿಸ್ಕೊಡೇ ಪುಣ್ಯಾತ್ಗಿತ್ತೀ... ಇಲ್ದಿದ್ರೆ ನಂಗೂ ಬ್ಯಾಸ್ರ ಆಗ್ಕೈತಿ. ಸುಧಾನೂ ಗಂಡನ ಮನಿಗಿ ಹೊರಟ್ಯಾಳ ಅವ್ವಗ ಬ್ಯಾಳ ಬ್ಯಾಸ್ರ ಆಗ್ಕೈತಿ... ನೀನೇ ಆಕೀನ್ನ ಚೆನ್ನಾಗಿ ನೋಡ್ಕೋಬೇಕಲ್ಲಾ... ಹತ್ತು ದಿನ ಅಪ್ಪನ ಮನೀಲಿದ್ದು ಬ್ಯಾಗ ಬಂದ್ಬಿಡು..." ಹೆಂಡತಿಯನ್ನು ಮುದ್ದಿಸಿ ಸಮಾಧಾನಗೊಳಿಸಿದ. ಅವರಿಬ್ಬರೂ ಆ ಮನೆಯಿಂದ ಹೊರಬಿದ್ದುದನ್ನು ಮಂಗಳ ಕಂಡಳು. ಅವನನ್ನು ಮಾತನಾಡಿಸಬೇಕೆಂದು ಕೊಂಡರೂ, ಮದುವೆಗ್ಯಾಕೆ ಬರುಲ್ಲ ಎಂದು ಆಕ್ಷೇಪಣೆ ಮಾಡುತ್ತಾನೆಂದು ಮರೆಯಲ್ಲಿ ನಿಂತಳು. ಮಬ್ಬು ಕತ್ತಲೆಯಲ್ಲಿ ರಾಧಾಳ ಸೊಂಟವನ್ನು ಬಳಿಸಿ, ನಿಧಾನವಾಗಿ ಮಾತನಾಡುತ್ತಾ ಬರುತ್ತಿದ್ದವನನ್ನು ಕಂಡು, ಭಾವಿ ಪತಿಯ ನೆನಪಾಗಿತ್ತು.



ಪುಸ್ತಕಗಳ ಸಂದುಗೊಂದಿಯೆಲ್ಲ ಹುಡುಕಿದರೂ ಇನ್‌ಲ್ಯಾಂಡ್ ಲೆಟರ್

ಸಿಗಲಿಲ್ಲ. ಹಾಗೇ ಭಾವೀಪತಿ ಬರೆದ ಕಾಗದವನ್ನು ತಾನು ಓದಲೇ ಇಲ್ಲ ಎನ್ನುವುದು ನೆನಪಾಗಿತ್ತು. ಆ ದಿನ ದಿಬ್ಬದ ಮನೆಯತ್ತ ಓದಲೆಂದು ತೆಗೆದುಕೊಂಡು ಹೋಗಿದ್ದಾಗ ಎಲ್ಲೋ ಬಿದ್ದು ಕಳೆದು ಹೋಗಿತ್ತು. ಎಲ್ಲಿಂತ ಹುಡುಕುವುದು ಅಂತಂದುಕೊಂಡು ಸುಮ್ಮನಾಗಿದ್ದಳು. ಏನು ಬರೆದಿದ್ದನೋ.... ಸಿಕ್ಕಿದವರು ಓದಿದ್ದರೆ, ಏನಂದು ಕೊಂಡಾರು ? ಆ ನಂತರ ಮತ್ತೆ ಅವನಿಂದ ಪತ್ರ ಬಂದಿರಲಿಲ್ಲ... ಅವನಿಗೇನು ಕೋಪವೋ.... ನನ್ನ ಕಷ್ಟ ಅವನಿಗೇನು ಗೊತ್ತಾಗುತ್ತೆ ?... ಮನೆಯ ಕೆಲಸವೆಲ್ಲಾ ನನ್ನದೇ.... ನನಗಾಗಿ ಒಂದು ಹತ್ತು ನಿಮಿಷ ಸಹ ಸಮಯ ಸಿಗುವುದಿಲ್ಲ. ಅದು ಅವನಿಗೆ ತಿಳಿಯಬೇಡವೆ? ... ವಠಾರದಲ್ಲೇ ಮದುವೆ ನಡೆದರೂ, ಎಲ್ಲಾ ಕಾರ್ಯಕ್ರಮ ಗಳಿಗೂ ಹೋಗಲಾಗಲಿಲ. ಇವರುಗಳು ಏನಂದುಕೊಂಡಿರೋ...?

"ಏನು ಹುಡುಕ್ತಿದೇಯೇ ಅಕ್ಕಾ.... ನಾವೆಲ್ಲಾ ರೆಡಿಯಾಗಿದೀವಿ. ಮದುವೆ ಮನೆಗೆ ಹೋಗಿ ಬರೋಣ್ವಾ?..... ವನಜ ಕೇಳಿದಳು.

"ನಾನು ಮನೇಲಿ ಅಮ್ಮನ ಜತೇಲಿರ್ತೀನಿ. ನೀವುಗಳು ಹೋಗ್ಬನ್ನಿ.

"ಅಪ್ಪ ಇರ್ತಾರಂತೆ....ನೀವುಗಳೆಲ್ಲ ಹೋಗಿ ಊಟ ಮಾಡ್ಕೊಂಡು ಬನ್ನಿ ಅಂತ ಅವರೇ ಹೇಳಿದ್ರು. ಬೇಗ ರೆಡಿ ಮಾಡ್ಕೊ. ಬೇರೆ ಸೀರೆ ಉಟ್ಕೋ..."

"ಸರಿ...." ಎಂದು ಹೇಳಿ ಬೇಗ ಬೇಗ ತಲೆ ಬಾಚಿಕೊಂಡು, ಒಳ್ಳೆಯ ಸೀರೆ, ರವಿಕೆಗಳನ್ನು ತೊಟ್ಟು ಸಿದ್ಧಳಾದಳು. ತಂಗಿಯರನ್ನು ತಮ್ಮಂದಿರನ್ನು ಕರೆದುಕೊಂಡು ಹೊರಟಳು. ವಧುವಿಗೆಂದು ತಂದಿದ್ದ ಉಡುಗೊರೆಯ ವಸ್ತುವನ್ನು ಕೊಡಬೇಕೆಂದು ಹೇಳಿ ತಂದೆ ಅವಳ ಕೈಗೆ ಕೊಟ್ಟರು. ಅವರುಗಳು ಮಂಟಪದ ಮುಂಭಾಗಕ್ಕೆ ಬರುವ ಹೊತ್ತಿಗೆ ಸರಿಯಾಗಿ ದತ್ತ ಒಳಗಿನಿಂದ ಬಂದ. ಅವನು ಪ್ರಯಾಣಕ್ಕೆ ಸಿದ್ಧನಾಗಿದ್ದ.

"ಈಗ ಬರ್ತಾ ಇದೀರೇನ್ರೀ ಮಂಗಳಾರವರ.... ಯಾಕ್ರೀ, ಇಲ್ಲೇ ಎದುರಿಗೆ ಇದ್ದು ಲಗ್ನದ ಸಮಯಕ್ಕೆ ತಪ್ಪಿಸ್ಕೊಂಡ್ರಿ?" ಅವನು ಕೇಳಿದ... ಅವಳು ತಲೆ ತಗ್ಗಿಸಿದಳು.

"ಅಮ್ಮನ ಜತೇಲಿ ಯಾರಾದ್ರೂ ಇರ್ಬೇಕಲ್ಲ. ಅದಕ್ಕೇ ಅಕ್ಕ ಬರ್ಲಿಲ್ಲ. ಅದಕ್ಕೇ ಈಗ ನಾವೆಲ್ಲಾ ಒಟ್ಟಿಗೇ ಬಂದಿದೀವಿ" ಶಂಕರ ನುಡಿದ.

"ಸರಿ ಎಲ್ರೂ ಒಳಗೆ ಹೋಗಿ ಕುಂಡ್ರೀ ಊಟ ಉಂಡು ಹೋಗ್ರೀ ಹಾಗೇ ನಿಮ್ಮ ತಾಯಿ ತಂದೆಗೂ ಊಟಾನ ತಗೊಂಡು ಹೋಗ್ರೀ" ಹುಡುಗರು ಒಳಗೆ ಹೋಗಿದ್ದರು."ಮಂಗಳಾರವರೇ" ಅಂತ ಕರೆದು ಅವಳನ್ನು ನಿಲ್ಲಿಸಿದ. "ನಾನು ಈಗ ವಾಪಸ್ಸು ಹೊರಟೇನ್ರೀ, ರಾಧಾನೂ ಅವರಪ್ಪನ ಮನೆಗೆ ಹೊಂಟಾಳ್ರೀ... ಸುಧಾ ಅತ್ತಿ ಮನೆಗೆ ಹೊಂಟು ಹೋಗ್ತಾಳ್ರೀ.... ಅವ್ವಗ ಶಾನೇ ಬ್ಯಾಸ್ರ ಆಗ್ತದರ್ರೀ.... ಆಗ ಈಗ ಬಂದು ಮಾತಾಡಿಸ್ಕೊಂಡು ಹೋಗ್ರೀ...." ಆಗಲಿ ಎನ್ನುವಂತೆ ಅವಳು

ತಲೆಯಾಡಿಸಿದಳು. ಅವನು ತನ್ನ ಟ್ರಂಕನ್ನು ಎತ್ತಿಕೊಂಡು ಹೊರಟ. ರಾಧಾ ಬಾಯಿಯ ಕಡೆ ನೋಡಿ ತಲೆಯಾಡಿಸಿ ಬರ್ತೀನಿ ಎಂದ. ಅವಳು ಬಾಯಿಗೆ ಸೆರಗನ್ನು ಒತ್ತಿ ನಿಂತಿದ್ದಳು. ಮಂಗಳನಿಗೆ ಪಿಚ್ಚೆನ್ನಿಸಿತ್ತು. ಗಂಡ ಹೆಂಡತಿ ಒಟ್ಟಿಗೆ ಇದ್ದದ್ದೇ ಇಲ್ಲ. ಮಾತುಕತೆ ಇಲ್ಲ ; ತಿರುಗಾಟ ಇಲ್ಲ. ಈ ಬಾರಿಯಂತೂ ಒಬ್ಬರನ್ನೊಬ್ಬರು ಕಣ್ತುಂಬಾ ನೋಡಲೂ ಬಿಡುವಿರಲಿಲ್ಲ. ಸ್ವಲ್ಪ ಹೊತ್ತಿನ ಮೊದಲು ಇವಳನ್ನು ದಿಬ್ಬದ ಮನೆಗೆ ಕರೆದುಕೊಂಡು ಹೋಗಿ ಏನು ಹೇಳಿರಬಹುದು ? ಕೈಗೆ ಒಂದಿಷ್ಟು ದುಡ್ಡನ್ನು ಯಾರಿಗೂ ಕಾಣದಂತೆ ಕೊಟ್ಟಿರಬಹುದೇ ? ನಾಳೆ ನಾಡಿದ್ದರಲ್ಲಿ ಇವಳೂ ತವರು ಮನೆಗೆ ಹೊರಟು ಹೋದರೆ, ಮತ್ತೆಂದಿಗೆ ಬರ್ತಾಳೋ....ಇವಳೆಂದೂ ತನ್ನೊಂದಿಗೆ ಮಾತನಾಡಿದುದೇ ಇಲ್ಲ. ಯಾವಾಗ ನೋಡಿದ್ರೂ ಕೆಲಸ ಕೆಲಸ... ಬಟ್ಟೆ ಒಗಿ.... ಪಾತ್ರೆ ತೊಳಿ, ನೆಲ ಒರೆಸು ಮುಂಬಾಗಿಲು ಗುಡಿಸು... ಹೀಗೆ ಒಂದಲ್ಲ ಒಂದು ಮನೆ ಕೆಲಸವೇ.... ಆರಾಮವಾಗಿ ಕೂತಿದ್ದನ್ನೇ ಕಂಡಿಲ್ಲ. ಹೆಚ್ಚು ಕಡಿಮೆ ಇವಳು ನನ್ನ ವಯಸ್ಸಿನವಳೇ ಇರಬಹುದು. ಇವಳಿಗೆ ಅತ್ತೆ ಮನೆಯಲ್ಲಿ ಕೆಲಸ, ನನಗೆ ಅಮ್ಮನ ಮನೆಯಲ್ಲಿ ಕೆಲಸ.... ಅಪರೂಪಕ್ಕೊಮ್ಮೆ ಬರುವ ಗಂಡನೊಡನೆ ಕಾಲ ಕಳೆಯಲು ಇವಳಿಗೆ ಸಮಯವಿಲ್ಲ; ತನ್ನಿಂದ ಪ್ರೇಮಪತ್ರಗಳನ್ನು ನಿರೀಕ್ಷಿಸುವ ಭಾವೀ ಪತಿಗೆ ಪತ್ರವನ್ನೂ ಬರೆಯಲು ತನಗೆ ಸಮಯವಿಲ್ಲ... ದಿನೇ ದಿನೇ ಮುಂದೂಡುತ್ತಿದ್ದೇನೆ.... ನಾಳೆ ವನಜಳ ಕೈಯಲ್ಲಿ ಒಂದಿಷ್ಟು ಇನ್‌ಲ್ಯಾಂಡ್ ಲೆಟರ್‌ಗಳನ್ನು ತರಿಸ್ಕೋಬೇಕು.. "ಹೀಗೆ ತನ್ನಲ್ಲೇ ಆಲೋಚಿಸುತ್ತಾ ನಿಂತವಳನ್ನು ರಾಧಾಬಾಯಿ ಎಚ್ಚರಿಸಿದಳು.

"ಒಳಕ್ಕ ಬರ್ರೀ...." ಎಂದು ಕರೆದಳು. ಪಕ್ಕದಲ್ಲೇ ನಿಂತಿದ್ದವಳನ್ನು ಮಂಗಳ ನೋಡಿದಳು. ಮುಖದಲ್ಲಿ ನಿಸ್ತೇಜ ಕಳೆ ಇತ್ತು.ಇವಳ್ಯಾಕೆ ಹೀಗಿದ್ದಾಳೇ ?.... ಕೆಲಸ ಮಾಡೀ ಮಾಡಿ ಸವೆದು ಹೋಗಿದ್ದಾಳೆ.... ತಾನೂ ಮನೆ ಕೆಲಸ ಮಾಡೀ ಮಾಡಿ ಮದುವೆಗೆ ಮೊದಲೇ ಸವೆದು ಹೋದರೇ.... ತನ್ನ ಗಂಡ ತನ್ನನ್ನು ಪ್ರೀತಿಸದೇ ಹೋದರೇ... ? ಇವಳ ಗಂಡ ಹಾಗಲ್ಲ. ಇವಳು ಹೇಗೇ ಇದ್ದರೂ ಇವಳನ್ನು ತುಂಬಾ ಪ್ರೀತಿಸುತ್ತಾನೆ ಅಂತ ಅನ್ನಿಸುತ್ತೆ.... ಆದರೆ ಇವಳು ಅವನಿಗೆ ತಕ್ಕ ಪತ್ನಿ ಅಲ್ಲ. ಕಟ್ಟುಮಸ್ತಾಗಿ ಸಿನಿಮಾ ಹೀರೋಥರ ಇರುವವನಿಗೆ ಸಣಕಲ ಕಡ್ಡಿ ಅಂಥ ಹೆಂಡ್ತಿ... ! ಇವಳ್ಯಾಕೆ ಹೀಗಾಗಿದಾಳೆ ಅಂತ ಯಾರೂ ಯೋಚೀಸುವುದಿಲ್ಲವೆ ?....

"ಅಕ್ಕ ಇಲ್ಲೇ ನಿಂತ್ರಲ್ಲಾ... ಬರ್ರೀ..." ಸೀತ ಹೊರಬಂದು, ಕೈಹಿಡಿದು ಒಳಕ್ಕೆ ಕರೆದೊಯ್ದಳು... ರಾಧಾ ಮತ್ತೆಲ್ಲಿಗೋ ಹೊರಟು ಹೋದಳು.

"ಸೀತಾ.... ಈ ಉಡುಗೊರೇನ ನಿನ್ನ ಅಕ್ಕಂಗೆ, ನಮ್ಮ ತಂದೆ ರಾಮರಾಯರು ಕೊಟ್ಟಿದ್ದು ಅಂತ ಹೇಳಿ ಕೊಟ್ಬಿಡು..." ಎಂದು ಅವಳ ಕೈಗಿತ್ತಳು...

"ನೀವೇ ಕೊಡ್ರಿ ಅಕ್ಕಾ... ಸುಧಾಕ್ಕನ್ನ ಮಾತನಾಡಿಸೋಲ್ವಾ?...."

"ಈಗ ಏನು ಮಾತಾಡ್ತೋದು... ಅವಳ ಗಂಡನೂ ಜತೇಲಿದಾರಲ್ಲ... ನನಗೆ ಅವರ ಪರಿಚಯವೇ ಇಲ್ಲ... ನಮ್ಮ ಪರವಾಗಿ ನೀನೇ ಕೊಟ್ಬಿಡು ಪರವಾಗಿಲ್ಲ." ಎಂದು ಹೇಳಿ ಅವಳನ್ನು ಕಳಿಸಿ, ತಾನು ತನ್ನ ತಂಗಿಯರು ಕುಳಿತಿದ್ದೆಡೆಗೆ ಬಂದಳು. ಅಲ್ಲಿ ಕುಳಿತುಕೊಳ್ಳಲು ಜಾಗವೇ ಇರಲಿಲ್ಲ. ಹಾಗೇ ನಿಂತಳು.... ಅಷ್ಟರಲ್ಲಿ ಯಾರೋ ಬಂದು ಕರೆದರು. "ಎಲೆ ಹಾಕದೆ, ಉಣ್ಣುಕ್ಕೆ ಬರ್ಬೇಕಂತ್ರೀ" ಅಂತ. ಮಂಗಳ ಕೆಳದನಿಯಲ್ಲಿ ವನಜಳನ್ನು ಕರೆದಳು. ಎಲ್ಲರೂ ಒಬ್ಬರ ಹಿಂದೆ ಒಬ್ಬರು ಎಲೆ ಹಾಕಿದ್ದ ಕಡೆಗೆ ಬಂದರು. ಜಾಗ ಹಿಡಿದು ಸಾಲಾಗಿ ಕುಳಿತರು. ಅಡಿಗೆಯವರು ಬಡಿಸಲಾರಂಭಿಸಿದರು.

ಮದುವೆ ಮನೆಯಿಂದ ಬಂದಿದ್ದ ಊಟವನ್ನು ಮಾಡುವಾಗ ಚಂದ್ರೂಗೆ ಪಂಕಜಳ ನೆನಪಾಗಿತ್ತು. ಅವಳು ಮದುವೆಗೆ ಹೋಗುವುದಿಲ್ಲವೆಂದಿದ್ದಳು. ಅವಳಿಗೆ ಯಾರಾದರೂ ಊಟ ತಿಂಡೀನ ಕರೆದು ಕೊಟ್ಟಿದಾರೋ ಇಲ್ಲವೋ.... ತನಗೆ ಈ ಮೈಲಿಗೆ ಒಂದು ಇಲ್ಲದೇ ಇದ್ದಿದ್ದರೇ.... ತನಗ್ಯಾಗೆ ಈ ಕಟ್ಟು ಪಾಡೋ? ಹುಟ್ಟಿದ್ದು ಯಾರ ಮನೆಯಲ್ಲೋ....? ಈ ವಂಶದವರ ಮನೇಲಿ ಬೆಳೆದೆ ಎನ್ನುವ ಕಾರಣಕ್ಕೆ ಇದನ್ನು ಅನುಸರಿಸಬೇಕಾಗಿದೆ... ಅಮ್ಮನ ಮನಸ್ಸಿನಲ್ಲಿ ಏನು ಸುತ್ತುತ್ತಿರಬಹುದು ?.... ಆಕೆಯ ಕಡೆ ಕಳ್ಳ ನೋಟವನ್ನು ಬೀರಿದ. ಆಕೆ ಮೌನವಾಗಿ ಉಣ್ಣುತ್ತಿದ್ದಳು.... ಮಡಿ ಮಡಿ ಎಂದು ಯಾರೊಂದಿಗೂ ಬೆರೆತು ಕುಳಿತು ಊಟ ಮಾಡಿದ್ದಿಲ್ಲ.... ಜತೆಗೇ ದೊಡ್ಡಸ್ತಿಕೆ ಬೇರೆ.... ಈಗ ಅದೆಲ್ಲವನ್ನು ಬದಿಗಿಟ್ಟು ಹೀಗೆ ಮೌನದಿಂದ ಊಟ ಮಾಡುತ್ತಿದ್ದಾರೆಂದರೇ.... ಒಳಗೊಳಗೇ ನಗು ಬಂದಿತ್ತು.... ನೆತ್ತಿ ಹತ್ತಿತ್ತು.... ಆಕೆ ಇತ್ತ ತಿರುಗಿದಳು.

"ನಿಧಾನವಾಗಿ ಊಟ ಮಾಡ್ಬಾರ್ದಾ? ಅವಾಂತರ ಏನು ?... ಎಂಜಲು ಹಾರಿತೋ ಏನೋ ?..... ಆಕೆ ಸಿಡುಕಿದಾಗ, ಅವನಿಗೂ ರೇಗಿತು. ಕೆಮ್ಮುತ್ತಿದ್ದವನು ಬಾಯ ಮೇಲೆ ಕೈಯನ್ನಿಟ್ಟುಕೊಂಡು ಎದ್ದು ಬಿಟ್ಟ. ದೂರಸರಿದು ನಿಂತ.

ಈ ಹೊತ್ನಲ್ಲೂ ಈಕೆಗೆ ಎಂಜಲು, ಮುಸುರೆ, ಮಡಿ ಇದೇ ಚಿಂತೆ.... ಒಂದು ದಿನವೂ ಪ್ರೀತಿಯಿಂದ ಒಂದು ತುತ್ತು ಅನ್ನವನ್ನು ನನಗೆ ತಲೇನ, ತಿನ್ನಿಸಿರಲಾರಳು. ನಾನು ಕುಳಿತದ್ದೇ ತಪ್ಪು.... ಎಂದುಕೊಂಡು ಕೆಮ್ಮಿ ಕೆಮ್ಮಿ ಗಂಟಲನ್ನು ಸರಿ ಮಾಡಿಕೊಂಡ... ಆಕೆಯೂ ಅನುಮಾನದಿಂದ ತಿನ್ನುವುದನ್ನು ನಿಲ್ಲಿಸಿದ್ದಳು. ಇವನೂ ಎದ್ದುಬಿಟ್ಟಿದ್ದ. ಆಕೆ ಎದ್ದು ಕೈ ತೊಳೆದುಕೊಳ್ಳಲೆಂದು ನಲ್ಲಿ ಕಟ್ಟೆಯ ಬಳಿಗೆ ಹೋಗಿದ್ದಾಗ, ಇವನೂ ತನ್ನ ಎಲೆಯನ್ನು ಮುದುರಿ, ಹೊರಬಂದು ಬೀದಿಗೆ ಎಸೆದಿದ್ದ. ಕೈ ತೊಳೆದು, ಉಳಿದುದನ್ನು ಅಲ್ಲಿಯೇ ಮುಚ್ಚಿ ತೆಗೆದಿಟ್ಟು, ನೆಲವನ್ನು ಶುಚಿಗೊಳಿಸಿದ. ತನ್ನ ಅತಿರೇಕವೋ, ಆಕೆಯ ಅಹಂಕಾರವೋ ಒಟ್ನಲ್ಲಿ ಇಬ್ಬರಿಗೂ ಅರೆ ಊಟ ಅಂತಂದುಕೊಂಡ. ಹೊರಗೆ ಬಂದು ಮೆಟ್ಟಿಲ ಮೇಲೆ ಕುಳಿತ.

ತಾನೇಕೆ ಈ ಪರಿಸ್ಥಿತಿಗಳಿಗೆ ಸಿಕ್ಕಿಬಿದ್ದೆ ! ತನ್ನ ಆಪ್ತರು ಅಂತ ತನಗೆ ಯಾರೂ ಇಲ್ಲ. ಮನಬಿಚ್ಚಿ ಮಾತನಾಡಲು ಯಾರೂ ಇಲ್ಲ. ಅಪ್ಪ ಬಂದ ಕೂಡಲೇ ತಾನು ಊರಿಗೆ ಹೋಗಿ ಬಿಡುತ್ತೇನೆ. ಇಲ್ಲಿ ಇರಲು ಮಾತ್ರ ಸಾಧ್ಯವಿಲ್ಲ ಅಂತ ತನ್ನಲ್ಲೇ ಅಂದುಕೊಂಡ.

"ಊಟ ಆಯ್ತಾ ಸರ್...." ಜೋಷಿಯ ಮಗ ವಿನಾಯಕ ಬಂದು ಮಾತನಾಡಿಸಿದ. 'ಹೂಂ' ಆಯ್ತು ಎನ್ನುವಂತೆ ಗೋಣು ಆಡಿಸಿದ....

"ನಾನು ವಿನಾಯಕ ಜೋಷಿ ರೀ... ಜೋಷಿಯವರ ಎರಡನೇ ಮಗ ದಾವಣಗೆರೇಲಿ.... ಕಾರ್ಖಾನೇಲಿ ಕೆಲಸದಲ್ಲಿದೇನ್ರೀ... ನಾಳೆ ಬೆಳಿಗ್ಗೆ ಹೊರಟು ಬಿಡ್ತೀನ್ರೀ... ಲಗ್ನದ ಸಲುವಾಗಿ ಬಂದಿದ್ನರೀ...."

"ಸರಿ...."ಎಂದ ಚಂದ್ರು.

"ಯಾಕ್ರೀ.... ಮೈಯಾಗ ಆರಾಮ ಇಲ್ಲೇನು? ದನಿ ಬೇರೆ ಕೆಟ್ಟೈತಿ..."ಎನ್ನುತ್ತಾ ಹಣೆಯನ್ನು ಮುಟ್ಟಿ ನೋಡಲು ಬಂದ. ಇವನು ಹಿಂದಕ್ಕೆ ಸರಿದ...

"ಮುಟ್ಬೇಡಿ..." ನಂಗೇನೂ ಆಗಿಲ್ಲ... ನಮಗೆ ಮೈಲಿಗೆ ಇದೆ..."

"ಓ.... ಹೌದೇನ್ರೀ... ನಂಗೆ ತಿಳೀಲಿಲ್ರೀ.... ಯಾರೂ ತೀರಿ ಹೋಗ್ಯಾರೆ ?"

"ನಮ್ಮ ತಾತನ ಅಣ್ಣ... ನಂಗೆ ದೊಡ್ಡ ತಾತಾ ಆಗ್ಬೇಕು..."

"ನೀವು ಹೋಗಲಿಲ್ಲೇನ್ರೀ ಎಷ್ಟು ದಿನ ಆತು ?"

"ಇಲ್ಲ ನಾನು ಹೋಗ್ಲಿಲ್ಲ.... ನಮ್ಮ ತಂದೆ ಹೋಗಿದ್ದಾರೆ..."ಸಹನೆಯಿಂದ ನುಡಿದ.

"ಹಾಗಾರೆ ಒಬ್ರೇ ಇದೀರೇನ್ರೀ...."

"ಇಲ್ಲಪ್ಪಾ.... ನಮ್ಮ ತಾಯಿ ಇದಾರೆ..." ಗಡುಸಾಗಿ ಹೇಳಿದ.

"ಯಾಕ್ರೀ ಕೋಪ ಬಂತೇನ್ರೀ.... ತಾತನ ಮ್ಯಾಗೆ ಪ್ರೀತಿ ಭಾಳ ಅಂತ ಕಾಣಿಸ್ತೈತಿ ನೋಡ್ಲಿಕ್ಕಾಗ್ಲಿಲ್ಲ ಅಂತ ಬ್ಯಾಸ್ರನೇನ್ರೀ...."

"ಇಲ್ಲಪ್ಪಾ.... ಬೇಸರ ಏನೂ ಇಲ್ಲ.... ಏನೋ ಯೋಚಿಸ್ತಾ ಕೂತಿದ್ದೆ. ನಿದ್ದೆ ಬರ್ತಿದೆ. ಹೋಗಿ ಮಲಕ್ಕೋತೀನಿ" ಎದ್ದ.

"ಹಂಗಾರ ಬರ್ತೀನ್ರೀ..." ಕೈ ಮುಗಿದು, ಇವನೂ ಕೈ ಮುಗಿದ. ಈ ಜನಗಳೋ ಒಂದು ಗಳಿಗೆ ಕೂತ್ಕೊಳ್ಳೋಕೂ ಬಿಡುಲ್ಲ ಎಂದು ಗೊಣಗಿಕೊಂಡ. ಅವನು ಅತ್ತ ಹೋದ ಕೂಡಲೇ ಇವನು ಮತ್ತೆ ಕುಳಿತ... ಅವನು ಹತ್ತು ನಿಮಿಷದೊಳಗೆ ಹಿಂತಿರುಗಿದ್ದ. ಸಿಗರೇಟಿನ ವಾಸನೆ ಬಡಿಯುತ್ತಿತ್ತು... ಅವನು ಸಿಗರೇಟು ಸೇದಿ ಬರಲು ಹೋಗಿದ್ದ ಎಂದು ಊಹಿಸಿದ.

"ಇಲ್ಲೇ ಕುಂತೀರಲ್ರೀ.... ನಿದ್ದಿ ಬರ್‍ತೈತಿ ಅಂತ ಅಂದ್ರೀ...." ಪ್ರಶ್ನಿಸಿದ.

"ನಾನು ಇಲ್ಲಿ ಕೂತಿದ್ರೆ ನಿಮಗೇನಾದ್ರೂ ತೊಂದರೇನಾ?" ರೋಷದಿಂದ ಕೇಳಿದ.

"ಛೇ ಹಂಗ್ಯಾಕೆ ಅಂತೀರ್ರಿ..... ನನ್ನೊಂದಿಗೆ ನೀವೂ ಬರಬಹುದಾಗಿತ್ರೀ.... ಗಾಳಿ ಸೇವನೆಗೆ...."ನಗುತ್ತಾ ನುಡಿದ.

"ನನಗೆ ಸಿಗರೇಟು ಸೇದುವ ಅಭ್ಯಾಸ ಇಲ್ಲ".

"ಓ.... ಹೋ....ಹೋ....ಪತ್ತೆ ಮಾಡ್ಬಿಟ್ರೇನ್ರೀ.... ಹೆಂಗೆ ಗೊತ್ತಾತು ?.... ನೀವು ಕುಡಿಯೋದಿಲ್ಲ ಸಿಗರೇಟನ್ನು ಅಂದ್ಮ್ಯಾಲೆ..."

"ವಾಸನೆ ಬಡೀತಿದೆ...." ಮೂಗಿನ ಮುಂದೆ ಕೈಯಾಡಿಸಿಕೊಂಡ....

"ಏನ್ಮಾಡುದ್ರೀ... ಊರ್ನಿಂದ ದೂರ ಒಬ್ಬನೇ ಬೇರೆ ಊರ್ನಾಗಿದೀನಿ.... ಅಲ್ಲಿ ನಂಗೆ ಭಾಳ ಮಂದಿ ಗೆಳೇರು.... ಅವ್ರೆಲ್ಲಾ ಅಭ್ಯಾಸ ಹಚ್ಚಿಸ್ಬಿಟ್ರು ನೋಡ್ರೆಲ್ಲಾ... ನಂಗೂ ಗೊತ್ತೈತ್ರೀ ಸಿಗರೇಟು ಕುಡಿಯೋದು ಕೆಟ್ಟದು ಅಂತ... ಆದರೆ ಹಿಡಿದು ಬಿಟ್ಟೇನ್ರೀ... ಬಿಡೋದ್ಹ್ಯಾಗೆ ?.... ಹಿರಿಯೋರ್ಗೆ ಕಾಣದ್ಹಂಗೆ ಕುಡಿದು ಬರ್ತೀನಿ.... ಮನಿಗೆ ಹೋಗಿ ತಾಂಬೂಲ ಜಗೀತೀನ್ರೀ... ಯಾರ್ಗೂ ಪತ್ತೇನೇ ಆಗೂದಿಲ್ರೀ..."

ಚಂದು ಸುಮ್ಮನೇ ಕುಳಿತಿದ್ದ." ಯಾಕ್ರಪ್ಪಾ.... ಮುನಿಸ್ಕೊಂಡಂಗೈತಿ.... ನಿಮ್ಮಾಕೀ ತವರಿಗೆ ಹೋಗ್ಯಾಳೇನು ?... ಒಬ್ಬರೇ ಅದಿರೇನು ? ಭಾಳ ಬೇಸ್ರದಾಗಿದೀರಪ್ಪಾ.... ಏನ್ಕತೆ?" ಅವನು ಕಿಸಕ್ಕನೆ ನಗುತ್ತಾ ನುಡಿದದ್ದು ಇವನಿಗೆ ಸರಿ ಹೋಗಲಿಲ್ಲ.

"ನನಗೆ ಇನ್ನು ಮದುವೆ ಆಗಿಲ್ಲ. ನನಗೆ ಯಾವ ಬೇಸರವೂ ಇಲ್ಲ. ನೀವು ಸುಮ್ನೇ ಹೋಗ್ತೀರಾ?"

ತಮಾಷೆಗೆ ಅಂದೆನ್ರೀ.... ನಂಗೆ ನಿದ್ದೆ ಬರೂ ಹಂಗಿರ್ಲಿಲ್ರೀ.... ಹಂಗೇ ಬಂದೆನ್ರೀ. ... ಇಲ್ಲಿ ಮನ್ಯಾಗೆ ಮಲಗ್ಲಿಕ್ಕೆ ಜಾಗಾನೇ ಇಲ್ರೀ.... ದಿಬ್ಬದ ಮನೆಗೆ ಹೋಗ್ಬೇಕ್ರೀ... ಇವತ್ತು ಆ ಮನೀಗೆ ಮಲಗಾಕೆ ದತ್ತಣ್ಣನೂ ಬರೂದಿಲ್ಲ. ಅವ ಊರಿಗೆ ಆಪಸ್ಸು ಹೊಂಟೋದನ್ರೀ... ನಮ ಚಿಗಪ್ಪನ ಮಕ್ಕಳೂ ಹೊಂಟೋದರ್ರೀ.... ಒಬ್ಬರಿಗೇ ನಿದ್ದೆ ಹತ್ತೂದಿಲ್ರೀ..... ಭಯ ಆಗ್ತೈತ್ರೀ.... ಗೆಳೇರ ಜತಿ ಮಲಗಿ ಅಭ್ಯಾಸರೀ....

ಚಂದ್ರು ಸುಮ್ಮನೇ ತನಗಲ್ಲ ಎನ್ನುವಂತೆ ಕುಳಿತಿದ್ದ. "ನಿಮಗೊಂದು ಸುದ್ಧಿ ಗೊತ್ತೇನ್ರೀ.... ಆ ಮನ್ಯಾಗೆ ದೆವ್ವ ಇದೆ ಅಂತ ಹೇಳ್ತಾರ್ರೀ ಹೌದೇನ್ರೀ...." ಚಂದ್ರು ಇತ್ತ ತಿರುಗಿ ಅವನನ್ನೇ ನೋಡಿದ ಈ ಸುದ್ಧಿ ಅವನಿಗೂ ಹೊಸದೇ.... ಹಾಗಂತ ಹಬ್ಬಿಸಿದೋರು ಯಾರೋ.... ಅವನಿಗೂ ಸ್ವಲ್ಪ ಭಯ ಆಗಿತ್ತು.

"ಏನು ದೆವ್ವಾನಾ? ಯಾರ್ರೀ ಹೇಳಿದ್ದು ನೆನ್ನೆ ಮೊನ್ನೆ ಎಲ್ಲಾ ನೀವುಗಳು ಮಲಗಿದೀರಿ.... ಯಾರಾದ್ರೂ ದೆವ್ವಾನ ಕಂಡ್ರಾ?"

"ಕಾಣ್ಲಿಲ್ಲಿಲ್ರೀ....ಪಿಸು ಮಾತು ಕೇಳಿಸ್ತಿತ್ತಂತ್ರೀ... ನೀವು ಈ ವಠಾರದ ಮಾಲೀಕರ ಮಗ ಅಲ್ಲೇನ್ರೀ ನಿಮಗೆ ತಿಳಿದಿರಬಹುದು ಅಂತ ಕೇಳಿದ್ನರೀ.... ನಿಮಗೂ ದೆವ್ವ ಅಂದರ ಭಯಾನೇನ್ರೀ...?"

"ಇಲ್ಲ. ನಂಗೇನೂ ಭಯ ಇಲ್ಲ.... ನಂಗೆ ಈ ವಿಷಯ ಗೊತ್ತಿರ್ಲಿಲ್ಲ..."

"ನಿಮ್ಮ ತಾಯಿ ನಿಮಗೆ ಈ ಸುದ್ದಿ ತಿಳಿಸಿರ್ತೀನ್ರೀ...

"ನಾನು ಈ ಊರ್ನಲ್ಲಿ ಇಲ್ಲೇ ಇಲ್ಲ. ಹಾಗೆಲ್ಲ ದೆವ್ವ ಗಿವ್ವ ಸುದ್ಧಿ ಹಚ್ಚಿಸ್ಬೇಡಿ.... ನಿಮ್ಮನೆಯೋರು ಮದುವೆಗೆ ಅಂತ ಸುಣ್ಣಬಣ್ಣ ಮಾಡಿಸಿ, ರಿಪೇರಿ ಮಾಡಿಸ್ಕೊಂಡಿದಾರೆ.... ನಿಮಗೆ ಯಾರು ಹೇಳಿದ್ರು?....

"ನಮ್ಮ ಕಾಕಾಗೆ ಯಾರೋ ಕೆಲಸದವ್ರು ಹೇಳಿದ್ರಂತ್ರೀ..."

"ಯಾರ್‍ಯಾರೋ ಹೇಳಿದ ಮಾತನ್ನ ನಂಬಬೇಡಿ.... ಅದೆಲ್ಲ ಸುಳ್ಳು... ಎಷ್ಟೋ ವರ್ಷಗಳಿಂದ ಇಲ್ಲಿ ಜನರು ವಾಸ ಮಾಡ್ಕೊಂಡಿದ್ದಾರೆ. ಹಾಗೆಲ್ಲ ಸುಳ್ಳು ಸುದ್ದೀನ ಹರಡಬೇಡಿ. ವಠಾರದ ಜನ ಹೆದರ್‍ತಾರೆ.... ಅಷ್ಟೂ ಗೊತ್ತಾಗ ಬೇಡ್ವೇನ್ರಿ ನಿಮಗೆ?"

"ಹೋಗ್ಲಿ ಬಿಡ್ರೀ... ನಿವ್ಯಾಕೆ ತಲಿ ಕೆಡಿಸ್ಕೋಳ್ತೀವಿ... ನಾನು ಎರಡು ದಿನ ಇದ್ದು ವಾಪಸ್ಸು ಊರಿಗೆ ಹೋಗೋವವ... ನೀವೂ ಇಲ್ಲಿ ಇರೋದಿಲ್ಲ... ನಮಗ್ಯಾಕೆ ಅಲ್ವೇನ್ರೀ... ಆದರೂ ನಿಮಗೆ ಒಂದ್ಮಾತು ಕೇಳೋವ ಅಂತನ್ನಿಸ್ತು... ಕೇಳ್ದೆ... ನಾ ಬರ್ಲೇನ್ರೀ..."

"ಹುಂ.... ಹೊರಡಿ.... ಇವತ್ತು ರಾತ್ರಿ ನೀವು ಆ ಮನೇಲಿ ಏನಾದ್ರೂ ವಿಶೇಷ ಕಂಡ್ರೆ ನನಗೆ ತಿಳಿಸಿ. ಬೇರೆ ಯಾರ್ಗೂ ಹೇಳ್ಬೇಡಿ".

"ಆಯ್ತೀ ಸರ...." ವಿನಾಯಕ ಹೊರಟು ಹೋಗಿದ್ದ. ಚಂದ್ರು ತಲೆ ಕೆಡಿಸಿಕೊಂಡ. ದೆವ್ವ ಭೂತಗಳ ಬಗ್ಗೆ ಅವನಿಗೆ ನಂಬಿಕೆ ಇರಲಿಲ್ಲ. ಆದರೆ ಆ ಬಗ್ಗೆ ಎಷ್ಟೋ ಮಂದಿ ಭಯ ಪಡುವುದನ್ನು ಕೇಳಿದ್ದ... ಹಾಗಾಗಿ ಆ ವಿಷಯವನ್ನು ತಳ್ಳಿಯೂ ಹಾಕಲಾರ... ಆ ದಿಬ್ಬದ ಮನೆಯ ಎದುರಿಗೇ ಪಂಕಜಳ ಮನೆ... ಅವಳಿಗೆ ಈ ಬಗ್ಗೆ ತಿಳಿದಿದೆಯೇ?..... ಅವಳಿಗೆ ಭಯವಿದ್ದರೆ .....? ಒಬ್ಬಳೇ ಬೇರೆ ಇದ್ದಾಳೆ.... ಕೇಳಿದರೆ ಸರಿಯೊ ?| ಕೇಳದಿದ್ದರೆ ಸರಿಯೋ....? ಇನ್ನೂ ಅಲ್ಲೇ ಕೂತಿದ್ದರೆ, ಮತ್ತೆ ಆ ವಿನಾಯಕ ಬಂದು ತನ್ನ ಸೊಂಡಿಲನ್ನು ತೋರಿಸಿಯಾನು ಎಂದುಕೊಂಡು ಎದ್ದು ಒಳಗೆ ಬಂದು ಬಾಗಿಲನ್ನು ಭದ್ರಪಡಿಸಿದ... ಲಕ್ಷ್ಮಿದೇವಮ್ಮ ಮಲಗುವ ಸನ್ನಿಹದಲ್ಲಿದ್ದಳು... ಯಾರದು ಅಷ್ಟೊತ್ತು ಮಾತಾಡ್ತಾ ನಿಂತಿದ್ದದ್ದು ?" ಚಂದ್ರುವನ್ನೂ ಕೇಳಿದಳು.

"ಜೋಷಿಯವರ ಮಗ...." ಉದಾಸೀನವಾಗಿ ಮಾತಾಡಿದ.

"ಮಿಲಟರೀಲಿ ಇದಾನಲ್ಲ ಅವನು ತಾನೇ ?...."

"ಅಲ್ಲ, ಇನ್ನೊಬ್ಬ...." ಎಂದು ಹೇಳಿ ಮಾತನ್ನು ಮುಂದುವರೆಸಲು ಇಚ್ಚಿಸದೇ,

ತನಗೂ ಒಂದು ಚಾಪೆಯನ್ನು ಹಾಸಿಕೊಂಡು, ದಿಂಬಿಗೆ ತಲೆ ಊರಿ, ಹೊದಿಕೆಯನ್ನು ಮೈ ಮೈಲೆ ಎಳೆದುಕೊಂಡ. ಹಿಂದಿನರಾತ್ರಿ ಪಂಕಜಳ ಮನೆಯಲ್ಲಿ ಹಾಸಿಗೆಯ ಮೇಲೆ ಮಲಗಿದ್ದುದು ನೆನಪಿಗೆ ಬಂತು... ಚಾಪೆ ಒತ್ತುತ್ತಿದೆ ಎಂದೆನ್ನಿಸಿತ್ತು.

ಹಾಸಿಗೆಯ ಮೇಲೆ ಮಲಗಿದರೆ ಏನಾಗುತ್ತೆ ? ಅದಕ್ಕೆಂಥ ಮೈಲಿಗೆ ?... ಅಷ್ಟಕ್ಕೂ ಈ ಮೈಲಿಗೆ ಎಂದರೇನು ?.... ಆ ತಾತಾ ಸತ್ತದ್ದು ಅಲ್ಲೆಲ್ಲೋ... ತಾನು ನೋಡಲಿಲ್ಲ.... ತಾನು ರಕ್ತ ಸಂಬಂಧಿಯಲ್ಲ.... ಹಾಗಿದ್ದರೂ ತಾನೇಕೆ ಈ ಆಚರಣೆ ಯನ್ನು ಅನುಸರಿಸಬೇಕು?.... ತನ್ನ ಪಾಡಿಗೆ ತಾನು ಹಾಸಿಗೆಯನ್ನು ಹಾಸಿಕೊಂಡು ಮಲಗಲೆ ? ಎಂದುಕೊಂಡರೂ, ಯಾಕೋ ಧೈರ್ಯ ಬರಲಿಲ್ಲ....

ನಾಳೆ ಅಪ್ಪ ಊರಿಗೆ ವಾಪಸ್ಸು ಬರಲಿ... ತಾನು ಹೊರಟು ಬಿಡ್ತೀನಿ.... ಅಲ್ಲಿ ನಾರಾಯಣ ಚಿಕ್ಕಪ್ಪನ ಮನೇಲಿ ಇಷ್ಟು ಮಡಿ ಇಲ್ಲ.... ಈ ಅಮ್ಮನಿಗಿಂತ ಚಿಕ್ಕಮ್ಮ ಎಷ್ಟೋ ವಾಸಿ ಅಂತಂದುಕೊಂಡ.... ಇದ್ದಕ್ಕಿದ್ದಂತೆ ಇನ್ನೊಂದು ಆಲೋಚನೆಯೂ ಹೊಳೆಯಿತು ತಾನು ಜನ್ಮ ಎತ್ತಿದ ಮನೆಗೇ ಹೋದರೆ ಹೇಗೆ ?..... ಎಷ್ಟೋ ವರ್ಷ ಗಳಾಯಿತು ಅವರುಗಳನ್ನು ನೋಡಿ... ಅವರುಗಳನ್ನು ನೋಡಬೇಕೆಂಬ ಆಸೆ ನನಗಿಲ್ಲ. ನಾನು ಅವರನ್ನು ದ್ವೇಷಿಸುತ್ತೇನೆ.... ಒಂದು ಸಾರಿ ಅವರ ಎದುರಿಗೆ ನಿಂತು ಹೀಗ್ಯಾಕೆ ಮಾಡಿದಿರಿ ?.... ನನ್ನನ್ನು ಇವರ ಮನೆಗೆ ಮಾರುವ ಹಕ್ಕು ನಿಮಗೆ ಇರಲಿಲ್ಲ ಎಂದು ಚೆನ್ನಾಗಿ ಛೀಮಾರಿ ಹಾಕಬೇಕು ಅಂತಂದುಕೊಂಡ. ಮನಸ್ಸಿಗೆ ಸ್ವಲ್ಪ ಹಿತವೆನಿಸಿತ್ತು. ನಿಧಾನವಾಗಿ ನಿದ್ದೆ ಆವರಿಸಿತು.

○ ○ ○

ಮದುವೆ ಮನೆಯ ಸಂಭ್ರಮ ಮಂಗಳ ಹಾಡಿತ್ತು. ದಿಬ್ಬಣ ಹೊರಟಿತ್ತು. ಜೋಷಿಯ ಮನೆಯವರು ಮಗಳನ್ನು ಭಾರವಾದ ಹೃದಯದಿಂದ ಗಂಡನ ಮನೆಗೆ ಕಳಿಸಿಕೊಟ್ಟರು. ಮೂರು ದಿನಗಳ ಸಡಗರ, ಗದ್ದಲವಿಲ್ಲದೇ, ವಠಾರದಲ್ಲಿ ಒಂದು ರೀತಿಯ ಮೌನ ಆವರಿಸಿತ್ತು. ಆಯಾಸವನ್ನು ಕಳೆದುಕೊಳ್ಳಲು ಎಲ್ಲರೂ ಆರಾಮವಾಗಿ ಕುಳಿತಿದ್ದರು. ರಾಧಾಬಾಯಿಯನ್ನು ಅವಳ ತಂದೆ ತಾಯಿಯರೊಂದಿಗೆ ಕಳಿಸಿಕೊಡಲಾಗಿತ್ತು. ಹಾಗಾಗಿ ಮನೆಯ ಕೆಲಸಗಳು ಕೂಡಾ ಅಲ್ಲಲ್ಲೇ ಕುಳಿತಿತ್ತು.

"ಸುಧಾನೂ ಗಂಡನ ಮನಿಗೆ ಹೊಂಟೋದ್ಲು. ನೆಂಟರೆಲ್ಲಾ ಅವರವರ ಊರಿಗೆ ಹೊರಟೋದ್ರು.... ರಾಧಾ ಬಾಯೀನ ನಾಕು ದಿನ ಬಿಟ್ಟು ಕಳಿಸಿದ್ರೆ ಛಲೋ ಇರ್ತಿತ್ತು. ಮನಿ ಭಣ ಭಣ ಅಂತಿವೆ.... ತಟ್ಟೆ ಲೋಟ ಕೂಡಾ ಹಂಗಂಗೆ ಬಿದ್ದವೆ..." ಹಿರಿಯ ಅಕ್ಕ ಗೊಣಗಿದಾಗ ತುಂಗಾಬಾಯಿಗೂ ಅದು ಸರಿ ಎನಿಸಿತ್ತು.

"ಹೌದು ಅಕ್ಕಾ, ನೀವು ಹೇಳೋದೂ ಖರೇ ಅದ... ದತ್ತ, ವಿನಾಯಕ ಎಲ್ರೂ ಹೊಂಟೋದ್ರು ರಾಧಾಬಾಯಿನಾದ್ರೂ ಇದ್ದಿದ್ರೆ ಸಣ್ಣ ಪುಟ್ಟ ಕೆಲಸ ಮಾಡಿಕೊಡ್ತಿದ್ಲೋ

ಏನೋ....ತಮ್ಮಗ ಏನವಸರ ವಿತ್ತ ? ಮಾರನೇ ದಿವಸಾನೇ ರಾಧಾನ ಕರೆದೊಯ್ದ್ರು. ದತ್ತ ಹೇಳಿದ್ನಂತ ಈಕೀನೂ ಹೊಂಟೋದ್ಲು... ಮನಿ ಸೊಸಿ ಅಂದ್ಮೇಲೆ ಜವಾಬ್ದಾರಿ ಬೇಡ್ವಾ ? ಕುಣ್ಕೋತಾ ಹೊಂಟೇ ಬಿಟ್ಲು..."

ಹೋಗ್ಲಿ ಬಿಡವ್ವಾ ಆಕಿಗೆ ಜವಾಬ್ದಾರಿ ಇಲ್ಲ ಅಂದ್ಹಂಗಾತು. ನಾವಿಬ್ರೂ ಇಲ್ಲೇ ಇರ್ಬೇಕಲ್ಲ. ಎಲ್ಲಿಗೆ ಹೋಗೋಣು...? ಓಡಾಡಿ ಓಡಾಡಿ ಕೈಕಾಲು ಬಿದ್ದು ಹೋಗದ ಸೊಂಟ ನಿಲ್ಲೂದಿಲ್ಲ ಅನ್ಸೈತಿ.... ನಿನ ಭಾವ, ನಿನ ಗಂಡ ಎತ್ಲಾಗೆ ಹೋದ್ರೋ....?"

"ಅವ್ರಿಗೂ ಆಯಾಸ ಆಗದ. ಆದ್ರ ನಮ್ಹಂಗೆ ಹೇಳಕೊಳ್ಳೋದಿಲ್ಲ.... ಮನಿ ತುಂಬಾ ಮಕ್ಕಳವೆ... ಯಾರೂ ಸಹಾಯಕ್ಕಿಲ್ಲ.... ಎಲ್ರಿಗೂ ಅವರವರ ಚಿಂತೆ...... ನಮ್ಮನ್ನು ಕೇಳೋರ್‍ಯಾರು ? ಅವನ ಪತ್ರ ಬರೆಸಿದ್ರೆ ಬರ್ತಿದ್ನೋ ಏನೋ? ನಿಟ್ಟುಸಿರು ಬಿಟ್ಟಳು.

"ಯಾರಿಗಕ್ಕಾ ?..... ನೆಂಟರಿಗೆಲ್ಲಾ ಮರೀದ್ಹಂಗ ಪತ್ರ ಹಾಕಿದ್ರಲ್ಲ...."

"ಅವನೇ.... ಮನೀ ಬಿಟ್ಟು ದೇಶಾಂತರ ಹೋಗಿ ಮಠ ಸೇರ್‍ಕೊಂಡ್ಯಾನಲ್ಲ ಅವಗ..... ಅಪ್ಪ ಅಮ್ಮ ಕಕ್ಕ ಕಕ್ಕಿ ನೆನಪೇ ಆಗ್ತದೋ ಇಲ್ಲೋ ಅವಗೆ..."

"ಅವನ ಸುದ್ಧಿ ಎತ್ತಬ್ಯಾಡ್ರೀ ಅಕ್ಕಾ.... ಹೊಟ್ಟೇಲೆಲ್ಲಾ ಕಲಕಿದ್ಹಂಗ ಆಗ್ತದ.... ಅಷ್ಟು ಹೊಟ್ಟೆ ಉರಿಸ್ಯಾನ.... ಅವ ಬಂದರೆಷ್ಟು ಬಿಟ್ಟರೆಷ್ಟು?....

"ಹಂಗಲ್ಲೇ ತುಂಗಾ.... ಮಠ ಅಂತ ಸೇರ್‍ಕೊಂಡ್ಯ ಮೇಲೆ ಅವರ ಪ್ರತಿಷ್ಠಿ ಹೆಚ್ಚಾಗೈತಿ. ಜನ ಭಾಳ ಮರ್‍ಯಾದೆ ಕೊಡ್ತಾರು.... ಒಂದು ಗಮ್ಮತ್ತು ಇರ್ತದ."

"ಏನು ಗಮ್ಮತ್ತು ಅಕ್ಕಾ.... ನನ್ನ ಮಗ ಸನ್ಯಾಸಿಯಾಗಿ ಮಠ ಸೇರ್‍ಕೊಂಡಾನ ಅಂತ ಮಂದಿಗೆ ತಿಳಿಯೋದೇ ಬೇಡ.... ನಂಗೆ ಅವನ ಮಾತು ಬೇಡ...."

"ಸರಿ ಬಿಡವ್ವಾ.... ಏನೋ ನಂಗ ಅನ್ನಿಸಿದ್ದನ್ನ ಹೇಳ್ದೆ.... ಒಬ್ಬ ದೇಶ ಸೇವೆ ಮಾಡ್ಲಿಕ್ಕೆ ಹೋಗ್ಯಾನ.... ಇನ್ನೊಬ್ಬ ಈಶ ಸೇವೆ ಮಾಡ್ಲಿಕ್ಕೆ ಹೋಗ್ಯಾನ.... ಇನ್ನು ಈ ವಿನಾಯಕನ ಕತಿ ಏನೋ.... ಭಾಳ ಷೋಕಿ ಮಾಡ್ತಾನೆ.... ಅಡ್ಡಾಡಿದ್ರೆ ಶೆಂಟಿನ ವಾಸ್ನಿ ಮೂಗಿಗೆ ಬಡೀತೈತಿ.... ಅವಗ ಬ್ಯಾಗ ಲಗ್ನ ಮಾಡಿ ಬಿಡು.... ಇಲ್ದಿದ್ರೆ.... ಯಾರನ್ನಾದ್ರೂ ಕಟ್ಕೊಂಡು ಬಂದು ನಿನ್ನ ಎರಡ್ನೆ ಸೊಸಿ ಅಂತ ತೋರಿಸ್ತಾನ...."

"ಹಿಂಗೆಲ್ಲಾ ಹೆದರಿಸ್ಬ್ಯಾಡ್ರೀ ಅಕ್ಕಾ.... ಅವ ಯಾರನ್ನೋ ಈಕಿ ನಿನ್ನ ಸೊಸೆ ಅಂದ್ರ ನಾನು ಮನಿಗೆ ಸೇರಿಸ್ತೀನಾ?.... ಆಚೆಗೆ ಅಟ್ತೇನಿ.... ಅವ ಇನ್ನು ಚಿಕ್ಕವನಿದ್ದಾನ.....

"ಏನು ಚಿಕ್ಕವ ? ಮೀಸಿ ಗಡ್ಡ ಬೆಳೆದಾವ ನಿನ ಗಂಡಗ ಈ ವಯಸ್ಗೆ ದತ್ತ ಹುಟ್ಟಿದ್ದ ಹೌದಲ್ಲೋ...." ತುಂಗಾ ನಾಚಿದ್ದಳು.

"ಆ ಕಾಲದ ಮಾತು ಬ್ಯಾರೇನೇ ಇತ್ತು ಅಕ್ಕಾ...."

"ಯೌವನ ಬಂದಾಗ, ಗಂಡಿಗಾಗ್ಲೀ ಹೆಣ್ಣಿಗಾಗ್ಲೀ.... ಕಾಲ ಬದಲಾಗೂದಿಲ್ಲ. ನನ್ನ ಮಾತನ್ನು ಕೇಳು. ವಿನಾಯಕಗೆ ಲಗೂನೇ ಲಗ್ನ ಮಾಡು.... ಆಗ ಅವ ಸರಿ ಹೋಗ್ತಾನ.... ಇಲ್ದಿದ್ರೆ ಅಷ್ಟೇ...."

"ಅಂಥಾದ್ದೇನು ಮಾಡ್ದ ನನ ಮಗ ?"

"ಸಿಗರೇಟನ್ನ ಕುಡೀತಾನ.... ನಾನೇ ಕಂಡೆ.... ಆ ದಿಬ್ಬದ ಮನೆಯಾಗ ಮರೇಲಿ ನಿಂತು ಕುಡೀತಿದ್ದ.... ನನ್ನನ್ನ ಕಂಡು, ಸಿಗರೇಟನ್ನು ಬಿಸ್ಹಾಕಿ ಕಾಲಲ್ಲಿ ಹೊಸಕಿ ಹಾಕ್ದ...."

"ನೀವು ಝಾಡಿಸಿ ಬೈಯಬೇಕಾಗಿತ್ತು ಅಕ್ಕಾ.... ಅವ ಕೆಟ್ಟ ಹಾದಿ ಹಿಡಿದಾನಂದ್ರ.... ನೀವು ಸುಮ್ನಿದ್ರಾ?....."

"ಅವ ನನ್ನ ಸ್ವಂತ ಮಗನಲ್ಲ.... ನಾನು ಎಷ್ಟಾಗಲೀ ಹೆತ್ತ ತಾಯಿ ಅಲ್ಲ.

"ಆದ್ರೇನಕ್ಕಾ ಕೈಯಾರ ಉಣಿಸಿ ಬೆಳ್ಸಿದೀರಿ ಹೌದಲ್ಲೋ.... ನಂಗಿಂತ ಹೆಚ್ಚು ಹಕ್ಕು ನಿಮಗದ.... ಹೋಗ್ಲಿ ಇದನ್ನ ಭಾವನ ಕಿವಿಗೆ ಹಾಕಬೇಡ್ರೀ.... ಕೋಪದಾಗ ಏನಾದ್ರೂ ಅಂದು, ಅವನೂ ಮನೆ ಬಿಟ್ಟು ಹೊಂಟೋದ್ರ ನಾ ಹ್ಯಂಗ ಇರೋದು ? .... ನೀವು ಹೇಳೋದು ಖರೇ ಅದ... ಅವಗ ಬೇಗ ಲಗ್ನ ಮಾಡಿ ಬಿಡುವ ಗೆಳೇರು ಏನೇನೋ ಹಚ್ಚಿ ಕೊಡ್ತಾರಾ.... ಇಲ್ದಿದ್ರೆ ಇವಗೆ ಏನು ತಿಳೀತೈತಿ?....

"ಅದಕ್ಕ ಹೇಳೋದು ಮಕ್ಳನ್ನ ನಮ್ಮ ಕೂಡಾನೇ ಇಟ್ಕೋ ಬೇಕು ಅಂತ...."

"ಹಂಗೆ ಹೆಂಗೆ ಆಗ್ತೈತಿ ಅಕ್ಕಾ.... ನೀವೇನೋ ಸುಲಭವಾಗಿ ಹೇಳ್ತೀರಿ.... ಇಲ್ಲಿ ಕೂತ್ರೆ ಹೊಟ್ಟೆ ತುಂಬ್ತದಾ?..... ಬೆಳೆಯುವಾಗ ಮನೆ ತುಂಬಾ ಮಕ್ಕಳು ಎಲ್ರಿಗೂ ಅರಿ ಹೊಟ್ಟೆ ಊಟ.... ಇನ್ನೊಂದು ತುತ್ತು ಕೇಳಿದ್ರ ಇಲ್ಲ ಅಂತ ಹೇಳೂಕ್ಕೆ ಹೊಟ್ಟೆ ನೋಯ್ತಿತ್ತು. ಅದಕ ತಾನೇ ಅವ ಜಗಳ ಆಡ್ಕೊಂಡು ಮನಿ ಬಿಟ್ಟು ಓಡಿ ಹೋದದ್ದು. ದತ್ತ ಮಿಲಟರಿ ಸೇರಿದ್ದು. ವಿನಾಯಕ ಬೇರೆ ಊರಿಗೆ ಹೋದದ್ದು.... ನೀವು ಆರಾಮ ವಾಗಿದೀರಿ ಅಕ್ಕಾ.... ನಿಮಗೆ ಒಂದೇ ಚಿಂತಿ.... ಮಕ್ಕಳಿಲ್ಲ ಅಂತ.... ನನಗೆ ನೂರು ಚಿಂತಿ...." ಕಣ್ಣೊರೆಸಿಕೊಂಡಳು.

"ಅಳಬ್ಯಾಡ್ವೇ ತುಂಗಾ.. ನಿನ ಮಕ್ಕಳನ್ನ ನನ ಮಕ್ಕಳಂತೆ ನಾನೂ ಬೆಳೆಸೀನಿ ಹೌದಲ್ಲೋ. ... ಹೊತ್ತಿಲ್ಲ, ಹೆತ್ತಿಲ್ಲ, ಹಾಲೂಡಿಸಿಲ್ಲ ಖರೇ. ಆದ್ರೂ ನಂಗೂ ಕರುಳು ಅಂತ ಒಂದೈತಿ. ಅವ ಮನಿ ಬಿಟ್ಟು ಹೋದಾಗ, ನಾನೂ ನಿನ್ನಷ್ಟೇ ಕೊರಗೇನಿ. ಸುಧಾನ್ನ ಅತ್ತೀ ಮನೆಗೆ ಕಳಿಸಿ ಕೊಡುವಾಗ ನಾನೂ ಕಣ್ಣೀರ ಕೋಡಿ ಹರಿಸೀನಿ. ನಂಗೂ ಇವೇ ಮಕ್ಕಳು.... ನಾನು ಸುಖವನ್ನು ಉಂಡೇನಿ, ಕಷ್ಟವನ್ನು ನುಂಗೇನಿ...." ಹೇಳುತ್ತಾ ಹೇಳುತ್ತಾ ಗದ್ಗದಿತಳಾದಳು.

ಓ....ಹೋ.... ಏನು, ಅಕ್ಕ ತಂಗಿ ಇಬ್ರೂ ಆರಾಮಾಗಿ, ಅಡಿಗಿ ಊಟದ ಚಿಂತಿ

ಇಲ್ಲದೆ ಹರಟೆ ಹೊಡೀತಾ ಕುಂತುಬಿಟ್ರೆ... ಏಳ್ರೀ.... ಬಿಸಿಲ್ನಲ್ಲಿ ದಣಿದು ಬಂದೇವಿ..... ಆಸರಿಗಿಷ್ಟು ಕೊಟ್ಟು, ಎಲಿ ಹಾಕಿ ಉಣ ಬಡಿಸಿ.... ಏಳಿ ಏಳಿ... "ಹಿರಿಯ ಜೋಷಿ, ಉಸ್ಸೆಂದು, ಶಲ್ಯದಿಂದ ಗಾಳಿಯನ್ನು ಬೀಸಿಕೊಳ್ಳುತ್ತಾ ಕುಳಿತಾಗ, ಅಕ್ಕ ತಂಗಿಯರಿಬ್ಬರೂ ಕಣ್ಣೀರನ್ನು ಒರೆಸಿಕೊಂಡು ಎದ್ದರು.

○ ○ ○

"ಬಿಡುವಾಗಿದ್ದರೆ, ಒಂದ್ಗಳಿಗೆ ಬರ್ಬೇಕಂತೆ" ಅಂತ ಮಂಗಳನ್ನ ಕರೆದು ಬಾ...." ಲಕ್ಷ್ಮಿದೇವಮ್ಮ ಚಂದ್ರೂಗೆ ಹೇಳಿದಳು ಚಂದ್ರುಗೆ ಬೇಸರವೆನಿಸಿದರೂ, ಎದ್ದು ಹೊರಟ. ಒಂದು ಆಕೆಯ ಮಾತನ್ನು ಮೀರುವಂತಿಲ್ಲ.... ಇನ್ನೊಂದು..... ಆಕೆಯ ಎದುರಿನಿಂದ ಎದ್ದು ಹೋಗಲು ಒಂದು ಕಾರಣ ಬೇಕಾಗಿತ್ತು.... ಮತ್ತೊಂದು.... ಬೇರೆ ಹೊರಗಿನವರೊಡನೆ ಮಾತನಾಡಿದರೆ ಮನಸ್ಸಿನ ಬೇಸಕ ಕಳೆಯುತ್ತದೆ ಎನ್ನುವ ಕಾರಣದಿಂದ ಎದ್ದು ನಡೆದ.

"ಅತ್ತೇ ಕರೀತಿದಾರೆ ಬರ್ಬೇಕಂತೆ" ಬಾಗಿಲು ತೆರೆದವಳಿಗೆ ಹೇಳಿದ.

"ಏನಂತೆ ?...." ಅವನನ್ನೇ ನೋಡುತ್ತಾ ಪ್ರಶ್ನಿಸಿದಳು.

"ನಂಗೊತ್ತಿಲ್ಲ... ನೀವೇ ಬಂದು ಕೇಳಿ..... ಬರುಕ್ಕೆ ಇಷ್ಟವಿಲ್ಲದಿದ್ರೆ ಹೇಳಿಬಿಡಿ. ಹಾಗೇ ಹೇಳಿ ಬಿಡ್ತೀನಿ...."

"ಸರಿ ಬರ್ತೀನಿ. ಸುಮ್ಮನೆ ಕೇಳಿದೆ.... ಎಂದು ಹೇಳಿ, ತಾಯಿಗೆ ತಿಳಿಸಿ ಹೊರಟಳು. ಅವನು ಹೊರಟು ಹೋಗಿದ್ದ. ಅತ್ತೇ..... ಕರೆದ್ರಂತೆ.... ಏನಾದ್ರೂ ಬೇಕಾಗಿತ್ತಾ" ದೂರದಲ್ಲಿ ನಿಂತು ಕೇಳಿದಳು.

"ನಿಂಗೆ ಪಗಡೆ ಆಟ ಆಡೋಕೆ ಬರುತ್ತಾ?.... ಒಂದಾಟ ಆಡೋಣ ಬರ್ತೀಯಾ?... ಕೂತು ಕೂತು ಬೇಜಾರಾಗ್ತಿದೆ...." ಅವಳಿಗೆ ನಗು ಬಂದಿತ್ತು. ಆದರೆ ನಗುವಂತಿಲ್ಲ... ಅವನ ಕಡೆ ನೋಡಿದಳು...." ಯಾಕೆ ಅನುಮಾನಿಸ್ತಾ ಇದೀಯ?"....

"ಅಮ್ಮಂಗೆ ಹೇಳ್ಬಿಟ್ಟು ಬರ್ತೀನಿ. ಆಟಕ್ಕೆ ಕೂತರೆ ಎಷ್ಟೊತ್ತಾಗುತ್ತೋ ಏನೋ....?"

"ಸರಿ ಹಾಗೇ ಎರಡು ಬಟ್ಟಲು ಕಾಫಿ ಮಾಡ್ಕೊಂಡು ತಗೊಂಡು ಬಾ.... ನೀನೂ ಕುಡಿದ್ಬಿಟ್ಟು ಬಾ...." ಅವಳು ಮತ್ತೊಮ್ಮೆ ಚಂದ್ರು ಕಡೆ ನೋಡಿ, ಮಂದಹಾಸವನ್ನು ಬೀರುತ್ತಾ ಹೊರಟಳು.... ಚಂದ್ರು ಬೆರಗಾಗಿ ಅವಳನ್ನೇ ನೋಡಿದ. ಈ ಹುಡುಗಿಗೆ ಎಷ್ಟು ಸಹನೆ ?.... ಅತ್ತೆ ಹೇಳಿದಂತೆ ಯಾಕೆ ಕೇಳಬೇಕು? ಅಂತಂದುಕೊಂಡ.

ಸ್ವಲ್ಪ ಹೊತ್ತಿನ ನಂತರ ಕಾಫಿಯನ್ನು ಫ್ಲಾಸ್ಕಿಗೆ ತುಂಬಿಸಿಕೊಂಡು ಬಾಲುವನ್ನು ಎತ್ತಿಕೊಂಡು ತಿರುಗಿ ಬಂದಳು. "ಇವನನ್ನೂ ಕರ್ಕೊಂಡು ಬಂದಿದೀಯಲ್ಲ.... ಆಟ ಆಡಗೊಡಿಸ್ತಾನಾ ? ಕೆಡಿಸಿ ಬಿಟ್ಟರೆ?" ಲಕ್ಷ್ಮಿದೇವಮ್ಮ ಕೇಳಿದಳು.

"ಇಲ್ಲ ಅತ್ತೆ.... ಕೆಡಿಸುಲ್ಲ. ಮನೇಲಿ ಅಮ್ಮನ್ನ ಗೋಳು ಹೊಯ್ದುಕೊಳ್ತಾನೆ. ಅವರ್‍ಯಾರೂ ಸ್ಕೂಲ್ನಿಂದ ಇನ್ನೂ ಬಂದಿಲ್ಲ. ಕಾಫಿ ಕುಡಿದು ಬಿಡಿ. ಬಿಸಿ ಬಿಸಿ ಆಗಿದೆ. ಫ್ಲಾಸ್ಕಿನಿಂದ ಬಟ್ಟಲುಗಳಿಗೆ ಬಗ್ಗಿಸಿ ಕೊಟ್ಟಳು. ಅಲ್ಲೇ ಇದ್ದ ಚಂದ್ರೂಗೂ ಕೊಟ್ಟಳು.

"ಅಲ್ಲಿ ಗೂಡಿನಲ್ಲಿ ಪಗಡೆ ಹಾಸು, ಪಗಡೆ ಕಾಯಿ, ದಾಳಗಳನ್ನು ಇಟ್ಟಿರುವ ಡಬ್ಬಿ ಇದೆ. ತಗೊಂಡ್ಬಾ" ಮಂಗಳಾ, ಒಂದು ಪ್ಯಾರೀ ಪೆಪ್ಪರ್‌ಮೆಂಟ್‌ಗಳನ್ನಿಡುತ್ತಿದ್ದ ಡಬ್ಬಿಯನ್ನು ತಿರುಗಿಸಿ ಮುರುಗಿಸಿ, ಅದರ ಮೇಲಿದ್ದ ಚಿತ್ರಗಳನ್ನು ನೋಡುತ್ತಾ ತಂದಿಟ್ಟಳು.

"ಸೀಮೆ ಸುಣ್ಣ ಇದ್ದರೆ, ಮನೆಗಳನ್ನು ಬರೆದು ಬಿಡ್ತೀನಿ.... ಪಗಡೆ ಹಾಸು ಬಟ್ಟೆಯದಲ್ವಾ ಅತ್ತೇ...."

"ಬೇಡ.... ಸೀಮೆಸುಣ್ಣದಲ್ಲಿ ನೆಲದ ಮೇಲೆ ಬರೆದರೆ ಸಾಲ ಆಗುತ್ತೆ. ಹಾಸೇ ಇರಲಿ. ನಾನು ಮುಟ್ಕೊಳ್ಳೋದೇ ಇಲ್ಲ. ಗರ ನಾನು ಹಾಕ್ತೀನಿ... ನೀನು ಕಾಯಿಯನ್ನು ನಡೆಸೂವಂತೆ.... ಸರಿ... ಎಲ್ಲಾ ಕಾಯಿಗಳನ್ನು ಸರಿಯಾಗಿ ಹೂಡಿಬಿಡು."ಅಷ್ಟರಲ್ಲಿ ಬಾಲು ಬಣ್ಣ ಬಣ್ಣವಾಗಿದ್ದ ಡಬ್ಬಿಯ ಮೇಲೆ ಕೈಯಾಡಿಸುತ್ತಿದ್ದ. ಡಬ್ಬೀನ ಇತ್ಲಾಗೆ ಇಸ್ಕೋ.... ಹಾಳು ಮಾಡಿ ಬಿಡ್ತಾನೆ.. ಗೀಚು ಮಾಡಿ ಬಿಡ್ತಾನೆ.... ನೋಡು ಹೇಗೆ ಹೊಸದರಂತೆ ಇದೆ...." ಲಕ್ಷ್ಮಿದೇವಮ್ಮ ಹೆಮ್ಮೆಯಿಂದ ಹೇಳಿಕೊಂಡಳು.

ಡಬ್ಬಿಯನ್ನು ಅವನಿಂದ ಮರೆಯಾಗಿಟ್ಟುಕೊಂಡ ಕೂಡಲೇ, ಅವನು ಹಠ ಮಾಡತೊಡಗಿದ..... ಇವನು ಹೀಗೆ ಹಠ ಮಾಡಿದರೆ, ಆಟ ಆಡುಕ್ಕೆ ಆಗುತ್ತಾ ? ಚಂದ್ರೂ ಇವನನ್ನು ಕರ್ಕೊಂಡ್ಹೋಗಿ, ಹಣ್ಣು, ಹೂವು, ಹಕ್ಕಿಪಕ್ಕಿ ತೋರಿಸ್ಕೊಂಡು ಬಾ.... ಯಾವುದಾದ್ರೂ ಆಟದ ಸಾಮಾನು ಇದ್ದಿದ್ರೆ ಕೊಟ್ಟು ಆಡ್ಕೋ ಅಂತ ಕೂರಿಸ್ಬಹುದಾಗಿತ್ತು... ನಮ್ಮ ಮನೇಲಿ ಚಿಕ್ಕ ಮಕ್ಕಳ ಆಟದ ಸಾಮಾನುಗಳೇ ಇಲ್ಲ...." ಮಂಗಳಾ ಸರ್‍ರನೆ ತಲೆ ಎತ್ತಿ ನೋಡಿದಳು. ಕೆಲವು ದಿನಗಳ ಹಿಂದೆ, ಗೋಪಾಲಯ್ಯ ತಂದುಕೊಟ್ಟು ಮತ್ತೆ ವಾಪಸ್ಸು ತೆಗೆದುಕೊಂಡು ಹೋದ ಆಟದ ಎತ್ತಿನಗಾಡಿಯ ನೆನಪಾಗಿತ್ತು. ಅಷ್ಟರಲ್ಲಿ ಚಂದ್ರು ಬಂದು ಬಾಲುನ್ನು ಎತ್ತಿಕೊಂಡ. "ಭೂ ಹೋಗಣ ಬಾ..." ಬಾಲು ಮೊದಲಿಗೆ ಹಠ ಮಾಡಿದರೂ ಎತ್ತಿಕೊಂಡು ಹೊರಟ ಮೇಲೆ ಸುಮ್ಮನಾದ... ಮಂಗಳಾ ಹಾಸನ್ನು ಹಾಸಿ, ಕಾಯಿಗಳನ್ನು ಹೂಡಿದಳು. "ನಾನು ಮೊದಲು ಆಡ್ತೀನಿ...." ಆಕೆ ದಾಳಗಳನ್ನು ಎತ್ತಿಕೊಂಡು ಹೊಸೆದಾಗ, ಇವಳಿಗೆ ನಗು ಬಂದಿತ್ತು.

"ಸರಿ.... ಆಡಿ ಅತ್ತೇ...." ಎಂದಳು ಲಕ್ಷ್ಮಿದೇವಮ್ಮ ದಾಳಗಳನ್ನು ಉರುಳಿಸಿ ದಳು. ಚಾಪೆ ಹಾಸಿಕೊಂಡಿದ್ದರೆ ಸದ್ದಾಗುತ್ತಿರಲಿಲ್ಲವೆಂದು ಅನ್ನಿಸಿತ್ತು.

ನೆಲದ ಮೇಲೆ ದಾಳ ಕಟ ಕಟ ಸದ್ದು ಮಾಡುತ್ತೆ ತುದಿಯೆಲ್ಲಾ ಹಾಳಾಗುತ್ತೆ.

ಒಂದು ಹಳೇ ಪೇಪರ್‍ರು ಇದ್ದರೆ ಕೊಡು...." ಎನ್ನುತ್ತಾ ಗರವನ್ನು ಎಣಿಸಿದಳು.

"ನಾಲ್ಕು ಮೂರು.... ಏಳು.... ಬೆಸ ಬಿದ್ದಿದೆ. ದೇವರಿಗೆ ಬಿಟ್ಟು ನಾನು ಮತ್ತೆ ಆಡ್ತೀನಿ" ಎನ್ನುತ್ತಾ ಮಂಗಳಾ ತಂದಿಟ್ಟ ದಿನಪತ್ರಿಕೆಯ ಮೇಲೆ ದಾಳಗಳನ್ನು ಉರುಳಿಸಿದಳು. ಮೂರು... ಮೂರು... ಆರು ಇತ್ತಗ... ಕಾಯಿ ನಡೆಸು ಪರವಾಗಿಲ್ಲ. .. ಜೋಡಿ ಕಾಯಿ ನಡೆಸು....

ಮಂಗಳ ಮನದಲ್ಲೇ ನಗುತ್ತಾ, ಆಕೆಯ ಕಾಯಿಗಳನ್ನು ಜೋಡಿಯಾಗಿ ಮೂರು ಮನೆ ಮುಂದಕ್ಕೆ ನಡೆಸಿ, ತಾನು ದಾಳಗಳನ್ನೆತ್ತಿಕೊಂಡಳು. ಇವಳು ದಾಳಗಳನ್ನು ಹೊಸೆಯುವಾಗ, "ಮೆತ್ತಗೆ.... ದಾಳದ ಹೊಳಪು ಹೊರಟು ಹೋಗುತ್ತೆ." ಎಂದಳು ಮಂಗಳನಿಗೆ ಅವಮಾನವಾದಂತಾಗಿತ್ತು. ಆಟ ಆಡುವ ಹುಮ್ಮಸ್ಸು ಹೊರಟು ಹೋಯಿತು. ಮತ್ತೆಂದೂ ಈಕೆಯ ಜೊತೆ ಆಟ ಆಡಬಾರದು. ಒಂದು ವೇಳೆ ಆಡಿದರೂ, ತನ್ನ ಮನೆಯ ಪಗಡೆ ಡಬ್ಬಿಯನ್ನು ತರಬೇಕೆಂದುಕೊಂಡಳು. ಬೇಗ ಬೇಗ ಆಟವನ್ನು ಮುಗಿಸಬೇಕೆಂದುಕೊಂಡು, ತನಗೆ ಆಟ ಬರುವುದಿಲ್ಲವೇನೋ ಎಂಬಂತೆ, ಆಕೆಯ ಹೊಡೆತಗಳಿಗೆ ಸಿಕ್ಕಿಬಿದ್ದು, ಆಕೆಯನ್ನು ಗೆಲ್ಲಿಸಿದಳು.

"ನಿಂಗೆ ಆಟವೇ ಗೊತ್ತಿಲ್ಲ... ನನ್ನ ಜೊತೆ ದಿನಾ ಆಡಿದ್ರೆ, ಬೇಗ ಕಲಿತು ಬಿಡ್ತೀಯ.... ಸೋತೆ ಅಂತ ಮುಖ ಸಪ್ಪಗೆ ಮಾಡ್ಕೋಬೇಡ... ನಾವಿಬ್ರು ಆಡಿದ್ರೂ ಅಷ್ಟೇ ನಾನೇ ಗೆಲ್ಲೋದು.... ಇವತ್ತಿಗೆ ಸಾಕು. ಎಲ್ಲವನ್ನು ಜೋಪಾನವಾಗಿ ಎತ್ತಿಟ್ಟುಬಿಡು. ಮಂಗಳಾ ಹಾಗೇ ಮಾಡಿ, ಡಬ್ಬಿಯನ್ನು ಎತ್ತಿ ಗೂಡಿನಲ್ಲಿಟ್ಟಳು. ಈ ಪೇಪರನ್ನು ಎಲ್ಲಿತ್ತೋ ಅಲ್ಲೇ ಇಟ್ಬಿಡು.... ಆಮೇಲೆ, ನಿನ್ನ ದೊಡ್ಡ ತಂಗೀನ ಕಳಿಸು... ಅವಳ ಜೊತೆ ಹಲಗುಣಿ ಮಣೆ ಆಡ್ತೀನಿ.... ಸಮಯಾನೇ ಹೋಗ್ತಿಲ್ಲ.... ಅಲ್ಲಿದೆ ನೋಡು.... ಇತ್ಲಾಗೆ ತೆಗೆದಿಟ್ಟು ಬಿಡು... ಸರಿಯಾಗಿ ಎಣಿಸಿ ತುಂಬಿಟ್ಟಿರ್ತೀನಿ..."

ಮಂಗಳ ಕೆಳಗಡೆ ಗೂಡನಲ್ಲಿದ್ದ ಕರಿಮರದಲ್ಲಿ ತಯಾರಾದ, ಸ್ವಲ್ಪ ದೊಡ್ಡದೇ ಎನ್ನಬಹುದಾದ ಹಲಗುಣಿ ಮಣೆಯನ್ನು ತೆಗೆದು ಇಟ್ಟಳು. ಹಾಗೇ ಪಕ್ಕದಲ್ಲಿ ಸಣ್ಣ ಸಣ್ಣ ಬಿಳಿಯ ಕವಡೆಗಳನ್ನು ತುಂಬಿದ್ದ ಗಾಜಿನ ವಾಟಿಯನ್ನು ತೆಗೆದಿಟ್ಟಳು. ಫಳಫಳನೆ ಹೊಳೆಯುವ ಸಣ್ಣ ಸಣ್ಣ ಕವಡೆಗಳನ್ನು ಇದುವರೆಗೂ ಈಕೆ ಹೇಗೆ ಸಂಭಾಳಿಸಿ ಇಟ್ಟುಕೊಂಡಿದಾರಲ್ಲ ಅಂತ ಆಶ್ಚರ್ಯವಾಗಿತ್ತು. ಈಕೆ ಚಿಕ್ಕ ಹುಡುಗಿಯಾಗಿದ್ದಾಗ ಇವರ ತಂದೆ ತೆಗೆಸಿಕೊಟ್ಟಿರಬಹುದು. ಆಗ ಈಕೆ ಒಬ್ಬರೇ... ಈಗಲೂ ಈಕೆ ಒಬ್ಬರೇ.... ಮನೇಲೆ ಆಡುವ ಮಕ್ಕಳಿದ್ದಿದ್ದರೇ ಹೀಗೆ ಒಪ್ಪವಾಗಿ ಇಟ್ಟುಕೊಂಡಿರಲು ಸಾಧ್ಯವಾಗುತ್ತಿರಲಿಲ್ಲ... ಮಕ್ಕಳಿದ್ದಿದ್ದರೇ, ಮಕ್ಕಳ ಕೈಗೆ ಕೊಡುವುದಿರಲಿ, ಕಣ್ಣಿಗೂ ಬೀಳಿಸುತ್ತಿರಲಿಲ್ಲವೇನೋ ಅಂತಂದುಕೊಂಡಳು.

"ಅತ್ತೆ ನಾನಿನ್ನು ಬರ್ಲಾ ? ನಿಮಗೇನಾದ್ರೂ ಬೇಕಾಗಿದ್ರೆ ಹೇಳಿ ಕಳ್ಸಿ ಯಾರಾದ್ರೂ

ಬರ್ತೀವಿ" ಎಂದು ಸೌಜನ್ಯಕ್ಕೆ ಹೇಳಿ ಹೊರಬಂದಳು. ಮೆಟ್ಟಿಲ ಬಳಿಗೆ ಬಂದಾಗ, ಗೇಟಿನ ಬಳಿ, ಬಾಲು, ಚಂದ್ರನೊಡನೆ ನಿಂತುಕೊಂಡು, ಏನನ್ನೋ ತಿನ್ನುತ್ತಿರುವುದು ಗಮನಕ್ಕೆ ಬಂತು. ಅವರನ್ನು ಸಮೀಪಿಸಿದಳು.... "ಏನೋ ಅದು ತಿಂತಾ ಇರೋದು?" ಗದರಿ, ಕೈಯಿಂದ ಕಸಿದುಕೊಂಡು ನೋಡಿದಳು....

"ಅದು ಕಡ್ಡಿ ಓಂ ಬಿಸ್ಕತ್ತು... ಬ್ರೆಡ್ಡಿನವನು ಮಾರುಕ್ಕೆ ತಂದಿದ್ದ ಕೊಡಿಸ್ದೆ.... ಗರಿ ಗರಿಯಾಗಿ ಚೆನ್ನಾಗಿರುತ್ತೆ... ನೀವೂ ತಿಂತೀರಾ?"ಚಂದ್ರು ಕೇಳಿದ.

"ಮನೆ ಹತ್ರ ಮಾರುಕ್ಕೆ ತಂದಿದ್ನಾ? ಎಷ್ಟಾಯ್ತು?.... ಯಾಕೆ ಕೊಡ್ಸಿದ್ರಿ?"

"ಯಾಕೆ?..... ಕೊಡಿಸುವಷ್ಟು ಯೋಗ್ಯತೆ ನನಗಿಲ್ವಾ?"

"ಹಾಗಲ್ಲ ಸುಮ್ನೇ ಯಾಕೆ ದುಡ್ಡು ದಂಡ ಮಾಡಿದ್ರಿ ಅಂತ.... ಮದುವೆ ಮನೆಯಿಂದ ಬಂದ ತಿಂಡೀನೇ ಬೇಕಾದಷ್ಟು ಮಿಕ್ಕಿದೆ.... ಅದೂ ದಂಡ ಆಗುತ್ತೆ."

"ತಿಂದರೂ ದಂಡ. ತಿನ್ನದಿದ್ರೂ ದಂಡ.... ಒಂದು ದಿನ ನಿಮ್ಮ ತಮ್ಮನಿಗೆ ಅಂತ ಐದು ಪೈಸೆ ಖರ್ಚು ಮಾಡಿದರೆ, ನಾನು ಬಡವನಾಗಿ ಹೋಗುಲ್ಲ... ಹೆಂಗಸರೆಲ್ಲಾ ಒಂದೇ ಜಾತಿ ಬಹಳ ಲೆಕ್ಕ ಹಾಕ್ತೀರಿ.... ಹೋಗ್ಲಿ ಆ ಮಾತು ಬೇಡ... ಯಾರಿಗಾದ್ರೂ ಕೇಳಿಸಿದ್ರೆ ಅದೇ ರಂಪ ಆಗುತ್ತೆ." ಆ ಯಾರು ಎನ್ನೋದನ್ನ ಅವನು ಬಾಯಿಬಿಟ್ಟು ಹೇಳದಿದ್ರೂ ಯಾರೆಂದು ಅವಳಿಗೆ ಅರ್ಥವಾಗಿತ್ತು.

"ನಾನು ಮನೆಗೆ ಹೋಗ್ತಿದೀನಿ" ಎನುತ್ತಾ ತಮ್ಮನನ್ನು ಎತ್ತಿಕೊಂಡಳು.

"ಆಟ ಮುಗಿದು ಹೋಯ್ತು? ಯಾರು ಗೆದ್ದದ್ದು ?" ನಗುತ್ತಾ ಪ್ರಶ್ನಿಸಿದ.

"ನಾನಂತೂ ಅಲ್ಲ." ಅವಳೂ ಮುಗುಳ್ನಕ್ಕಳು.

"ಹಾಗಾದ್ರೆ ಬೇಕು ಅಂತ ಸೋತಿದೀರ.... ಯಾಕೆ ಎಲ್ರೂ ಅವರಿಗೆ ಹೆದರ್ತೀರಿ?"

"ಹೆದರಿಕೆ ಅಲ್ಲ... ಒಂಥರಾ ಗೌರವ....."

"ಗೌರವ ಅಲ್ಲ.... ಅವರಿಂದ ಏನು ತೊಂದರೆ ಆಗಿ ಬಿಡುತ್ತೋ ಅಂತ ಎಲ್ಲರಿಗೂ ಏನೋ ಆಂತಕ, ಏನೋ ಕಸಿವಿಸಿ.... ನಾನೂ ನೋಡ್ತಾನೇ ಇದೀನಿ...."

"ಹಾಗಾದ್ರೆ ನೀವು ಹೆದರುಲ್ವಾ ಅವರಿಗೆ ?....."

"ಇಲ್ಲಪ್ಪಾ.... ನನಗೆ ಯಾವ ಹೆದರಿಕೆಯೂ ಇಲ್ಲ..." ಹಾಗೇ ಹೇಳಿದುದು ಅರ್ಧ ಸುಳ್ಳೆಂದು ಅವನಿಗೂ ತಿಳಿದಿತ್ತು.. ಅವಳಿಗೂ ಅರ್ಥವಾಗಿತ್ತು.... ತನಗೆ ಇರುವುದು ಭಯ ಅಲ್ಲ, ಅರ್ಥವಾಗದ ಕಸಿವಿಸಿ ಎಂದು ಹೇಳಬೇಕೆಂದುಕೊಂಡರೂ ಹೇಳಲಿಲ್ಲ. ಅವನನ್ನೇ ಸುಮ್ಮನೆ ನೋಡಿ, ಅವಳು ತಮ್ಮನನ್ನು ಎತ್ತಿಕೊಂಡು ಹೊರಟು ಹೋಗಿದ್ದಳು. ಅವಳ, ಬೆನ್ನ ಮೇಲೆ ಹರಿದಾಡುತ್ತಿದ್ದ ಜಡೆ ಸುಂದರವಾಗಿದೆ ಅಂತ ಅನ್ನಿಸಿತ್ತು. ತಮ್ಮ ಅವಳ ಸೊಂಟದ ಮೇಲೆ ಕುಳಿತು, ಜಡೆಯೊಂದಿಗೆ ಆಟ ಆಡುತ್ತಿದ್ದ. ... ಪಂಕಜಳಿಗೆ ಇಷ್ಟು ಉದ್ದದ ಜಡೆ ಇಲ್ಲ ಅಂತ ಅನ್ನುವುದು ನೆನಪಿಗೆ ಬಂತು...

ಅವಳು ಚೆನ್ನವೋ ಇವಳು ಚೆನ್ನವೋ.... ತನ್ನಲ್ಲೇ ತುಲನೆ ಮಾಡಿದ... ಒಂದು ನಿರ್ಣಯ ಸಿಗಲಿಲ್ಲ. ಆದರೆ ಅದರ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳಲಿಲ್ಲ. ತಕ್ಷಣಕ್ಕೆ ಮನೆಯೊಳಗೆ ಹೋಗಬೇಕೆನಿಸಲಿಲ್ಲ. ಅಲ್ಲೇ ನಿಂತು ಬೀದಿಯಲ್ಲಿ ಹೋಗಿ ಬರುವವರನ್ನು ನೋಡುತ್ತಾ ನಿಂತ. ಸ್ವಲ್ಪ ಹೊತ್ತಿನಲ್ಲೇ ಅದೂ ಬೇಸರವೆನಿಸಿತು. ಹೋಟೆಲ್ಲಿಗೆ ಹೋಗಿ, ಬಿಸಿಬಿಸಿಯಾಗಿ ಏನನ್ನಾದರೂ ತಿಂದು, ಕಾಫಿ ಕುಡಿದು ಬರಬೇಕೆನ್ನಿಸಿತು. ಆದರೆ ಹೇಳದೇ ಹೋಗುವಂತಿಲ್ಲ. ಹೋಟೆಲ್ಲಿಗೆ ಅಂತ ಹೇಳು ವಂತೆಯೇ ಇಲ್ಲ.... ಅಂತ ಅಂದುಕೊಂಡು ಮನೆಗೆ ಬಂದ. ನಾನು ಹೀಗೇ ಸ್ವಲ್ಪ ತಿರುಗಾಡಿಕೊಂಡು ಬರ್ತೀನಿ.... ಏನಾದ್ರೂ ಬೇಕಿದ್ರೆ ಹೇಳಿ ತರ್ತೀನಿ." ಎಂದ.

"ಸಧ್ಯಕ್ಕೆ ಏನೂ ಬೇಡ. ಸೂತಕ ಕಳೆಯುವವರೆಗೂ ಜೋಷಿ ಮನೆಯವರು ಅಡಿಗೆ ತಂದು ಗೊಡ್ತಾರಂತೆ. ಮಂಗಳಾ ಕಾಫಿ ತಿಂಡಿ ತಂದುಕೊಡ್ತಾಳೆ. ನೋಡೋಣ, ನಿಮ್ಮಪ್ಪ ಊರಿಗೆ ಬಂದ್ಮೇಲೆ ಏನು ಹೇಳ್ತಾರೆ ಅಂತ...."

"ಏನು ಹೇಳ್ತಾರೆ....? ನೀವು ಹೇಗೆ ಹೇಳಿದರೆ ಹಾಗೆ ಅಂತಾರೆ... ಅಷ್ಟೇ.... ನಂಗೆ ಗೊತ್ತಿಲ್ಲದ್ವಾ ? ಅಂತಂದುಕೊಂಡ.... ಮೂರು ದಿನ ಆಯ್ತು... ಅವರು ಬಂದರೆ, ತಾನು ತನ್ನ ಪಾಡಿಗೆ ತಾನು ಊರಿಗೆ ಹೋಗಬಹುದು ಅಂತನ್ನಿಸಿತ್ತು. ಚಪ್ಪಲಿ ಮೆಟ್ಟಿ, ಬಾಗಿಲು ದಾಟಿದ ಲಕ್ಷ್ಮಿದೇವಪ್ಪ ಬಂದು ಮೆಟ್ಟಿಲು ಮೇಲೆ ಕುಳಿತಳು.

o o o

ಏನ್ರೀ ದಿಬ್ಬಣ ವಾಪಸ್ಸು ಹೋಗಿ ಎರಡು ದಿನ ಆಗ್ತಾ ಬಂತು. ವಠಾರದ ತುಂಬಾ ಹಾಗೇ ಕಸ ಕಡ್ಡಿ ಬಿದ್ದಿದೆಯಲ್ರೀ.... ಎಲ್ಲಾ ತೆಗೆಸ್ಬೇಕು ಅಂತ ಗೊತ್ತಾಗಲಿಲ್ವಾ? ಅದಕ್ಕೆ ಇನ್ನೂ ಮುಹೂರ್ತ ಬಂದಿಲ್ವಾ?" ಅತ್ತ ಬಂದ ಜೋಷಿಯನ್ನುದ್ದೇಶಿಸಿ ಹೇಳಿದಳು.

"ಕೂಲಿಯವ್ರಿಗೆ ಹೇಳಿದೀನ್ರೀ.... ಬಂದು ತೇಗೀತಾರ್ರೀ.... ಇವತ್ತು ಎಲ್ಲಾ ಚೊಕ್ಕಟ ಮಾಡ್ಸಿ ಬಿಡ್ತೀನ್ರೀ...."

"ಏನು ಮಾಡಿಸ್ತೀರೋ ಕೆಲಸ ಆಗೋ ಮುಂದೆ ಬಂದು ಕಾಲು ಹಿಡೀತೀರ್ರೀ.... ಕೆಲಸ ಆದ್ಮೇಲೆ ಹೀಗೆ... ಮೊದಲೇ ಹೇಳಿರ್ಲಿಲ್ವಾ ನಿಮಗೆ ಅದಕ್ಕೇ ನಾನು ಇಂಥದಕ್ಕೆಲ್ಲ ಒಪ್ಪಿಕೊಳ್ಳಲ್ಲ... ಅದೇನು ಮಾಡಿಸ್ತೀರೋ ಬೇಗ ಮಾಡ್ಸಿ...."

"ಆಯ್ತು ತಾಯಾರಾ.... ರಾಯರು ಇನ್ನೂ ಬಂದಿಲ್ಲೇನು?....

"ಇಲ್ಲ, ಬಂದಿಲ್ಲ, ಅವರಿಂದ ಏನಾಗ್ಬೇಕಾಗಿತ್ತು..."

"ಏನಿಲ್ರೀ ಸುಮ್ಮನೇ ಹೀಂಗಾ ಕೇಳಿದಿ. ಬಂದಿದ್ರ ಮಾತಾಡ್ಸಿಕೊಂಡು ಹೋಗೋವಾ ಅಂತ ಬಂದನ್ರೀ.... ನೀವು ಹೋಗಲಿಲ್ಲೇನ್ರೀ..."

"ಇಲ್ಲ... ಇಲ್ಲೇ ಕೂತಿದೀನಲ್ಲ...."

"ಹೌದ್ರೀ.... ಹೌದ್ರೀ ಎಲ್ಲಾ ಹೆಂಗಾತು ?.... ವಯಸ್ಸಾಗಿತ್ತೇನ್ರೀ ನಿಮ್ಮ ಮಾವಗ?"

"ಹೂಂ.... ವಯಸ್ಸಾಗಿತ್ತು... ನಂಗೇನೂ ತಿಳೀದು.... ನಮ್ಮನೆಯೋರು ಬಂದ್ಮೇಲೆ ಮಾತಾಡಿ ತಿಳ್ಕೊಳ್ಳಿ...."

"ಊಟ ತಿಂಡಿಗೆ ಏನೂ ತೊಂದ್ರಿ ಆಗಲಿಲ್ಲ ಹೌದಲ್ರೀ.... ನಮ್ಮ ಕಡೀ ಅಡಿಗಿ ನಿಮಗ ಹಿಡಿಸ್ತೋ ಇಲ್ಲೋ.... ಚಹಾ ಕುಡೀತಿರೇನ್ರೀ.... ಕಳಿಸ್ತೀನಿ...."

"ಬೇಡ..... ನಾನು ಚಹಾ ಕುಡಿಯೋಲ್ಲ.... ಏನೂ ಬೇಡ...."

"ಹಂಗ್ರಂದ್ರ ಹೆಂಗ್ರೀ? ನೀವು ಹೀಂಗ ಕುಂತಿದ್ರ ನಮಗೂ ಏನು ಹೇಳಬೇಕು ಅಂತ ತಿಳೀದೊಲ್ಲರೀ.... ರಾತ್ರಾಗ ಬಿಸಿ ರೊಟ್ಟಿ ಪಲ್ಯ ಮಾಡಿಸೋಣೇನ್ರೀ...."

"ಅದೇನು ಮಾಡಿಸ್ತೀರೋ ಮಾಡ್ಸಿ.... ಸ್ವಲ್ಪ ತುಪ್ಪ ಇಟ್ಟು ಕಳ್ಸಿ.... ತುಪ್ಪ ಇಲ್ಲದೇ ನಮಗೆ ತಿಂದು ರೂಢಿ ಇಲ್ಲ. ಹಾಗೇ ಸ್ವಲ್ಪ ಸಿಹಿ ಮೊಸರನ್ನ ಕಳಿಸಿ...

"ಆಯ್ತುರೀ..... ನಿಮ್ಮ ಮಗನೂ ತಿಂತಾರೆ ಅಲ್ರೀ..... ಸ್ವಲ್ಪ ಅನ್ನನೂ ತೊವ್ವೀನೂ ತಗೊಂಡು ಹೋಗು ಅಂತ ಹೇಳ್ತೀನ್ರೀ.... ಏನ ಬೇಕಾದ್ರೂ ಸಂಕೋಚ ಇಲ್ಲವೇ ಕೇಳ್ರೀ.... ನಾವು ನಿಮ್ಮೋರೇ.... ಹೊರಗ್ನೋರಲ್ಲರೀ...."

"ಸರಿ.... ನಮಗೂ ನಿಮ್ಮ ಊಟ ಅಭ್ಯಾಸವಿಲ್ಲ, ಆದರೇನು ವಿಧಿ ಇಲ್ಲ. ನಾಲ್ಕು ದಿನದ ಮಾತು ತಾನೇ ?... ಈ ಗಲೀಜೆಲ್ಲಾ ತೆಗೆಸಿ ಮೊದಲು ಚೊಕ್ಕಟ ಮಾಡಿಸಿ ಬಿಡಿ.... ಅದನ್ನು ಮರೆತು ಬಿಡಬೇಡಿ...."

"ಇಲ್ರೀ... ಈಗ್ಲೇ ಹೋಗಿ ಕೂಲಿ ಆಳುಗಲನ್ನು ಕರ್ಕೊಂಡು ಬರ್ತೀನ್ರೀ...." ಎಂದು ಕೈ ಮುಗಿದು, ಅಪ್ಪಣೆ ಪಡೆದು ತನ್ನ ಮನೆಗೆ ಹೋಗಿ, ಹೆಂಡತಿಗೆ, ಅತ್ತಿಗೆಗೆ ಬಿಸಿ ಬಿಸಿ ಅಡಿಗೆ ಮಾಡಲು ಹೇಳಿ, ತಾನು ಹಳೆಯ ಸೈಕಲ್ಲನ್ನು ಹತ್ತಿ ಆಳುಗಳನ್ನು ಹುಡುಕಿಕೊಂಡು ಹೊರಟ.

ಂ ಂ ಂ

ಆಕೆ ಮೆಟ್ಟಿಲಿನಿಂದ ಇಳಿದು, ಬೆನ್ನ ಹಿಂದೆ ಕೈ ಕಟ್ಟಿ, ಅಲ್ಲಿಯೇ ನಾಲ್ಕು ನಾಲ್ಕು ಹೆಜ್ಜೆ ಅತ್ತಿಂದಿತ್ತ ತಿರುಗಾಡಿದಳು. ಅವಳನ್ನು ಹಾದಿಯಲ್ಲಿ ಕಂಡೊಡನೆ ಕುಂಟೇಬಿಲ್ಲೆ ಆಡುತ್ತಿದ್ದ ಜಲಜ, ಕುಸುಮ, ಆಟವನ್ನು ನಿಲ್ಲಿಸಿ, ಜಗುಲಿಯನ್ನೇರಿ ನಿಂತರು. ದಿಬ್ಬದ ಮನೆಯ ಹತ್ತಿರ ಒಬ್ಬರನ್ನೊಬ್ಬರು ಅಟ್ಟಿಸಿಕೊಂಡು ತಿರುಗಾಡುತ್ತಿದ್ದ ಸಚ್ಚಿ ಹಾಗೂ ಶಂಕರ ಅಲ್ಲೇ ಮರೆಯಲ್ಲಿ ನಿಂತರು. ಜೋಷಿಯ ಮನೆಯ ಮುಂದೆ ಚಪ್ಪರದ ಕಂಬಗಳನ್ನು ಸುತ್ತುತ್ತಿದ್ದ ಮಕ್ಕಳು ಹಾಗೇ ನಿಂತರು.

"ಅಕ್ಕಾ ಅತ್ತೆ ಈ ಕಡೇನೇ ನೋಡ್ತಿದಾರೆ" ವನಜಾ ಹೇಳಿದಾಗ, ಮಂಗಳ ಬೇಸರಗೊಂಡಳು.

"ಕರೆದ್ರೆ ನಾನಂತೂ ಹೋಗುಲ್ಲ. ಒಂದು ರಾಶಿ ಕೆಲಸ ಬಿದ್ದಿದೆ...."

"ಅಕ್ಕಾ ನಾನು ಹೋಗಿ ಕೇಳ್ಲಾ?....

"ಹೋಗಿ ಕೇಳೇ.... ಅವಳನ್ನೇನು ಕೇಳೋದು....? ಆಮೇಲೆ ಕಂಡ್ರೂ ಬಂದು ಕೇಳ್ಲಿಲ್ಲ ಅಂತ ಬೈಸ್ಕೋತೀರಿ...ಅಷ್ಟೇ." ಜಾನಕಿ ಮಲಗಿದ್ದಲಿಂದಲೇ ಹೇಳಿದ್ದಳು... ವನಜಾ ಜಗುಲಿಯಿಂದಿಳಿದು ಲಕ್ಷ್ಮಿದೇವಮ್ಮನ ಬಳಿಗೆ ಬಂದಳು.

"ಅತ್ತೇ ಏನಾದ್ರೂ ಬೇಕಾಗಿತ್ತಾ?..... ಅಂಜುತ್ತಾ ಕೇಳಿದಳು.

"ಬಾ.... ಒಂದಾಟ ಹಲಗುಣಿ ಮಣೆ ಆಟ ಆಡೋಣ.... ನಿಂಗೆ ಬರುತ್ತಾ?"

"ಬರುತ್ತೆ... ಅಮ್ಮಂಗೆ ಹೇಳ್ಬಿಟ್ಟು ಬರ್ತೀನಿ.... ನಮ್ಮನೇಲಿ ಮಣೆ ಇದೆ ತರ್ಲಾ ಅತ್ತೇ?"

"ಏನೂ ಬೇಡ... ನಮ್ಮನೇದೇ ಇದೆ. ಬೇಗ ಬಾ..."ಎನ್ನುತ್ತಾ ತನ್ನ ಮನೆಗೆ ಹಿಂತಿರುಗಿದಳು. ವನಜಾ, ಆಕೆಯ ಮನೆಗೆ ಹೊರಡುತ್ತಾಳೆಂದು ತಿಳಿದ ಜಲಜಾ, ಸಚ್ಚಿ, ಕುಸುಮಾ ಅವಳ ಹಿಂದೆ ಹೊರಟರು.

"ಅತ್ತೆ ಕರೆದಿರೋದು ನನ್ನನ್ನ ಮಾತ್ರ. ನಿಮ್ಮನ್ನೆಲ್ಲಾ ಕರೆದಿಲ್ಲ..."

"ನಾವು ದೂರದಿಂದ ಕೂತ್ಕೊಂಡು ಆಟ ನೋಡ್ತೀವೇ..."

"ಅತ್ತೆ ಬೈದರೆ?....

"ನೀನು ಹೇಳೇ....."

"ನಾನು ಹೇಳುಲ್ಲಪ್ಪಾ.... ನನ್ನನ್ನು ಬೈದರೇ?...."

"ಬೈದರೆ ಆಟಕ್ಕೆ ಹೋಗ್ಬೇಡ ಅಷ್ಟೇ...." ಅವಳ ಹಿಂದೆ ಸೈನ್ಯದಂತೆ ಹೊರಟರು. ಅವರೊಂದಿಗೆ ಜೋಷಿಯ ಮಕ್ಕಳೂ ಸೇರಿದರು. ಈಗಾಗಲೇ ಒಳಗೆ ಹೋಗಿ ಆಟದ ಮಣೆಯ ಮುಂದೆ ಕುಳಿತಿದ್ದ ಲಕ್ಷ್ಮಿದೇವಮ್ಮ ಬಿರುಗಣ್ಣುಗಳನ್ನು ಬಿಟ್ಟಳು.

"ನಿಂತ್ಕೊಳ್ಳಿ. ನೀವೆಲ್ಲಾ ಎಲ್ಲಿಗೆ ಬರ್ತಿದೀರಿ...."

"ಅತ್ತೇ ಇವರೆಲ್ಲಾ ಆಟ ನೋಡ್ಬೇಕಂತೆ...."

"ಏನೂ ಬೇಡ... ಎಲ್ರೂ ಒಳಗೆ ಬಂದು ದಾಂಧಲೆ ಎಬ್ಬಿಸ್ತೀರಿ..."

"ಇಲ್ಲ ಅತ್ತೆ.... ದೂರದಲ್ಲಿ ಕುಳಿತು ಯಾರು ಗೆಲ್ತೀರಿ ಅಂತ ನೋಡ್ತೀವಿ..."

"ನಾನೇ ಗೆಲ್ಲೋದು...." ವನಜಳ ಮುಖ ಸಪ್ಪಗಾಯಿತು.

"ನಂಗೂ ಚೆನ್ನಾಗಿ ಆಟ ಆಡೋಕೆ ಬರುತ್ತೆ ಅತ್ತೇ..." ಕೆಟ್ಟ ಧ್ವನಿಯಲ್ಲಿ ನುಡಿದಳು.

"ಸರಿ ನೋಡೇ ಬಿಡೋಣ. ಯಾರು ಚೆನ್ನಾಗಿ ಆಡ್ತಾರೆ ಅಂತ...."

"ಯಾರು ಮೊದಲು ಆಟ ಶುರು ಮಾಡ್ತಾರೋ ಅವರೇ ಗೆಲ್ಲೋದು ಅಂತ ನಮಗೆಲ್ಲಾ ಗೊತ್ತು." ಜಲಜ ನುಡಿದಳು...

"ಹಾಗಾದ್ರೆ ವನಜಾನೇ ಮೊದಲು ಶುರು ಮಾಡ್ಲೀ.... ನಾನು ಅವಳನ್ನು ಸೋಲಿಸಿಯೇ ಸೋಲಿಸ್ತೀನಿ....

"ಅಷ್ಟು ಚೆನ್ನಾಗಿ ಆಡ್ತೀರಾ ಅತ್ತೇ?..." ಸಚ್ಚಿ ಕೇಳಿದ.

"ಹೂಂ.... ನೋಡ್ತಿರಿ... ನಾನು ಹೇಗೆ ಆಡ್ತೀನಿ ಅಂತ.... ವನಜಾ ನೀನೇ ಶುರು ಮಾಡು.... "ಗೆಲವು ನನ್ನದೇ ಎನ್ನುವ ಧಾಟಿಯಲ್ಲಿ ನುಡಿದಳು. ವನಜಾ ಮುಜುಗರದಿಂದ ಆಟವನ್ನು ಪ್ರಾರಂಭಿಸಿದಳು. ಉಳಿದವರೆಲ್ಲರೂ ಕುಳಿತು ಆಟವನ್ನು ನೋಡತೊಡಗಿದರು. ತಲ್ಲೀನತೆಯಿಂದ ಆಟವನ್ನು ಆಡತೊಡಗಿದ ಲಕ್ಷ್ಮೀದೇವಮ್ಮ, ಆ ಮಕ್ಕಳು ಅಲ್ಲಿಯೇ ಕುಳಿತಿದುದರ ಕಡೆ ಹೆಚ್ಚು ಆದ್ಯತೆ ಕೊಡಲಿಲ್ಲ. ಆಕೆ ಉತ್ಸಾಹದಿಂದ ಚತುರತೆಯಿಂದ, ಲೆಖ್ಖಾಚಾರ ಹಾಕಿ ಆಟವನ್ನು ಆಡಿ ಗೆದ್ದಳು."ನಾನು ಗೆದ್ದೆ.... ನಾನು ಗೆದ್ದೆ" ಎಂದು ಎರಡೆರಡು ಬಾರಿ ಹೇಳಿದಾಗ ವನಜಾ ಪೆಚ್ಚಾಗಿದ್ದಳು. ನಾನು ಹೇಳರ್ಲಿಲ್ವಾ ನಾನೇ ಗೆಲ್ತೀನಿ ಅಂತ. ನನ್ನ ಮಾತು ಎಂದಿಗೂ ಸುಳ್ಳಾಗುಲ್ಲ. ಇನ್ನೊಂದಾಟ ಆಡೋಣ್ವಾ.... ನೀನು ಗೆಲ್ಲೋದು ಹೇಗೆ ಅಂತ ಹೇಳಿ ಕೊಡ್ತೀನಿ.

"ಬೇಡ ಅತ್ತೇ.... ತುಂಬಾ ಹೋಂವರ್ಕ್ ಇದೆ... ಎಲ್ಲಾ ಎತ್ತಿಡ್ತೀನಿ" ಎಂದಳು.

"ಮೊದಲು ಕವಡೆಗಳನ್ನೆಲ್ಲ ಈ ಚಿಕ್ಕ ಡಬ್ಬಿಗೆ ಹಾಕು. ಆಮೇಲೆ ಈ ಮಣೆಯನ್ನು ನಿಧಾನವಾಗಿ ಮುಚ್ಚು.... ಅಲ್ಲಿ ಒಂದು ಸಣ್ಣ ಕೊಂಡಿ ಇದೆ... ಅದನ್ನು ಅಮುಕು..." ವನಜಾ ಆಕೆ ಹೇಳಿದಂತೆಯೇ ಮಾಡಿದ್ದಳು. ಕುಳಿತಿದ್ದ ಚಿಕ್ಕ ಮಕ್ಕಳೆಲ್ಲ ಎದ್ದು ಹೋಗಿದ್ದರು. ಬೀದಿಯಿಂದ ಹಾಗೇ ಕಾಲನ್ನು ಒರೆಸಿಕೊಳ್ಳದೇ ಬಂದು ಕೂತಿದ್ರು ಅಂತ ಕಾಣುತ್ತೆ. ನೆಲವೆಲ್ಲಾ ಮಣ್ಣು ಮಣ್ಣು. ರಾತ್ರಿ ಮಲಗೋದು ಹೇಗೆ ? ಅಲ್ಲಿ ಹಿಂದುಗಡೆ ಬಾಗಿಲ ಹತ್ತಿರ ಊಬಿನ ಕಡ್ಡಿ ಪೊರಕೆ ಇದೆ. ತಂದು ಗುಡಿಸಿಬಿಡು.... ಅಲ್ಲೇ ಒಂದು ಒರೆಸುವ ಬಟ್ಟೆ ಸಹ ಇದೆ. ನೆನೆಸಿಕೊಂಡು ಒರೆಸಿಬಿಡು" ಆಕೆ ನಿರ್ದಾಕ್ಷಿಣ್ಯವಾಗಿ, ವನಜಳಿಂದ ಕೆಲಸ ತೆಗೆದಳು. ಸೋತದ್ದೂ ಅಲ್ಲದೇ ಈ ಚಾಕರಿ ಬೇರೆ.... ಇನ್ನು ಮೇಲೆ ಬರಲೇಬಾರದು ಅಂತಂದುಕಂಡಳು. ಅವಳು ಹೊರಟು ಬಿಡ್ತಾಳೆ ಎನ್ನುವಾಗ, ಅಡಿಗೆ ಮನೆಯ ಬಿಡುವಿನ ಮೇಲೆ ಶೀಷೇಲಿ, ಕೆಂಪು ಕಲ್ಲು ಸಕ್ಕರೆ ಇದೆ. ತಗೊಂಡು, ನೀನೂ ತಿನ್ನು... ನಿನ್ನ ತಂಗೀರ್ಗೂ ಕೊಡು" ಎಂದಳು.

"ಪರವಾಗಿಲ್ಲ ಅತ್ತೇ.... ಅದೆಲ್ಲಾ ಏನೂ ಬೇಡ."

"ಸುನೇ ಹೇಳಿದಷ್ಟನ್ನು ಕೇಳು. ದೊಡ್ಡೋರು ಹೇಳಿದ್ದನ್ನು ವಿರೋಧಿಸಬಾರದು. ಶೀಷೆ ಜ್ವಾಪಾನ.... ಬಿದ್ದು ಒಡೆದು ಹೋದೀತು... ಆಮೇಲೆ ಬಿಗಿಯಾಗಿ ಮುಚ್ಚಳ ಮುಚ್ಚು.... ಇಲ್ಲದಿದ್ರೆ ಇರುವೆ ಹೋಗುತ್ತೆ" ವನಜ ಇಷ್ಟವಿಲ್ಲದಿದ್ದರೂ ಅಡಿಗೆ ಮನೆಗೆ ಬಂದು, ಒಂದು ನಾಲ್ಕು ಚೂರು ಕಲ್ಲು ಸಕ್ಕರೆಯನ್ನು ತೆಗೆದುಕೊಂಡು, ಶೀಷೆಯನ್ನು ವಾಪಸ್ಸು ಇಟ್ಟು ಹೊರಗೆ ಬಂದಳು. "ಎಲ್ಲಿ ಎಷ್ಟು ತಗೊಂಡಿದೀಯ

ತೋರ್ಸು...." ಆಕೆ ಹೇಳಿದಾಗ, ಅವಳಿಗೆ ಕೋಪದಿಂದ ಅಳು ಬರುವಂತಾಗಿತ್ತು. ಮುಷ್ಠಿಯನ್ನು ಬಿಚ್ಚಿ. ಅಂಗೈಯಲ್ಲಿದ್ದ ಚೂರು ಕಲ್ಲು ಸಕ್ಕರೆಯನ್ನು ತೋರಿದಳು. ಆಕೆ ನೆಮ್ಮದಿಯ ಮುಖದಿಂದ ಹೋಗು ಎನ್ನುವಂತೆ ತಲೆಯಾಡಿಸಿದಳು. ವನಜ ಮನೆಗೆ ಓಡಿದಳು.

ಅವಳಿಗಿಂತ ಮೊದಲೇ ಬಂದಿದ್ದ ಜಲಜ ವರದಿಯನ್ನು ಒಪ್ಪಿಸಿದ್ದಳು.

"ಸೋತೆಯಂತೆ ಹೌದೇನೆ?.... ಆಕೇನ ಸೋಲಿಸಬೇಕಾಗಿತ್ತು...."

"ಅವರ ಜತೆ ಸೋತರೂ ಒಂದೇ ಗೆದ್ದರೂ ಒಂದೇ.... ಈ ದಂಡು ಬಂದು ಕೂತು, ಕೂತು ಜಾಗದಲ್ಲೆಲ್ಲಾ ಧೂಳು ಎಬ್ಬಿಸಿದ್ದರು. ನನ್ನ ಹತ್ರ ಗುಡಿಸಿ, ಒರೆಸಿ ಮಾಡಿದಾರೆ ಗೊತ್ತಾ?" ಅಳು ಬಂದಿತ್ತು.

"ಕರೆದ್ರು ಅಂತ ಓಡಿ ಹೋಗಿದ್ದೆ.... ಅದೇನದು ಕೈಯಲ್ಲಿ?...."

"ಗೆದ್ದದ್ದಕ್ಕೆ ಕಲ್ಲು ಸಕ್ಕರೆ ಕೊಟ್ಟಿದಾರೆ ನಿಮಗೆಲ್ಲಾ ಕೊಡು ಅಂತ ತಗೊಳ್ಳಿ ತಿನ್ನಿ" ಕುಸುಮ ಅವಳಅಂಗೈ ಬಿಡಿಸಿ ನೋಡಿದಳು.

"ಇಷ್ಟೇನಾ? ಎಲ್ಲಾ ಕರಗಿ ಹೋಗಿದೆ...

"ಎಷ್ಟು ಸಣ್ಣ ಸಣ್ಣ ಚೂರುಗಳನ್ನು ಮಾಡಿ ಇಟ್ಟಿದ್ರು ಅಂತಂದ್ರೆ.... ಡೈಮಂಡ್ ಸಕ್ಕರೆ ಥರ... ತೆಗೆದ್ಕೊಳ್ಳೋಕೇ ಕಷ್ಟ ಆಗ್ತಿತ್ತು..."

"ಅಲ್ಲೇ ತಿಂದು ಕೈ ತೊಳೆದ್ಕೊಂಡು ಬರ್ಬೇಕಾಗಿತ್ತು... ಬರೀ ಅಂಟು.

"ನಿನ್ನ ತಂಗೀರ್ಗೆ ಚೂರು ಚೂರು ಕೊಡು ಅಂತ ಬೇರೆ ಹೇಳಿದ್ರು.... ನನಗೆ ತಿನ್ಬೇಕು ಅಂತ ಅನ್ನಿಸ್ಲಿಲ್ಲ.... ಈಗ ಎಲ್ಲಾ ಕರಗೇ ಹೋಗಿದೆ. ಹೋಗಿ ಕೈ ತೊಳೆದ್ಕೊಂಡು ಬರ್ತೀನಿ." ವನಜಾ ಅತ್ತ ಹೋದಳು. ಇವರುಗಳು ಕಿಸಿ ಕಿಸಿ ನಕ್ಕರು.

"ಅಕ್ಕಾ, ಪಗಡೆಯಾಟದಲ್ಲಿ ನಿನ್ನನ್ನು ಸೋಲಿಸಿದ್ದಕ್ಕೆ ಏನು ಕೊಟ್ರೆ?" ಅಲ್ಲಿಯೇ ಕುಳಿತು ಓದುತ್ತಿದ್ದ ಶಂಕರ ಕೇಳಿದ.

"ಏನು ಕೊಟ್ರು ? ಏನೂ ಇಲ್ಲ..... ನಾನು ಬೇಕು ಅಂತ ಸೋತೆ.... ಸರಿಯಾಗಿ ಆಡಿದ್ರೆ ನಾನೇ ಗೆಲ್ತಿದ್ದೆ... ಆಟದಲ್ಲಿ ಮಜವೇ ಇರ್ಲಿಲ್ಲ....

ನಾನೂ ಅಷ್ಟೇ..... ಅವರೇ ಗೆಲ್ಲಲಿ ಅಂತ ಸುಮ್ಮನೇ ತಪ್ಪು ತಪ್ಪೇ ಆಡ್ದೆ. ಭಾರಿ ಪತಗಳನ್ನೆಲ್ಲ ಅವರಿಗೇ ಬಿಟ್ಟುಕೊಟ್ಟೆ... ಅವರಿಗೆ ಗೊತ್ತಾದ್ರೂ ಸುಮ್ಮನಿದ್ರು. ... ಗೆದ್ದೆ ಗೆದ್ದೆ ಅಂತ ಕೂಗಿದ್ರು. ಇನ್ನೊಂದು ಆಟಾನ ಆಟೋಣ ಅಂತ ಕೇಳಿದ್ರು..." ವನಜ ನುಡಿದಳು.

ಅಷ್ಟರಲ್ಲಿ ತಂದೆ ಸೈಕಲನ್ನು ನಿಲ್ಲಿಸಿದ್ದ ಸದ್ದು ಕೇಳಿ ಎಲ್ಲರೂ ಮಾತು ನಿಲ್ಲಿಸಿದರು.

"ರಸ್ತೇ ಬದೀಲಿ ಒಬ್ಬ ಕಡ್ಲೆಕಾಯಿ ಮಾರ್ತಿದ್ದ. ಹುರಿದದ್ದು... ಎಲ್ಲರೂ ಹಂಚ್ಕೊಳ್ಳಿ" ತಂದೆ ಕಾಗದದ ಪೊಟ್ಟಣವನ್ನು ನೆಲದ ಮೇಲಿಟ್ಟರು.

"ಈಗ್ಯಾಕೆ ತರೋಕೆ ಹೋದ್ರಿ... ಎದುರು ಮನೆಯವರು ಕೊಟ್ಟು ಕಳಿಸಿದ್ದ ತಿಂಡಿಯೇ ಖರ್ಚಾಗಿಲ್ಲ..."ತಾಯಿ ಗೊಣಗಿದಳು.

"ತಿಂಡಿಗಳನ್ನು ನಾಳೆ ತಿಂದರಾಯ್ತು... ಗರಿಗರಿಯಾಗಿ, ಚೆನ್ನಾಗಿ ಹುರಿದಿದಾನೆ... ಎಲ್ರಿಗೂ ಚೂರು ಚೂರು ಬೆಲ್ಲ ತಂದುಕೊಡು ಮಂಗಳಮ್ಮ... ಹಾಗೇ ಎಲ್ರಿಗೂ ಇಷ್ಟಿಷ್ಟು ಅಂತ ಕೊಟ್ಟಿಡು...

"ಎಷ್ಟು ತಂದಿದೀರಿ?..."

"ಎರಡು ಸೇರು.... ಎಂಟಾಣೆ ಕೊಟ್ಟೆ.... ಪಾಪ ಬಡವ ಈ ವ್ಯಾಪಾರದಿಂದ್ಲೇ ಜೀವನ ನಡೀಬೇಕಂತೆ.... ದಿನಾ ಮಧ್ಯಾಹ್ನ ಒಂದು ಸೇರು ತಂದ್ಕೊಡು ಅಂತ ಹೇಳಿ ಮನೇನ ತೋರ್ಸಿದೀನಿ." ರಾಮರಾಯ ಹೇಳಿ, ಕೈಕಾಲು ತೊಳೆದು ಬಂದು ನೆಲದ ಮೇಲೆ ಉಸ್ಸೆಂದು ಕುಳಿತ. ಮಂಗಳ ಎಲ್ಲರಿಗೂ ಉಂಡೆ ಬೆಲ್ಲದ ಚೂರುಗಳನ್ನು ತಂದು ಕೊಟ್ಟಳು.

"ಕಾಳಿಗಿಂತ ಸಿಪ್ಪೆಯೇ ಜಾಸ್ತಿ... ನಾಲ್ಕಾಣೆ ಕೊಡ್ಬೇಕಾಗಿತ್ತು.. "ಜಾನಕಿ ಎಂದಳು.

ರಾಮರಾಯ ನಕ್ಕ, "ಹೊರಗಿನ ಪ್ರಪಂಚ ಹೇಗೆ ದುಬಾರಿಯಾಗಿದೆ ಅಂತ ನಿಂಗೇನು ಗೊತ್ತು ಜಾನಕಿ?.... ಎಲ್ಲಾ ಪದಾರ್ಥಗಳ ಬೆಲೆ ಜಾಸ್ತಿ ಆಗಿದೆ... ನಮ್ಮಂಥೋರಿಗೆ ತಿಂಗಳಿಗೆ ಇಷ್ಟು ಅಂತ ಸಂಬಳ ಬರುತ್ತೆ. ಹೇಗೋ ನಡೆಯುತ್ತೆ.... ಬೀದಿ ಬೀದಿಲಿ ತಲೆ ಮೇಲೆ ಬುಟ್ಟಿ ಹೊತ್ತು ಮಾರೋನಿಗೆ, ವ್ಯಾಪಾರ ಆದರೆ ಮಾತ್ರ ಆದಾಯ.... ಅದಕ್ಕೆ ಎಷ್ಟೆಷ್ಟು ದೂರ ತಕ್ಕೊಂಡು ಹೋಗ್ತಾರೆ. ನಿಂಗೇನ್ಗೊತ್ತು?..

"ನಾಲ್ಕು ಕಾಸು ಸಂಪಾದಿಸಿದ್ದನ್ನ ಅವನೇನು ಮನೆಗೆ ಖರ್ಚು ಮಾಡ್ತಾನಾ ? ಸಾರಾಯಿ ಅಂಗಡಿಗೆ ಹೋಗಿ ಸುರಿದು ಬರ್ತಾನೆ..."

"ಸಾಕು ಸುಮ್ನಿರು... ಮಕ್ಕಳ ಎದುರಿಗೆ ಈ ಮಾತೆಲ್ಲಾ ಯಾಕೆ ?.... ನಿನಗೋ ಎಲ್ಲಾದರಲ್ಲೂ ಕೊಂಗು ಕೊಸರು... ಏನೋ ಬಾಯೊಣಗಿಸ್ಕೊಂಡು ಮಲಗಿರ್ತಾಳೆ ಅಂತ ಗರಂ ಗರಂ ಕಡ್ಲೆ ಕಾಯಿ ಅಂತ ತಂದು ಕೊಟ್ರೆ.... ನೂರೆಂಟು ಮಾತು. ಸುಮ್ನೆ ತಿನ್ನು ತಂದೆ ಗದರಿದಾಗ, ಮಕ್ಕಳೆಲ್ಲ ಕಿಸಿ ಕಿಸಿ ನಕ್ಕರು. ಚಿಕ್ಕವನು ಚಪ್ಪಾಳೆ ತಟ್ಟಿ ನಕ್ಕ. ಮಂಗಳಾ ಒಂದೊಂದೇ ಕಡ್ಲೆಕಾಯಿಯನ್ನು ಬಿಡಿಸಿ, ಬೀಜವನ್ನು ಅವನಿಗೆ ತಿನ್ನಿಸು ತ್ತಿದ್ದಳು.

"ನಂದು ತಿಂದಾದ ಮೇಲೆ, ಎಲ್ರಿಗೂ ಬಿಸಿ ಬಿಸಿಯಾಗಿ ತೊಟ್ಟು ತೊಟ್ಟು ಕಾಫಿ ಕೊಟ್ಟಿಡು. ನಿಧಾನವಾಗಿ ಊಟ ಮಾಡಿದ್ರಾಯ್ತು... ಇವತ್ತು ಮಧ್ಯಾಹ್ನಕ್ಕೆ "ಏನು ಅಡಿಗೆ ಮಾಡಿದ್ದೆ?..." ಮಗಳನ್ನು ವಿಚಾರಿಸಿದ.

"ಕಡ್ಲೆಕಾಳು, ಬದನೆಕಾಯಿ ಹಾಕಿ ಹುಳಿ ಮಾಡಿದ್ದೆ."

"ಇವಕ್ಕೆಲ್ಲ ಕಲೆಸಿ ಕೈ ತುತ್ತು ಹಾಕಿ ಬಿಡು... ಬೇಗ ತಿಂದು ಎದ್ದು ಓದ್ಕೊಳ್ಳಿ

ಯಾವಾಗ ನೋಡಿದ್ರೂ ಕಿಸಿ ಕಿಸಿ ನಗು... ಕಿತ್ತಾಟ..." ತಂದೆ ಬೈದಾಗ, ಕಿತ್ತಾಡುತ್ತಿದ್ದ ಸಚ್ಚಿ, ಕುಸುಮ ದೂರ ದೂರ ಸರಿದರು.

○ ○ ○

ದಿಬ್ಬದ ಮನೆಯ ಒಳಗಿನ ಒಂದು ದೀಪ ಉರಿಯುತ್ತಿದ್ದುದನ್ನು ಪಂಕಜ ಕಂಡಳು. ಆ ಮನೆಯಲ್ಲಿಆಯರೂ ವಾಸವಾಗಿಲ್ಲ. ಮದುವೆ ಮನೆಗೆ ಬಂದಿದ್ದ ನೆಂಟರಿಷ್ಟರೆಲ್ಲಾ ವಾಪಸ್ಸು ಹೊರಟು ಹೋಗಿದ್ದಾರೆ.... ಯಾರಾದರೂ ಹೊಸ ಸಂಸಾರ ಬಂದಿರಬಹುದೇ ಎಂಬ ಕುತೂಹಲ ಕಾಡಿದರೂ, ಅದನ್ನೇ ಪರಾಮರ್ಶಿಸಿ ನೋಡುವಷ್ಟು ಸಮಯ ಅವಳಿಗಿರಲಿಲ್ಲ. ತಾನು ವಾಸವಾಗಿರುವ ಮನೆಗಿಂತ ಆ ಮನೆ ಸ್ವಲ್ಪದೊಡ್ಡದಾಗಿದೆ.... ಅನುಕೂಲವಾಗಿದೆ ಅಂತ ವನಜಳ ತಾಯಿ ಹೇಳಿದ್ದುದು ನೆನೆಪಿಗೆ ಬಂತು. ಅವಳ ಸಹೋದ್ಯೋಗಿಯೊಬ್ಬರು ಬಾಡಿಗೆಗೆ ಮನೆ ಹುಡುಕುತ್ತಿದ್ದಱು. ಅವರಿಗೇಕೆ ತಿಳಿಸಬಾರದು ? ತನಗೂ ಜೊತೆಯಾಗುತ್ತದೆ... ಆದರೆ ಅದಕ್ಕೆ ಮೊದಲು ಮನೆ ಖಾಲಿ ಇದೆಯೋ ಇಲ್ಲವೋ ತಿಳಿದುಕೊಳ್ಳಬೇಕೆಂದು ಕೊಂಡಳು.

ಮುಂಬಾಗಿಲಿಗೆ ಹಾಕಿದ್ದ ಬೀಗವನ್ನು ತೆರೆದು ಒಳಗೆ ಬಂದು, ತನ್ನ ಕೈಯ್ಯಲಿದ್ದ ಛತ್ರಿ ಹಾಗೂ ಕೈ ಚೀಲಗಳನ್ನು ತೆಗೆದಿಟ್ಟು, ಊಟದ ಡಬ್ಬಿಯನ್ನು ತೊಳೆಯಲೆಂದು ಇಟ್ಟು ಕೈ ಕಾಲು ಮುಖ ತೊಳೆದು ಅಡಿಗೆ ಮನೆಗೆ ಬಂದಳು. ಕಾಯಿಸಿಟ್ಟಿದ್ದ ಹಾಲಿನ ಡಬರಿಗೆ ಮುಚ್ಚಿದ್ದ ತಟ್ಟೆ ಜರುಗಿತ್ತು. ಹಾಲು ಖಾಲಿಯಾಗಿತ್ತು. ಬೆಳಿಗ್ಗೆ ತಾನು ಅಡಿಗೆ ಮನೆಯ ಕಿಟಕಿಯನ್ನು ಹಾಕುವುದು ಮರೆತಿದ್ದು ಜ್ಞಾಪಕಕ್ಕೆ ಬಂತು. ಬೆಳಗಿನ ಹೊತ್ತು ಅವಸರವಾಗಿ ಬಿಡುತ್ತದೆ. ತಂದೆ ಜತೆಯಲ್ಲಿದ್ದಾಗ ಈ ಕೆಲಸಗಳನ್ನೆಲ್ಲಾ ಮಾಡಬೇಕಾಗಿ ರಲಿಲ್ಲ. ಬೆಕ್ಕು ಹಾಲನ್ನೆಲ್ಲಾ ಕುಡಿದು ಹೋಗಿದೆ. ಈಗ ಕಾಫಿಗೂ ಹಾಲಿಲ್ಲ. ಕಾಫಿ ಮಾಡಿಕೊಂಡು ಕುಡಿಯುವುದೇ ಬೇಡ ಒಂದು ಹೊತ್ತು ಕುಡಿಯದಿದ್ದರೇನಾಯ್ತು ಅಂತ ಅಂದುಕೊಂಡರೂ, ಕಾಫಿ ಬೇಕೆನ್ನಿಸುತ್ತಿತ್ತು. ಒಂದು ಬಟ್ಟಲನ್ನು ಹಿಡಿದು ಮುಂಬಾಗಿಲಿನ್ನೆಳೆದು ಚಿಲಕವನ್ನು ಹಾಕಿ, ರಾಮರಾಯರ ಮನೆಗೆ ಬಂದಳು ಜಾನಕಮ್ಮನನ್ನು ಕಂಡಳು.

"ಹೇಗಿದೀರಮ್ಮ" ಎಂದು ವಿಚಾರಿಸಿದಳು. ಅಲ್ಲೇ ಕುಳಿತಿದ್ದ ರಾಮರಾಯನಿಗೆ ಕೈ ಮುಗಿದು ನಮಸ್ಕಾರ ಸಾರ್ ಎಂದಳು.

"ಹೇಗಿದ್ದೀರಿ ಟೀಚರ್.... ಸ್ಕೂಲಿನ ದಿನಚರಿ ಹೇಗೆ ನಡೀತಿದೆ?" ವಿಚಾರಿಸಿದ.

"ಎಲ್ಲಾ ಚೆನ್ನಾಗಿ ನಡೀತಿದೆ.... ನಂಗೆ ಒಂದು ಬಟ್ಟಲು ಹಾಲು ಇದ್ರೆ ಕೊಡ್ತೀರಾ?.... ಬೆಕ್ಕು ಕುಡಿದು ಬಿಟ್ಟಿದೆ...." ಮಂಗಳನ ಕಡೆ ತಿರುಗಿ ಕೇಳಿದಳು.

"ಅದಕ್ಕೇನಂತೆ ! ಧಾರಾಳವಾಗಿ.... ನಮ್ಮ ಮನೇಲಿ ಚಿಕ್ಕ ಮಕ್ಕಳಿವೆ. ಹಾಲು ಇದ್ದೇ ಇರುತ್ತೆ... ಈ ನಡುವೆ ಬೆಕ್ಕಿನ ಕಾಟ ಜಾಸ್ತಿಯಾಗಿದೆ... ಒಳಗೆ ಬರೋಕೆ

ಕಾಯ್ತಾ ಕೂತಿರುತ್ತೆ..." ಜಾನಕಮ್ಮ ಎಂದಳು.

"ಮನೇ ತುಂಬಾ ಇಲಿಗಳು ಓಡಾಡುತ್ತಿರುತ್ವೆ... ಅದನ್ನು ಹಿಡಿಯುಲ್ಲ... ಸೋಮಾರಿತನ. ತಣ್ಣಗಿರುವ ಹಾಲನ್ನು ಕುಡಿದು ಎಳೆ ಬಿಸಿಲಲ್ಲಿ ಮಲಗಿರುತ್ವೆ..." ರಾಮರಾಯ ನಗುತ್ತಾ ನುಡಿದ.... ಮಂಗಳಾ ಬಟ್ಟಲು ತುಂಬಾ ಹಾಲನ್ನು ತುಂಬಿಕೊಂಡು ತಂದಿತ್ತಳು.

"ಮಂಗಳಾ ಟೀಚರ್‌ಗೆ ಕಾಫಿ ಕೊಡು... ಕೂತ್ಕೊಳ್ಳಿ.... ಟೀಚರ್..." ಎಂದ.

"ಬೇಡಾ ಸಾರ್... ಡಿಕಾಕ್ಷನ್ ಇದೆ... ನಾನೇ ಮಾಡ್ಕೋತೀನಿ...."

"ಏನೂ ಪರವಾಗಿಲ್ಲ.. . ಈ ಹಾಲನ್ನು ಬೆಳಗ್ಗೆಗೆ ಇಟ್ಕೊಳ್ಳಿ.... ಪದೇ ಪದೇ ಏನು ಬರ್ತೀರಾ.... ನೀವುಗಳು ಕೂತ್ಕೊಂಡು ಮಾತಾಡಿ.... ಕಾಫಿ ಕುಡಿದು ಹೋಗಿ.... ನಾನು ಸ್ವಲ್ಪ ಅಂಗಡಿಗೆ ಹೋಗಿ ಬರ್ತೀನಿ" ಎಂದು ರಾಮರಾಯ ಎದ್ದು ಹೊರಕ್ಕೆ ನಡೆದ. ಪಂಕಜಾ ಕುಳಿತಳು. ಮಂಗಳಾ ಕಾಫಿಯ ಬಟ್ಟಲುಗಳನ್ನು ತಂದಳು. ತಾಯಿಗೆ ಒಂದು ಕಪ್‌ನ್ನು ಕೊಟ್ಟು ಪಂಕಜನಿಗೆ ಇನ್ನೊಂದನ್ನು ಕೊಟ್ಟಳು.

"ನಿಮಗೆ ?.... ಇದು ಜಾಸ್ತಿ... ಇದರಲ್ಲೇ ನೀವೂ ಸ್ವಲ್ಪತಗೊಳ್ಳಿ...."

"ಜಾಸ್ತಿ ಏನೂ ಇಲ್ಲ. ಸರಿಯಾಗಿದೆ. ಬಟ್ಟಲು ಚಿಕ್ಕದು. ಮನೇಲೇ ಹಾಲು ಕರೆಯುತ್ತಿದ್ದಾಗ, ದೊಡ್ಡ ದೊಡ್ಡ ಬಟ್ಟಲುಗಳಲ್ಲಿ ಭರ್ತಿ ಕಾಫಿ ಕುಡಿದು ಅಭ್ಯಾಸ ನಮಗೆ.... ಇಲ್ಲಿ ಕೊಳ್ಳೋ ಹಾಲು.... ಜತೆಗೆ ನೀರು ಬೆರೆಸಿರೋದು ಬೇರೆ... ಕಾಫಿಗೆ ರುಚಿಯೇ ಇಲ್ಲ" ಜಾನಕಿ ಕೆಟ್ಟ ಮುಖ ಮಾಡಿ ನುಡಿದಳು.

"ಕಾಫಿ ಚೆನ್ನಾಗಿದೆ... ಪುಡಿ ಎಲ್ಲಿಯದು?" ಮಂಗಳನ್ನ ಕೇಳಿದಳು.

"ಗೊತ್ತಿಲ್ಲ... ನಮ್ಮ ತಂದೇನೇ ತರೋದು... ಬೇಕಿದ್ರೆ ಕೇಳಿ ಹೇಳ್ತೀನಿ... ನಿಮ್ಮ ತಂದೆ ಯಾವಾಗ ಬರ್ತಾರೆ ?.... ಊರಿಗೆ ಹೋಗಿ ಎಷ್ಟೊಂದು ದಿನಗಳಾದ್ವು ಅಲ್ವಾ ?

"ಅವರು ಸಧ್ಯಕ್ಕೆ ಬರುಲ್ಲ. ಚೇತರಿಸಿಕೊಳ್ತಿದ್ದಾರೆ..."

"ಹಾಗಾದ್ರೆ... ಒಬ್ಬರೇ ಎಷ್ಟು ದಿನ ಹೀಗೆ... ದಿಗಿಲಾಗುಲ್ವಾ?"

"ದಿಗಿಲು ಏನೂ ಇಲ್ಲ. ಒಬ್ಬಳೇ ಮಲಗ್ತೀನಲ್ಲ ಅಂತ ವನಜನ್ನ ಕರೆದೆ. ಅವಳಿಗೆ ತೊಂದರೆ ಆಗುತ್ತಾ?"

"ತೊಂದರೆ ಏನ್ಬಂತು?.... ಆದರೆ ಅವಳೂ ಹುಡುಗಿ... ಮಲಗಿದ ತಕ್ಷಣ ಗಾಢವಾಗಿ ನಿದ್ದೆ ಬಂದು ಬಿಡುತ್ತೆ... ಗಂಡು ಹುಡುಗರು ಇದ್ದ ಹಾಗೆ ಆಗುತ್ಯೆ?"....

"ನನ್ನ ತಮ್ಮಂದಿರು ಓದುತ್ತಿದಾರೆ... ಯಾರೂ ಬರುಲ್ಲ... ಅದಕ್ಕೆ ಈ ವಠಾರದ ಮನೇನ ಬಾಡಿಗೆಗೆ ಹಿಡಿದಿರೋದು. ಪಕ್ಕದಲ್ಲಿ ಜೋಷಿಯವರ ಮನೆ ಇದೆ... ಎದುರಿಗೆ ನೀವು ಇದೀರಿ.... ಆ ದಿಬ್ಬದ ಮನೇಗೂ ಯಾರೋ ಬಂದಿರುವಂತಿದೆ."

"ಹೌದೇನೆ ಮಂಗಳಾ... ನಂಗೆ ನೀನು ಹೇಳಲೇ ಇಲ್ಲ."

"ಏನೋ ನಂಗೊತ್ತಿಲ್ಲಮ್ಮ. ಸುಧಾಳ ಮದುವೆ ಸಮಯದಲ್ಲಿ ಅವರ ಮನೆಯವರು ಓಡಾಡ್ತಿದ್ರು.... ಈಗ ಯಾರಾದ್ರೂ ಬಂದಿರಬಹುದು... ಹೊಸಬರು...."

"ಸಾಮಾನು ಗೀಮಾನು ಏನೂ ಬಂದ ಹಾಗಿಲ್ಲ... ಅಲ್ಲದೇ.... ಲಕ್ಷ್ಮಿದೇವಮ್ಮ ಅಷ್ಟೇ ಲೆಖ್ಖಾಚಾರದ ಹೆಂಗಸು.... ವಠಾರದವರೆಲ್ಲರಿಗೂ ತಿಳಿಯುವ ಹಾಗೆ ಆಕೆಯ ಮಾತು ಕೇಳಿಸ್ತಿರ್ಲಿಲ್ವಾ?... ಅಲ್ಲದೇ ಆತನೂ ಊರಿಗೆ ಬಂದಂತಿಲ್ಲ..."

"ಅದೇ ನಂಗೂ ಆಶ್ಚರ್ಯ ಆದದ್ದು. ನಿಮಗೇನಾದ್ರೂ ಗೊತ್ತಿರಬಹುದು ಅಂತ ಅಂದ್ಕೊಂಡೆ.... ನಾನು ಬರ್ಲಾ?... ಬರೀ ಬಾಗಿಲು ಹಾಕ್ಕೊಂಡು ಬಂದಿದೀನಿ..."

"ಜೋಷಿ ಮನೆಯ ಮದುವೆಯಿಂದ ಒಂದು ಅನುಕೂಲ ಆಯ್ತು... ವಠಾರ ಬೆಳಕಾಯ್ತು.... ಕತ್ತಲೆ ಕತ್ತಲೆಯಾಗಿತ್ತು.... ಹೊರಗೆ ಕಾಲಿಡುಕ್ಕೆ ಹೆದರಿಕೆ ಆಗ್ತಿತ್ತು...." ಮಂಗಳ ಹೇಳಿದಾಗ, ಪಂಕಜ ಹೌದು ಎನ್ನುವಂತೆ ತಲೆದೂಗಿದಳು.

ಪಂಕಜ ಹೊರಟು ಹೋಗಿದ್ದಳು ಮಗಳು ತಂದೆಗೆ ಹೇಳಿದಳು. "ಆ ಮನೆ ಈ ಮನೆಗಿಂತ ಚೆನ್ನಾಗಿದೆ. ಸ್ವಲ್ಪ ದೊಡ್ಡದಾಗಿಯೂ ಇದೆ. ಎತ್ತರದಲ್ಲಿದೆ. ಜೋರಾಗಿ ಮಳೆ ಬಂದರೆ, ಈ ಮನೆಯ ಮುಂದೆ ನಿಂತುಕೊಳ್ಳುವ ಹಾಗೆ ನೀರು ನಿಲ್ಲುಲ್ಲ.... ಆ ಮನೆಗೆ ಹೋಗೋಣ ಕೇಳ್ತೀರಾ ಅಣ್ಣಾ...."

"ಮನೆ ದೊಡ್ಡದಾಗಿದ್ದರೆ, ಬಾಡಿಗೆಯೂ ದೊಡ್ಡದಾಗಿರುತ್ತೆ. ಈ ಮನೆಗೇ ಬಾಡಿಗೆ ಜಾಸ್ತಿ ಅಂತ ಅಂದ್ಕೋತಾ ಇದ್ದೆ ನಾನು...."

"ಹೇಗೋ ಆಗುತ್ತೆ. ಹೆಣ್ಣು ಮಕ್ಕಳು ಬೆಳೆದು ದೊಡ್ಡವರಾಗ್ತಿದಾರೆ... ಸರೋಜ ಬಾಣಂತನಕ್ಕೆ ಬಂದರೆ, ಇವಳಿಗೆ ಮದುವೆ ಆದ್ಮೇಲೆ, ಮನೆ ಸ್ವಲ್ಪ ದೊಡ್ಡದಾಗಿದ್ದರೆ ಒಳ್ಳೇದೇ ಅಲ್ವಾ?" ಜಾನಕಿ ಕೇಳಿದಳು.

"ಏನು ಹೇಗೋ ಆಗುತ್ತೆ ಅಂತಂದರೆ ? ಈ ಮನೇಲಿ ದುಡಿಯೋನು ನಾನೊಬ್ಬ ಖರ್ಚಿನ ಮೇಲೆ ಖರ್ಚು.... ನಿನಗೆಲ್ಲಿ ಅರ್ಥವಾಗುತ್ತೆ ಅದೆಲ್ಲ..!"

"ಹೌದು ಖರ್ಚಿನ ವಿಷಯ ನನಗೇನು ಅರ್ಥವಾಗುತ್ತೆ ?.... ಮನೆಗೆ ಬರೋರು ಹೋಗೋರು ಇರುವಾಗ ಬಿಡುಬಿಸಾಗಿ ಜಾಗ ಇರಲಿ ಅಂತ ಅಂದ್ಕೊಂಡೆ...."

"ಅಣ್ಣಾ ನಾನು ಎಲ್ಲಾದ್ರೂ ಕೆಲಸಕ್ಕೆ ಸೇರಿಕೊಳ್ತೀನಿ... ನಂಗೂ ಎಸ್.ಎಸ್. ಎಲ್.ಸಿ ಆಗಿದೆಯಲ್ಲ..."

"ಏನೂ ಬೇಡ ಮನೇಲೇ ತೆಪ್ಪಗಿರು..."

"ಹೋಗಲಿ ನಾಲ್ಕು ಜನ ಹುಡುಗೀರ್ಗೆ ಸಂಗೀತ ಪಾಠಾನಾದ್ರೂ ಹೇಳ್ಕೊಡ್ತೀನಿ...."

"ಅದೆಲ್ಲಾ ಏನೂ ಬೇಡ... ಇವಳು ಎದ್ದು ಓಡಾಡುವ ಹಾಗ್ತಿದ್ದ ಹಾಗೇ,

ಮದುವೆಗೆ ದಿನ ಗೊತ್ತು ಮಾಡಿಸ್ತೀನಿ. ಮದುವೆ ಮಾಡ್ಕೊಂಡು ಹೋಗು."

"ಅವರಿಗೆ ಕಾಗದ ಬರೆದ್ರಾ? ಮದುವೇನ ಇನ್ನೊಂದೆರಡು ಮೂರು ತಿಂಗಳು ಮುಂದಕ್ಕೆ ಹಾಕೋಣ ಅಂತ..."

"ಹೂಂ.... ಕಾಗದ ಬರೆದು ಎಷ್ಟೋ ದಿನ ಆಯ್ತು... ಅವರಿಂದ ಉತ್ತರವೇ ಇಲ್ಲ... ಇನ್ನು ತಲುಪಿದೆಯೋ ಇಲ್ಲವೋ ?.... ಮಂಗಳಾ ಅವರ ಪತ್ರಕ್ಕೆ ಉತ್ತರ ಬರೆದ್ಯಾ? ಬರೋ ವಿಷಯ ಏನಾದ್ರೂ ಬರೆದಿದಾರಾ?"

"ಇಲ್ಲ ಅಣ್ಣಾ.... ನಾನು ಆ ಕಾಗದದ ಓದ್ಲೇ ಇಲ್ಲ... ಕಳೆದುಹೋಯ್ತು...."

"ಏನು ಹಾಗಂದ್ರೆ?... ಇಷ್ಟು ಬೇಜವಾಬ್ದಾರಿ ಆದ್ರೆ ಆಯ್ತು..." ಸಿಡುಕಿದ.

"ಹೋಗ್ಲಿ ಬಿಡಿ... ಯಾಕೆ ಸಿಡುಕ್ತೀರಿ?.... ಪಾಪ ಇವಳಿಗೆ ಬಿಡುವೇ ಇಲ್ಲ... ಮನೆ ಕೆಲಸ ಜಾಸ್ತಿ ಆಗಿದೆ...."

"ಇವರೆಲ್ಲಾ ಏನ್ಮಾಡ್ತಾರೆ?|.. ತಿಂದು ಮೈ ಬೆಳೆಸ್ತಿದಾರೆ ಅಷ್ಟೇ... ಅಕ್ಕ ಒಬ್ಬಳೇ ಕೆಲಸ ಮಾಡ್ತಾಳೆ... ಅವಳಿಗೆ ಸಹಾಯ ಮಾಡ್ಬೇಕು ಅಂತ ನಿಮಗ್ಯಾರ್ಗೂ "ಗೊತ್ತಾಗುದಿಲ್ವಾ? ... ಕವಳ ಕತ್ತರಿಸುಕ್ಕೆ ಮಾತ್ರ ಗೊತ್ತಾ?...."

"ಸುಮ್ನೇ ಗೊತ್ತಿಲ್ದೇ ಬೈಬೇಡಿ ಅಣ್ಣಾ... ನಮ್ಮ ನಮ್ಮ ಕೆಲಸಾನ ನಾವು ಮಾಡ್ಕೋತೀವಿ... ಸ್ಕೂಲಿಗೆ ಹೋಗ್ತೀವಿ... ಹೋಂ ವರ್ಕು, ಟೆಸ್ಟು ಎಲ್ಲಾ ಇರುತ್ತೆ..." ವನಜ ನುಡಿದಳು.

"ಓಹೋ.... ಎದುರು ಮಾತಾಡುವಷ್ಟು ದೊಡ್ಡೋಳಾಗಿ ಬಿಟ್ಯಾ?..... ಇದನ್ನೆಲ್ಲಾ ನಿಮ್ಮ ಟೀಚರ್ ಹೇಳಿ ಕೊಟ್ಲಾ?".... ರಾತ್ರಿ ಹೋಗಿ ಅವಳ ಜತೆ ಮಲಗೋದನ್ನ ನಿಲ್ಲಿಸು...."

"ಅವರು ಪಾಠ ಹೇಳಿ ಕೊಡ್ತಾರೆ.... ನಾನು ಹೋಗ್ತೀನಿ..."ಜಲಜ ಎಂದಳು.

"ಏನೂ ಬೇಡ. ಬೇಕಾದ್ರೆ ಮಂಗಳಾ ಹೋಗ್ಲಿ...."

"ನಾನು ಹೋಗುಲ್ಲಣ್ಣಾ.... ನಂಗೆ ಬೇರೆ ಕಡೆ ಮಲಗಿದ್ರೆ ನಿದ್ದೆ ಬರುಲ್ಲ. ಅಲ್ಲದೇ ಬಾಲು ಒಬ್ಬನೇ ಮಲಗುಲ್ಲ..."

"ಸರಿ ಸರಿ.... ಏನಾದ್ರೂ ಮಾಡ್ಕೊಳ್ಳಿ..." ಎಂದ. ಶಂಕರ ವನಜಳ ಜಡೆ ಎಳೆದ. ಅವಳು ಹ್ಹಾಂ ಎಂದು ಕಿರುಚಿದಳು.

"ಕ್ಯಾತೆ ಮಾಡ್ಬೇಡಿ.... ಶಂಕ್ರೂ ದೊಡ್ಡೋನಾಗಿ ನೀನೂ ಹೀಗೇ ಆಡ್ತೀಯಲ್ಲ. ಓದೋದು ಬರೆಯೋದು ಏನೂ ಇಲ್ವಾ?"

"ಅಣ್ಣಾ.... ಇವನನ್ನೇ ಟೀಚರ್ ಮನೆಗೆ ಕಳಿಸ್ಬಿಡಿ.... ಪಾಠ ಹೇಳಿಸ್ಕೊಂಡು ಫಸ್ಟ್ ಬರ್ತಾನೆ" ಶಂಕರ ಕೆಂಪಾಗಿದ್ದ.

"ಸಾಕು ತಲೆ ಹರಟೆ ಮಾತು" ಮತ್ತೆ ರೇಗಿದ... ಎಲ್ಲರೂ ಗಂಭೀರವನ್ನು ನಟಿಸಿ,

ಪಾಠವನ್ನೋದುತ್ತಾ ಕುಳಿತರು. ಬಾಲು ಬಂದು ತಂದೆಯ ತೊಡೆಯ ಮೇಲೆ ಕುಳಿತು ತಾನು ಒಂದು ಪುಸ್ತಕವನ್ನು ಹಿಡಿದು ಓದುವವನಂತೆ ನಟಿಸಿದ.

ಂ ಂ ಂ

ಜೋಷಿ ಮನೆಯಿಂದ ಬಂದಿದ್ದ ಅಡಿಗೆ ಪದಾರ್ಥಗಳನ್ನು ಲಕ್ಷ್ಮೀದೇವಮ್ಮ ನೋಡಿದಳು.... ಯಾಕೋ ತಿನ್ನಬೇಕೆನ್ನಿಸಲಿಲ್ಲ.... ಎರಡು ಮೂರು ದಿನಗಳಿಂದ ಒಂದೇ ರೀತಿಯ ರುಚಿಯ ಅವರ ಮನೆಯ ಊಟ ಬೇಡವೆನ್ನಿಸಿತ್ತು... "ನಂಗೆ ಊಟ ಬೇಡ. ಸೇರುವ ಹಾಗಿಲ್ಲ. ಒಂದ್ನಾಲ್ಕು ಬಾಳೆ ಹಣ್ಣುಗಳನ್ನು ತಂದ್ಕೊಡು. ಫ್ಲಾಸ್ಕಿನಲ್ಲಿ ಕಾಫಿ ಮಿಕ್ಕಿದೆ ಕುಡೀತೀನಿ. ನಿನಗೆ ಸೇರಿದಷ್ಟನ್ನು ತಿಂದು ಉಳಿದಿದ್ದನ್ನು ಮುಚ್ಚಿಡು. ಬೆಳಿಗ್ಗೆ ಭಿಕ್ಷುಕರಿಗೆ ಹಾಕಿದ್ರಾಯ್ತು...."ಆಕೆ ಹೇಳಿದ್ದಕ್ಕೆ ಚಂದ್ರು ತಲೆಯಾಡಿಸಿದ.

"ಹಾಗಾದ್ರೆ ಅಂಗಡಿಗೆ ಹೋಗಿ ಬಂದು ಬಿಡ್ತೀನಿ" ಎನ್ನುತ್ತಾ ಬನಿಯನ್ ಮೇಲೆ ಷರಟನ್ನು ಧರಿಸಿ ಚಪ್ಪಲಿ ಮೆಟ್ಟಿ ಹೊಸಿಲು ದಾಟಿದ. ಅವನು ಆಕಡೆ ರಸ್ತೆಯನ್ನು ದಾಟಿದ ಇತ್ತ ಎರಡು ಕುದುರೆ ಗಾಡಿಗಳು ಬಂದು ನಿಂತವು. ಒಂದು ಗಾಡಿಯಿಂದ ಗೋಪಾಲ ಹಾಗೂ ನಾರಾಯಣನ ಮಗ ಮಾಧವ ಕೆಳಗಿಳಿದರು. ಇನ್ನೊಂದರಿಂದ ಪಾರ್ವತಿ ಹಾಗೂ ಅವಳ ಮಗಳು ಲೀಲಾ ಕೆಳಗಿಳಿದರು. ತಮ್ಮ ತಮ್ಮ ಕಿಟ್‌ಬ್ಯಾಗ್‌ಗಳನ್ನು ಹಿಡಿದು ಮುಂಬಾಗಿಲಿಗೆ ಬಂದರು. ಗೋಪಾಲ ಎರಡೂ ಜಟಕಾ ಗಾಡಿಯವರಿಗೆ ಬಾಡಿಗೆಯ ಹಣವನ್ನು ಕೊಟ್ಟು ಕಳಿಸಿದ್ದ. ಹಾಲಿನಲ್ಲಿ ಒಂಟಿಯಾಗಿ ಕುಳಿತು ದೇವರ ನಾಮ ಸ್ಮರಣೆ ಮಾಡುತ್ತಿದ್ದ ಲಕ್ಷ್ಮೀದೇವಮ್ಮ ಬೆಚ್ಚಿಬಿದ್ದಳು.

"ಇದೇನೇ ಒಬ್ಬಳೇ ಕೂತಿದೀಯ ಮುಂಬಾಗಿಲು ಹಾರು ಹೊಡೆದಿದೆ ಚಂದ್ರು ಎಲ್ಲಿ?" ಗೋಪಾಲ ವಿಚಾರಿಸಿದ.

"ಅಂಗಡಿಗೆ ಹೋಗಿದಾನೆ... ಅದೇನು ಬೇಗನೇ ಬಂದು ಬಿಟ್ರಲ್ಲ..."

"ಅಲ್ಲಿ ತಕ್ಷಣದ ಕಾರ್ಯಗಳು ಮುಗಿದಿದ್ದವು. ಇಲ್ಲಿ ನೀನು ಒಬ್ಬಳೇ ಇರ್ತೀಯಲ್ಲ ಅಂತ ಹೊರಟೆ. ನೋಡು ನನ್ನ ಜೊತೆಗೆ ಇನ್ನು ಯಾರು ಬಂದಿದಾರೆ ಅಂತ..." ಅಕ್ಕನ ಕಡೆ ಕೈ ತೋರಿದ.

"ಓ.... ಪಾರ್ವತೀನೂ ಬಂದಿದಾರೆ...." ಧ್ವನಿಯಲ್ಲಿ ಉತ್ಸಾಹವಿರಲಿಲ್ಲ.

"ನಿನ್ನನ್ನು ನೋಡಿ ವರ್ಷಗಳೇ ಕಳೆದು ಹೋಗಿದ್ದವು ಲಕ್ಷ್ಮೀ.... ಅದಕ್ಕೇ ಬಂದು ಬಿಟ್ಟೆ ಗೋಪಾಲನೂ ಜತೆಗಿದ್ದ..."ಪಾರ್ವತಿ ನುಡಿದಳು.

"ಇನ್ನು ಯಾರೋ ಬಂದಂತಿದೆ."

"ಹೂಂ... ಲೀಲಾ ಬಂದಿದಾಳೆ ನಾರಾಯಣನ ಮಗ ಮಾಧವನೂ ಬಂದಿದಾನೆ..."

"ಸಮಯ ನೋಡಿ ಬಂದಿದೀರಲ್ಲ ಅತ್ತಿಗೇ.... ಇಲ್ಲೇನು ಉತ್ಸವವೇ

ಉರುಟಣೆಯೋ...?"

"ನಿನಗೆ ಊಟಕ್ಕೆ ತಿಂಡಿಗೆ ತೊಂದರೆ ಆಗುತ್ತಲ್ಲ ಅಂತ ನಾನೇ ಕರೆದ್ಕೊಂಡು ಬಂದೆ... ಲಕ್ಷ್ಮೀ... ಈ ಎರಡು ಮೂರು ದಿನ ಊಟಕ್ಕೆ ಏನ್ಮಾಡ್ಕೊಂಡೆ?"

"ಜೋಷಿ ಮನೆವ್ರು ಕಳಿಸ್ತಿದ್ರು.... ಬಾಯಿಗೆ ಹಾಕುಕ್ಕಾಗ್ತಿರಲಿಲ್ಲ, ಖಾರ... ಇವತ್ತೂ ಕಳಿಸಿದಾರೆ ನೀವು ಬಂದದ್ದು ಒಳ್ಳೆದಾಯ್ತು... ಒಂದು ರಾಶಿ ಇದೆ.... ಇಲ್ದಿದ್ರೆ ಮಿಕ್ಕು ದಂಡ ಆಗ್ತಿತ್ತು..."

"ಪಾರ್ವತಿ, ತೆಗೆದು ನೋಡು... ಎಲ್ರಿಗೂ ಆಗುವಷ್ಟು ಇದ್ದರೆ, ನಿನಗೆ ಮಾಡುವ ಕಷ್ಟ ಉಳಿಯುತ್ತೆ" ಗೋಪಾಲನೆಂದ...

"ನಾನು ಮುಟ್ಟಿ ಬಿಟ್ಟಿದೀನಿ ಅತ್ತಿಗೇ... ಹೇಗೂ ಬಂದಿದೀರಲ್ಲ. ಬಸ್ಸಿನ ಮೈಲಿಗೆ ಬಟ್ಟೇನ ಬಿಚ್ಚಿ, ರೇಶ್ಮೆ ಸೀರೆ ಉಟ್ಕೊಂಡು ಫಲಾಹಾರಕ್ಕೆ ಏನಾದ್ರೂ ಮಾಡಿ... ನಿಮಗೂ ಆಗುತ್ತೆ... ನಂಗೂ ಆಗುತ್ತೆ.... ಮಾಧೂಗೆ, ಇವರಿಗೆ, ಚಂದ್ರುಗೆ ಇಲ್ಲಿ ಸಾಕಾಗುವಷ್ಟಿದೆ."

"ತಿಂಡಿಗೆ ಎಲ್ಲಾ ಸಾಮಾನು ಇದೆಯಾ ? ಅಥವಾ ಏನಾದ್ರೂ ತರಬೇಕೋ?"

"ಏನಿದೆಯೋ ಅದರಲ್ಲೇ ಮಾಡ್ಲಿ... ಅದ್ಸರಿ, ನೀವು ಇವರನ್ನು ಮುಟ್ಟಿಸ್ಕೊಂಡಿಲ್ವಾ ಅತ್ತಿಗೇ..."

"ಇಲ್ಲ ಲಕ್ಷ್ಮೀ.... ಬಸ್ನಲ್ಲಿ ನಾನು ದೂರ ದೂರವೇ ಕೂತಿದ್ವು... ಎರಡು ಜಟಕಾ ಮಾಡ್ಕೊಂಡು ಬಂದ್ವು....

"ಆದ್ರೂ ಮೈಲಿಗೆ ಬೆರೆತೇ ಇರುತ್ತೆ... ರಾಮರಾಯನ ಮನೆ ಹುಡುಗೀರನ್ನ ಯಾರನ್ನಾದ್ರೂ ಕರೀರಿ.... ಟ್ರಂಕ್‌ನಲ್ಲಿರುವ ಮಡಿಬಟ್ಟೆಗಳನ್ನು ತೆಗೆದುಕೊಡಲಿ. "ಆಕೆ ಹೇಳುತ್ತಿದ್ದಾಗ ಚಂದ್ರು ಬಾಳೆ ಹಣ್ಣುಗಳನ್ನು ತೆಗೆದುಕೊಂಡು ಬಂದ.

"ಎಲ್ಹೋಗಿದ್ಯೋ ಚಂದ್ರೂ.... ಬಾಗಿಲನ್ನು ಹಾಗೆ ತೆಗೆದ್ಬಿಟ್ಟು?.... ಯಾರಾದ್ರೂ ನೇರಾ ಒಳಕ್ಕೆ ನುಗ್ಗಿದ್ರೆ...?"

"ಇಲ್ಲೇ ಪೆಟ್ಟಿಗೆ ಅಂಗಡಿಗೆ ಹೋಗಿದ್ದೆ... ಬಾಳೆ ಹಣ್ಣುಗಳನ್ನು ತಂದೆ..."

"ಈಗ್ಯಾಕೆ ಬಾಳೆ ಹಣ್ಣುಗಳನ್ನು ತರೋಕೆ ಹೋದೆ?..... ಅಷ್ಟೊಂದು ಅಡಿಗೆ ಪದಾರ್ಥ ಇದೆ... ನಾವೂ ಒಂದಿಷ್ಟು ಹಣ್ಣುಗಳನ್ನು ತಂದಿದೀವಿ... ಎಲ್ಲಾ ದಂಡ ಆಗುತ್ತಲ್ಲ.... ಎಷ್ಟು ತಂದಿದೀಯ?...."

"ನಾಲ್ಕು ಸಾಕು ಅಂತ ಅಮ್ಮ ಹೇಳಿದ್ರು ಅಷ್ಟೇ ತಂದಿದೀನಿ...."

"ಒಳ್ಳೆ ಕೆಲ್ಸ ಮಾಡ್ದೆ..."

"ಹಣ್ಣುಗಳನ್ನು ಒಳಬಾಗಿಲಲ್ಲಿ ಇಡು... ಈಗ್ಯಾಕೆ ತೆಗೀಬೇಕು? ಅತ್ತೆ ಬಂದಿದಾರೆ... ಫಲಾಹಾರಕ್ಕೆ ಏನಾದ್ರೂ ಮಾಡ್ತಾರೆ. ಉಳಿದೋರೆಲ್ಲ ಊಟ ಮಾಡಿ....

ಸಧ್ಯ ಬೆಳಿಗ್ಗೆ ಭಿಕ್ಷುಕನ್ನ ಕಾಯೋದು ತಪ್ಪಿತು" ಲಕ್ಷ್ಮಿದೇವಮ್ಮ ನುಡಿದಳು. ಚಂದ್ರು ಮಾಧವನ ಕಡೆ ನೋಡಿ ನಸುನಕ್ಕ....

"ಕಾಲೇಜಿಗೆ ರಜಾನಾ? ಬಂದು ಬಿಟ್ಟಿದೀಯಲ್ಲ..."

"ರಜ ಏನಿಲ್ಲ... ಮೂರು ಜನ ಆಗುತ್ತೆ ಹೊರಡು ಅಂತ ಅತ್ತೆ ಅಂದ್ರು ಹೊರಟು ಬಿಟ್ಟೆ...."

"ಮತ್ಯಾರು ಬಂದಿದಾರೆ...?"

"ಲೀಲಾ ಬಂದಿದಾಳೆ... ಗೊತ್ತಲ್ವಾ ಅತ್ತೆಯ ಮಗಳು..."

"ಹೂಂ ಗೊತ್ತು..."

"ಚಂದ್ರೂ ಮಂಗಳನ್ನೋ, ಅವಳ ತಂಗೀನೋ ಕರೆದುಬಾ... ಅತ್ತಗೆ ಮಡಿ ಬಟ್ಟೆಗಳನ್ನು ತೆಗೆದು ಕೊಡ್ಲಿ.... ಬಸ್ಸು ಮೈಲಿಗೇಲಿ ಅವಳು ಅಡಿಗೆ ಮನೆಗೆ ಹೇಗೆ ಹೋಗ್ತಾಳೆ?" ಗೋಪಾಲ ನುಡಿದಾಗ, ಚಂದ್ರು ಲಕ್ಷ್ಮಿದೇವಮ್ಮನ ಕಡೆ ನೋಡಿದ.

"ಹಾಗೇ ಒಂದ್ಲೋಟ ಹಾಲಿದ್ರೆ ಇಸ್ಕೊಂಡು ಬಾ...."

"ಹಾಲು ಮಾರೋರ ಮನೆಯಿಂದ ಕೊಂಡ್ಕೊಂಡು ಬರ್ತೀನಿ..."

"ಇಷ್ಟೊತ್ನಲ್ಲಿ ಹಾಲೆಲ್ಲಿ ಸಿಕ್ಕುತ್ತೆ? ಹೋಟೆಲ್ಲಿನವನು ಕೂಡ ಹೆಪ್ಪು ಹಾಕಿ ಬಿಟ್ಟಿರ್ತಾನೆ.... ರಾಮರಾಯನ ಮನೇಲಿ ಚಿಕ್ಕ ಚಿಕ್ಕ ಮಕ್ಕಳು.... ಹೆಚ್ಚು ಹಾಲನ್ನು ತಗೊಂಡಿರ್ತಾರೆ... ಬೇಕಾದ್ರೆ ಬೆಳಿಗ್ಗೆ ವಾಪಸ್ಸು ಕೊಟ್ರಾಯ್ತು...."

"ನಂಗೆ ಕೇಳುಕ್ಕೆ ಸಂಕೋಚ ಆಗುತ್ತೆ ಅಪ್ಪಾ.... ನೀವೇ ಹೋಗ್ಬನ್ನಿ..."

"ಇಷ್ಟು ಮಾಡುಕ್ಕೆ ಆಗುಲ್ವಾ ನಿನ್ಕೈಲಿ.... ಸರಿ ನೀವೇ ಹೋಗಿ...." ಲಕ್ಷ್ಮಿ ದೇವಮ್ಮ ನುಡಿದಾಗ, ಬೇಸರದಿಂದ ಚಂದ್ರು ಹೊರಟ. ಮಾಧವ ಅವನೊಂದಿಗೆ ನಡೆದ ಜಗುಲಿಯ ಮೇಳೆ ಕುಳಿತು ಸಣ್ಣ ದನಿಯಲ್ಲಿ ಹಾಡನ್ನು ಹೇಳಿಕೊಂಡು, ತೊಡೆಯ ಮೇಲೆ ಮಲಗಿದ್ದ ಬಾಲೂನ ತಟ್ಟುತ್ತಿದ್ದ ಮಂಗಳ ಹಾಡನ್ನು ನಿಲ್ಲಿಸಿದಳು.... ತಟ್ಟು ತ್ತಿದ್ದ ಕೈ ನಿಂತಿತು. ಅರೆಗತ್ತಲಿನಲ್ಲಿ ಗುರುತಿಸುವುದು ಆಗಿರಲಿಲ್ಲ..."ಯಾರು ?" ಎಂದು ಕೇಳಿದಳು.

"ನಾನು ಚಂದ್ರು... ಅತ್ತೆ ಕರೀತಿದಾರೆ.... ಬರ್ಬೇಕಂತೆ..."

"ಈಗ್ಲಾ?.... ಯಾಕಂತೆ?"

"ಮಡಿ ಬಟ್ಟೆ ತೆಗೆದುಕೊಡ್ಬೇಕಂತೆ.... ಹಾಗೇ ಒಂದ್ಲೋಟ ಹಾಲು ಇದ್ದರೆ ಕೊಡಬೇಕಂತೆ."

"ಇನ್ನು ನಿಮ್ಮಗಳ ಊಟ ಆಗಿಲ್ವ?"

"ಇಲ್ಲ ಆಗಿಲ್ಲ ಅಪ್ಪ, ಹಾಗೇ ನೆಂಟರಿಬ್ಬರು ಊರ್ನಿಂದ ಬಂದಿದಾರೆ..."

"ನಿಮಗೆ ಆಗದಿದ್ರೆ ನಿಮ್ಮ ತಂಗೀನ ಕಳಿಸಿ...."

"ವನಜಾ... ವನಜಾ... ಕರೆದಳು ಏನಕ್ಕಾ ಎಂದು ಕೇಳುತ್ತಾ ಹೊರಬಂದ ವನಜ, ಇರಿಬ್ಬರನ್ನೂ ಕಂಡು ಹಾಗೇ ನಿಂತಳು.

ಅತ್ತೆಗೆ ಒಂದಿಷ್ಟು ಒಗೆದ ಬಟ್ಟೆಗಳನ್ನು ತೆಗೆದುಕೊಡ್ಬೇಕಂತೆ... ಅಮ್ಮನಿಗೆ ಹೇಳ್ಬಿಟ್ಟು ಹೋಗು ಬೇಗ ಬಾ..... ಹಾಗೇ ಒಲೆ ಮೇಲೆ ಹಾಲಿದೆ. ಒಂದು ಲೋಟಕ್ಕೆ ಬಗ್ಗಿಸಿಕೊಂಡು ತೊಗೊಂಡು ಹೋಗು......" ಅವಳು ಒಳಗೆ ಹೋಗಿದ್ದಳು.

"ದಿಬ್ಬದ ಮನೆಯ ದೀಪ ಉರಿತಾನೇ ಇದೆಯಲ್ಲ. ಜೋಷಿ ಮನೆಯವರು ಈಗ್ಲೂ ಅಲ್ಲಿ ಯಾರಾದ್ರೂ ಮಲಗ್ತಾರೋ ಏನೋ?ನಿಮಗೆ ಗೊತ್ತಾ?"ಕೇಳಿದ

"ಇಲ್ಲ ಅಲ್ಲಿ ಯಾರೂ ಮಲಗುಲ್ವಂತೆ"

"ಹಾಗಾದ್ರೆ ದೀಪ ಯಾಕೆ ಉರೀತಿದೆ!| ಹೋಗಿ ಆರಿಸ್ಬಿಟ್ಟು ಬರ್ತೀನಿ ಅವನು ಅತ್ತ ತಿರುಗಿದ ಮಂಗಳ ತಡೆದಳು.

"ಅಲ್ಲಿ ಬರೀ ಕತ್ತಲ ಬೆಳಿಗ್ಗೆ ಹೋಗಿ ನೋಡಬಹುದಲ್ಲ.. ಸಾಯಂಕಾಲ ಮನೆಗೆ ಬೀಗ ಹಾಕಿತ್ತು ಅಂತ ಟೀಚರ್ರು ಹೇಳಿದ್ರು.

ಅಂದ್ರೇ... ಒಳಗೆ ಯಾರಾದ್ರೂ ಸೇರ್ಕ್ಕೊಂಡಿದಾರೆ ಅಂತ ಅಂತೀರಾ... ಹಾಗೇ ಹೇಳುತ್ತಿದ್ದಂತೆ. ವಿನಾಯಕ ಜೋಷಿ ಹೇಳಿದ್ದ ವಿಷಯ ನೆನಪಿಗೆ ಬಂತು. ಮೈಯಿನ ರಕ್ತ ಝುರ್‍ರನೆ ಇಳಿದಂತಾಯಿತು. ಬೆಳಿಗ್ಗೆ ಹೋಗಿ ನೋಡುವುದೇ ಸರಿ.. ಈಗ ಹೋಗುವುದು ಬೇಡ ಅಂತಂದುಕೊಂಡ ಅಷ್ಟರಲ್ಲಿ ಆ ಮನೆಯೊಳಗೆ ಉರಿಯುತ್ತಿದ್ದ ದೀಪ ಆರಿತ್ತು... ಸಣ್ಣಗೆ ಭಯ ಕಾಡಿತು... ತನಗೆ ತಾನೇ ಧೈರ್ಯ ಹೇಳಿಕೊಂಡ. ಮತ್ತೆ ಅ ಮನೆಯ ದೀಪ ಹತ್ತಿಕೊಂಡಿತು.

"ಈ ಕತ್ತಲೇಲಿ ಜಗುಲಿ ಮೇಲೆ ಕೂತಿದೀರಲ್ಲ ಮಂಗಳಾ... ನಿಮಗೆ ಭಯ ಆಗುಲ್ವಾ!"

"ಭಯ ಯಾಕೇ? ನಮ್ಮ ಮನೇಲಿ ನಾನು ಇದೀನಲ್ಲ ಅಲ್ಲದೇ ನಾನು ಹೆದರಿಕೊಂಡ್ರೆ ಇವರುಗಳೂ ಎಲ್ಲಾ ಹೆದರ್‍ತ್ತಾರೆ. ದೇವರ ಹೆಸರನ್ನು ಹೇಳಿಕೊಳ್ತಾ ಇದ್ದರೆ ಭಯ ಹೋಗುತ್ತೇ ಅಷ್ಟೇ.." ಅಷ್ಟರಲ್ಲಿ ವನಜಾ, ಹಾಲಿನ ಲೋಟವನ್ನು ಹಿಡಿದು ಹೊರಕ್ಕೆ ಬಂದಳು. " ನೀನು ಹೋಗಿ ಕೊಟ್ಬಿಟ್ಟು ಬೇಗ ಬಾ...." ಅವಳನ್ನು ಕಳಿಸಿದ್ದಳು.

ಮಾಧೂ ನೀನು ಹೋಗು... ಅಪ್ಪಾ ಕಾಯ್ತಾ ಇರ್ತಾರೆ" ಎಂದು ಹೇಳಿ ಅವನನ್ನೂ ಕಳಿಸಿ, ತಾನು ಅಲ್ಲೇ ಮಾತಿಗೆ ನಿಂತ.

"ಯಾರೇ ಅಲ್ಲಿ ಆಚೆ ಇರೋದು?" ಎನ್ನುತ್ತಾ ರಾಮ ರಾಯ ಹೊರಗೆ ಬಂದಾಗ ಕಂಬಕ್ಕೆ ಒರಗಿ ನಿಂತಿದ್ದ ಚಂದ್ರು ನೆಟ್ಟಗೆ ನಿಂತ.

"ನಾನು ಸಾರ್ ಚಂದ್ರು... ಆ ದಿಬ್ಬದ ಮನೇಲಿ ದೀಪ ಉರೀತಾ ಇದೆಯಲ್ಲ..

ಅದನ್ನೇ ಕೇಳ್ತಿದ್ದೆ."

"ಹೌದಾ! ನಂಗೆ ಗೊತ್ತೇ ಇರಲಿಲ್ಲ. ಯಾರೋ ಆರಿಸೋದನ್ನ ಮರೆತಿರಬಹುದು ಆ ಮನೆ ರಿಪೇರಿ ಆಯ್ತಲ್ಲ ಬಾಡಿಗೆಗೆ ಕೊಡುವ ಉದ್ದೇಶ ಇದೆಯಾ?

"ಏನೋ ನಂಗೊತ್ತಿಲ್ಲ ಸಾರ್. ನಮ್ಮ ತಂದೇನ ಕೇಳ್ಬೇಕು."

"ನಿಮ್ಮ ತಂದೆ ಬಂದ್ರೇನು!"

"ಹೂಂ ಈಗ ಸ್ವಲ್ಪ ಹೊತ್ತಿಗೆ ಮುಂಚೆ ಬಂದ್ರು."

"ಹೌದೇನು! ಈ ವನಜಾ ಎಲ್ಲಿ ಹೋದ್ಲು! ಕಾಣ್ತಾ ಇಲ್ಲ. ಮಂಗಳಾ ನಿಮ್ಮಮ್ಮ ಕರೀತಾ ಇದಾಳೆ. ಏನೂಂತ ಕೇಳ್ಕೊಂಡ್ಹೋಗು ಮಂಗಳ ಎಚ್ಚೆತ್ತಳು. ತಾನು ಅಲ್ಲಿ ಮಾತಾಡ್ತಾ ನಿಂತಿರುವುದು ತಂದೆಗೆ ಸರಿ ಹೋಗಲಿಲ್ಲವೆಂದು ತಿಳಿಯಿತು. ಒಳಗೆ ಹೊರಟು ಹೋದಳು. ಚಂದ್ರುಗೆ ಆತನೊಡನೆ ಮಾತನಾಡುವ ಆಸಕ್ತಿ ಇರಲಿಲ್ಲ.

"ಜೋಷಿಯವರ ಮನೇಲಿ ಆ ಮನೆಯ ಬೀಗದ ಕೈಯನ ಇದ್ದರೆ ಇಸ್ಕೊಂಡು ದೀಪ ಆರಿಸಿ ಬಿಟ್ಟು ಬರ್ತೀನಿ." ಎಂದು ಹೇಳಿ ಅಲ್ಲಿಂದ ಕದಲಿದ ರಾಮರಾಯ ಮನೆಯೊಳಕ್ಕೆ ಹೊರಟು ಹೋದ. ಚಂದ್ರು ಹಾಗೇ ಸುಮ್ಮನೇ ಹಿಂತಿರುಗಿ ನೋಡಿದ ಆ ಮನೆ ದೀಪ ಆರಿತ್ತು. ಕತ್ತಲು ತುಂಬಿತ್ತು. ಸಣ್ಣಗೆ ಎದೆ ನಡುಗಿತು. ಆ ಮನೆಯಲ್ಲಿ ಯಾರೋ ಇದಾರೆ. ವಿನಾಯಕ ಜೋಷಿ ಹೇಳದಂತೆ. ದೆವ್ವದ ಆಟವಾಗಿದ್ದರೇ.. ಒಬ್ಬನೇ ಪರೀಕ್ಷಿಸುವುದು ಹೇಗೆ? ಜೊತೆಗೆ ಒಂದಿಬ್ಬರು ಬೇಕು ಹಾಗೇ ಈ ಕತ್ತಲೆಯಲ್ಲಿ ಹೋಗುವುದು ಸರಿಯಲ್ಲ ಎಂದುಕೊಂಡು ಪಂಕಜನ ಮನೆಯ ಕಡೆ ತಿರುಗಿದ

ಈ ಟೀಚರ್ ಒಬ್ಬರೇ ಇದಾರೆ.. ಸ್ವಲ್ಪ ಎಚ್ಚರವಾಗಿರಿ ಅಂತ ಹೇಳ್ಬೇಕು. ದೆವ್ವನೇ ಆಗಲಿ, ಈ ಯಾರೇ ಇರಲಿ ಅವರಿಂದ ಟೀಚರ್‌ಗೆ ತೊಂದರೆ ಆಗದಿದ್ದರೆ ಸಾಕು ಎಂದುಕೊಂಡು ಅವರ ಮನೆಯ ಬಾಗಿಲನ್ನು ಬಡಿದ ಪಂಕಜ ಬಾಗಿಲನ್ನೂ ತೆರೆದಳು. ಎದುರಿಗೆ ನಿಂತಿದ್ದ ಚಂದ್ರುವನ್ನು ಕಂಡು ಹಿಂದೆ ಸರಿದಳು.

"ಯಾರು ಅಂತ ಕೇಳ್ದೇ ಬಾಗಿಲನ್ನು ತೆಗೆದು ಬಿಟ್ರಲ್ಲ ಟೀಚರ್ ನಿಮಗೆ ಭಯ ಆಗುಲ್ವಾ? ನಗುತ್ತಾ ಪ್ರಶ್ನಿಸಿದ.

"ವನಜ ಅಂತ ಅಂದ್ಕೊಂಡೆ ನೀವು ಅಂತ ಗೊತ್ತಾಗ್ಲಿಲ್ಲ."

"ನಾನು ಅಂತ ಗೊತ್ತಾಗಿದ್ರೆ ತೆಗೀತಿರ್ಲಿಲ್ವಾ?"

"ಏನೋ ಗೊತ್ತಿಲ್ಲ. ಅದೇನು ಇಷ್ಟು ಹೊತ್ನಲ್ಲಿ! ಏನಾದ್ರೂ ಹೇಳ್ಬೇಕಾ?"

" ಆ ದಿಬ್ಬದ ಮನೆಯಲ್ಲಿ ಯಾರಾದ್ರೂ ಓಡಾಡೋದನ್ನು ನೋಡಿದೀರಾ?"

"ಇಲ್ಲ ನಾನು ಯಾರನ್ನೂ ಕಂಡಿಲ್ಲ. ರಾತ್ರಿಯ ಹೊತ್ತು ಒಮ್ಮೊಮ್ಮೆ ದೀಪ ಹಾಕಿರೋದನ್ನ ನೋಡಿದೀನಿ... ಜೋಷಿ ಮನೆಯವರು ಯಾರಾದ್ರೂ ಹೋಗಿ ಮಲಕ್ಕೋತಾರೇನೋ ಅಂತ ಅಂದ್ಕೊಂಡೆ."

"ಇಲ್ಲ ಅವರು ಅವತ್ತೇ ಬೀಗದ ಕೈ ತಂದು ಕೊಟ್ರು..."

"ಅವರ ಹತ್ರ ಇನ್ನೊಂದು ಬೀಗದ ಕೈ ಇರಬಹುದು...."

"ಅಲ್ಲಿ ಹೋಗಿ ಮಲಗೋರು ಯಾರಿದಾರೆ? ಯಾವ ನೆಂಟರಿಷ್ಟರೂ ಉಳಿದುಕೊಂಡಿಲ್ಲ. ಮನೆಯವರು ಯಾರೂ ಹೋಗಿರುಲ್ಲ....

"ಮತ್ತೆ ಯಾರಿರಬಹುದು ? ಮನೇನ ಖಾಲಿ ಬಿಟ್ಟರೆ... ಯಾರೋ ಬಂದು ಸೇರ್ಕ್ಕೊತಾರೆ... ಹೇಗೂ ರಿಪೇರಿ ಆಗಿದೆಯಲ್ಲ. ನಮ್ಮ ಪರಿಚಯದವರಿಗೆ ಒಬ್ಬರಿಗೆ ಮನೆ ಬೇಕಂತೆ.... ಕೊಡ್ತಾರಾ ಅಂತ ಕೇಳಿದ್ರು ಬಾಡಿಗೆ ಎಷ್ಟು ಹೇಳ್ತೀರಿ?"

"ಅವನು ನಕ್ಕ... ನನ್ನನ್ನ ಕೇಳಿದ್ರೆ? ಇದಕ್ಕೂ ನನಗೂ ಯಾವ ಸಂಬಂಧವಿಲ್ಲ..."

"ಸಂಬಂದ ಯಾಕಿಲ್ಲ? ನೀವೂ ಮನೆ ಯಜಮಾನರ ಮಗ...."

"ಮನೆ ಯಜಮಾನಿತಿಯ ದತ್ತು ಮಗ ನಾನು... ಯಜಮಾನನಿಗೇ ಯಾವ ಸ್ವಾತಂತ್ರ್ಯವಿಲ್ಲ ಇನ್ನು ನನಗೆಲ್ಲಿದೆ ಅಧಿಕಾರ ಎಂದು ಹೇಳಬೇಕೆಂದುಕೊಂಡರೂ ಹೇಳಲಿಚ್ಛಿಸದೇ ಸುಮ್ಮನಾದ... ಯಾಕೆ ಸುಮ್ಮನಾಗಿಬಿಟ್ರಲ್ಲ...."

"ಇದನ್ನೆಲ್ಲ ನಮ್ಮ ತಂದೆಯ ಹತ್ತಿರ ಮಾತಾಡಿ ಅವರೇ ಇದನ್ನೆಲ್ಲ ನೋಡಿಕೊಳ್ಳೋದು...."

"ನಿಮ್ಮ ತಂದೇನ ಕೇಳಿ, ನನಗೆ ತಿಳಿಸುಕ್ಕೆ ಆಗುತ್ತಾ ?"

ಇಲ್ಲ ಎನ್ನಲಾಗಲಿಲ್ಲ. ಅಲ್ಲದೇ ಈ ನೆವದಲ್ಲಿ ಇವಳನ್ನು ಮತ್ತೊಮ್ಮೆ ಭೇಟಿಯಾಗಬಹುದು ಅಂತಂದುಕೊಂಡ. "ಆಯ್ತು. ಇನ್ನೊಂದೆರಡು ದಿನಗಳಲ್ಲಿ ತಿಳಿಸ್ತೀನಿ... ನಾನು ಈಗ ಹೋಗ್ತೀನಿ... ಬಾಗಿಲನ್ನು ಭದ್ರವಾಗಿ ಹಾಕ್ಕೊಳ್ಳಿ.... ಮರಗಿಡಗಳ ನಡುವೆ ಯಾರಾದ್ರೂ ಅವಿತುಕೊಂಡಿದ್ರೂ ಕಾಣುಲ್ಲ..."ಎಂದ.

"ಇದನ್ನೆಲ್ಲ ತೆಗೆಸಿ ಜಾಗ ಮಾಡಿ, ಇನ್ನು ಹತ್ತಾರು ಮನೆ ಕಟ್ಟಿಸಬಹುದು.... ಬಾಡಿಗೆಯೂ ಬರುತ್ತೆ...."

"ಇದನ್ನೆಲ್ಲ ನಮ್ಮ ತಾಯಿ ತಂದೆ ನೋಡ್ಕೋತಾರೆ.... ನನಗೆ ಬೇಡ ಬಿಡಿ... ಕೆಲಸ ಸಿಕ್ಕಿದ ಕೂಡಲೇ ಯಾವ ಊರಿಗೆ ಹಾಕ್ತಾರೋ ಅಲ್ಲಿಗೆ ಹೋಗೋನು ನಾನು.. ಇಂಟರ್‌ವ್ಯೂನ ಫಲಿತಾಂಶಕ್ಕಾಗಿ ಕಾಯ್ತಾ ಇದೀನಿ... ಅಂದ್ಹಾಗೇ ನಿಮ್ಮ ತಂದೆ ಯಾವಾಗ ಬರ್ತಾರೆ?....

"ಅವರು ಸಧ್ಯಕ್ಕೆ ಬರುಲ್ಲ. ಅವರಿಗೆ ಇನ್ನು ಪೂರ್ತಿ ಹುಶಾರಾಗಿಲ್ಲ. ನಾನೂ ಮೈಸೂರಿಗೇ ವರ್ಗಕ್ಕೆ ಪ್ರಯತ್ನ ಪಡ್ತಿದೀನಿ. ಸಿಗದಿದ್ದರೆ ರಾಜೀನಾಮೆ ಕೊಟ್ಟು ಬಿಡ್ತೀನಿ.. ಅಲ್ಲೇ ಯಾವುದಾದ್ರೂ ಸ್ಕೂಲ್ನಲ್ಲಿ ಟೀಚರ್ ಆಗಿ ಸೇರ್ಕ್ಕೊತೀನಿ...."

"ಹೌದಾ ? ಹಾಗಾದ್ರೆ ಇಲ್ಲಿಂದ ಹೊರಟುಬಿಡ್ತೀರಾ? "ಅವನ ಧ್ವನಿ ಸಪ್ಪಗಿತ್ತು.

"ಹೂಂ. ಇಲ್ಲಿ ಒಬ್ಬಳೇ ಇರುವುದೆಂದರೆ ಕಷ್ಟವೇ..." ಅವನು ಸುಮ್ಮನೆ

ಅವಳನ್ನೇ ದಿಟ್ಟಿಸಿದ. ಅಷ್ಟರಲ್ಲಿ ವನಜ ಬಂದಿದ್ದಳು.

"ನಿಮ್ಮನ್ನು ಕರೀತಿದಾರೆ...."ಚಂದ್ರುಗೆ ಹೇಳಿದಳು ಅವನು ಅಲ್ಲಿಂದ ಹೊರಟ.

"ನಾನು ಊಟ ಮಾಡ್ಬಿಟ್ಟು ಬರ್ತೀನಿ ಟೀಚರ್ ಎಂದು ಹೇಳಿ ವನಜ ತನ್ನ ಮನೆಯ ಕಡೆಗೆ ನಡೆದಳು... ಪಂಕಜ ಒಳ ಸೇರಿಕೊಂಡು ಬಾಗಿಲನ್ನು ಭದ್ರಪಡಿಸಿಕೊಂಡಳು.

೦ ೦ ೦

"ರಾಘಣ್ಣ ಪತ್ರ ಬರ್ದಿದಾನ ರಾಧಾ ಬಾಯೀನ ತಪಾಸಣೆಗೆ ಡಾಕ್ಟರ ಬಳಿಗೆ ಕರ್ಕೊಂಡು ಹೋಗಿದ್ನಂತ. ಆಕಿ ಆರೋಗ್ಯ ನೆಟ್ಟಗಿಲ್ಲಾಂತ ಡಾಕ್ಟರು ಹೇಳ್ಯಾರಂತ" ಜೋಷಿ ಪತ್ರವನ್ನು ಓದಿ ಹೇಳಿದ.

"ಏನಾಗಿದ್ಯಂತ ? ಈ ಮುಂಚೀನ ನಾನು ತಿಳಿದಿದ್ದೆ.... ಈ ಮೊದ್ಲೆ ಇಲ್ಲೇ ಡಾಕ್ಟರ ಕೂಡೆ ಒಯ್ಯಬೇಕಾಗಿತ್ತು...." ಹಿರಿಯ ಜೋಷಿ ಹೇಳಿದರು.

"ಏನಿರ್‍ತದೋ ಹೆಂಗ ತಿಳೀತದಿ? ಆಕೀ ಕೈಯಾಗೆ ಮನಿ ಕೆಲಸ ಸಾಗ್ತಿರ್‍ಲಿಲ್ಲ... ಊಟ ತಿಂಡಿ ಸೇರ್‍ತಿರ್‍ಲಿಲ್ಲ... ನಾನು ಅವತ್ತೇ ತುಂಗಾ ಸಂಗಡ ಹೇಳಿದ್ದೆ..."

"ನನ್ನ ತ್ಯಲಿ ಮ್ಯಾಲೆ ಗೂಬಿ ಕೂರಿಸ್ಬ್ಯಾಡ್ರೀ ಅಕ್ಕಾ.... ಮದುವಿ ಮನೆ ಗದ್ದಲದಾಗ, ಎಲ್ರೂ ತ್ರಾಸ ತಗೊಂಡಿದ್ವೋ ಇಲ್ಲೋ.... ಆಕಿ ಸೂಕ್ಷ್ಮ ಇದಾಳಂತ ನಂಗೇನು ಕನಸ ಬೀಳ್ತದೇನು?....

ಹಂಗಲ್ಲೇ ತುಂಗಾ... ಆಕಿ ನಿನ್ನ ಸೊಸಿ ಇದ್ದಾಳಾ... ಮಗಳಿದ್ದ್ಹಾಂಗ... ತಾಯಿಯಾಗೋ ಸೂಚ್ನೆ ಇದ್ದರ ನಿಂಗಾ ಮೊದಲ ತಿಳೀಬೇಕಲ್ವಾ.... ನಂಗೇನು ತಿಳೀತೈತಿ.... ನಾಗೊಡ್ಡು ಹೆಂಗಸ ಅದೀನಿ ಹೌದಲ್ಲೋ..."

"ಹಿಂಗೆಲ್ಲಾ ಮಾತಾಡ್ಬೇಡ್ರೀ ವೈನಿ... ನೀವೂ ಈ ಸಂಸಾರದಾಗ ಭಾಳ ವರ್ಷದಿಂದ ಇದೀರಿ... ಎಲ್ಲಾ ತಿಳೀತೈತಿ... ಆಕೀನೂ ನಿಮಗ ಮಗಳಿದ್ದ್ಹಾಂಗ... ನೀವ್ಯಾಕೆ ಕೇಳ್ಲಿಲ್ರೀ. ..." ಕಿರಿಯ ಜೋಷಿ ನುಡಿದ.

"ನೀವೂ ನನ್ನನ್ನೇ ಅನ್ಬೇಡ್ರಪ್ಪಾ.... ನಾನು ಹಿರಿಯಾಕಿ ನಿಜ... ನಂಗೇನು ಅನುಭವ ಐತಿ?..." ಗಂಡನ ಕಡೆ ಕೋಪದಿಂದ ನೋಡಿದಳು... ಹಿರಿಯ ಜೋಷಿ ತಲೆ ತಗ್ಗಿಸಿದ್ದ.

"ಈಗ ಆ ಮಾತು ಬಿಡ್ರೀ ಅಕ್ಕಾ.... ರಾಘಣ್ಣ ಇನ್ನೇನ ಬರದಾನ?"....

"ರಾಧಾ ಬಾಯೀನ ಷಹರಿನ ದೊಡ್ಡಾಸ್ಪತ್ರಿಗೆ ಕರೆದೊಯ್ದು ತಪಾಸಣೆ ಮಾಡ್ಸಿ ಅಂತ ಡಾಕ್ಟರು ಹೇಳ್ಯಾರಂತ... ಹುಬ್ಳೀಗೆ ಕರೆದೊಯ್ತಾರಂತೆ..."

"ಅಂತಾದ್ದೇನಾಗದಂತಾ ?.... ನಾವೆಲ್ಲಾ ಬಸಿರೇ ಆಗ್ಲಿಲ್ಲೇನು? ಮಕ್ಳನ್ನ ಹೆರ್‍ಲೇ

ಇಲ್ಲೇ?... ಡಾಕ್ಟರು ಏನ್ಹೇಳಿದ್ರೋ ರಾಘಣ್ಣ ಏನ ಕೇಳಿಸ್ಕೊಂಡ್ನೋ.... ಇಷ್ಟಕ್ಕೆಲ್ಲಾ ಷಹರಿನ ಡಾಕ್ಟರ್‍ಯಾಕೆ?...."

"ಹಂಗಾರೆ ರಾಘಣ್ಣಂಗೆ ನಾ ಏನ ಬರೀಲಿ?"

"ಏನೂ ಬರೀಬ್ಯಾಡಿ.... ನಾಲ್ಕು ದಿನ ಕಳೆದ್ರೆ ಅವನೇ ಸಿಹಿ ಸುದ್ದಿ ತಿಳಿಸ್ತಾನ. ನಮ್ಮ ದತ್ತಗೆ ಖಬರ ಕಳಿಸ್ಬೇಕು..."

"ಹಾಗಾರ ನಾ ದತ್ತಗ ಪತ್ರ ಬರಿಲೇನು ?

"ಹೂಂ... ತಿಳಿಸ್ರೀ ... ಅವ ತಂದೆಯಾಗೋ ಸುದ್ದೀನ ನಾವೇ ಮುಂದಾಗಿ ತಿಳಿಸೋಣು..."

'ಹೂಂ ಹಾಗೇ ಮಾಡೋ ತಮ್ಮಾ.... ನೀ ಅಜ್ಜ ಆಗ್ತಾ ಇದೀ.... ನಾ ದೊಡ್ಡಜ್ಜ ಆಗ್ತೀನಿ.... ದತ್ತಗೆ ಲಗ್ನ ಆಗಿ ಎರಡು ವರ್ಷ ಕಳೆದದ... ಈಗ ತಂದೆ ಆಗೋ ಯೋಗ ಬಂದೈತಿ.... ತುಂಗಾ ಬಾಯಿ ಏನಾರ ಸಿಹಿ ಅಡಿಗೆ ಮಾಡವ್ವಾ.... ಬಾಯಿ ಸಿಹಿ ಮಾಡ್ಕೊಳ್ಳೋದು...."

"ವಯಸ್ಸಾದ್ರೂ ನಿಮ್ಮ ಚಪಲ ಕಡಿಮೆ ಆಗಲಿಲ್ರೀ ಮೊನ್ನಿ ಮೊನ್ನಿ ಲಗ್ನದ ಲಡ್ಡು ತಿಂದಿದ್ದು ಸಾಕಾಗಲಿಲ್ಲೇನ್ರೀ" ಗಂಡನಿಗೆ ಹೇಳಿ ನಕ್ಕಳು...

"ಸಿಹಿ ಸುದ್ಧಿ ಕೇಳಿದ್ಮೊಡ್ಲೇ ಸಿಹಿ ತಿನಬೇಕ... ಇಲ್ದಿದ್ರೆ ಏನು ಚೆನ್ನ? ನಿಮ್ಮ ಅಕ್ಕನ ಮಾತಿಗೆ ಕಿವಿ ಕೊಡ್ಬೇಡ್ವೇ ತುಂಗಾ... ಏನಾರ ಮಾಡು. ಬಾಳಿ ಹಣ್ಣು ಇದ್ದರೆ ಸೀಕರಿಣೇನಾದ್ರೂ ಮಾಡವ್ವಾ..."

"ಆಯ್ತು ಭಾವಾರಾ ನಾನು ಮಾಡ್ತೇನಿ.... ನಂಗೇನೂ ತ್ರಾಸ ಇಲ್ಲ. ನಮ್ಮ ದತ್ತಗೆ ಗಂಡು ಕೂಸು ಹುಟ್ಟಲಿ ಅಂತ ಆಶೀರ್ವಾದ ಮಾಡ್ರಲ್ಲಾ...." ಸರ್‍ರನೆ ಎದ್ದು ಭಾವ ವಾರಗಿತ್ತಿಯರಿಗೆ ನಮಸ್ಕರಿಸಿದಳು.

"ಆಯ್ತವ್ವಾ.... ದೇವ್ರು ನಿನ್ನಾಸೇನ ಪೂರಾ ಮಾಡ್ಲಿ...." ಇಬ್ಬರೂ ಆಕೆಗೆ ಆಶೀರ್ವದಿಸಿದರು. ತುಂಗಾ ಅಡಿಗೆ ಕೋಣೆಯ ಕಡೆಗೆ ನಡೆದಳು. ಅವಳ ಹಿಂದೆಯೇ ಹಿರಿಯ ಜೋಷಿಯ ಪತ್ನಿಯೂ ಎದ್ದು ಹೋದಳು. ಚಿಕ್ಕವರೆಲ್ಲರೂ ಮಧ್ಯಾಹ್ನ ಊಟಕ್ಕೆ ಬರುವವರಿದ್ದರು. ಅದಕ್ಕೆ ಮೊದಲೇ ಮಾತನಾಡಿ ಬಿಡಬೇಕೆಂದು ಜೋಷಿ ಅಣ್ಣನ ಬಳಿಗೆ ಸರಿದ.

"ರಾಘಣ್ಣನ ಪತ್ರ ನೋಡಿದರೆ, ನಂಗೆ ಬೇರೇನೋ ಅನುಮಾನ ಇರುತೈತಿ. ರಾಧಾಬಾಯಿಗೆ ಬೇರೇನೋ ಏನೋ ಖಾಯಿಲೆ ಇದ್ದಂಗೆ ಅನ್ನಿಸ್ತದೆ... ತಾಯಿ ಯಾಗೋದೇ ಆದ್ರ ಷಹರಿನ ಡಾಕ್ಟರ ಬಳಿಗೆ ಒಯ್ಯೋ ಪ್ರಸಂಗ ಏನಿರ್‍ತದ?"

"ಹಂಗೇನಾದ್ರೂ ರಾಘಣ್ಣ ಬರೆದಿದಾನೇನು?...."

"ಹೂಂ... ವಿಷಯ ತುಸು ಗಂಭೀರ ಐತಿ, ಆಕಿ ರಕ್ತಪರೀಕ್ಷೆ, ಮಲ ಮೂತ್ರ

ಪರೀಕ್ಷೆ, ಹಂಗೇ ಶ್ವಾಸಕೋಶದ ಎಕ್ಸ್‌ರೇ ಎಲ್ಲಾ ತೆಗೆಸ್ಬೇಕಾದ... ನೀನೂ ಬರ್ತೀಯೇನೂ ಭಾವಾ ಅಂತ ಕೇಳಿ ಬರದಾನಾ?"

"ನಾ ಬೇಕೂಂತ್ಲೇ ಓದ್ಲಿಲ್ಲಪ್ಪಾ... ತುಂಗಾ, ವೈನಿ ಎಲ್ರೂ ಗಾಬರಿ ಆಗ್ತಾರಂತಲಾ ನಾನು ಓದ್ಲಿಲ್ಲ... ಆಕಿಗೆ ಏನು ಖಾಯಿಲೆ ಇದ್ದೀತು ? ಈಗೇನ್ಮಾಡೋದು?"

"ರಾಧಾಬಾಯಿ ಸ್ವಲ್ಪ ಕೆಮ್ಮುತಿದ್ಲು ಅಲ್ಲೇನಪ್ಪಾ... ಸದಾ ನೀರ್ನಾಗೇ ಕೆಲ್ಸ ಮಾಡೋವಾಕಿ, ಕಫ ಕಟ್ಟಿದ್ದಾತು... ಪರೀಕ್ಷೆ ಮಾಡಿಸ್ಲಿ ಬಿಡು.... ರಾಘಣ್ಣಗೆ ರೊಕ್ಕ ಏನಾದ್ರೂ ಬೇಕಾಗತೈತೋ ಏನೋ.... ಅದಕೇ ಪತ್ರ ಬರೆದಾನ... ಹೂಂ ನೀ ಹೋಗಿ ಒಂದಿಷ್ಟು ರೊಕ್ಕ ಕೊಟ್ಟು ಬಾ...."

"ನನ್ಹತ್ರ ಎಲ್ಲೈತಿ ರೊಕ್ಕ? ವೊನ್ನಿ ವೊನ್ನಿ ಲಗ್ನದಾಗ ಕೈ ಬರಿದು ಮಾಡಿಕೊಂಡೀನಿ.... ಅವ ಹಂಗೇನೂ ಬರೆದಿಲ್ಲ... ಸರ್ಕಾರಿ ಆಸ್ಪತ್ರೆದಾಗ ತಪಾಸಣೆ ಮಾಡ್ಸಿದ್ರೆ ರೊಕ್ಕ ಯಾಕ ಬೇಕಾಗತೈತಿ?....

"ಸರಿ... ಹಂಗಾರ ನೀ ಹೋಗಿ ಏನು ಕತಿ ಅಂತ ತಿಳ್ಕೊಂಡು ಬಾ...."

"ಅಣ್ಣಾ, ನಾ ಹೋದ್ರ ಕಷ್ಟ ಆಗ್ತೈತಿ... ನೀ ಹೋಗಿ ಬಾ..."

"ನನ್ಹತ್ರ ರೊಕ್ಕ ಎಲ್ಲೈತೋ ? ನಿನ್ನ ಮಗಂಗೆ ಪತ್ರ ಬರಿ... ಅವಗ ಸರ್ಕಾರದೋರು ಭತ್ಯ ಕೊಡ್ತಾರು...."

"ಹಿಂಗಂತ ನಾ ಹ್ಯಾಂಗ ಬರೀಲಿ ಅವ ಗಾಬರಿ ಬೀಳ್ತಾನ... ದೂರ ದೇಶದ್ಯಾಗ ಕೂತಾನ ಓಡಿ ಬರೂ ಹಂಗೂ ಇಲ್ಲ...."

"ಸರಿ... ಮಗ ಹ್ಯಾಂಗ... ಅಪ್ಪ ಹೀಂಗಾ.... ನಾನೇ ಹೋಗ್ಬರ್ತೀನಿ..."

"ವೈನಿಗೆ ಏನೂ ಹೇಳೂದು ಬ್ಯಾಡಾ..."

"ನನಗೇನ ಅಷ್ಟೂ ಗೊತ್ತಾಗುದಿಲ್ಲೇನೋ ಮಂಗ್ಯಾ...? ನಾನೂ ಮನುಷ್ಯ ಇದ್ದೀನಿ... ಅಕ್ಕ ತಂಗಿ ಅತ್ಕೋತಾ ಕೂತ್ರೆ ನೀನೇನು ಮಾಡೀಯ... ಉಂಡಾದ್ಮೇಲೆ ನಾನು ಬಸ್ಸಿಗೆ ಹೊರಡ್ತೀನಿ... ನೀ ಚಿಂತಿ ಮಾಡ್ಬೇಡ... ನಿನ್ನ ಸಾಹುಕಾರನ ಹತ್ರ ಹೋಗಿ ಐವತ್ತು ರೂಪಾಯಿ ತಗೊಂಡು ಬಾ.... ನಂಗ ಖರ್ಚಿಗೆ ರೊಕ್ಕ ಇಲ್ಲ.."

"ಅವ ಕೊಡ್ತಾನೋ ಇಲ್ಲೋ...."

"ತುಂಗಾ ಹತ್ರ ಇದ್ರೆ ಕೇಳಿ ಇಸ್ಕೋ.... ಲಗ್ನದ ಸಮಯದಾಗೆ ಅವರಿವರು ಮುಯ್ಯೀ ಕೊಟ್ಟಾರ... ಅಧನ್ನ ಉಗ್ರಾಣದ ಡಬ್ಬಿಯಾಗೆ ಇಟ್ಟಿರ್ತಾಳೆ.'

"ಯಾಕೆ ಅಂತ ಕೇಳಿದ್ರೆ ಏನ್ಹೇಳಲೋ?"

"ಸಾಹುಕಾರ ಕಡದ ಹಣದ ಬಡ್ಡಿಗೆ ಪೀಡಿಸ್ತಾ ಇದಾನೆ ಅಂತಹೇಳಿದ್ರಾತು... ತುಂಗಾ ಇಲ್ಲ ಅನ್ನೋದಿಲ್ಲ... ಆಕಿ ಶ್ಯಾಣ ಇದ್ದಾಳೆ... ಹಂಗ ಅಡಿಗಿ ಮನಿಗೆ ಹೋಗಿ ನೋಡ... ಎಲೆ ಹಾಕಿ ಬಡ್ಸಿದ್ರೆ ಬೇಗ ಉಂಡು, ಬೇಗ ಹೊರಡ್ತೀನಿ.... ಹಂಗಾ ನಿನ್ನ

ವೈನೀನ ನಾ ಕರದೆ ಅಂತ ಆಚೆಗೆ ಕಳಿಸು...."ಕಿರಿಯ ಜೋಷಿ ಅಡಿಗೆ ಮನೆಗೆ ಬಂದು ವೈನಿಯನ್ನು ಆಚೆಗೆ ಕಳಿಸಿದ. ತುಂಗಾಬಾಯಿಯ ಹತ್ತಿರದಿಂದ ಅವಳು ಕೂಡಿಸಿಟ್ಟಿದ್ದ ನಲವತ್ತು ರೂಪಾಯಿಗಳನ್ನು ತೆಗೆದುಕೊಂಡು ಬಂದು ಅಣ್ಣನ ಕೈಗೆ ಕೊಟ್ಟ. ಮಕ್ಕಳು ಸ್ಕೂಲ್ನಿಂದ ಬರೋ ಮೊದ್ಲು ಉಂಡು ಹೊರಡ್ತೀನಿ. ನಾ ರಾಘಣ್ಣನ ಊರಿಗೆ ಹೋಗೇನಿ ಅಂತ ಯಾರ್ರೂ ತಿಳಿಯೋದು ಬ್ಯಾಡಾ... ಹಳ್ಳಿಗೆ ಜಮೀನು ವ್ಯಾಜ್ಯದ ಸಲುವಾಗಿ ಹೋಗ್ಯಾನ ಅಂತ ಹೇಳಿದ್ರಾತು" ಎಂದ... ಜೋಷಿ ಹೂಂ ಎಂದ.

"ಈಗ ನೆಪ್ಪಾತು ನೋಡೇ ತುಂಗವ್ವಾ... ನಮ್ಮೂರ ಹೊಲದ ಕಡಿಯಿಂದ ಒಂದಿಷ್ಟು ರೊಕ್ಕ ಬರೂದಿತ್ತು... ನಾ ಹೊಂಟೀನಿ..." ಊಟಕ್ಕೆ ಕುಳಿತಾಗ ಹೇಳಿದ.

"ಹೌದೇನು ಭಾವ... ಈಗ ಹೇಳ್ತೀದೀರಲ್ಲ... ನಿಮ್ಮ ತಮ್ಮನೂ ಹೇಳ್ಳಿಲ್ಲ..."

"ನನ್ನ ತಮ್ಮಗೂ ಹೇಳಿಲ್ಲ... ನಿನ್ನ ಅಕ್ಕಗೂ ಗೊತ್ತಿಲ್ಲ... ಈಗ ಎಲ್ರಿಗೂ ಹೇಳಿದ್ನಲ್ಲ... ಮತ್ತೇನು ? ಬೇಗ ಬೇಗ ನೀ ಬಡ್ಸು.... ಬಸ್ಸಿಗೆ ತಡವಾಗ್ತದೆ.... ನಾಳೆ ನಾಡಿದ್ದರ ಹಂಗೆ ಬಂದ್ಬಿಡ್ತೀನಿ.... ಏನೋ ಜೋಷೀ.... ಮನೀ ಕಡಿ ಜ್ವಾಪಾನ.... ಮಕ್ಕಳೂ ಜ್ವಾಪಾನ.... ನಿನ್ನ ಅಕ್ಕಗ, ಚೀಲಕ್ಕೆ ನಾಲ್ಕು ಬಟ್ಟೆ ಹಾಕಿಡುಕ್ಕೆ ಹೇಳವ್ವಾ...."

"ಭಾವಾ... ಹಂಗೇ ಬೀಗರ ಮನೀಗೂ ಹೋಗ್ಬನ್ನಿ... ಸುಧಾ ಹೆಂಗಿದ್ದಾಳೋ ನೋಡ್ಬನ್ನಿ... "ಅಷ್ಟರಲ್ಲಿ ಅವನ ಪತ್ನಿಯೂ ಬಂದು ನಿಂತಿದ್ದಳು.

"ಅವಳ್ಗೇನು ಧಾಡಿ ಆಗದ? ವೈನಾಗ ಇರ್ತಾಳಾ?.... ಈಗ ಹಬ್ಬ ಇಲ್ಲ ಹುಣಿಮಿ ಇಲ್ಲ... ಬರೀ ಕೈಯಾಗ ಹೋಗೋದು ಏನು ಚಂದ?.... ಪಂಚಮೀ ಹಬ್ಬದ ವ್ಯಾಳಗೆ ಕರ್ಕೊಂಡು ಬರೋಣು.... ಉಡಿ ತುಂಬಿ ಕಳ್ಸುಕ್ಕೆ ಸಿದ್ಧ ಮಾಡ್ಕೋ.... ಏನೇ ಯಜಮಾಂತೀ... ನಿಗೆ ಕ್ವಾಪಾನೇನೇ ?... ದವಡೀಲಿ ಕಡುಬು ಇಟ್ಕೊಂಡೀಯೋ ಹ್ಯಾಂಗೆ?... ಮೌನಗೌರಿ ವ್ರತ ಮಾಡಿಯೋ ಹ್ಯಾಂಗೆ?" ನಗಿಸಲು ಯತ್ನಿಸಿದ.

"ತುಂಗವ್ವ ತಾನೇ ಈ ಮನೆಯ ಯಜಮಾಂತೀ...? ನಂದೇನದ?... ನಾ ಹೀಂಗಾ ಇರೋಳು...."

"ನೀನೂ ನನ ಕೂಡೇ ಬರೋದಾದ್ರೆ ಬೇಗ ಉಂಡು ಹೊರಡು... ನಾಕು ದಿನ ಊರ್ನಾಗೆ ಇದ್ದು ಬರೋಣು..."

" ನಾ ಒಲ್ಲೆ... ಅಲ್ಲೇನೈತಿ ಅಂತ ಬರ್ಲಿ?... ಅವ್ವ ಇಲ್ಲ, ಅಪ್ಪ ಇಲ್ಲ. ಅಣ್ಣಗೆ, ವೈನಿಗೆ ನಮ್ಮ ನೆಪ್ಪಿಲ್ಲ... ನಿಮ್ಮ ಹೊಲದ ವ್ಯವಹಾರದ ಸಲುವಾಗಿ ಹೊಂಟೀರಿ ಹೋಗ್ಬನ್ನಿ...."

"ಸರಿ ಮತ್ತ... ನಗ ನಗ್ತಾ ಉಣ ಬಡಿಸು... ಗಂಟು ಮೋರೆ ಹಾಕ್ಕೋಬೇಡ.."

"ರೊಕ್ಕ ಎಷ್ಟು ಬರೂದೈತಿ?.."

"ನಿಂಗ್ಯಾಕ ಹೇಳು ಸಕ್ಕೂ... ಇನ್ನೂರೋ ಮುನ್ನೂರೋ ಬರಬಹುದು...

ನಿಂಗೇನಾರ ಬೇಕಾ?...."

"ಹೂಂ. ನಂಗೊಂದ್ನೂರು ರೂಪಾಯಿ ಕೊಡ್ರಿ... ನಾವಿಬ್ರೂ ಕಾಸಿನ ಸರ ಮಾಡಿಸ್ಕೊಂತೀನಿ... ಸುಧಾಳ ಅತ್ತಿ ಹತ್ರ ಲಕ ಲಕ ಅಂತ ಹೊಳೆಯೋ ಬಂಗಾರದ ಸರಾನ ಕಂಡಾಗ್ನಿಂದ ನಂಗೊಂದು, ತುಂಗಗೊಂದು ಕಾಸಿನ ಸರ ಬೇಕು ಅಂತ ಅನ್ನಿಸ್ಲಿಕ್ಕೆ ಹತ್ತೈತಿ..."

"ಸರಿ.... ಇಷ್ಟೇ ತಾನೇ.... ಕೊಟ್ರಾತು ಬಿಡು. ಈಗ್ಲಾದ್ರೂ ದಡಬಡ ಬಡ್ಸು..." ಎನ್ನುತ್ತಾ ತಮ್ಮನ ಕಡೆ ನೋಡಿದ... ಅವನು ನಕ್ಕಂತೆ ಮಾಡಿದ. ಅಣ್ಣ ತಮ್ಮಂದಿರಿಬ್ಬರೂ ಬೇಗ ಉಂಡು ಎದ್ದರು. ಸಿದ್ಧವಾಗಿದ ಚೀಲವನ್ನು ಹಿಡಿದು ಮನೆಯಿಂದ ಹೊರಟ... ತಮ್ಮನೂ ಅವನೊಂದಿಗೆ ಬಸ್ಸಿಗೆ ಹತ್ತಿಸಲೆಂದು ಹೊರಟ.

೦ ೦ ೦

"ಒಂಭತ್ತನೇ ದಿನದಿಂದ ದಿನಾಕಾರ್ಯಗಳನ್ನು ಪ್ರಾರಂಭ ಮಾಡ್ತಾರಂತೆ. ಹತ್ತನೇ ದಿನ ಧರ್ಮೋದಕ. "ನಾನೂ ನೀನು ಹೋಗ್ಲೇಬೇಕು.... ಚಂದ್ರೂ ವೈಕುಂಠ ಸಮಾರಾಧನೆ ಹೊತ್ತಿಗೆ ಬಂದರೆ ಆಗುತ್ತೆ..." ಗೋಪಾಲ ಹೇಳಿದ. ಲಕ್ಷ್ಮಿ ಮೌನವಾಗಿದ್ದಳು.

"ಬೀಗ ಹಾಕಿ ಎಲ್ರೂ ಹೋದ್ರೆ ಏನಾಗುತ್ತೆ ಲಕ್ಷ್ಮೀ?" ಪಾರ್ವತಿ ಕೇಳಿದಳು.

"ನಿಮಗೊತ್ತಿಲ್ಲ ಅತ್ಗೇ ಇಂಥದೇ ಸಮಯಕ್ಕೆ ಕಾಯ್ತಾ ಇರ್ತಾರೆ. ಲೂಟಿ ಮಾಡಿಬಿಡ್ತಾರೆ, ಲೂಟಿ..."

"ವಠಾರದಲ್ಲಿ ಬಾಡಿಗೆಯವರು ವಾಸವಾಗಿದಾರಲ್ಲ. ಇನ್ನೇನು ಭಯ?"

"ಅವರು ಬಾಡಿಗೆಯೋರು... ಅವರಿಗೇನು ಜವಾಬ್ದಾರಿ ಇರುತ್ತೆ?.... ಹೋದ ಸಾರಿ, ಎರಡು ದಿನ ಮನೆಗೆ ಬೀಗ ಹಾಕಿದ್ದಕ್ಕೆ, ಏನೇನು ಅನಾಹುತ ಮಾಡಿದ್ರು ಗೊತ್ತಾ? ಒಂದು ಮಾವಿನಕಾಯಿ ಉಳಿಸಿರ್ಲಿಲ್ಲ... ನಿಂಬೆ ಹೀಚುಗಳನ್ನೆಲ್ಲಾ ಕಿತ್ಕೊಂಡು ಹೋಗಿದ್ರು. ... ಹೂವಿನ ಗಿಡಗಳನ್ನಂತೂ ಬಗ್ಗಿಸಿ ಬಗ್ಗಿಸಿ ಹಾಳು ಮಾಡಿಬಿಟ್ಟಿದ್ರು..."

"ಆಗ ರಾಮರಾಯರ ಮನೆಯವರು ಇರ್ಲಿಲ್ಲ... ಜೋಷಿ ಮನೆಯವ್ರು ಒಬ್ಬರು, ಟೀಚರ್ ಮನೆಯವರು ಇನ್ನೊಬ್ರು ಎರಡೇ ಸಂಸಾರ... ಇದ್ದು.

"ಈಗ ಇನ್ನಾ ಎರಡು ಮನೆ ಖಾಲಿ ಇವೆಯಲ್ಲ... ಯಾಕೆ ಯಾರೂ ಬಾಡಿಗೆಗೆ ಕೇಳ್ತಿಲ್ವಾ?"

"ಕೇಳ್ತಾರೆ... ಸಿಕ್ಕಾಬಟ್ಟೆ ಕಡಿಮೆಗೆ ಕೇಳ್ತಾರೆ.... ಎರಡೂ ಮೂರು ವರ್ಷವಾದ್ರೂ ಬಿಡುಲ್ಲ... ಬಾಡಿಗೆ ಹೆಚ್ಚು ಮಾಡುವಂತಿಲ್ಲ... ಬರೀ ಗೋಳು..."

"ಇದನ್ನೆಲ್ಲ ಮಾರಿಬಿಟ್ಟು ಮೈಸೂರಿಗೇ ಯಾಕೆ ಬಂದಿರ್ಬಾರ್ದು...."

:ಇಲ್ಲ ಅತ್ಗೇ... ಇದನ್ನೆಲ್ಲ ಬಿಟ್ಟು ಎಲ್ಲಿಗೂ ಹೋಗು ಮನಸ್ಸಿಲ್ಲ ನಂಗೆ... ಇಂಥಾ ಮನೆ ಮೈಸೂರ್ನಲ್ಲಿ ಎಲ್ಲಿದೆ ನಮ್ಗೇ...?"

"ಹುಡುಕಿದ್ರೆ ಇದರಪ್ಪನಂಥ ಮನೆ ಸಿಗುತ್ತೆ... ಎಂತೆಂಥಾ ಮೊಹಲ್ಲಾಗಳಿವೆ... ದಿವಾನರ ಕಾಲದಲ್ಲಿ ಕಟ್ಟಿಸಿದ ಬಂಗಲೆಗಳಿವೆ..."

"ಯಾರೂ ಮಾರುಲ್ಲ ಪಾರ್ವತಿ... ತಲತಲಾಂತರದಿಂದ ವಾಸ ಮಾಡ್ಕೊಂಡು ಬಂದಿದಾರೆ... ಆಮನೆ, ಆ ಜಾಗಕ್ಕೆ ಒಗ್ಗಿ ಹೋಗಿರ್ತಾರೆ..."

"ಮೈಸೂರೇ ಆಗ್ಬೇಕಾ?... ಮಂಡ್ಯಾನೋ ಶ್ರೀರಂಗಪಟ್ಟಣಾನೋ... ಇರೋದು ನೀವಿಬ್ರು ಎಲ್ಲಿದ್ರೇನು... ಈ ಊರಿಗಿಂತ ಹತ್ತಿರ ಆಗುತ್ತೆ...

"ಚಂದ್ರೂಗೆ ಇಲ್ಲೇ ಕೆಲಸ ಸಿಗುವ ಹಾಗಿದೆ... ಅವನಿಗೂ ಮದುವೆ ಮಾಡಿ ಬಿಟ್ಟರೇ ಇಲ್ಲೇ ಎಲ್ಲಾ ಒಟ್ಟಿಗೇ ಇರಬಹುದು..."

"ಚಂದ್ರು ಇಲ್ಲಿ ಇರ್ತಾನಾ ? ಕೇಳಿದೀರಾ?...."

"ಮತ್ತೆಲ್ಲಿಗೆ ಹೋಗ್ತಾನೆ?.... ಇದೆಲ್ಲ ಇವನದ್ದೇ ತಾನೇ?"

"ಅತ್ಗೇ... ಈ ಮಾತನ್ನು ಬೆಳೆಸೋದು ಬೇಡ.... ಚಂದ್ರು ಇಲ್ಲಿ ನಮ್ಮೊಂದಿಗೆ ಇರಲಿ ಇಲ್ಲದಿರಲಿ, ನಾನಂತೂ ಈ ಜಾಗ ಬಿಟ್ಟು ಹೋಗೋಳಲ್ಲ..."

"ಮತ್ತೆ ? ಮುಂದೆ ಹೇಗೆ ? ಅವನನ್ನ ಬಿಟ್ರೆ ಬೇರೆ ಇನ್ಯಾರಿದ್ದಾರೆ ನಿಮ್ಗೆ?"

"ಅವನನ್ನು ಸಾಕಿಕೊಳ್ಳದಿದ್ರೆ ಹಾಗೇ ನಡೀತಿರ್ಲಿಲ್ವಾ?.... ನಾನು ಹಾಗೇ ಆಗಲಿ ಹೀಗೇ ಆಗಲಿ ಅಂತ ಅವನ ಬಗ್ಗೆ ಯಾವ ಆಸೇನೂ ಇಟ್ಕೊಂಡಿಲ್ಲ..."

"ಹಾಗಂದ್ರೆ ಹೇಗೆ ಲಕ್ಷ್ಮೀ ದತ್ತು ತೊಗೊಂಡು ಸಾಕಿದ್ಮೇಲೆ ಅವನು ನಿಮ್ಮ ಮಗ... ಸ್ವಂತ ಮಗನಂತೆಯೇ ಅಲ್ವಾ?"

"ಈಗ ಈ ವಿಷಯದ ಚರ್ಚೆ ಯಾಕೆ ? ನಾವು ಅವನನ್ನು ಸ್ವಂತ ಮಗನಂತೆಯೇ ಸಾಕಿದೀವಿ... ಆ ಕರ್ತವ್ಯ ಪ್ರಜ್ಞೆ ಅವನಲ್ಲೂ ಇರಬೇಕು. ಅಲ್ವಾ?.... ನಮ್ಮ ಜೊತೆ ಹೊಂದಿಕೊಳ್ಳುಕ್ಕೇ ಪ್ರಯತ್ನ ಪಡದೇ ಇದ್ದೋನಿಂದ ಏನನ್ನು ಅಪೇಕ್ಷಿಸೋಣ ನೀವೇ ಹೇಳಿ..."

"ಅವನಿನ್ನೂ ಚಿಕ್ಕವನು ತಿಳುವಳಿಕೆ ಸಾಲದು... ಸ್ವಂತ ಹೊಟ್ಟೇಲಿ ಹುಟ್ಟಿ ಬೆಳೆದ ಮಕ್ಕಳಿಗೇ ಎಷ್ಟೋ ಜನಕ್ಕೆ ತಂದೆ ತಾಯಿಗಳ ಬಗ್ಗೆ ಯಾವ ಭಾವನೆಯೂ ಇರುವುದಿಲ್ಲ..."

"ಅದಕ್ಕೇ ಹೇಳಿದ್ದು ಮತ್ತೆ ಹೇಗೆ ಮೋಹ ಬರುತ್ತೆ ಅಂತ...? ಅಡಿಗೆ ಆಯ್ತಾ? ಏನೋ ಸೀದ ವಾಸನೆ ಬರ್ತಿತ್ತು. ನಮ್ಮ ಮನೇದಾ ನೋಡಿ...."

"ಇಲ್ಲ ಲಕ್ಷ್ಮೀ ಎಲ್ಲಾ ಆಗ್ಲೇ ಮುಗಿಸಿದ್ದಾಯಿತು. ಎಲೆ ಹಾಕ್ಲಾ?...."

"ಲೀಲಂಗೆ ಹೇಳಿ... ಜೋಷಿ ಮನೆಯಿಂದ ಊಟದ ಬಾಳೆ ಎಲೆಗಳಿದ್ದರೆ ಇಸ್ಕೊಂಡು ಬಾ ಅಂತ... ಮದುವೆ ಮನೇದು ಮಿಕ್ಕಿರಬಹುದು..."

"ಲೀಲಂಗೆ ಅವರ ಪರಿಚಯ ಎಲ್ಲಿದೆ ? ನಾನೇ ಹೋಗ್ತೀನಿ..." ಗೋಪಾಲ

ಹೊರಕ್ಕೆ ಬಂದ. ಚಂದ್ರು ಎಲ್ಲಿಯೂ ಕಾಣಲಿಲ್ಲ. ಸಧ್ಯ.... ಒಳಗಿನ ಮಾತುಗಳು ಅವನಿಗೆ ಕೇಳಿಸಿಲ್ಲ ಅಂತ ಕಾಣುತ್ತೆ... ಬೆಳೆದ ಹುಡುಗ... ನೊಂದ್ಕೋತಾನೆ ಅನ್ನೋ ಪ್ರಜ್ಞೆಯಾದ್ರೂ ಇವಳಿಗೆ ಬೇಡ್ವಾ?.... ಅಕ್ಕನೂ ಅಷ್ಟೇ ಈ ಮಾತುಗಳನ್ನು ತಿಳಿದೂ ತಿಳಿದೂ ಯಾಕೆ ಕೆದಕ್ತಾಳೋ.... ಅವಳಿಗೆ, ತನ್ನ ಮಗಳನ್ನು ಕೊಟ್ಟು ಮದುವೆ ಮಾಡ್ಬೇಕು ಅಂತ ಆಸೆ... ಈ ಎಲ್ಲಾ ಆಸ್ತಿಯೂ ತನ್ನ ಮಗಳಿಗೆ ದಕ್ಕಲಿ... ಅಂತ ಆಸೆ. ಈ ಆಸ್ತಿಯಿಂದ ನಾನೆಷ್ಟು ಸುಖವಾಗಿದೇನೋ... ಅಷ್ಟೇ ಸುಖ ಶಾಂತಿ, ಚಂದ್ರೂಗೆ ಅವನನ್ನು ಮದುವೆಯಾಗಿ ಬರುವ ಹುಡುಗಿಗೆ ಸಿಗೋದು.... ಇದರ ಬದಲು ಚಂದ್ರು ತನಗೆ ಇಷ್ಟವಾದ ಹುಡುಗಿಯನ್ನೇ ಮದುವೆಯಾಗೋದು ಮೇಲು ಹೀಗೆಂದು ತನ್ನಲ್ಲೇ ಹೇಳಿಕೊಳ್ಳುತ್ತಾ ಜೋಷಿಯ ಮನೆಗೆ ಬಂದ..." ಜೋಷಿ... ಜೋಷೀ... ಕೂಗು ಹಾಕಿದ...

"ಯಾರು ?" ಎನ್ನುತ್ತಾ ಹೊರಬಂದಳು ತುಂಗಾಬಾಯಿ... ಇವನನ್ನು ಕುಂಡು ಮೈತುಂಬಾ ಸೆರಗನ್ನು ಹೊದ್ದು ಮರೆಗೆ ನಿಂತಳು." ಜೋಷಿ ಮನೇಲಿಲ್ರೀ ಹೊರಗೆ ಹೋಗ್ಯಾರ್ರೀ...." ಎಂದಳು.

"ಓ... ಹೌದೇನು ?.... ಒಂದ್ನಾಲ್ಕು ಬಾಳೆ ಎಲೆ ಇದ್ದರೆ ಕೊಡಿ... ಊಟಕ್ಕೆ ಬೇಕಾಗಿತ್ತು..."

"ಕೊಡ್ತೀನ್ರೀ...." ಎಂದು ಅವಳು ಒಳಗೆ ಹೋದಾಗ, ಇವನು ಅಲ್ಲಿಯೇ ನಿಂತು ಸುತ್ತಲೂ ತಿರುಗಿ ನೋಡಿದ. ದಿಬ್ಬದ ಮೇಲಿಮ ಮನೆಯ ದೀಪ ಉರಿಯು ತ್ತಿದ್ದುದು ಆರಿತು... ಅಲ್ಲಿ ಯಾರೂ ಇರಲಿಲ್ಲ. ದೀಪವನ್ನು ಯಾರು ಆರಿಸಿದ್ದು ಯೋಚಿಸುತ್ತಿದ್ದ. ಆಕೆ, ಎಂಟ್ಹತ್ತು ಬಾಳೆ ಎಲೆಗಳನ್ನು ತಂದು ಕೆಳಗಿಟ್ಟಳು. ತಗೋಳ್ರೀ. ... ಎಲಿ ಸ್ವಲ್ಪ ಒಣಗ್ಯಾವೆ..." ಎಂದಳು. ಇವನು ಇತ್ತ ತಿರುಗಿದ.

"ಪರವಾಗಿಲ್ಲ ಬಿಡಿ. ಊಟ ಮಾಡಿ ಎಸೆಯೋದೇ ತಾನೇ.... ಆ ಮನೇಗೆ ನಿಮ್ಮ ಮಕ್ಕಳು ಮಲಗುಕ್ಕೆ ಹೋಗ್ತಾರೇನು ?" ಅತ್ತ ಬೆರಳು ತೋರಿ ಕೇಳಿದ.

"ಇಲ್ರೀ ಹೋಗೂದಿಲ್ರೀ... ಯಾರೂ ಹೋಗೋದಿಲ್ರೀ... " ಆಕೆ ಗಾಬರಿಯಿಂದ ಹೇಳಿದಳು.

"ಯಾರೋ ಇದ್ದ ಹಾಗೆ ಅನ್ನಿಸ್ತು... ದೀಪ ಹಾಕಿತ್ತು..."

"ಬಾಡಿಗೆಗೆ ಯಾರಾದ್ರೂ ಬಂದಾರೇನೋ ಅಂತ ಭಾವಿಸಿದ್ವಿರ್ರೀ... ನಾವು ನೆಂಟರು ಹೋದ್ಮೇಲೆ ಅತ್ಲಾಗೆ ಸುಳಿದಿಲ್ರೀ...."

"ಇಲ್ಲ... ಇನ್ನು ಬಾಡಿಗೆಗೆ ಯಾರೂ ಸಿಕ್ಕಿಲ್ಲ... ರಾಮರಾಯರ ಮನೆ ಹುಡುಗ್ರೇನಾದ್ರೂ ಹೋಗಿದ್ರೋ ಏನೋ ನಾನು ವಿಚಾರಿಸ್ತೀನಿ.... ಇನ್ನು ಊಟ ಆಗ್ಬೇಕು ನಾನು ಬರ್ತೀನಿ..." ಎಂದು ಹೇಳಿ ತನ್ನ ಮನೆಯ ಕಡೆಗೆ ಬಂದ... ಒಂದೆರಡು ಬಾರಿ ಹಿಂತಿರುಗಿ

ದಿಬ್ಬದ ಮನೆಯ ಕಡೆ ನೋಡಿದ. ಮತ್ತೆ ದೀಪ ಹತ್ತಿರಲಿಲ್ಲ... ತನಗೆ ಅನ್ನಿಸಿದ್ದು ಸುಳ್ಳಿರಬಹುದೇ ಅಂತಂದುಕೊಂಡು ಮನೆಗೆ ಬಂದ. ಎಲೆಗಳನ್ನು ಒರೆಸಿ ಹಾಕಿದ...

"ಚಂದ್ರೂ ಮಾಧೂ ಇಬ್ಬರೂ ಇನ್ನೂ ಮನೆಗೆ ಬಂದಿಲ್ಲ. ಅವರಿಬ್ಬರಿಗೂ ಆಮೇಲೆ ಎಲೆಗಳನ್ನು ಹಾಕಿದ್ರಾಯ್ತು. ನೀವುಗಳು ಕೂತ್ಕೊಳ್ಳಿ. ಬಡಿಸಿ ಬಿಡ್ತೀವಿ..." ಎನ್ನುತ್ತಾ ಪಾರ್ವತಿ ಬಡಿಸಲು ಸನ್ನದ್ಧಳಾದಳು.

"ಊಟದ ಹೊತ್ತಾಯ್ತು ಮನೆಗೆ ಬರ್ಬೇಕು ಅಂತ ತಿಳೀಬೇಡ್ವೇ... ಎಲ್ಲಿ ತಿರುಗ್ತಿದಾರೋ...?" ಲಕ್ಷ್ಮಿ ಗೊಣಗಿದಳು.

"ಮನೇಲಿ ಸುಮ್ಮನೇ ಕೂತು ಏನ್ಮಾಡ್ತಾರೆ. ಮಾಧೂಗೆ ಊರನ್ನು ತೋರಿಸ್ಕೊಂಡು ಬರ್ತೀನಿ ಅಂತ ಕರ್ಕೊಂಡು ಹೋಗಿದಾನೆ. ಗಂಡು ಹುಡುಗ್ರು... ಬರ್ತಾರೆ ಬಿಡು. ನಿಂಗ್ಯಾಕೆ ಆತಂಕ?...."

"ನಂಗೇನೂ ಆತಂಕವಿಲ್ಲ. ಆದರೆ ಈ ತಿರುಗುವ ಅಭ್ಯಾಸ ಚೆನ್ನಾನಾ? ಜವಾಬ್ದಾರಿ ಬೇಡ್ವಾ?...."

"ಹೋಗ್ಲಿ ಬಿಡು... ಮನೇಲಿ ಏನು ಕೆಲಸ ಇದೆ?.... ನಮ್ಮ ಎದುರಿಗೆ ಸುಮ್ಮನೇ ಕೂತು ಏನ್ಮಾಡ್ತಾರೆ? ತಿರುಗಾಡಿ ಬರ್ಲಿ..."

"ನಾನು ಏನೇ ಹೇಳಿದ್ರೂ ಇಬ್ರೂ ನನ್ನ ವಿರೋಧವಾಗಿ ಮಾತಾಡ್ತೀರಿ... ನಂಗ್ಯಾಕೆ? ಅವನೇನು ನನ್ನ ಹೊಟ್ಟೇಲಿ ಹುಟ್ಟಿದವನೆ ? ನಾನು ಹೇಳಿದ ಹಾಗೆ ಕೇಳುಕ್ಕೆ. .. ನಾನು ಹೇಳೋದೂ ಇಲ್ಲ. ಅವನು ಕೇಳೋದು ಬೇಡ..."

ಗೋಪಾಲ, ಅಕ್ಕನಿಗೆ ಮಾತನ್ನು ಮುಂದುವರೆಸಬೇಡ ಎನ್ನುವಂತೆ ಸಂಜ್ಞೆ ಮಾಡಿದ. ಅವಳು ಅಡಿಗೆಯನ್ನು ತಂದು ಬಡಿಸಿದಳು. ಇವರಿಬ್ಬರೂ ನಿಧಾನವಾಗಿ ಊಟವನ್ನು ಮಾಡತೊಡಗಿದರು... ಇನ್ನೇನು ಊಟ ಮುಗಿಯುವುದರಲ್ಲಿತ್ತು ಅಷ್ಟು ಹೊತ್ತಿಗೆ ಮಾಧವ, ಚಂದ್ರು ಇಬ್ಬರೂ ಹಿಂತಿರುಗಿದ್ದರು.

"ಎಲ್ಲಿ ಹೋಗಿದ್ರೋ ಇಬ್ಬರೂ.... ಊಟದ ಹೊತ್ತಾಗಿದೆ... ಅಷ್ಟೂ ಗೊತ್ತಾಗ ಬೇಡ್ವಾ" ಪಾರ್ವತಿ ಗದರಿದಳು.

"ಸ್ಕೂಲಿನ ವಾರ್ಷಿಕೋತ್ಸವದ ಕಾರ್ಯಕ್ರಮ ನೋಡ್ತಾ ನಿಂತು ಬಿಟ್ಟೆವು. ಹೊತ್ತಾ ದದ್ದೇ ಗೊತ್ತಾಗ್ಲಿಲ್ಲ..."

"ಯಾವ ಸ್ಕೂಲೋ? ಗೊತ್ತು ಗುರಿ ಇಲ್ಲದೇ ಹೋಗಿ ನಿಂತು ಬಿಟ್ರಾ?"

"ಹಾಗೇ ಹೋಗ್ತಿದ್ದಾಗ, ಯಾರದ್ದೋ ಭಾಷಣ ಜೋರು ಜೋರಾಗಿ ಕೇಳಿಸ್ತಿತ್ತು. .. ಕೇಳ್ತಾ ನಿಂತೆವು... ಆಮೇಲೆ ಸಾಂಸ್ಕೃತಿಕ ಕಾರ್ಯಕ್ರಮ ಶುರುವಾಯ್ತು..."

"ಒಳ್ಳೇ ಹುಡುಗ್ರು.... ಎಲ್ಲಿ ಹೋದ್ರೋ ಅಂತ ನಾವು ಕಾಯ್ತಾ ಕೂತಿರೋದು. ನೀವು ಯಾವುದೋ ಭಾಷಣ ಕೇಳ್ತಾ ನಿಂತ್ಕೊಂಡಿದೀರಿ ಅಂತ ನಮಗ್ಹೇಗೆ ತಿಳಿಬೇಕು?

ಕೈ ಕಾಲು ತೊಳ್ಕೊಂಡು ಬಂದು ಎಲೆ ಹಾಕ್ಕೊಳ್ಳಿ... ಬಡಿಸ್ತೀನಿ..."

"ಅಮ್ಮಾ ನೀನೂ ಕೂತ್ಕೋ... ನಾನು ಬಡಿಸ್ತೀನಿ..." ಲೀಲಾ ಊಟ ಮುಗಿಸಿ ಎದ್ದವಳು ಹೇಳಿದಳು.

"ನಿನ್ನ ಊಟಾನೂ ಆಗಿ ಹೋಯ್ತೇನೇ ಲೀಲಾ...? ನಮಗೇನಾದ್ರೂ ಉಳಿಸಿದೆಯೋ... ಅಥವಾ... " ಮಾಧವ ರೇಗಿಸಿದ.

"ನಂಗೆ ಹೇಳಿ ಹೋಗಿದ್ದಿದ್ರೆ ನಿಂಗೋಸ್ಕರ ಕಾಯ್ತಾ ಇದ್ದೆ... ನನ್ನನ್ನೂ ಕರ್ಕೊಂಡು ಹೋಗ್ಬಾರ್ದಾಗಿತ್ತಾ... ನಂಗೂ ಕೂತೂ ಕೂತೂ ಬೇಜಾರಾಗ್ತಿತ್ತು..."

"ಪಗಡೇನೋ, ಹಲಗುಣಿ ಮಣೇನೋ.... ಚೌಕಾಬಾರಾನೋ ಅತ್ತೆ ಜೊತೆ ಆಡ್ಬೇಕಾಗಿತ್ತು... ಬೇಜಾರು ಕಳೀತಿತ್ತು... " ಚಂದ್ರು ನಗುತ್ತಾ ನುಡಿದ.

"ಎರಡೂ ಆಡಿದ್ನಪ್ಪಾ... ಎರಡ್ರಲ್ಲೂ ನಾನು ಸೋತೆ.... ಅತ್ತೇನ ಸೋಲಿಸುಕ್ಕೆ ಆಗುಲ್ಲ ಅಂತ ನಂಗೆ ಗೊತ್ತಾಯ್ತು... ಬೇಗ ಬೇಗ ಊಟ ಮಾಡಿ.... ನಾವುಗಳು ಮತ್ತೆ ಇನ್ನೊಂದೆರಡು ಆಟ ಆಡೋಣ...."

"ಬೇಡಮ್ಮ... ಸೋತರೆ ಅತ್ತು ಬಿಡ್ತೀಯ... ಅಲ್ಲದೇ ಇದು ಹೆಂಗಸರ ಆಟ... ಈಗ ಹೊಟ್ಟೆ ತಾಳ ಹಾಕ್ತಿದೆ.... ಮೊದ್ಲು ಊಟ ಹಾಕು..." ಎಂದು ಮಾಧು ನುಡಿದ... ಇಬ್ಬರೂ ಕೈ ಕಾಲು ತೊಳೆದು ಬಂದು ಊಟಕ್ಕೆ ಕುಳಿತರು. ಲೀಲಾ ಮೂವರಿಗೂ ಬಡಿಸತೊಡಗಿದಳು....

ಊಟದ ನಂತರ ಚಂದ್ರು ಎಲ್ಲರ ಎಲೆಗಳನ್ನು ತೆಗೆದು ಹೊರಕ್ಕೆ ಬಿಸಾಡಿ, ನೆಲವನ್ನು ಶುಚಿಗೊಳಿಸಿ ಒರೆಸಿದ. 'ಆರಿದ ಮೇಲೆ ಚಾಪೆ ಹಾಸ್ಬೇಕು.. ಅಂತ ಹೇಳಿಕೊಳ್ಳುತ್ತಾ ಹೊರಗೆ ಬಂದುನಿಂತ ತಂಗಾಳಿಯಲ್ಲಿ ಅಡ್ಡಾಡುತ್ತಿದ್ದ ಗೋಪಾಲ ಅವನನ್ನು ಬಳಿಗೆ ಕರೆದು ಕೇಳಿದ.

"ದಿಬ್ಬದ ಮನೆಯ ಬೀಗದ ಕೈಯನ್ನು ನೀನು ಯಾರಿಗಾದ್ರೂ ಕೊಟ್ಟಿದೀಯ ?

"ಇಲ್ಲವಲ್ಲ , ನಾನು ಯಾರಿಗೆ ಕೊಡ್ಲಿ! ಜೋಷಿ ಮನೆಯವರಿಗೆ ನೀನೇ ತಾನೇ ಕೊಟ್ಟಿದ್ದು...."ಅಮ್ಮ ಎಲ್ಲಿ ಇಟ್ಟಿದಾರೋ ಅಲ್ಲೇ ಇರುತ್ತೆ. ನನ್ನನ್ನ ಕೇಳಿದ್ರೆ ?'

"ಎಲ್ಲಿರಬೇಕೋ ಅಲ್ಲಿ ಇಲ್ಲ , ಅಲ್ಲದೇ ದಿಬ್ಬದ ಮನೆಯಲ್ಲಿ ಯಾರೋ ಬಂದು ಸೇರಿಕೊಂಡಿರುವ ಹಾಗಿದೆ. ನಾನು ಆ ಕಡೆ ಹೋಗಿದ್ದಾಗ ದೀಪ ಉರೀತಿತ್ತು."

"ಯಾರೂಂತ ನೋಡ್ಲಿಲ್ವಾ ? ವಿಚಾರಿಸ್ಲಿಲ್ವಾ ?"

"ಯಾರನ್ನ ವಿಚಾರಿಸೋದು ? ....ಅಲ್ಲದೇ ಒಬ್ಬನೇ ಹೇಗೆ ಹೋಗ್ಲಿ ?"ನಾಳೆ ಬೆಳಿಗ್ಗೆ ಹೋಗಿ ನೋಡೋಣ ಯಾರಾದ್ರೂ ನಾಲ್ಕು ಜನ ಆಳನ್ನು ಕರ್ಕೊಂಡು ಬಾ ಯಾರಾದ್ರೂ ಸೇರ್ಕೊಂಡಿದ್ರೆ ಓಡಿಸಬಹುದು..."

"ಯಾರಪ್ಪಾ ಸೇರ್ಕೋತಾರೆ.!ಮೊನ್ನೆ ಮೊನ್ನೆ ಸುಣ್ಣ ಬಣ್ಣ ಆಗಿದೆ. ಮದುವೆ

ಮನೆಯವರು ಉಪಯೋಗಿಸಿದಾರೆ ... ಜೋಷಿ ಮನೆಯವರೇ ಯಾರಾದ್ರೂ ಹೋಗಿ ಮಲಗಿರಬಹುದು. "

"ಇಲ್ಲ ಅವರುಗಳು ಅಂಥ ಜನ ಅಲ್ಲ. "

"ಮತ್ತೇ ಹಾಗಾದ್ರೆ ಯಾರಿರಬಹುದು !| ಹಾಳು ಬಿದ್ದಿದಾಗಲೇ ಯಾರೂ ಸೇರಿ ಕೊಂಡಿರ್ಲಿಲ್ಲ. ಈಗ ಯಾರು ಬರ್ತಾರೆ ? "

"ಅದೇ ನಂಗೂ ಅನುಮಾನ ಬರ್ತಾ ಇರೋದು ! ರಾಮರಾಯರ ಮನೆಯವ್ರು ಯಾರಾದ್ರೂ ರಾತ್ರಿಯ ಹೊತ್ತು ಉಪಯೋಗಿಸ್ತಾ ಇರಬಹುದಾ ?"

"ಅವರ ಮನೇಲಿ ಎಲ್ರೂ ಚಿಕ್ಕವರೇ.. ಹೆಣ್ಣು ಹುಡುಗಿಯರು.. ಟೀಚರ್ ಮನೇಲಿ ಟೀಚರ್ ಒಬ್ಬರೇ ಒಂದು ಮಾತು ಕೇಳ್ಲಾ ಅಪ್ಪಾ... ನಿಮಗೆ ದೆವ್ವ ಭೂತ ಅಂತಂದ್ರೆ .... ? ಹೇಗಿರುತ್ತೆ ಅಂತ ಗೊತ್ತಾ ನೋಡಿದೀರಾ ? "

"ಇದೇನು ಪ್ರಶ್ನೆ ? ನೀನು ನೋಡಿದ್ಯಾ ...? "

"ನಾನು ನೋಡಿಲ್ಲ... ನಾನು ಹೆದರೋದು ಇಲ್ಲ . ಆ ಮನೇಲಿ ಯಾವುದಾದ್ರೂ ದೆವ್ವ ಏನಾದ್ರೂ ಸೇರ್ಕೊಂಡಿದೆಯಾ ಅಂತ ಯೋಚಿಸ್ತಿದ್ದೆ..."

"ಈ ಮಾತನ್ನ ನಿನ್ನ ಅಮ್ಮನ ಎದುರಿಗೆ ಆಡೀಯ.... ಹಾಗೇನಾದ್ರೂ. ಇದ್ದಿದ್ರೆ, ಜೋಷಿ ಮನೆಯವ್ರು ... ನಮಗೆ ಹೇಳ್ದೆ ಇರ್ತಿದ್ರಾ ? "

"ಈ ಬಗ್ಗೆ ನನ್ನನ್ನ ಕೇಳ್ದೋನು, ಜೋಷಿಯವರ ಮಗನೇ... ಅವನಿಗೆ ಯಾರೋ ಹೇಳಿದ್ರಂತೆ.....

"ಸುಳ್ಳು... ಅದೆಲ್ಲಾ ಏನೂ ಇಲ್ಲ... ದತ್ತನ ಮಾತಿಗೆ ಏನು ಬೆಲೆ ? ತಮಾಷೆ ಮಾಡಿರ್ತಾನೆ ಅಷ್ಟೇ... ಮೊದಲೇ ಮಿಲಟರಿಯಲ್ಲಿ ಇರೋದು. "

"ದತ್ತ ಅಲ್ಲ ಅವನ ತಮ್ಮ ವಿನಾಯಕ. ನನ್ನನ್ನು ಕೇಳ್ದ ನಂಗೊತ್ತಿಲ್ಲ ಅಂತಂದೆ... ಅದ್ಸರಿ ಅದನ್ಯಾಕೆ ಇದುವರೆಗೂ ಬಾಡಿಗೆಗೆ ಕೊಟ್ಟಿರಲಿಲ್ಲ "

"ಶ್ , ಮೆಲ್ಲಗೆ ಮಾತಾಡು. ನಿಮ್ಮಮ್ಮಂಗೆ ಕೇಳಿಸೀತು.. ಮನೆ ವಾಸಕ್ಕೆ ಯೋಗ್ಯವಾಗಿರ್ಲಿಲ್ಲ. ಕೊಟ್ಟಿರ್ಲಿಲ್ಲ. ಈಗ ರಿಪೇರಿ ಆಗಿದೆಯಲ್ಲ. ಸರಿಯಾಗಿ ತಿಂಗಳು ತಿಂಗಳಿಗೆ ಬಾಡಿಗೆ ಕೊಡೋರಿಗೆ ಕೊಟ್ಬರಾಯ್ತು.... ಬೆಳಿಗ್ಗೆ ಮಾತಾಡೋಣ... ಈಗ ಈ ಮಾತು ಸಾಕು..." ಎನ್ನುತ್ತಾ ಒಳಕ್ಕೆ ನಡೆದ. ಚಂದ್ರು ತಾನೂ ಒಳ ಸೇರಿಕೊಂಡು ಮುಂಬಾಗಿಲನ್ನು ಭದ್ರಪಡಿಸಿ, ವೆರಾಂಡದ ದೀಪವನ್ನು ಆರಿಸಿದ.

○ ○ ○

"ಪಾರ್ವತೀ, ನಿನ್ನ ನಾದಿನಿ ಪಗಡೆ ಆಟ ಆಡೋದ್ರಲ್ಲಿ ಎತ್ತಿದ ಕೈ.... ಇದುವರೆಗೂ ಅವಳು ಎಲ್ಲರನ್ನೂ ಸೋಲಿಸಿದಾಳೇ.... ಲೀಲಾ, ನಿಮ್ಮ ಅತ್ತೆಗೆ ಸಮಯ ಹೋಗ್ತಿಲ್ಲ. ನೀನ್ಯಾಕೆ ಅತ್ತೆ ಜತೆ ಆಟ ಆಡ್ಬಾರ್ದು?" ಗೋಪಾಲ ಲೀಲಳನ್ನು ಕುರಿತು

ನುಡಿದು ಚಂದ್ರು ಕಡೆ ನೋಡಿದ.

"ನಂಗೆ ಸೋಲುಕ್ಕೆ ಇಷ್ಟ ಇಲ್ಲ ಮಾವ. ಸೋತ್ರೆ ನಂಗೆ ಅಳು ಬಂದ್ಬಿಡುತ್ತೆ..."

"ಒಂದ್ಸಲ ಸೋತ್ರೆ ಅಲ್ವೇನೇ ಗೆಲ್ಲಬೇಕು ಅನ್ನೋ ಛಲ ಬರೋದು.... ಅಲ್ವೇ ಇದೇನು ಸ್ಪರ್ಧೇನಾ?.... ಸುಮ್ನೇ ಆಡೋದು.... ಹೋಗ್ಲಿ ಚೌಕಾಭಾರಾನೋ.... ಕವಡೇನೋ ಆಡು. ಪಾಪ ನಿಮ್ಮತ್ತೆಗೆ ಕಾಲ ಕಳೆಯೋದೇ ಕಷ್ಟ ಆಗಿದೆ..." ಹೆಂಡತಿಯ ಕಡೆ ಕರುಣೆಯಿಂದ ನುಡಿದ.

"ಸಾಕು ನಿಮ್ಮ ಈ ನಾಟ್ಕ.... ನನ್ನಿಂದ ಏನು ಕೆಲಸ ಆಗ್ಬೇಕಾಗಿದೆ? ಲಕ್ಷ್ಮೀ ಸವಾಲೆಸೆದಳು..."

"ಅಯ್ಯೋ ರಾಮಾ.... ನಿನ್ನಿಂದ ನನಗೆ ಏನಾಗ್ಬೇಕಾಗಿದೆ ?.... ನಿನ್ನ ಚಡಪಡಿಕೇನ ನೋಡುಕ್ಕೆ ಆಗ್ತಿರ್ಲಿಲ್ಲ ಹೇಳ್ದೆ.... ನಾ ಆಡೋದನ್ನೆಲ್ಲಾ ನಾಟ್ಕ ಅಂತ ಅಂತೀಯಲ್ಲ.... ಇವರೆಲ್ಲಾ ಏನಂದ್ಕೋಳ್ತಾರೆ...?"

"ನಾವ್ಯಾರೂ ಏನು ಅಂದ್ಕೊಳುಲ್ಲ ಗಂಡಹೆಂಡತಿ ಸರಸ ಆಡ್ತಿದಾರೆ ಅಂತ ಅಂದ್ಕೋತೀವಿ.... ತಿಂಡಿಗೆ ಏನು ಮಾಡ್ಲೀ.... ಅಕ್ಕಿರೊಟ್ಟಿ ಚಟ್ನಿ ಮಾಡಿ ಬಿಡ್ಲಾ?... ಡಬ್ಬದ ತುಂಬಾ ಅಕ್ಕಿ ಹಿಟ್ಟಿದೆ..."

"ಹಾಗೇ ಮಾಡಿ... ಲೀಲನ್ನ ಒರಳ ಮುಂದೆ ಕೂರಿಸಿ, ಚಟ್ನಿ ತಿರುವಿಸಿ... ಇವಳಿಗೆ ಯಾವ ಕೆಲಸವೂ ಚೆನ್ನಾಗಿ ಬರುಲ್ಲ... ಒಂದು ಎಲೆ ಗೋಮೆ ಹಚ್ಚುಕ್ಕೆ ಬರುಲ್ಲ. ನಿಂಗಿಂತ ಚಂದ್ರು ವಾಸಿ....ಗಂಡು ಹುಡುಗ ಕೆಲಸ ಕಲಿತಿದಾನೆ..."

"ಹೋಗಿ ಅತ್ತೆ ಬೈಯಬೇಡಿ.... ನಂಗೂ ಕೆಲಸ ಬರುತ್ತೆ..."

"ಸರಿ ಹಾಗಾದ್ರೆ ಚೌಕಾಭಾರ ಆಟದಲ್ಲಿ ನನ್ನನ್ನು ಸೋಲಿಸು ನೋಡೋಣ." ಆಮೇಲೆ ನಾನು ಬೈಯುಲ್ಲ..."

"ನಾನು ಗೆದ್ರೂ ಬೈತೀರಾ ಅತ್ತೇ.... ಇದು ಅಂಡ.... ನಾಗೆದ್ರೆ ನಂಗೇನು ಕೊಡ್ತೀರಿ?.....

"ಕೊಡೋದು ಗಿಡೋದು ಎಲ್ಲಾ ಸುಳ್ಳು. ಆಟದಲ್ಲಿ ಹಾಗೆಲ್ಲಾ ಪಣಕಟ್ಟಿ ಆಡಬಾರ್ದು. ಅದು ಜೂಜು ಆಗುತ್ತೆ. ಧರ್ಮರಾಯ, ನಳ ಎಲ್ರೂ ಪಣ ಇಟ್ಟು ಆಡಿ ಸೋತು, ರಾಜ್ಯ ಕೋಶವನ್ನೇ ಕಳೆದುಕೊಂಡ್ರು ಆ ಕತೆ ಗೊತ್ತೋ ಇಲ್ವೋ.... ಸುಮ್ಮನೇ ಆಡೋದಾದ್ರೆ ಆಡು.... ಆಡುಕ್ಕೆ ಇಷ್ಟ ಇಲ್ಲದಿದ್ರೆ ಸೋತೆ ಅಂತ ಒಪ್ಕೊಂಡು ಬಿಡು." ಲಕ್ಷ್ಮಿ ನಕ್ಕಾಗ ಲೀಲಾಗೆ ಅವಮಾನವಾದಂತಾಗಿತ್ತು.

"ಸರಿ ಅತ್ತೆ... ನಾನು ಸೋತರೆ ಒಂದೇ ಆಟ. ನಾನು ಗೆದ್ರೆ ಇನ್ನೊಂದು ಆಟ... ಇದಕ್ಕೆ ಒಪ್ಗೇನಾ?"

"ನನಗೆ ಸವಾಲು ಎಸೀಬೇಡ. ಮೊದಲು ಅಲ್ಲಿ ರಂಗೋಲಿ ಪುಡಿ ಇದೆ... ನೆಲಾನ

ನೀರ್ನಲ್ಲಿ ಒರೆಸಿ, ಹಸಿಯಾಗಿರುವಾಗ್ಲೇ ರಂಗೋಲೀಲಿ ಮನೆಗಳನ್ನು ಬರಿ. ಏಳು ಮನೆ ಆಟ ಆಡೋಣ್ವೋ.... ಐದು ಮನೆ ಆಟ ಆಡೋಣ್ವೋ... ಘಟ್ಟ ಎಲ್ಲಾ ಎಲ್ಲೆಲ್ಲಿ ಬರೀಬೇಕು ಅಂತ ನಾನು ಹೇಳ್ತೀನಿ."

"ಯಾವ ಆಟ ಬೇಗ ಮುಗಿಯುತ್ತೆ?...."

"ಸರಿ, ಏನು ಹುಡ್ಗೀನೋ ?| ಆಟ ಪ್ರಾರಂಭ ಮಾಡುವ ಮೊದಲೇ, ಆಟಾನ ಬೇಗ ಮುಗಿಸುವ ಆತುರ. ಏಳು ಮನೆ ಆಟ ನಿಧಾನವಾಗುತ್ತೆ.... ಈಗ ನಿಂಗೆ ಬೇರೆ ಏನು ಕೆಲಸ ಇದೆ...?"

"ಏನೂ ಕೆಲಸ ಇಲ್ಲ... ನಿಮ್ಮ ಹತ್ರ ಕಸೂತಿ ಹೊಲಿಗೇನ ಹೇಳಿಸಿಕೊಳ್ಳೋಣ ಅಂತ ಅಂದ್ಕೊಂಡಿದ್ದೆ.... ನಿಮಗೆ ಕ್ರೋಷಾ ಹಾಕೋದಕ್ಕೂ ಬರುತ್ತಂತೆ. ತುಂಬಾ ಚೆನ್ನಾಗಿ ಕಸೂತಿ ಹಾಕ್ತೀರಂತೆ... ಅವೆಲ್ಲಾ ಎಲ್ಲಿದೆ?...." ಲಕ್ಷ್ಮಿಯ ಮುಖ ಅಗಲ ವಾಗಿತ್ತು.

"ಎಲ್ಲಾ ಪೆಟ್ಟಿಗೇಲಿ ಇದೆ. ಹೊರಗೆ ಇಟ್ಟಿದ್ದರೆ ಧೂಳು ಸೇರಿಕೊಂಡು ಹಾಳಾಗುತ್ತೆ. ದಸರಾ ಹಬ್ಬದಲ್ಲಿ, ಹೊರಕ್ಕೆ ತೆಗೀತೀನಿ. ತೋರಣ, ಮೇಜಿನ ಮೇಲೆ ಹಾಸೋದು, ಮೂಲೆಗಳಲ್ಲಿ ಇಡುವ ಸಣ್ಣ ಮೇಜುಗಳಿಗೆ ಹೊದೆಸೋದು ಎಲ್ಲಾ ಇವೆ...

"ನಂಗೆ ತೋರಿಸ್ತೀರಾ ಅತ್ತೆ...."

"ಈಗ ಮುಟ್ಟುವ ಹಾಗಿಲ್ಲವಲ್ಲೇ ಹುಡ್ಗೀ... ದಸರಾ ಹಬ್ಬದ ವೇಳೆಗೆ ಬಾ... ಒಂದೊಂದಾಗಿ ಎಲ್ಲರನ್ನು ನೋಡೂವಂತೆ..."

"ಅಮ್ಮಂಗೆ ಹೇಳಿ ಅತ್ತೇ.... ಯಾವ ಪೆಟ್ಟಿಗೇಲಿ ಇದೆ ಅಂತ.... ತೆಗೆದು ತೋರಿಸ್ತಾಳೆ..."

"ಬೇಡ ಲೀಲಾ.... ಅದೇನು ಹಠ ನಿಂಗೆ ?.... ದಸರಾ ಬೊಂಬೆಗಳು, ಕಲಶಗಳು, ಪಟ್ಟದ ಬೊಂಬೆಗಳು ಅವನ್ನೆಲ್ಲಾ ಯಾವಾಗ ಅಂದ್ರೆ ಆವಾಗ, ತೆಗೀಲೇ ಬಾರ್ದು... ಅತ್ತೆ ಹೇಳಿದ್ಲಲ್ಲ..... ದಸರಾ ಸಮಯದಲ್ಲಿ ಬರೂವಂತೆ..."

"ಏನಮ್ಮ ನೀನು ? ನೋಡಿದ್ರೆ ಏನಾಗುತ್ತೆ ? ಅದಕ್ಕೇನು ಮೈಲಿಗೆ ಅಂಟಿಕೊಳ್ಳುತ್ತಾ ?" ಮೂತಿ ಉದ್ದ ಮಾಡಿದಳು.

"ಹೌದು ಲೀಲಾ - ಈಗ ಸೂತಕದ ಮೈಲಿಗೆ.... ಮನೆಗೆ ಪುಣ್ಯಾಹ ಮಾಡಿಸದ ಹೊರತು, ದೇವರಿಗೆ ಸಂಬಂಧಿಸಿದುದನ್ನು ಮುಟ್ಟುವ ಹಾಗಿಲ್ಲ. ನೋಡು ದೇವರ ಗೂಡಿಗೆ ಕೂಡಾ, ರೇಶ್ಮೆ ಮುಗುಟವನ್ನು ಹೊದಿಸಿದೆ. ಬೇಡಾಂದ್ರೆ ಬೇಡ... ಹಾಗ್ಯಾಕೆ ಹೀಗ್ಯಾಕೆ ಅಂತ ವಾದ ಮಾಡಬಾರ್ದು..."

"ಹೋಗ್ಲಿ ಕಸೂತಿ ಹೇಳ್ಕೊಡೋಕೂ ಮೈಲಿಗೆ ಆಗುತ್ತಾ ಅತ್ತೆ...?"

"ದಾರಗಳನ್ನು ಬಟ್ಟೆಯನ್ನು ನಾನು ಮುಟ್ಟುವ ಹಾಗಿಲ್ಲ. ಮುಟ್ಟಿದರೆ ನೀರ್ನಲ್ಲಿ

ನೆನೆಸ್ಬೇಕು.... ಸೂತಕ ಕಳೀಲಿ ಹೇಳ್ಕೊಡ್ತೀನಿ... ಈಗ ಆಟ ಶುರು ಮಾಡು... ಒದ್ದೆ ಬಟ್ಟೆ, ರಂಗೋಲಿ ಪುಡಿ ತಗೊಂಡ್ಬಾ..."

"ಲೀಲಾ ಎದ್ದು ಹೋಗಿ ಒದ್ದೆ ಬಟ್ಟೆಯನ್ನು ತಂದು ನೆಲವನ್ನು ಒರೆಸಿ, ರಂಗೋಲಿ ಡಬ್ಬಿಯನ್ನು ತಂದಳು." ಹೀಗೆ ಆರು ಚುಕ್ಕಿ ಹಾಗೆ ಆರು ಚುಕ್ಕಿ ಇಡು. ಚುಕ್ಕಿ ಇಡೋಕೆ ಬರುತ್ತೋ ಇಲ್ವೋ...?"

ಲೀಲಾ ಚುಕ್ಕಿಗಳನ್ನು ಇಟ್ಟಳು. ಈಗ ಆ ಚುಕ್ಕಿಗಳನ್ನು ಐದು ಐದು ಮನೆ ಬರುವಂತೆ ಸೇರಿಸು... ಮಧ್ಯದ ಮನೆಗಳಲ್ಲಿ ಅಡ್ಡ ಗೆರೆ ಹಾಕಿ ಘಟ್ಟ ಮಾಡು.... ಅಲ್ಲಿ ಕಾಯಿಗಳನ್ನು ಹೂಡು.... ಕವಡೆಗಳನ್ನು ತಗೋ.... ಒಂದು ಪೇಪರನ್ನು ಹಾಸ್ಕೋ... ಇಲ್ದಿದ್ರೆ ಕವಡೆಗಳು ಸವೆದು ಹೊಳಪನ್ನು ಕಳಕೊಂಡು ಬಿಡುತ್ವೆ... ಚಂದ್ರು, ಮಾಧು ಮುಖ ಮುಖ ನೋಡಿಕೊಂಡು ನಕ್ಕರು. ಲೀಲಾ ಅತ್ತೆಯ ಕಡೆಗೆ ಕವಡೆಗಳನ್ನು ಇಟ್ಟಳು.

"ನೀವೇ ಆಟವನ್ನು ಪ್ರಾರಂಭ ಮಾಡಿ ಅತ್ತೆ...."

"ಯಾಕೆ ಹೆದರಿ ಬಿಟ್ಯಾ?...."

"ನೀವು ದೊಡ್ಡೋರು ನೀವೇ ಶುರು ಮಾಡಿ." ಲಕ್ಷ್ಮಿ ಯಾವ ಅಳುಕೂ ಇಲ್ಲದೇ ಕವಡೆಗಳನ್ನು ಎತ್ತಿಕೊಂಡು, ಕುಲುಕಿ ಉರುಳಿಸಿದಳು. ಘಟ್ಟದಲ್ಲಿದ್ದ ಕಾಯಿಗಳನ್ನು ನಡೆಸುವುದು ಹೇಗೆ, ಎದುರಾಳಿಗಳ ಕಾಯಿಗಳನ್ನು ಕೊಲ್ಲುವುದು ಹೇಗೆ ಎಂದು ತಿಳಿಸಿ ಕೊಡುತ್ತಾ ಆಟವನ್ನು ಮುಂದುವರೆಸಿದಳು. ಆಟದ ಭರಾಟೆಯಲ್ಲಿ ಲಕ್ಷ್ಮಿ ಮಗ್ನಳಾಗಿದ್ದಾಗ, ಗೋಪಾಲ, ಬೀಗದ ಕೈಗಳ ಗೊಂಚಲನ್ನು ಎತ್ತಿಕೊಂಡು, ಹೊರ ಬಾಗಿಲಿಗೆ ಬಂದ. ಚಂದ್ರು ಅವನನ್ನು ಹಿಂಬಾಲಿಸಿದ. ಮಾಧು ಆಟವನ್ನು ನೋಡುತ್ತಾ ಕುಳಿತ.

ಗೋಪಾಲ ಅತ್ತಿತ್ತ ನೋಡುತ್ತಾ ಅಂಜುತ್ತಾ ಮುಂಬಾಗಿಲಿಗೆ ಹಾಕಿದ್ದ ಬೀಗವನ್ನು ತೆಗೆದು, ಅನುಮಾನಿಸುತ್ತಾ ಒಳಗೆ ಇಣುಕಿದ. ವೆರಾಂಡದಲ್ಲಾಗಲೀ, ಹಾಲಿನಲ್ಲಾಗಲೀ ಯಾರೂ ಇರಲಿಲ್ಲ. ಅಥವಾ ಇದ್ದಂತೆ ಅನ್ನಿಸಲಿಲ್ಲ. ಆದರೂ ಮನೆಯೊಳಗೆ ಏನೋ ಕೆಟ್ಟವಾಸನೆ ತುಂಬಿಕೊಂಡಿದೆ ಅಂತೆನ್ನಿಸಿತ್ತು. ಮೂಗನ್ನು ಮುಚ್ಚಿಕೊಂಡು, ಹೊರಗೇ ನಿಂತಿದ್ದ ಚಂದ್ರುವನ್ನು ಒಳಕ್ಕೆ ಬರುವಂತೆ ಕೈ ಸನ್ನೆ ಮಾಡಿ ಕರೆದ...

ಚಂದ್ರು, ಇಡಲೋ ಬೇಡವೋ ಅಂತ ಅಂದುಕೊಳ್ಳುತ್ತಾ ಒಳಗೆ ಹೆಜ್ಜೆಯನ್ನಿಟ್ಟವನು. ತಕ್ಷಣವೇ ಮೂಗನ್ನು ಮುಚ್ಚಿಕೊಂಡ. ಏನೋ ಕೆಟ್ಟವಾಸನೆ ಎನ್ನುತ್ತಾ ಮೂಗಿನ ಮುಂದೆ ಕೈಯಿಂದ ಗಾಳಿಯನ್ನು ಬೀಸಿಕೊಂಡ ವರಾಂಡದಿಂದ ನಡುಮನೆಗೆ ಹೋಗುವ ಬಾಗಿಲು ಹಾಕಿತ್ತು. ತೆಗೆಯಲು ನೋಡಿದ. ಒಳಗಿನಿಂದ ಅಗುಣಿ ಹಾಕಿತ್ತೋ ಏನೋ ತೆಗೆಯಲಾಗಿರಲಿಲ್ಲ. "ಯಾರೋ ಬಾಗಿಲನ್ನು ಆ ಕಡೆಯಿಂದ ಭದ್ರಪಡಿಸಿದಾರೆ. ಹಿತ್ತಿಲ ಕಡೆ ಹೋಗಿ ನೋಡು. ಆ ಬಾಗಿಲು ತೆಗೆದಿರಬಹುದು. ಅಥವಾ ಪಕ್ಕದ ಕಿಟಕಿಯಿಂದ

ನೋಡು." ಚಂದ್ರು ಕೆಟ್ಟ ಮುಖ ಮಾಡಿದ.

"ನಂಗೆ ಒಬ್ಬನಿಗೇ ಹೋಗುಕ್ಕೆ ಹೆದರಿಕೆ ಆಗುತ್ತೆ ಅಪ್ಪಾ.... ಅಲ್ಲಿ ಯಾರಾದರೂ ಕೇಡಿಗಳು ಇದ್ದರೇ..."

"ಸರಿ... ನಾನು ಹೋಗಿ ನೋಡ್ತಿೀನಿ ನೀನು ಈ ಕಡೆ ನಿಂತಿರು..."

"ಬೇಡಿ ಅಪ್ಪಾ... ಒಬ್ಬರೇ ಹೋಗ್ಬೇಡಿ ಇನ್ನೊಂದಿಬ್ರನ್ನ ಕರ್‍ಕೊಂಡು ಬರೋಣ.... ಬನ್ನಿ" ಪಿಸುದನಿಯಲ್ಲಿ ಹೇಳಿದ.

"ಹೌದು... ಒಳಗಡೆ ಯಾರಾದ್ರೂ ಸೇರಿಕೊಂಡಿದ್ದರೆ, ಹೊಡೆದೂ ಬಡಿದು ಮಾಡಿಯಾರು... ರಾಮರಾಯರನ್ನೋ, ಜೋಷಿಗಳನ್ನೋ ಕರ್‍ಕೊಂಡು ಬಾ...."

"ಇಷ್ಟೊತ್ನಲ್ಲಿ ರಾಮರಾಯರು ಮನೇಲಿ ಎಲ್ಲಿ ಇರ್ತಾರಪ್ಪಾ ? ಪೊಲೀಸರ್ನ ಕರ್‍ಕೊಂಡು ಬರ್ತೀನಿ."

"ಪೊಲೀಸ್ ಸ್ಟೇಷನ್ ಹತ್ತಿರ ಎಲ್ಲಿದೆ? ದನ ಮೇಯಿಸೋರನ್ನೋ, ಜಟಕಾ ಹೊಡೆಯೋರನ್ನೋ ಈಗ್ಲೇ ಕರ್‍ಕೊಂಡು ಬಾ...."

"ನೀವು ಇಲ್ಲಿ ಒಬ್ಬರೇ ನಿಂತಿರ್ಬೇಡಿ... ರಾಮರಾಯರ ಮನೆಯ ಜಗುಲಿಯ ಮೇಲೆ ಕೂತಿರಿ.... ನಾನು ಬೇಗ ಹೋಗಿ ಕರ್‍ಕೊಂಡು ಬರ್ತೀನಿ..."

"ಜೋಷಿ ಮನೆಯಿಂದ ಸೈಕಲನ್ನು ಇಸ್ಕೊಂಡು ಹೋಗು. ಬೇಗ ಹೋಗ ಬಹುದು..." ಅವರನ್ನು ಈ ಕಡೆಯ ಸಣ್ಣ ಗೇಟ್ ಮೂಲಕ ಕರ್‍ಕೊಂಡು ಬಾ... ದೊಡ್ಡ ಗೇಟ್ ಕಡೆಯಿಂದ ಬೇಡ." ಚಂದ್ರು ವೇಗವಾಗಿ ನಡೆದು ಹೋದ. ಗೋಪಾಲ ಮುಂಬಾಗಿಲನ್ನು ಎಳೆದು ಚಿಲುಕವನ್ನು ಹಾಕಿ, ರಾಮರಾಯರ ಮನೆಯ ಜಗುಲಿಯ ಮೇಲೆ ಕುಳಿತ. ಅವನಿಗೂ ದಿಗಿಲಾಗಿತ್ತು ಒಳಗೆ ಯಾರೋ ಸೇರಿಕೊಂಡಿದಾರೆನ್ನುವುದು ದೃಢವಾಗಿತ್ತು. ಆದರೆ ಯಾರು ? ಆ ಕೆಟ್ಟ ವಾಸನೆ ಎಂಥದ್ದು?... ಯಾರು ಸೇರ್‍ಕೊಂಡಿದ್ದಾರೆ ?... ಏನೇನು ಬೇಯಿಸಿ ಮನೇನ ಕುಲಗೆಡಿಸಿದಾರೋ?"

ಚಂದ್ರು, ಹತ್ತು ನಿಮಿಷಗಳೊಳಗೆ ನಾಲ್ಕು ಜನ ಆಳುಗಳನ್ನು ಕರೆದುಕೊಂಡು ಬಂದ. ಅವರುಗಳ ಕೈಯಲ್ಲಿ ದೊಣ್ಣೆಗಳಿದ್ದವು" ಇವರೆಲ್ಲಾ ಯಾರೋ ಎಲ್ಲಿಂದ ಕರ್‍ಕೊಂಡು ಬಂದ್ಯೋ?"

"ಶೆಟ್ಟರ ಅಂಗಡಿ ಹತ್ರ ಬೀಡಿ ಸೇದ್ತಾ ನಿಂತಿದ್ರು... ಕರ್‍ಕೊಂಡು ಬಂದೆ... ಎರಡೆರಡು ರೂಪಾಯಿ ಕೊಡ್ತೀನಿ ಅಂತ ಹೇಳಿ ಕರ್‍ಕೊಂಡು ಬಂದಿದೀನಿ..."

"ಎರಡು ರೂಪಾಯಿ ತಲಾ ಅಂತಂದ್ರೆ ಜಾಸ್ತಿ ಆಗ್ಲಿಲ್ಲವೇನೋ.... ಒಂದು ರೂಪಾಯಿ ಕೊಡ್ತೀನಿ ಅಂತ ಹೇಳ್ಬೇಕಾಗಿತ್ತು..."

"ಹೇಳ್ದೆ... ಬರುಲ್ಲ ಅಂತಂದ್ರು.... ನಾನೇನ್ಮಾಡ್ಲಿ?"....

"ಸರಿ ಅವರುಗಳನ್ನು ಆ ಮನೆಯ ಬಳಿಗೆ ಕರ್‍ಕೊಂಡು ಹೋಗೋಣ... ನಡೀ..."

ಇಬ್ಬರೂ, ಆ ಆಳುಗಳೊಂದಿಗೆ ಮನೆಯ ಬಳಿಗೆ ಬಂದರು. ಹಿಂಬಾಗಿಲ ಬಳಿ ಬಹಳ ಎಚ್ಚರಿಕೆಯಿಂದ ಸದ್ದನ್ನು ಆಲಿಸುತ್ತಾ ಇಬ್ಬರು ನಿಂತರು. ಬಾಗಿಲು ಚಿಲುಕವನ್ನು ಸದ್ದಾಗದಂತೆ ಸಡಲಿಸಿ ಬಾಗಿಲನ್ನು ತಳ್ಳಿದ. ಬಾಗಿಲು ಸಣ್ಣಗೆ ಸದ್ದು ಮಾಡಿ ತೆರೆದುಕೊಂಡಿತು ದೊಣ್ಣೆಯನ್ನು ಕುಟ್ಟಿ ಸದ್ದು ಮಾಡುತ್ತಾ ಒಬ್ಬ ಒಳಗೆ ಬಂದು ಸುತ್ತಲೂ ಕಣ್ಣು ಹಾಯಿಸಿದ ನಡುಮನೆಯ ಮೂಲೆಯಲ್ಲಿ ಯಾರೋ ಒಬ್ಬ ವ್ಯಕ್ತಿ ಮಲಗಿದ್ದಂತೆ ಗೋಚರಿಸಿತು. ಕೋಲಿನಿಂದ ದುಪ್ಪಟ್ಟಿಯನ್ನು ಸರಿಸಿ, ತಿವಿದ. ಆ ವ್ಯಕ್ತಿ ಕೊಸರಾಡಿದ ಆದರೆ ಇತ್ತ ತಿರುಗಲಿಲ್ಲ.

"ಏಯ್ ಯಾರ್ಲಾ ನೀನು?"ಕೋಲನ್ನು ಹಿಡಿದವನು ಕೋಲನ್ನು ಝುಳಪಿಸಿ ಕುಟ್ಟಿ ಕೇಳಿದ. ಆ ವ್ಯಕ್ತಿ ಇತ್ತ ತಿರುಗಿ ನೋಡಿದ... ಅವನ ಎದುರಿಗೆ ಕೋಲು ಹಿಡಿದ ಇಬ್ಬರು ದಾಂಡಿಗರು ನಿಂತಿದ್ದಾರೆ ! ಮೆಲ್ಲಗೆ ಎದ್ದು ನಿಂತ. ತೂರಾಡುತ್ತಿದ್ದ.

"ಯಾರ್ಲಾ ನೀನು ? ಇಲ್ಯಾಕೋ ಮನಗಿದೀಯ?"

"ನಾನು... ನಾನು... ಸೋಮಾ... ದ್ಯಾವ್ರೂ..." ಅವನು ಕೈ ಮುಗಿದ. ಅಷ್ಟರಲ್ಲಿ ಗೋಪಾಲ ಹಾಗೂ ಚಂದ್ರು ಒಳಗೆ ಬಂದಿದ್ದರು. ಗಬ್ಬು ವಾಸನೆಯ ನಡುವೆ ಕಪ್ಪು ದುಪ್ಪಟ್ಟಿ ಹೊದ್ದು ನಿಂತಿದ್ದ ವ್ಯಕ್ತಿಯ ಕಡೆ ನೋಡಲು ಮೊದಲಿಗೆ ಭಯ ಎನಿಸಿತು...

"ಏ ಯಾರೋ ನೀನು ? ಇಲ್ಲೇನು ಮಾಡ್ತಿದೀಯೋ?"ಚಂದ್ರು ಧೈರ್ಯವನ್ನು ಒಗ್ಗೂಡಿಸಿ ಕೇಳಿದ. ಅವನು ಮಾತಾಡಲಿಲ್ಲ.

"ಹಿಡ್ಕೊಂಡು ತದುಕ್ರೋ ಬಾಯಿ ಬಿಡ್ತಾನೆ" ಮತ್ತೊಬ್ಬ ಹೇಳಿದ.

"ಬೇಡಿ ಹೊಡೀ ಬೇಥಿ... ಎಳ್ಕೊಂಡು ಹೋಗಿ ಪೊಲೀಸರಿಗೆ ಒಪ್ಪಿಸಿ ಕೊಡಿ... ಇಲ್ಲಿ ಯಾವ ಗಲಾಟೆಯೂ ಬೇಡ" ಗೋಪಾಲನೆಂದ. ಆಳುಗಳು ಅವನ ತೋಳಿಗೆ ಕೈ ಹಾಕಿ ಎಳೆದು ಹೊರಕ್ಕೆ ಎಳೆದುಕೊಳ್ಳುವಷ್ಟರಲ್ಲಿ, ಮತ್ತೊಬ್ಬ ಪ್ರತ್ಯಕ್ಷನಾಗಿದ್ದ....

"ಬಿಡ್ರೀ ಅವನನ್ನ ಇಲ್ದಿದ್ರೆ ಸಾಯಿಸಿಬಿಡ್ತೀನಿ"| ಅವನು ಇವರುಗಳನ್ನೇ ಹೆದರಿಸಿದ್ದ.... ಅವನು ಬಲಗೈಯನ್ನು ತನ್ನ ಬೆನ್ನ ಹಿಂದೆ ಇಟ್ಟುಕೊಂಡಿದ್ದ.

ಇವರುಗಳು ಬೆದರಿ ಹಿಂದಕ್ಕೆ ಸರಿದರು. ಕಪ್ಪು ಬಣ್ಣದವನಾಗಿದ್ದ ಬಿಳಿಯ ಷರಟನ್ನು ಪಂಚೆಯನ್ನು ಉಟ್ಟಿದ್ದ ಕತ್ತಿನಲ್ಲಿ ಎಂತೆಂಥದೋ ಮಣಿಯ ಸರಗಳನ್ನು ಧರಿಸಿದ್ದ. ಹಣೆಯಲ್ಲಿ ಕಾಸಿನಗಲದ ಕುಂಕುಮವಿತ್ತು. ತಲೆಗೆ ಕೆಂಪು ಬಣ್ಣದ ಬಟ್ಟೆಯನ್ನು ಪೇಟದಂತೆ ಸುತ್ತಿಕೊಂಡಿದ್ದ. ಇವರ ಪೈಕಿ ಒಬ್ಬನು ಧೈರ್ಯವಹಿಸಿ ಮಾತಾಡಿದ.

"ಯಾರು ನೀನು ? ಇಲ್ಯಾಕೆ ಬಂದು ಸೇರ್ಕೊಂಡಿದೀಯ....?"

"ನಾನು ಯಾರಾದ್ರೆ ನಿಂಗೇನು ?|ಸುಮ್ನೆ ಎಲ್ರೂ ಹೊರಟು ಹೋಗಿ. ಇಲ್ದಿದ್ರೆ ನಿಮ್ಗತಿ ನೆಟ್ಟಗಿರುಲ್ಲ...."

"ನಾವು ಈ ಮನೆ ಮಾಲೀಕರು... ನೀನು ಯಾರೋ ಏನೋ ಹೀಗೆ ಬಂದು

ಸೇರ್ಕೊಂಡ್ರೆ ಸರಿನೇನಪ್ಪಾ.... ದಯವಿಟ್ಟು ಬೇರೆ ಕಡೆಗೆ ಹೊರಟು ಹೋಗು" ಗೋಪಾಲ ಕೈ ಮುಗಿದು ಕೇಳಿಕೊಂಡ.

"ಅವನಿಗೇನ್ರೀ ಕೈ ಮುಗಿಯೋದು ? ನಾಲ್ಕು ಬಾರಿಸಿದರೆ ಸತ್ನೋ ಕೆಟ್ನೋ ಅಂತ ಓಡಿ ಹೋಗ್ತಾನೆ...." ಮತ್ತೊಬ್ಬನೆಂದ.

"ಬಾರಿಸು ನೋಡೋಣ.... ಮುಂದೆ ಬಾ...."ಎನ್ನುತ್ತಾ ಅವನು ತನ್ನ ಬಲಗೈಯನ್ನು ಮುಂದಕ್ಕೆ ತಂದು ಕೈಗೆ ಸುತ್ತಿಕೊಂಡಿದ್ದ ಹಾವೊಂದನ್ನು ತೋರಿಸಿ, ಕೈಯನ್ನು ಗಿರಗಿರನೆ ಸುತ್ತಿದ...

"ಹಾವೂ...." ಚಂದ್ರು ಕಿರುಚಿದ.

"ಹಾವನ್ನು ತೋರಿ ಹೆದರಿಸ್ತೀಯೇನೋ ಬಡ್ಡಿ ಮಗನೇ" ಅಂತ ಹಿಂದೆ ನಿಂತಿದ್ದ ಆಳು ಕೋಲನ್ನು ಎತ್ತಿದ. ಅಷ್ಟರಲ್ಲಿ ಅವನು ತನ್ನ ಕೈಯಲ್ಲಿದ್ದ ಹಾವನ್ನು ಇವರ ಮೇಲೆ ಎಸೆದಿದ್ದ... ಇವರು ಹೆದರಿ ಕಿರುಚುತ್ತಾ ಹಾವಿನಿಂದ ತಪ್ಪಿಸಿಕೊಳ್ಳುವಷ್ಟರಲ್ಲಿ ಅವನು ಬಾಗಿಲಾಚೆಗೆ ಓಡಿದ್ದ. ಬಾಗಿಲ ಬಳಿ ನಿಂತಿದ್ದ ಆಳೊಬ್ಬ ತನ್ನ ಕೈಯಲಿದ್ದ ಕೋಲಿನಿಂದ ಅವನ ತಲೆಗೆ ಸರಿಯಾಗಿ ಹೊಡೆದ... ಅವನು ಎರಡೂ ಕೈಯಲ್ಲಿ ತಲೆಯನ್ನು ಹಿಡಿದುಕೊಂಡು ಅಯ್ಯೋ ಎಂದು ಕಿರುಚುತ್ತಾ ಕೆಳಗೆ ಬಿದ್ದ. ಇನ್ನೊಬ್ಬ ಮತ್ತೂ ಎರಡು ಏಟನ್ನು ಹಾಕಿದ. "ಬಿಟ್ಬಿಡ್ರಪ್ಪೋ...." ಎಂದು ಅವನು ಬೊಬ್ಬೆ ಹಾಕಿದ... ಇಷ್ಟರೊಳಗೆ ಆ ಹಾವು ಹರಿದು ಮಾಯವಾಗಿತ್ತು.

"ಹೋಡೀ ಬೇಡಿ... ಬಿಟ್ಬಿಡಿ. ಸತ್ತುಗಿತ್ತು ಹೋದಾನು.... ಪೊಲೀಸ್ ಕೇಸ್ ಆಗುತ್ತೆ" ಗೋಪಾಲ ಹೊಡೆಯುತ್ತಿದ್ದವರನ್ನು ತಡೆದ.

"ಅಪ್ಪಾ... ನಾನೀಗ್ಲೇ ಹೋಗಿ ಪೊಲೀಸೋರ್ನ ಕರ್ಕೊಂಡು ಬರ್ತೀನಿ.... ನೀವುಗಳೆಲ್ಲರೂ ಇಲ್ಲೇ ಇರಿ.... ಓಡಿ ಹೋಗದಂತೆ ನೋಡ್ಕೊಳ್ಳಿ" ಎಂದು ಹೇಳಿ, ಚಂದ್ರು ತಾನು ನಿಲ್ಲಿಸಿದ್ದ ಸೈಕಲ್ಲಿನ ಸ್ಟ್ಯಾಂಡ್‌ನ್ನು ಕಳಚಿ, ಹತ್ತಿದ.

ಅಷ್ಟರಲ್ಲಿ ಅವನು ಸಾವರಿಸಿಕೊಂಡು ಎದ್ದು ಕೂತಿದ್ದ. ಏಟು ಬಿದ್ದ ಜಾಗದಿಂದ ರಕ್ತ ಒಸರುತ್ತಿತ್ತು. ಅದನ್ನು ತಲೆಗೆ ಕಟ್ಟಿಕೊಂಡಿದ್ದ ಬಟ್ಟೆಯಿಂದ ಒರೆಸಿಕೊಂಡ... ಗೋಪಾಲನಿಗೆ ಕೈ ಮುಗಿದ.

"ಯಾನು ನೀನು ? ಯಾವೂರಿನವನು ? ಇಲ್ಯಾಕೆ ಬಂದಿದೀಯ ? ಎಷ್ಟು ದಿನಗಳಿಂದ ಇಲ್ಲಿದೀಯ ?" ಗೋಪಾಲ ಪ್ರಶ್ನಿಸಿದ.

"ನಾನು ಹಾವಾಡಿಗರು ಬುದ್ಧಿ, ಹಾವುಗಳನ್ನು ಹಿಡಿದು ಆಡಿಸುವ ಕಸುಬು ನಮ್ಮದು. ಪಕ್ಕದ ಹಳ್ಳಿಯಿಂದ ಈ ಊರಿಗೆ ಬಂದೆವು. ಯಾರೋ ಹೇಳಿದ್ರು ಈ ಮರದ ಮೇಲೆ ಹಾವುಗಳು ಹರಿದಾಡ್ತಾ ಇರುತ್ವೆ ಅಂತ... ಅವುಗಳನ್ನು ಹಿಡಿಯೋಕೆ ಅಂತ ಬಂದೆವು. ನಾಲ್ಕು ದಿನಗಳಾದ್ವು... ಇವನು ನನ್ನ ಅಣ್ಣ... ಹುಶಾರಿಲ್ಲದೇ ಮಲಗಿ

ಬಿಟ್ಟಿದಾನೆ. ನಮ್ಮನ್ನು ಬಿಟ್ಟುಬಿಡಿ.... ನಾವು ಹೊರಟು ಹೋಗ್ತೀವಿ. ನಾವು ಮತ್ತೆ ಇತ್ತ ಕಡೆಗೆ ಬರೂದಿಲ್ಲ." ಕೈ ಮುಗಿದು ಕೇಳಿಕೊಂಡ.

"ಸರಿ, ನಿನ್ನ ಗಂಟು ಮೂಟೆ ಕಟ್ಕೊಂಡು ಈಗ್ಲೇ ನಡೀ ಇಲ್ಲಿಂದ ಎಷ್ಟು ಹಾವುಗಳನ್ನು ಹಿಡಿದಿದೀಯ?"

"ನಾಕೋ ಐದೋ ಹಾವುಗಳನ್ನು ಹಿಡಿದು ಬುಟ್ಟೀಲಿ ಇಟ್ಟಿದೀನಿ... ಆದರೆ ಮರದ ಮೇಲೆ ಹರಿದಾಡೋ ಹಾವುಗಳನ್ನು ಇನ್ನೂ ಹಿಡಿದಿಲ್ಲ..."

"ಈಗ ಒಂದನ್ನು ಬಿಟ್ಟಲ್ಲಾ... ಅದು ಎಂಥಾ ಹಾವು?... ಹಿಡಿದ ಹಾವುಗಳನ್ನು ಎಲ್ಲಿ ಇಟ್ಟಿದೀಯ ತೋರ್ಸು..."

"ಅವುಗಳನ್ನು ತೋರ್ಸು ಹಂಗಿಲ್ಲ... ಭುಸುಗುಟ್ತವೆ... ಇನ್ನು ಹಲ್ಲುಗಳನ್ನು ಕಿತ್ತಿಲ್ಲ..."

"ಸರಿ... ಸರಿ.... ಎಲ್ಲವನ್ನು ತಗೊಂಡು ಈಗ್ಲೇ ನಡೀತಿರು... ಮತ್ತೆ ಈ ಕಡೆ ತಲೆ ಹಾಕ್ಬೇಡ.... ಏನು ಗಲೀಜು ಎಬ್ಬಿಸಿದೀಯ.... ಕೊಳೆತ ಮಾಂಸದ ವಾಸನೆ ಬರ್ತಿದೆ.... ಬೇಗೆ ಎಲ್ಲಾ ತಗೊಂಡು ಹೋಗು..."

"ನಮ್ಮಣ್ಣಂಗೆ ನಡೆಯೋ ತಾಕತ್ತಿಲ್ಲ ಬುದ್ಧಿ.... ಜ್ವರ ಬಂದದೆ.... ಸಾಯಂಕಾಲದ ಹೊತ್ತಿಗೆ ಹೊರಟು ಹೋಗ್ತೀವಿ... ಸ್ವಲ್ಪ ಸಮಯ ಕೊಡಿ ಬುದ್ಧಿ...."

"ಅದೆಲ್ಲಾ ಆಗುಲ್ಲ... ನನ್ನ ಮಗ ಪೊಲೀಸೋರ್ನ ಕರ್ಕೊಂಡು ಬರೋಕೆ ಹೋಗಿದಾನೆ.... ಅವರು ಬರೋದ್ರಲ್ಲಿ ಹೊರಡ್ತಿರು....."

"ಹಂಗಾರೆ ಒಂದಿಷ್ಟು ಕಾಸು ಕೊಡಿ ಬುದ್ಧಿ.... ಜಟಕಾ ಗಾಡೀನ ಗೊತ್ತು ಮಾಡ್ಕೊಂಡು ಕರ್ಕೊಂಡು ಹೋಗ್ತೀನಿ...."

"ನೀನು ಹಾವಾಡಿಗ ಅಂತ ಗೊತ್ತಾದ್ರೆ, ಯಾವ ಜಟಕಾದವನೂ ನಿನ್ನನ್ನು ಗಾಡಿಗೆ ಹತ್ತಿಸುಲ್ಲ... ಹಾವುಗಳನ್ನು ಕಂಡ್ರೆ ಗಾಡಿಗೆ ಕಟ್ಟಿದ ಕುದುರೆ ಬಿಚ್ಕೊಂಡು ಓಡುತ್ತೆ...."

"ಹಾಗಾರೆ ನಾನೇನ್ಮಾಡ್ಲೀ... ನಮ್ಮ ಸ್ನೇಹಿತ ಒಬ್ಬ ಇದಾನೆ ಅವನನ್ನು ಕರ್ಕೊಂಡು ಬರ್ತೀವಿ. ಅಲ್ಲೀವರ್ಗೂ ಇವನು ಇಲ್ಲಿ ಇರಲಿ. ಇವನನ್ನು ಪೊಲೀಸರಿಗೆ ಒಪ್ಪಿಸ್ಬೇಡಿ..."

ಅದೆಲ್ಲಾ ಆಗುಲ್ಲ... ಈಗ ಅಂದ್ರೆ ಈಗ ಜಾಗ ಖಾಲಿ ಮಾಡ್ತಿರ್ಬೇಕು ನಿನ್ನ ಆಸ್ತೀನೆಲ್ಲಾ ತಗೊಂಡು, ನಿನ್ನ ಅಣ್ಣನನ್ನು ಕರ್ಕೊಂಡು, ಯಾವ ಕಡೆಯಿಂದ ನುಸುಳ್ಕೊಂಡು ಬಂದ್ಯೋ ಆ ಕಡೆಯಿಂದ ಹೊರಡು. ಪೋಲೀಸರು ಬಂದ ಮೇಲೆ ನಾವು ಏನೂ ಮಾಡುಕ್ಕಾಗುಲ್ಲ...."

"ನೀವು ಹಿಂಗೆ ಹೇಳಿದ್ರೆ ಹೇಗೆ ಬುದ್ಧಿ...? ಹಾವುಗಳನ್ನೆಲ್ಲಾ ಎಲ್ಲಾ ಇಲ್ಲೇ ಬಿಟ್ಟು ಹೋಗ್ಬೇಕಾಗುತ್ತೆ...."

"ಬಿಟ್ಟು ಹೋಗು... ನಮಗೇನೂ ಭಯ ಇಲ್ಲ... ಇಲ್ಲಿಯ ಪೊದೆ ಪೊಟರೆಗಳಲ್ಲಿ

ಎಷ್ಟೋ ಹಾವುಗಳು ವಾಸ ಮಾಡ್ಕೊಂಡಿವೆ. ಅವುಗಳ ಜತೇಲಿ ಇವೂ ಇರುತ್ವೆ ಆದರೆ, ನೋಡು, ನೀನು ಕಷ್ಟ ಪಟ್ಟು ಹಿಡಿದಿದೀಯ.... ನಿನ್ನ ಜೀವನಾಧಾರಕ್ಕೆ ಪುಂಗಿ ಊದಿ, ಹೆಡೆ ಬಿಚ್ಚಿ ಆಟ ಆಡಿಸಿ, ಕಾಸು ಸಂಪಾದಿಸ್ತೀಯ. ಸುಮ್ಮನೇ ತಗೊಂಡು ಹೋಗು..."

"ತಕ್ಷಣಕ್ಕೆ ಹೋಗು ಅಂತಂದ್ರೆ ಎಲ್ಲಿಗೆ ಹೋಗ್ಲೀ ಬುದ್ಧಿ? ಹೆಂಗೆ ಹೋಗ್ಲೀ? ಕಾಸಿಲ್ಲ... ಹೊಟ್ಟೆಗಿಲ್ಲ..."

"ಸರಿ ತಗೋ...." ಗೋಪಾಲ ಷರಟಿನ ಜೇಬಿಗೆ ಕೈ ಹಾಕಿದ... ಒಂದು ರೂಪಾಯಿಯ ನೋಟೊಂದು ಸಿಕ್ಕಿತು. ತಗೋ.... ನನ್ನ ಹತ್ರ ಇರೋದು ಇಷ್ಟೇ.... ಜಟಕಾದಲ್ಲಿ ಇವನನ್ನು ಕೂರಿಸ್ಕೊಂಡು, ಬಸ್‌ಸ್ಟ್ಯಾಂಡ್‌ಗೆ ಹೋಗು... ಭಿಕ್ಷೆಬೇಡು.... ಏನಾದ್ರೂ ತಿಂದ್ಕೋ...."ಎನ್ನುತ್ತಾ ಅವನ ಕೈಗೆ ಹಣವನ್ನು ಹಾಕಿದ ಅವನು ತೆಗೆದಿಟ್ಟುಕೊಂಡು ಎದ್ದ...

"ಈಗ ನೀನು ಏನಾದ್ರೂ ಬಾಲ ಬಿಚ್ಚಿದೆಯೋ, ಇವರ‍್ಯಾರೂ ನಿನ್ನನ್ನು ಸುಮ್ಮನೆ ಬಿಡುಲ್ಲ. ನಿನ್ನನ್ನ, ನಿನ್ನ ಅಣ್ಣನ್ನ ಕಟ್ಟಿಹಾಕಿ ನೀನು ಹಿಡಿದಿಟ್ಟಿರುವ ಹಾವುಗಳಿಗೆಲ್ಲ ಒಂದು ಗತಿ ಕಾಣಿಸಿ ಬಿಡ್ತಾರೆ. ನಿಮ್ಮಿಬ್ಬರನ್ನೂ ಪೊಲಿಸ್ನೋರು ಎಳೆದ್ಕೊಂಡು ಹೋಗ್ತಾರೆ. ಹೊಡೀತಾರೆ, ಬಡೀತಾರೆ, ಸಾಯಿಸೇ ಬಿಡ್ತಾರೆ" ಹೆದರಿಸಿದ... ಅವನಿಗೇ ಆಶ್ಚರ್ಯ ತಾನು ಎಷ್ಟೊಂದು ಮಾತನ್ನು ಆಡ್ತಾ ಇದೀನಲ್ಲ ಅಂತ.

"ಏನು ನೋಡ್ತಾ ಇದೀರೀ ?.... ಇವನಿಗೆ ಸಹಾಯ ಮಾಡಿ. ಹಾವುಗಳ ತಂಟೆಗೆ ಹೋಗ್ಬೇಡಿ... ಪಾತ್ರೆ ಬಟ್ಟೆಗಳನ್ನೂ ಆಚೆಗೆ ತಂದಿಡಿ.... "ಆಜ್ಞೆ ಮಾಡಿದ. ಇಬ್ಬರು ಆಳುಗಳು ಸರಸರನೆ ಪಾತ್ರೆ ಪಡಗ, ಬಟ್ಟೆ ಗಂಟು ಹಾಸಿಗೆ ಇತ್ಯಾದಿಗಳನ್ನು ತಂದು ಆಚೆಗೆ ಇಟ್ಟರು. ಹಾವಾಡಿಗ, ಹಾವುಗಳಿದ್ದ ಬುಟ್ಟಿಗಳನ್ನು ಒಂದು ಗೋಣೀಚೀಲ ದೊಳಕ್ಕೆ ಹಾಕಿ, ಬಾಯನ್ನು ಕಟ್ಟಿದ. ತಾನು ಏನನ್ನು ಬಿಟ್ಟಿಲ್ಲ ಎನ್ನುವುದನ್ನು ಖಚಿತ ಮಾಡಿಕೊಂಡು ಹೊರಕ್ಕೆ ಬಂದ ಅಣ್ಣನನ್ನು ಹೊರಕ್ಕೆ ಕರೆದುಕೊಂಡು ಬಂದು ಕೂರಿಸಿದ.

"ಒಂದು ಜಟಕಾ ಗಾಡೀನ ಗೊತ್ತು ಮಾಡ್ಕೊಂಡು ಬರ್ತೀನಿ. ಇವನ ಕೈಯಲ್ಲಿ ನಡೆಯುಕ್ಕೆ ಆಗುಲ್ಲ" ಎಂದು ಹೇಳಿ ಹಿಂಬದಿಯ ಬೇಲಿಯ ನಡುವೆ ಮಾಡಿಕೊಂಡಿದ್ದ ಜಾಗದಲ್ಲಿ ನುಸುಳಿ ಬೇಲಿಯನ್ನು ದಾಟಿದ.... ಇವರುಗಳಿಗೆ ಬೆನ್ನು ಮಾಡಿ ಓಡಿದ. ಗೋಪಾಲ ಬಾಗಿಲನ್ನು ಭದ್ರಪಡಿಸಿ, ಮುಂಬಾಗಿಲಿಗೆ ಹಾಕಿದ್ದ ಬೀಗವನ್ನು ಹಾಕಿ, ಬೀಗದ ಕೈಗಳನ್ನು ತನ್ನ ಜೇಬಿನೊಳಕ್ಕೆ ಇಳಿಬಿಟ್ಟ.

ಅವನು ಹಿಂತಿರುಗದೇ ಇದ್ದಾಗ, ಅವನು ಓಡಿ ಹೋಗಿರಬಹುದುದೆಂಬ ಅನುಮಾನ ಕಾಡಿತು... ಅಷ್ಟರಲ್ಲಿ ಚಂದ್ರು ಇಬ್ಬರು ಪೊಲೀಸು ಪೇದೆಗಳೊಂದಿಗೆ ಬಂದ.

"ಯಾರ‍್ರೀ ಅದು ಅಕ್ರಮವಾಗಿ ಮನೆಯೊಳಗೆ ಬಂದು ಸೇರ‍್ಕೊಂಡಿರೋದು ?

ಮರ್ಯಾದೆಯಾಗಿ ಸ್ಟೇಷನ್‌ಗೆ ಬಾ... ಇಲ್ಲಿದ್ರೆ ಎಳಕೊಂಡು ಹೋಗಬೇಕಾಗುತ್ತದೆ." ಪೊಲೀಸ್‌ನವರು ಗುಡುಗಿದ.

"ಒಬ್ಬ ಓಡಿ ಹೋದ ಇವನೊಬ್ಬನೇ ಉಳಕೊಂಡಿರೋದು. ಇವನನ್ನೇ ಎಳ್ಕೊಂಡ್ಹೋಗಿ..."ಆಳೊಬ್ಬ ಹೇಳಿದ.

"ಓಡಿ ಹೋದ್ನಾ ? ಓಡ್ಹೋಗುಕ್ಕೆ ಹೇಗೆ ಬಿಟ್ರಿ?" ಚಂದ್ರು ಹೇಳಿದ ಗೋಪಾಲ ಏನಾದ್ರೂ ಹೇಳುವ ಮೊದಲೇ ಪೊಲೀಸ್ನೋನು, ದುಪ್ಪಟಿ ಹೊದ್ದು ಕೂತಿದ್ದವನ ಕಂಕುಳಿಗೆ ಕೈ ಹಾಕಿ ಎತ್ತಿದ ಅವನು ಕೂಗಿಕಂಡ.

"ಮುಚ್ಚುಬಾಯಿ ಸುಮ್ಮನೇ ಎದ್ನಡಿ.... ಅವನ್ನೆಲ್ಲಿಗೆ ಹೋಗ್ತಾನೆ?... ಯಾವುದೇ ಬಿಲದಲ್ಲಿ ಅಡಗಿದ್ರೂ ಎಳೆದ್ಕೊಂಡು ಬರ್ತೀವಿ...."ಎನ್ನುತ್ತಾ ಈ ವ್ಯಕ್ತಿಯನ್ನು ಎಳೆದ.

"ಎಳಿಬೇಡ್ರಪ್ಪಾ... ಹುಶಾರಿಲ್ವಂತೆ.... ಸತ್ತು ಗಿತ್ತು ಹೋದಾನು? ಆಮೇಲೆ ಎಲ್ಲಿಯ ರಾಮಾಯಣ?..."

"ಏನು ಯಜಮಾನ್ರೇ....? ಇವರೆಲ್ಲಾ ಬರೀ ಕೊರಮರು... ನಾಟಕ ಆಡ್ತಾರೆ.... ನಾಲ್ಕು ಬಿಟ್ಟರೆ ದಾರಿಗೆ ಬರ್ತಾರೆ....ಏನು ಕಳುವಾಗಿದೆ. ಪಟ್ಟಿಕೊಡಿ ಕಕ್ಕಿಸ್ತೀನೀ."

"ಇಲ್ಲಪ್ಪಾ ಏನೂ ಕಳುವಾಗಿಲ್ಲ. ಖಾಲಿ ಇದ್ದ ಮನೇಲಿ ಬಂದು ಸೇರ್ಕೊಂಡಿದಾರೆ ಅಷ್ಟೇ.... ಬಿಟ್ಟುಬಿಡಿ ಎತ್ಲಾಗಾದ್ರೂ ಹಾಳಾಗಿ ಹೋಗ್ಲಿ...."

"ನೀವಾ ಸಾಮಿ ಬೀಗ ಹಾಕಿರೋದು... ಎಲ್ಲಿ ಬೀಗ ತೆಗೀರಿ... ಒಳಗೆ ಏನೇನು ಕದ್ದ ಸಾಮಾನುಗಳನ್ನಿಟ್ಟುಕೊಂಡಿದಾರೆ.... ಜಪ್ತಿ ಮಾಡೋಣ..."

"ಏನೂ ಇಲ್ಲ... ಎಲ್ಲಾ ಇಲ್ಲೇ ತಂದು ಹಾಕ್ಕೊಂಡಿದಾನೆ.... ಅವನು ಹಾವಾಡಿಗ ಅಂತೆ... ಒಂದಿಷ್ಟು ಹಾವುಗಳನ್ನು ಹಿಡಿದಿದಾನೆ... ಅವೆಲ್ಲಾ ಇಲ್ಲೇ ಗೋಣಿಚೀಲ ದಲ್ಲಿವೆ..."

"ಓ.... ಹಾವು ಹಿಡಿಯೋನಾ ? ಹೀಗೆ ಹಾವನ್ನು ಹಿಡಿಯೋದು... ಆ ಕಡೆ ಹೋಗಿ ಮತ್ತೆ ಆ ಹಾವನ್ನು ಬಿಟ್ಟು ಬಿಡೋದು... ಇದೇ ಆಟ ಇವರುಗಳಿಗೆ... ಈ ಹಾವುಗಳನ್ನು ಸೈಕಲ್ ಮೇಲೆ ಇಟ್ಕೊಂಡು ಸ್ಟೇಷನಗೆ ತಗೊಂಡು ಬಾ ಮಾರಣ್ಣಾ ನಾನು ಇವನನ್ನು ಎಳ್ಕೊಂಡು ಬರ್ತೀವಿ..." ಎನ್ನುತ್ತಾ ಮತ್ತೆ ಆ ವ್ಯಕ್ತಿಯನ್ನು ಎಳೆದ.

"ಚಂದ್ರೂ ಒಂದು ಜಟಕಾಗಾಡೀನ ತಂದ್ಕೊಡು... ಈ ಮನುಷ್ಯನಿಗೆ ನಡೆಯೋಕೆ ಆಗುಲ್ಲ... ನೋಡೀ ಧಫೇದಾದ್ರೇ.... ಇವನನ್ನು ಯಾವುದಾದ್ರೂ ಸರ್ಕಾರಿ ಆಸ್ಪತ್ರೆಗೆ ಸೇರಿಸಿ ಬಿಡಿ.... ಪುಣ್ಯ ಬರುತ್ತೆ... ಹುಶಾರಾದ್ಮೇಲೆ ವಿಚಾರಿಸಿಕೊಳ್ಳೋರಂತೆ... ಅಷ್ಟರೊಳಗೆ ಆ ವ್ಯಕ್ತಿಯೂ ಸಿಗಬಹುದು..."

ನಮಗೆ ಕಾಫಿಗೆ ಕಾಸು ಕೊಡೀ ಸಾಮೀ.... ಕರೆದ್ಕೊಡ್ಲೇ ಬಂದಿಲ್ವಾ?.....

"ಅದು ನಿಮ್ಮ ಡ್ಯೂಟಿ ಅಲ್ವಾ ಧಫೇದಾರ್ರೇ...."

"ಹಂಗಾರೆ, ಈ ಕಳ್ಳನ್ನ ನೀವೇ ಮಡಿಕ್ಕೊಳ್ಳಿ... ಆ ಹಾವುಗಳನ್ನು ನೀವೇ ಮಡಿಕ್ಕೊಳ್ಳಿ. .. ನಾವು ಹೋಗ್ತೀವಿ..."

"ನಾವು ನಿಮ್ಮ ಮೇಲಿನ ಅಧಿಕಾರಿಗೆ ದೂರು ಕೊಡ್ತೀವಿ ಅಷ್ಟೇ...." ಗೋಪಾಲ ಹೆದರಿಸಿದ.

"ಸರಿ... ಹಂಗಾರೆ... ನೀವು ಸ್ಟೇಷನ್ನಿಗೆ ಬಂದು, ದೂರು ಬರೆದುಕೊಡಿ...." ನಡಿಯೋ ಮಾರಣ್ಣಾ ನಾವು ಹೋಗೋಣ..." ದಫೇದಾರ, ಗೋಪಾಲನನ್ನೇ ದುರುದುರು ನೋಡುತ್ತಾ, ಎಲ್ಲವನ್ನೂ ಅಲ್ಲೇ ಬಿಟ್ಟು ಎಡಗೈಯ ಅಂಗೈಗೆ ಕೋಲಿನಿಂದ ಹೊಡೆದುಕೊಳ್ಳುತ್ತಾ ಮುಂದೆ ಮುಂದೆ ನಡೆದ. ಮಾರಣ್ಣ ಅವನ ಹಿಂದೆ ನಡೆದ. ಆಳುಗಳೆಲ್ಲರೂ ಬೆಪ್ಪರಂತೆ ನಿಂತಿದ್ದರು.

"ಅಪ್ಪಾ.... ಈಗೇನಪ್ಪಾ ಮಾಡೋದು? ಅವನು ಓಡಿಹೋದ... ಇವನು ಇಲ್ಲೇ ಉಳಿದ ಈ ಹಾವುಗಳು ಹೊರಗೆ ಬಂದು ವಠಾರದೊಳಗೆ ಓಡಾಡತೊಡಗಿದರೆ.... ಹಿಡಿಯೋರು ಯಾರು ?"

"ಹಾಗೇನು ಆಗುಲ್ಲ... ನೀವು ಹೆದರ್ಬೇಡಿ... ಹಾವುಗಳನ್ನು ನಾವೇ ಕಾಡಿಗೆ ತಗೊಂಡು ಹೋಗಿ ಬಿಟ್ಟು ಬಿಡ್ತೀವಿ.... ಈ ಮನುಷ್ಯನ್ನ, ಬಸ್‌ಸ್ಟ್ಯಾಂಡ್ ಹತ್ತಿರ ಕೂರಿಸ್ತೀವಿ. ಅವನು ಮತ್ತೆ ಇತ್ಲಾಗೆ ಸುಳಿಯದ ಹಾಗೇ ಬೇಲಿಯ ಮುಳ್ಳುತಂತಿಯನ್ನು ಈಗಲೇ ಸರಿಪಡಿಸಿಬಿಡ್ತೀವಿ... ತಲಾ ಎರಡೆರಡು ರೂಪಾಯಿ ನಮಗೇ ಕೊಟ್ಬಿಡಿ...." ಆಳುಗಳ ಪೈಕಿ ಒಬ್ಬ ಹೇಳಿದ.

"ಎರಡು ರೂಪಾಯಿ !".... ಗೋಪಾಲ ಉದ್ಗಾರವೆತ್ತಿದ...

"ಕಮ್ಮೀನೇ ಕೇಳಿದ್ದು ಸಾಮೀ, ನೀವೇ ಲೆಕ್ಕ ಹಾಕಿ, ನಾವು ಬಂದು ಒಂದು ಗಂಟೆಯ ಮೇಲಾಯಿತು.... ಇವರ್ನೆಲ್ಲಾ ಆಚೆ ತಳ್ಳಕ್ಕೆ ಸಹಾಯ ಮಾಡ್ಡೋರು ನಾವೇ ಅಲ್ವಾ?... ಆ ಹಾವಾಡಿಗ ಮತ್ತೆ ಬರದ ಹಾಗೆ ಬೇಲೀನ ಬಂದೋಬಸ್ತು ಮಾಡ್ತೀವಿ ಇವೆಲ್ಲಾ ನಿಮ್ಮದೇ ಕೆಲಸ ಅಲ್ವಾ?...."

"ಆದ್ರೂ ಭಾಳ ಜಾಸ್ತಿ ಆಯ್ತಪ್ಪಾ.... ಸ್ವಲ್ಪ ಕಡಿಮೆ ಮಾಡ್ಕೋ...."

"ಏನ್ಸಾಮಿ ಭಾಳ ಚೌಕಾಸಿ ಮಾಡ್ತೀರಿ... ನಾವು ಬಡವರು.... ನಮ್ಮ ಹೊಟ್ಟೆ ಮೇಲೆ ಹೊಡೀ ಬ್ಯಾಡೀ.."

ಅಷ್ಟರಲ್ಲಿ ಮಾಧವ ಇತ್ತಕಡೆ ಬರುತ್ತಿದ್ದುದನ್ನು ಚಂದ್ರು ಕಂಡ. "ಅಪ್ಪಾ ಮಾಧವ ಇತ್ಲಾಗೇ ಬರ್ತಿದಾನೆ."ಅತ್ತೇ, ಅಮ್ಮ, ಎಲ್ರೂ ಈ ಕಡೇನೇ ನೋಡ್ತಿದಾರೆ." ಕೆಳದನಿಯಲ್ಲಿ ಹೇಳಿದ.

"ಸರಿ ನೀನು ಇವರ ಹತ್ರ ಮಾತಾಡ್ತಾ ಇರು. ನಾನು ಹೋಗಿ, ಏನು ಅಂತ

ಕೇಳ್ಕೊಂಡು ಬರ್ತೀನಿ" ಗೋಪಾಲ ಮಾಧವನನ್ನು ಅರ್ಧದಲ್ಲೇ ತಡೆದ. ಏನೋ ಮಾಧು.... ಆಟ ಮುಗೀತಾ ? ಯಾರು ಗೆದ್ದರು ?... ದೊಡ್ಡಮ್ಮ ತಾನೇ ?"

"ಹೌದು ದೊಡ್ಡಪ್ಪಾ... ದೊಡ್ಡಮ್ಮ ನಿಮ್ಮನ್ನ ಕರ್‍ಕೊಂಡು ಬಾ ಅಂತಂದ್ರು ಅವರೆಲ್ಲಾ ಯಾರು ?' ಕೌತುಕದಿಂದ ಕೇಳಿದ.

"ಯಾರಾದ್ರೆ ನಮ್ಗೇನು ? ಚಂದ್ರು ವಿಚಾರಿಸ್ತಿದಾನೆ. ನಡೀ... ಎಂದು ಹೇಳಿ ತೊಳನ್ನು ಹಿಡಿದು ಇತ್ತ ತಿರುಗಿಸಿ, ತನ್ನೊಡನೆ ನಡೆಸಿದ. ಮನೆಯ ಮುಂದಿನ ಅಂಗಳ ದಲ್ಲಿ ನಿಂತಿದ್ದ ಲಕ್ಷ್ಮೀದೇವಮ್ಮ ಗಂಡನನ್ನೇ ವಿಚಿತ್ರವಾಗಿ ನೋಡದಳು.

"ಅವರೆಲ್ಲಾ ಯಾರು ? ಪೊಲಿಸ್ನೋರು ಯಾಕೆ ಬಂದಿದ್ರು?...."

"ಯಾರೋ ಕಳ್ಳರಂತೆ.. ಅಟ್ಟಿಸ್ಕೊಂಡು ಬಂದಿದ್ರು.. ಹಿಡ್ಕೊಂಡು ಹೋದ್ರು..."

"ಮತ್ತೆ ಇವರೆಲ್ಲಾ...?"

"ಇವರೂ ಅವರುಗಳ ಜೊತೆ ಓಡಿ ಬಂದಿದ್ರು... ಎಲ್ಲಾ ಹೋಗ್ತಾರೆ... ಚಂದ್ರು ಕಳಿಸ್ತಾನೆ. ಆ ಮೂಲೆಯ ಬೇಲೀನ ಸ್ವಲ್ಪ ರಿಪೇರಿ ಮಾಡಿಸ್ಬೇಕು... ಕಳ್ಳದಾರಿ ಥರ ಇದೆ ಅಂತ ಪೊಲೀಸ್ನೋನು ಹೇಳ್ದ... ಅದನ್ನೆಲ್ಲ ಚಂದ್ರು ನೋಡ್ಕೋತಾನೆ ಬಿಡು..."

"ಅವನ್ಗೇನು ಗೊತ್ತಾಗುತ್ತೆ ? ಅವರೇನು ಬಿಟ್ಟಿ ಕೆಲಸ ಮಾಡುಲ್ಲ... ಸಿಕ್ಕಾಬಟ್ಟೆ ಕೇಳ್ತಾರೆ... ಚಂದ್ರು ಒಪ್ಕೊಂಡು ಬಿಡ್ತಾನೆ... ನಾನೂ ಬಂದು ಮಾತಾಡ್ತೀನಿ."

"ಬೇಡ ಲಕ್ಷ್ಮೀ.... ಅವರೆಲ್ಲಾ ಒಳ್ಳೆ ಜನರಲ್ಲ... ಮಾಂಸ ಮಡ್ಡಿ ತಿನ್ನೋ ಜನ ಕುಡಿದು ಬಿಟ್ಟಿರ್ತಾರೆ... ಹೆಂಗಸರ ಹತ್ರ ಹೇಗೆ ಮಾತಾಡ್ಬೇಕು ಅನ್ನೋ ಪರಿವೆ ಅವರಿಗಿರುಲ್ಲ.... ನಾನು ಮಾತಾಡ್ತೀನಿ... ನೀನು ಒಳಗೆ ಹೋಗು... ಆಟ ಮುಗೀತಾ? ಯಾರು ಗೆದ್ದದ್ದು ?"

"ಒಂದಾಟದಲ್ಲಿ ನಾನೇ ಗೆದ್ದೆ... ಇನ್ನೊಂದಾಟ ಪೂರ್ತಿ ಆಡಲೇ ಇಲ್ಲ, ಅಷ್ಟರಲ್ಲಿ ಯಾರೋ ಕೂಗಿಕೊಳ್ಳುತ್ತಿರೋ ಹಾಗೆ ಕೇಳಿಸ್ತು.... ಯಾರು ಅಂತ ಗೊತ್ತಾಗ್ಲಿಲ್ಲ. ಮಾಧೂನ ನೋಡ್ಕೊಂಡ್ಬಾರೋ ಅಂತಂದ್ರೆ, ಇಲ್ಲಿಂದ್ಲೇ ಯಾರೂ ಇಲ್ಲ ದೊಡ್ಡಮ್ಮ ಅಂತ ಅಂದ್ಬಿಟ್ಟ. ಈಗ ಗೊತ್ತಾಯ್ತು ನಂಗೆ, ನಮ್ಮ ದೇವರ ಸತ್ಯ... ಪೊಲೀಸ್ನೋರು ಕಳ್ಳನ್ನ ಚೆನ್ನಾಗಿ ಹೊಡೆದಿರಬೇಕು.... ಯಾರ ಮನೇಲಿ ಕಳ್ಳತನ ಆಯ್ತೋ.... ಪಾಪ ಏನೇನು ಕಳಕೊಂಡ್ರೋ?" ಲೊಚಗುಟ್ಟಿದಳು.

"ಹೋಗ್ಲಿ ಬಿಡು. ನಾವೇನು ಮಾಡುಕ್ಕೆ ಆಗುತ್ತೇ ನಿನ್ನ ಸ್ನಾನ ಆಯ್ತಾ? ನಾನು ಮಾಡ್ಬೇಕು..."

"ನನ್ನ ಸ್ನಾನ ಆಗ್ಲೇ ಆಯ್ತು... ಚಂದ್ರೂನೂ ಕರೀರಿ. ಅಡಿಗೆ ಆಗಿದೆ. ಅತ್ಗೆ ಊಟಕ್ಕೆ ಸಿದ್ಧ ಮಾಡಿದಾರೆ...."

"ಸರಿ... ನೀನು ಹೋಗು.... ನಾನು ಚಂದ್ರೂನ ಕರ್‍ಕೊಂಡು ಬರ್ತೀನಿ...."

ಎಂದು ಹೇಳಿ ಮತ್ತೆ ದಿಬ್ಬದ ಮನೆಯ ಬಳಿಗೆ ಬಂದಿದ್ದ. ಆಳುಗಳು ಬೇಲಿಯನ್ನು ಸರಿ ಮಾಡುವುದರಲ್ಲಿ ನಿರತರಾಗಿದ್ದರು. ಹಾವಾಡಿಗನನ್ನು ಎತ್ತಿಕೊಂಡು ಹೋಗಿ ರಸ್ತೆಯ ಇನ್ನೊಂದು ಬದಿಯಲ್ಲಿ ಕೂರಿಸಿದ್ದರು. ಅವರ ಹರುಕು ಮುರುಕು ಕೊಳಕು ಸಾಮಾನುಗಳನ್ನು ಅವನ ಬದಿಯಲ್ಲಿ ತಂದಿಟ್ಟರು. ಹಾವಿನ ಬುಟ್ಟಿಗಳನ್ನಿಟ್ಟಿದ್ದ ಗೋಣಿಚೀಲವನ್ನು ಸುರಕ್ಷಿತವಾಗಿ ಒಂದು ಕಡೆ ಇಟ್ಟಿದ್ದರು.

"ಕಡೆಗೆ ಎಷ್ಟಕ್ಕೆ ಒಪ್ಕೊಂಡ್ರು ? ಕೆಲಸ ಪ್ರಾರಂಭ ಮಾಡಿದಾರೆ..."

"ಇವರುಗಳ ಹತ್ರ ಏನು ಚೌಕಾಸಿ ಅಂತ, ಅವರು ಕೇಳಿದಷ್ಟಕ್ಕೆ ಒಪ್ಕೊಂಡೆ ಇಲ್ದಿದ್ರೆ ಎಲ್ಲಾವನ್ನೂ ಹಾಗೇ ಬಿಟ್ಟು ಹೋಗ್ತಿದ್ರು..."

"ಸರಿ... ಅಮ್ಮಂಗೆ ಈ ವಿಷಯ ಹೇಳ್ಬೇಡ...."

"ನಾನ್ಯಾಕೆ ಹೇಳ್ಲೀ? ಅವರ ಸ್ವಭಾವ ನಂಗೆ ಗೊತ್ತಿಲ್ವಾ?.... ಈಗ ಏನು ಹೇಳಿ ಬಂದ್ರಿ?"

"ಏನೋ ಒಂದು ಸುಳ್ಳು ಹೇಳಿ ಬಂದಿದೀನಿ..."

"ಅಲ್ಲ ಅಪ್ಪಾ... ನಮ್ಮ ಮನೆಯಲ್ಲಿ ನಾವೇ ಯಾಕೆ ಸುಳ್ಳು ಹೇಳ್ಬೇಕು? ಯಾಕೆ ಮುಚ್ಚುಮರೆ ಮಾಡ್ಬೇಕು?...."

"ಸುಮ್ನೇ ಅನಾವಶ್ಯಕ ಚರ್ಚೆ ಯಾಕೆ ಅಂತ.... ನಾನು ಹೋಗ್ತೀನಿ. ಕೆಲಸ ಮುಗಿಸಿದ ಕೂಡ್ಲೇ ಅವರನ್ನೆಲ್ಲ ಕಳಿಸಿ, ನೀನೂ ಬಂದ್ಬಿಡು... ನಿನ್ಹತ್ರ ದುಡ್ಡು ಇದೆಯೋ? .. ನಾನು ಕೊಡ್ಲೋ? ಮಾತಾಡಿದಷ್ಟನ್ನು ಮಾತ್ರ ಕೊಡು ಹೆಚ್ಗೆ ಕೊಡ್ಬೇಡ..."

"ನನ್ನ ಹತ್ರ ಇದೆ...." ಜೇಬಿನ ಮೇಲೆ ಕೈ ಇಟ್ಟು ಹೇಳಿದ.

"ಎಲ್ಲಾ ಸರ್‍ಯಾಗಿ ಕೆಲ್ಸ ಮಾಡೀಪ್ಪ... ಮತ್ತೆ ಯಾರೂ ನುಗ್ಗಬಾರದು. ಒಂದು ನಾಯಿ ಕೂಡಾ ನುಸುಳಬಾರದು.... ನೀವು ಕೇಳಿದಷ್ಟಕ್ಕೆ ಒಪ್ಕೊಂಡಾಗಿದೆ. ಹಡಬೆ ಕೆಲ್ಸ ಮಾಡ್ಬೇಡಿ."

"ಇಲ್ಲ ಸಾಮೀ... ನಾವು ಅಂಥೋರಲ್ಲ... ಒಪ್ಕೊಂಡ್ಮೇಲೆ ಆಯ್ತು.. ನಿಮಗೆ ನಾವು ಮೋಸ ಮಾಡಾಕಿಲ್ಲ..."

"ಸರಿ... ಸರಿ... ಈ ಹಾವುಗಳನ್ನು ಇಲ್ಲೇ ಎಲ್ಲಾದ್ರೂ ಬಿಟ್ಟು ಬಿಟ್ಟೀರಿ ಜೋಕೆ....? ದೂರಾ ಎಲ್ಲಾದ್ರೂ ಬಿಟ್ಬಿಡಿ.... ತಿಳೀತಾ ?"

"ಹೂಂ... ಆಯ್ತು ಸ್ವಾಮಿ..." ಅವರಲ್ಲೊಬ್ಬ ನುಡಿದ. ಗೋಪಾಲ ಮತ್ತೊಮ್ಮೆ ಮನೆಯ ಕಿಟಕಿ ಬಾಗಿಲುಗಳನ್ನು ಪರೀಕ್ಷಿಸಿ ಮನೆಯ ಕಡೆಗೆ ನಡೆದ.

○ ○ ○

"ಈ ಚಂದ್ರು ಎಲ್ಲಿ ಹೋದ ? ಹೋಗೋ ಮಾಧು ಕರೆದು ಬಾರೋ... ಎಲ್ರಿಗೂ ಒಟ್ಗೆ ಬಡಿಸಿಬಿಡ್ತೀನಿ. ಊಟ ಆದ್ಮೇಲೆ ಒಂದುಗಳಿಗೆ ಮಲಗಿ ಎದ್ದು ಕಾಫಿ ಮಾಡಿ

ಕೊಟ್ಟು, ಬಜಾರ್‌ಗೆ ಹೋಗಿ ಬರ್ತೀವಿ..." ಪಾರ್ವತಿ ನುಡಿದಾಗ ಲಕ್ಷ್ಮಿ ಮುಖ ಕೆಟ್ಟದಾಗಿ ಮಾಡಿಕೊಂಡಳು... ಗೋಪಾಲ ಹುಬ್ಬೇರಿಸಿದ...

"ಬಜಾರ್‌ನಲ್ಲಿ ಏನು ಬೇಕು ನಿಂಗೆ ಪಾರ್ವತಿ ? ಮೈಸೂರ್ನಲ್ಲಿ ಸಿಗದೇ ಇದ್ದುದು ಇಲ್ಲಿ ಏನು ಸಿಗುತ್ತೆ?"

"ಹಾಗೇ ಸುತ್ತಾಡಿಕೊಂಡು ಬರ್ತೀವಿ.. ನಿಮ್ಮೂರನ್ನ ನೋಡಿಯೇ ಇಲ್ಲ."

ನೋಡುಕ್ಕೆ ಏನೂ ಇಲ್ಲ... ಬೆಳಗಿನ ಹೊತ್ನಲ್ಲಿ ಹೊರಟರೆ ಒಂದು ಕೋಟೆ ; ಸಮೀಪದಲ್ಲಿ ಒಂದು ಡ್ಯಾಮ್ ಇದೆ. ನದೀ ಸಂಗಮ ಇದೆ. ನೋಡಬಹುದು."

"ಬೆಳಗಿನ ಹೊತ್ತು ಹೋಗಿ ಬರೋದು ಅಂದ್ರೆ ಕಷ್ಟಾನೇ.... ಲೀಲಾ ಆಸೆ ಪಡ್ತಾಳೆ ಅಂತ ಕರ್ಕೊಂಡು ಹೋಗ್ಬೇಕು.... ಅವಳು ಒಬ್ಬಳೇ ಎಲ್ಲಿ ಓಡಾಡ್ತಾಳೆ?"

"ಲೀಲನ್ನ ಮಾಧು ಕರ್ಕೊಂಡು ಹೋಗಿ ತಿರುಗಾಡಿಸ್ಕೊಂಡು ಬರ್ತಾನೆ..."

"ಇಲ್ಲ ದೊಡ್ಡಪ್ಪಾ... ನನಗೆ ಊರು ಕೇರಿ ಒಂದೂ ಗೊತ್ತಿಲ್ಲ. ಚಂದ್ರೂನೂ ಬಂದರೆ ಹೋಗಿ ಬರಬಹುದು...."

"ನೀನು ಇನ್ನು ಇಲ್ಲೇ ಇದೀಯ ಚಂದ್ರೂನ ಕರೆದು ಬಂದ್ಯಾ?"

"ಹೂಂ ಅತ್ತೇ.... ಕರೆದು ಬಂದಿದೀನಿ. ಬರ್ತಾನಂತೆ...."

"ಲೀಲಾ ಎಲ್ರಿಗೂ ಎಲೆ ಹಾಕು... ನೀರನ್ನಿಡು... ಎಲ್ಲೂ ಬೇಗ ಬೇಗ ಊಟಮಾಡಿ ಚಂದ್ರೂ ಜತೆ ಎಲ್ಲಾದ್ರೂ ಹೊರಗೆ ತಿರುಗಾಡ್ಕೊಂಡು ಬನ್ನಿ...."

"ಅಲ್ಲಾ ಅತ್ಗೇ, ಚಂದ್ರೂಗೆ ತಾನೇ ಈ ಊರು ಏನು ಗೊತ್ತಿದೆ ? ಅವನು ಇಲ್ಲಿ ಬೆಳೆದಿದ್ರೆ ತಾನೇ... ಅವನೂ ನಿಮ್ಮಗಳ ಹಾಗೆ.... ಅತಿಥಿಯಂತೆ ಬರ್ತಾನೆ. ನಾಲ್ಕುದಿನ ಇದ್ದು ವಾಪಸ್ಸು ಹೋಗ್ತಾನೆ."

"ಈ ಸಾರಿ, ಇಲ್ಲೇ ಇರೋದಿಕ್ಕೆ ಬಂದಿದಾನೆ ಅಂತ ಅಮ್ಮ ಹೇಳ್ತಿದ್ಲು ಇಲ್ಲೇ ಕೆಲಸಾನ ಹುಡುಕ್ತಿದಾನಂತೆ."

"ನಂಗೆ ಏನೂ ಗೊತ್ತಿಲ್ಲ. ನಂಗೇನಾದ್ರೂ ಹೇಳಿದ್ರೆ ತಾನೇ ? ಗಂಡನ ಕಡೆ ನೋಡಿದಳು.

"ನಿಂಗೆ ಗೊಪಾಲನೂ ಹೇಳಿಲ್ವಾ ಹಾಗಾದ್ರೆ?....."

"ಇಲ್ಲ... ಪಾರ್ವತಿ.... ಅವನಿಗೆ ಕೆಲಸ ಸಿಕ್ಕ ಮೇಲೆ ಆ ಬಗ್ಗೆ ಚರ್ಚೆ ಮಾಡಿದ್ರಾಯ್ತು ಅಂತ ಅಂದ್ಕೊಂಡೆ... ಇಂಟರ್‌ವ್ಯೂ ಹೇಗಾಯ್ತು?.... ಫಲಿತಾಂಶ ಏನು ಅಂತ ತಿಳಿದಿಲ್ಲ... ಮಧ್ಯೆ ಈ ಅನಾನುಕೂಲ... ಸುಮ್ಮನಾಗಿ ಬಿಟ್ಟೆ... " ಅಷ್ಟ ರಲ್ಲಿ ಚಂದ್ರು ಹಿಂತಿರುಗಿದ್ದ.... ಅವನು ಚೆನ್ನಾಗಿ ಕೈ ಕಾಲುಗಳನ್ನು ತೊಳೆದು ಬರುವಷ್ಟರಲ್ಲಿ ಪಾರ್ವತಿ ಎಲ್ಲರಿಗೂ ಬಡಿಸಲಾರಂಭಿಸಿದ್ದಳು...

"ದಿಬ್ಬದ ಮೇಲಿರೋ ಮನೇನ ಬಾಡಿಗೆಗೆಗ ಕೇಳ್ತಿದಾರೆ... ಮಾತಾಡಿ ಬನ್ನಿ

ಅಂತ ಹೇಳೋದಾ?" ಚಂದ್ರು ಗೋಪಾಲನ ಕಡೆ ನೋಡಿ ಕೇಳಿದ. ಗೋಪಾಲ ಹೆಂಡತಿಯ ಕಡೆ ನೋಡಿದ. ಈಗ ಯಾವ ಮಾತೂ ಬೇಡ ಎನ್ನುವಂತೆ ಅವಳು ತಲೆ ಯಾಡಿಸಿದಳು.

"ಈ ಹದಿನೈದು ದಿನಗಳು ಕಳೆದು ಹೋಗ್ಲಿ ಚಂದ್ರು... ಹಾಗಂತ ಹೇಳಿ ಬಿಡು... ಯಾರು ಕೇಳೋರು ? ನಿನಗೆ ಹೇಗೆ ಪರಿಚಯ ?"

"ಪಂಕಜಾ ಟೀಚರ್ರು ಇದಾರಲ್ಲ .... ಅವರ ಸ್ಕೂಲ್ನೋರ್ಗೆ ಬೇಕಂತೆ... ಹೂಂ ಅಂದರೆ ಮನೇನ ಬಂದು ನೋಡ್ತಾರೆ...

"ಮನೇನ ಮೊದಲು ಕ್ಲೀನ್ ಮಾಡಿಸ್ಬೇಕು ಚಂದ್ರು... ಪಾರಿವಾಳಗಳು ಸೇರ್ಕೊಂಡು ಬಹಳ ಗಲೀಜು ಮಾಡಿವೆ...." ಇಲಿಗಳು ಸೇರಿಕೊಂಡಿವೆ.

"ಮೊನ್ನೆ ಮೊನ್ನೆ ಸುಣ್ಣ ಬಣ್ಣ ಹೊಡಿಸಿದ್ದಾಗಿದೆ.. ಪಾರಿವಾಳಗಳು ಎಲ್ಲಿಂದ ಬಂದವು ? ಇಲಿಗಳು ಹೇಗೆ ಬಂದವು?...."

"ಪಾರಿವಾಳಗಳು ಗವಾಕ್ಷಿಯಿಂದ ಒಳಗೆ ಬಂದು ಸೇರಿಕೊಂಡಿವೆ... ಇಲಿಗಳು ಬಚ್ಚಲು ಮೋರಿಯಿಂದ ಒಳಗೆ ಬಂದಿವೆ.... ಜನ ವಾಸಕ್ಕೆ ಬಂದರೆ, ಎಲ್ಲಾ ತಾವಾಗಿಯೇ ಹೋಗುತ್ತವೆ. ಬಾಡಿಗೆ ಎಷ್ಟು ಹೇಳೋಣ ಲಕ್ಷ್ಮೀ?"

"ಅವಸರ ಏನು ? ಈಗ ಹಣಕಾಸಿನ ಮಾತು ಯಾಕೆ ? ನೀವು ಮೈಸೂರಿಗೆ ಹೋಗಿ ಬಂದ ಮೇಲೆ, ಈ ಮನೆಗೆ ಪುಣ್ಯಾಃ ಮಾಡಿಸ್ಬೇಕು. ಆಮೇಲೆ ಮಾತಾಡೋಣ.... ಈಗ ಎಲ್ರೂ ಸುಮ್ಮನೇ ಊಟ ಮಾಡಿ.... "ಲಕ್ಷ್ಮಿದೇವಮ್ಮ ತಾಕೀತು ಮಾಡಿದ ಮೇಲೆ, ಮೌನವಾಗಿ ಊಟದ ಕಾರ್ಯ ನೆರವೇರಿತು.

ಎಲ್ಲರ ಊಟ ಮುಗಿದ ಮೇಲೆ ಚಂದ್ರು ಎಲೆ ಗೋಮೆ ಹಚ್ಚಿ ನೆಲವನ್ನು ಶುಚಿಗೊಳಿಸಿದ. ಹಿತ್ತಿಲಿಗೆ ಹೋಗಿ ಒರೆಸುವ ಒಟ್ಟೆಯನ್ನು ಹಿಂಡುತ್ತಿದ್ದವನನ್ನು ಗೋಪಾಲ ಸಮೀಪಿಸಿ ಪ್ರಶ್ನಿಸಿದ. "ಕಡೆಗೆ ಎಷ್ಟು ದುಡ್ಡು ಕೊಟ್ಟೆ ? ಎಲ್ಲಾ ಸರಿಯಾಗಿ ಮಾಡಿದಾರೆ ತಾನೇ ? ಅವರೇ ಬಂದು ಹೋಗಿ ಮಾಡುವ ಹಾಗೆ ಬೇಲೀಲಿ ಸಂಧಿ ಬಿಟ್ಟಿಲ್ಲ ತಾನೆ ?"

"ಇಲ್ಲಪ್ಪಾ.... ನಾನೇ ನಿಂತಿದ್ನಲ್ಲ... ಎಲ್ಲಾ ಸರಿಯಾಗಿ ಮಾಡಿದಾರೆ... ದುಡ್ಡು ತಗೊಂಡು ಕೆಲಸ ಮಾಡದೇ ಇರ್ತಾರಾ ?"

"ಇಲ್ಲ ಕಣೋ ಚಂದ್ರು ನಿಂಗೆ ಗೊತ್ತಿಲ್ಲ... ಎಲ್ರೂ ಮೋಸ ಮಾಡೋರೇ ದುಡ್ಡು ತಗೋತಾರೆ.. ಅದಕ್ಕೆ ತಕ್ಕಂಥ ಕೆಲಸ ಮಾಡುಲ್ಲ.. ಅದಕ್ಕೇ ತಾನೇ... ಒದ್ದಾಟ."

"ನೀವೂ ಅಮ್ಮನ ತರಹನೇ ಮಾತಾಡ್ತೀರಲ್ಲ ಅಪ್ಪಾ... ನಮಗೆ ತಾನೇ ಅವರ ಅಗತ್ಯ ಇದ್ದದ್ದು... ನಾವು ತಾನೇ ಅವರನ್ನು ಕರ್ಕೊಂಡು ಬಂದದ್ದು... ಸಮಯ ಅಂತಂದ್ರೆ, ಕರೆದರೆ ಅವರು ಮತ್ತೆ ಬರ್ಬೇಕು. ಹಾಗೆ ನಾವು ಅವರನ್ನು ಇಟ್ಕೊಂಡಿರ್ಬೇಕು.

ಇಲ್ದಿದ್ರೆ ಈ ಕಾಲದಲ್ಲಿ ಕೆಲಸಕ್ಕೆ ಜನ ಸಿಗೋದು ಕಷ್ಟ..."

"ಇವರಲ್ಲದಿದ್ರೆ ಇನ್ನೊಬ್ರು... ಇವರೇ ಆಗ್ಬೇಕು ಅಂತ ಏನು?"

"ಹೋಗ್ಲಿ ಬಿಡಿ ಅಪ್ಪಾ... ನಾನು ಹೇಳೋದು ನಿಮಗೆ ಸರಿ ಹೋಗುಲ್ಲ..." ಚಂದ್ರು ಮುಖ ಊದಿಸಿದ.

"ಹಾಗಲ್ಲ ಕಣೋ ಚಂದ್ರು.... ದುಡ್ಡಿನ ಬೆಲೆ ಅರಿತಿರಬೇಕು.... ನಾನು ಶ್ರೀಮಂತನಲ್ಲ. ಅದಕ್ಕೇ ಹೀಗೆ ಮಾತಾಡ್ತೀನಿ..."

"ಯಾಕಪ್ಪಾ ನೀವು ಶ್ರೀಮಂತರಲ್ವಾ?.. ಈ ಪಾಟಿ ಆಸ್ತಿ ಇದೆ ನಿಮಗೆ? ತಮಾಷೆಯ ಧ್ವನಿಯಲ್ಲಿ ಕೇಳಿದ.

"ತಮಾಷೆ ಮಾಡ್ಬೇಡ ಚಂದ್ರು... ಈ ಆಸ್ತಿ ನನ್ನದಲ್ಲ... ನಾನು ಶ್ರೀಮಂತನೂ ಅಲ್ಲ. ಇಂತಹ ಸಣ್ಣಪುಟ್ಟ ಖರ್ಚುಗಳಿಗೆಲ್ಲ ಲಕ್ಷ್ಮೀನ ದುಡ್ಡು ಕೇಳುವುದು ನನಗೆ ಇಷ್ಟವಾಗುಲ್ಲ. ನನ್ನ ಹತ್ರ ಇರುವ ಹಣದಲ್ಲಿ, ನನ್ನ ಇತಿಮಿತಿಯಲ್ಲಿ ಅವಳಿಗೆ ತಿಳಿಯದಂತೆ ಖರ್ಚು ಮಾಡುತ್ತೇನೆ... ಅದು ನಿನಗೆ ಅರ್ಥವಾಗುಲ್ಲ..." ಬೇಸರದಿಂದ ಹೇಳಿದ.

"ಬೇಜಾರಾಗುವ ಹಾಗೆ ಮಾತಾಡಿದೆ ಅಪ್ಪ...ನನ್ನನ್ನು ಕ್ಷಮಿಸಿ" ಎಂದ.

"ಪರವಾಗಿಲ್ಲ ಬಿಡು.... ನಾನು ನಿನ್ನನ್ನು ಎಂದೂ ಸ್ವಂತ ಮಗ ಅಂತಲೇ ಭಾವಿಸಿದ್ದೀನಿ. ಲೀಲನ್ನ, ಮಾಧೂನ, ಯಾವುದಾದ್ರೂ ಪಿಕ್ಚರ್‌ಗೆ ಕರ್ಕೊಂಡು ಹೋಗು.... ಮನೇಲೇ ಕೂತೂ ಕೂತು ಅವಕ್ಕೂ ಬೇಸರ..."

"ಅಮ್ಮಂಗೆ ಗೊತ್ತಾದ್ರೆ ಏನಂತಾರೋ?"

"ಗೊತ್ತಾಗದ ಹಾಗೆ ನೋಡ್ಕೊಂಡ್ರಾಯ್ತು... ಹಾಗೇ ಬರ್ತಾ, ಮನೆಗೆ ಒಂದಿಷ್ಟು ತರಕಾರಿ ಸೊಪ್ಪು ತಗೊಂಡ್ಬಾ.... ದುಡ್ಡು ನಾನು ಕೊಡ್ಲೋ, ನಿನ್ಹತ್ರ ಇದೆಯೋ?"

"ಅಷ್ಟೊಂದು ಇಲ್ಲ ಅಪ್ಪ.... ಕೆಲಸದವರಿಗೆ ಕೊಟ್ಟುಬಿಟ್ಟೆ. ಸಿನಿಮಾಕ್ಕೆ ಹೋಗೋದಾದ್ರೆ ಹತ್ತು ಹನ್ನೆರಡು ರೂಪಾಯಿ ಬೇಕಾಗಬಹುದು..." ಅರೆ ಸಂಕೋಚದಿಂದ ಹೇಳಿದ.

"ಬಾಲ್ಕನಿಗೆ ಟಿಕೆಟ್ ತಗೋಬೇಡ... ಸುಮ್ಮನೆ ದುಡ್ಡು ದಂಡ. ಬಿ ಕ್ಲಾಸ್ ಟಿಕೆಟ್ ಸಾಕು. ಲೀಲನ್ನ ಮಧ್ಯದಲ್ಲಿ ಕೂರಿಸ್ಕೊಳ್ಳಿ.... ಅಥವಾ ಕಡೇಲಿ ಕೂರಿಸ್ಕೊಳ್ಳಿ... ಇಲ್ದಿದ್ರೆ ಯಾರಾದ್ರೂ ಪೋಲಿ ಗಂಡಸರು ಬಂದು ಕೂತು ಬಿಡ್ತಾರೆ...."

ಚಂದ್ರು ನಕ್ಕ.... "ಆಯ್ತು ಅಪ್ಪಯ್ಯ... ಅದನ್ನು ನಾವೆಲ್ಲಾ ನೋಡ್ಕೋತೀವಿ... ಲೀಲಂಗೆ, ಮಾಧೂಗೆ ಹೇಳಿ, ಎಬ್ಬಿಸ್ತೀನಿ." ಎನ್ನುತ್ತಾ ಒಳಗೆ ಬಂದ...

"ಲೀಲಾ ಜ್ಞಾಪಾನ ಕಣೇ ಊರು ಹೊಸದು.... ಇವರುಗಳ ಜೊತೆ ಜೊತೇನೇ ಇರು...." ಪಾರ್ವತಿ ಮಗಳಿಗೆ ಹೇಳಿದಳು.

"ಅಯ್ತಮ್ಮಾ.... ನೀನೇನೂ ಹೆದರ್ಬೇಡ...." ಲೀಲಾ ನುಡಿದಳು.

"ಚಂದ್ರೂಗೂ ಈ ಊರು ಹೊಸ್ದೇನೇ... ಅವನು ಇಲ್ಲಿ ಬೆಳೆದಿಲ್ಲ. ಓಡಾಡಿಲ್ಲ. .." ಅಲ್ಲೇ ಕುಳಿತಿದ್ದ ಲಕ್ಷ್ಮಿ ನುಡಿದಳು. ಚಂದ್ರು ಕೆಟ್ಟ ಮುಖ ಮಾಡಿದ.

"ನೀನು ತಪ್ಪು ಮಾಡ್ದೆ ಲಕ್ಷ್ಮೀ.... ಅವನನ್ನು ಚಿಕ್ಕ ಮಗುವಿನಿಂದ್ಲೂ ಇಲ್ಲೇ ನಿಮ್ಮ ಜೊತೆಗೆ ಇಟ್ಕೋ ಬೇಕಾಗಿತ್ತು... ಅದಕ್ಕೇ ಅವನಿಗೆ ಈ ಊರು ಹಳೇದಾಗಿಯೇ ಇಲ್ಲ..." ಚಂದ್ರು ಹಾಗೂ ಅವರುಗಳು ಬಾಗಿಲನ್ನು ದಾಟಿದ ಮೇಲೆ ಹೇಳಿದಳು.

"ನನ್ಮೇಲೆ ತಪ್ಪು ಹೊರಿಸ್ಬೇಡಿ ಅತ್ತಿಗೇ.... ಅವನು ಇಲ್ಲಿ ಇರೋದು, ಬೆಳೆಯೋದು ಬೇಡ ಅಂತ ನಾನೆಂದೂ ಹೇಳಿಲ್ಲ.... ಅವನಿಗೇ ಇಲ್ಲಿರುಕ್ಕೆ ಇವತ್ತಿಗೂ ಇಷ್ಟವಿಲ್ಲ... ಬೇಕಾದ್ರೆ ಕೇಳಿ...."

"ಮೊದಲ್ನಿಂದ ಅಭ್ಯಾಸವೇ ಆಗ್ಲಿಲ್ಲ.... ಎಲ್ಲಿ ಬೆಳೀತಾರೋ ಆ ಊರು ಇಷ್ಟ ಆಗೋದು ಸಹಜ.... ಅದನ್ನೇ ಹೇಳ್ದೆ ಅಷ್ಟೇ...."

"ಒಟ್ನಲ್ಲಿ ಎಲ್ರೂ ನನ್ನದೇ ತಪ್ಪು ಅನ್ನೋ ಥರ ಮಾತಾಡ್ತೀರಿ... ಒಂದೊಂದ್ಸಾರಿ, ಈ ಮಗೂನ ದತ್ತು ಯಾಕೆ ತಗೋ ಬೇಕಾಗಿತ್ತು... ಅಂತ ಅನ್ಸುತ್ತೆ..."

"ಒಂದಲ್ಲ ಅಂತ ನಾಲ್ಕು ಮಕ್ಕಳನ್ನು ದತ್ತು ತೆಗೆದ್ಕೊಂಡು ಸಾಕಬೇಕಾಗಿತ್ತು ನೀವುಗಳು. ಮನೆ ತುಂಬಿದ ಹಾಗಿರ್ತಿತ್ತು. ಇವನಿದ್ದರೂ ಇಲ್ಲದ ಹಾಗೇ ನೀವಿಬ್ರೇ ಇರೋದೇ.... ಬೇಗ ಮದುವೆ ಮಾಡು.... ಬೇಗ ಬೇಗ ನಾಲ್ಕು ಮಕ್ಕಳಾದ್ರೆ ಮನೆ ತುಂಬಿದ ಹಾಗಾಗುತ್ತೆ... ನಮ್ಮ ಲೀಲಾ ಹೇಗನ್ನಿಸ್ತಾಳೇ? ಚಂದ್ರೂಗೆ ತಕ್ಕ ಜೋಡಿ ಆಗ್ತಾಳೆ ಅಲ್ವಾ....?

ಲಕ್ಷ್ಮೀದೇವಿ ಪಿಳಿ ಪಿಳಿ ನೋಡಿದಲು. "ನಿಮ್ಮ ಮನಸ್ನಲ್ಲಿ ಈ ಆಲೋಚನೆ ಇರಬಹುದು ಅಂತ ನನಗೆ ಅನ್ನಿಸಿರಲೇ ಇಲ್ಲ ಅತ್ಗೇ.... ಹೋಗಲಿ ಬಿಡಿ ಈ ಸೂತಕದ ಸಮಯದಲ್ಲಿ ಮದುವೆಯ ಮಾತೇಕೆ ? ಮುಂದೆಂದಾದ್ರೂ ಆ ಬಗ್ಗೆ ಯೋಚಿಸಿದ್ರೆ ಆಯ್ತು..."

"ನಾವು ಮನೆ ಮನೆಯವರೇ ತಾನೇ... ಅಲ್ಲದೇ ಚಂದ್ರು ಏನೂ ನಿಮ್ಮ ರಕ್ತ ಹಂಚಿಕೊಂಡು ಹುಟ್ಟಿಲ್ಲ.... ಸೂತಕದ ದೋಷ ಅವನಿಗೆ ಹೆಚ್ಚು ಇಲ್ಲ..."

"ಆದ್ರೂ ಈಗ ಆ ಮಾತು ಬೇಡ ಪಾರ್ವತಿ..." ಗೋಪಾಲನೂ ಹೇಳಿದಾಗ ಆ ಮಾತು ಅಲ್ಲಿಗೆ ನಿಂತಿತು. ಹೊತ್ತೇ ಹೋಗ್ತಿಲ್ಲ ಲಕ್ಷ್ಮೀ, ನಾನೂ ಹುಡುಗರ ಜತೇಲಿ ತಿರುಗಾಡುಕ್ಕೆ ಹೋಗಿದ್ದರೆ ಚೆನ್ನಾಗಿತ್ತು ಅಂತ ಅನ್ನಿಸ್ತಿದೆ."

"ಒಂದು ಗಳಿಗೆ ಮಲಗೋ ಗೋಪಿ.... ಬೆಳಿಗ್ಗೆಯೆಲ್ಲಾ ಕಳ್ಳ, ಪೋಲಿಸರ ಜೂಟಾಟ ನೋಡ್ತಾ ಬಿಸಿಲ್ನಲ್ಲಿ ನಿಂತಿದ್ಯಲ್ಲ.... ಕಣ್ಣುಗಳಿಗೆ ಆಯಾಸ ಆಗಿರುತ್ತೆ..."

"ಯಾವ ಕಳ್ಳ ? ಯಾವ ಪೊಲೀಸು ? ಜೂಟಾಟ... ಏನೇನೋ ಹೇಳ್ತಿದೀಯ

ನೀನು.... ನಾನು ಇಲ್ಲೇ ಮರಗಳ ಕೆಳಗೆ ಬಿದ್ದ ಎಲೆಗಳನ್ನು ಗುಡಿಸಿ ಎತ್ತಿ ಹಾಕಿದೆ... ಆಯಾಸ ಅಂತೂ ಆಗಿದೆ.... ಆದರೆ ಈಗ ಮಲಗಿದರೆ ರಾತ್ರಿ ನಿದ್ದೆ ಬರುಲ್ಲ... ನೀನು ಬೇಕಾದ್ರೆ ಮಲಕ್ಕೋ....." ತಮಾಷೆಗಾಗಿ ಎಂದ.

"ಹೋಗ್ಲಿ ನೀನು, ಲಕ್ಷ್ಮಿ ಪಗಡೆ ಆಟ ಆಡಿ.... ನಾನು ನೋಡ್ತೀನಿ ಬೇಕಾದ್ರೆ, ನಾನು ನಿಂಗೆ ಸಹಾಯ ಮಾಡ್ತೀನಿ..."

"ಏನ್ಹೇಳ್ತೀಯಾ ಲಕ್ಷ್ಮಿ.... ಆಟ ಆಡೋಣ್ವಾ?..."

"ನಿಮಗೆ ಬೇಕೂಂತ ಇದ್ದರೆ ಆಡೋಣ... ಆದ್ರೆ ನೀವು ಯಾರ ಸಹಾಯಾನೂ ತಗೋಬಾರ್ದು...."

"ನಾನ್ಯಾಕೆ ಸಹಾಯ ತಗೊಳ್ಳಲಿ ? ನಂಗೇನು ಆಟ ಬರುಲ್ವಾ ?.... ಸರಿಯಾಗಿ ಆಡಿದ್ರೆ ನಾನೂ ಗೆಲ್ತೀನಿ... ನಿಂಗೆ ಬೇಸರ ಆಗುತ್ತಲ್ಲ ಅಂತ ನಿನ್ನನ್ನು ಗೆಲ್ಲಿಸ್ತೀನಿ ಅಷ್ಟೇ...."

"ಇದು ಮೋಸ ಗೋಪಿ ನೀನ್ಯಾಕೆ ಸೋಲ್ಬೇಕು ?.... ಇವತ್ತು ನೀನು ಗೆಲ್ಲಲೇ ಬೇಕು... ನನ್ನ ತಮ್ಮ ಸೋಲೋದು ಅಂದ್ರೇನು?"

"ಬಿಡು ಪಾರ್ವತಿ.... ಆಟ ತಾನೇ ? ಸೋತರೆ ನನಗೇನೂ ಬೇಸರವಿಲ್ಲ... ಮೊದಲ್ನಿಂದ್ಲೂ ಲಕ್ಷ್ಮಿಗೆ ಎಲ್ಲಾ ರೀತಿಯಿಂದಲೂ ಸೋಲ್ತಾನೇ ಬಂದಿದೀನಿ. ಅಲ್ವಾ ಲಕ್ಷ್ಮೀ" ಹೆಂಡತಿಯ ಕಡೆ ನೋಡಿ ಮಂದಹಾಸ ಬೀರಿದ . ಅವಳು ಸಿಡುಕಿದಳು."ತಮಾಷೆ ಮಾತಾಡ್ತಾ ನನ್ನನ್ನು ಕೆರಳಿಸ್ಬೇಡಿ.... ಗೆಲ್ಲುವ ಪ್ರಯತ್ನವನ್ನೇ ನೀವು ಮಾಡ್ಲಿಲ್ಲ.... ಈಗೇನು ಆಟ ಶುರು ಮಾಡ್ತೀರೋ.... ನಾನು ಮಲಗಲೋ?"

"ಶುರು ಮಾಡ್ತೀನಿ... ನನಗೂ ಸಮಯ ಹೋಗ್ಬೇಕಲ್ಲ..." ಎನ್ನುತ್ತಾ ಪಗಡೆ ಹಾಸನ್ನು ಹಾಸಿ, ಕಾಯಿಗಳನ್ನು ಹೂಡಿದ. ದಾಳಗಳನ್ನು ಲಕ್ಷ್ಮಿಯ ಕೈಗಿತ್ತ. ಲಕ್ಷ್ಮಿ ದಾಳಗಳನ್ನು ಉರುಳಿಸಿ ಆಟಕ್ಕೆ ಚಾಲನೆ ನೀಡಿದಳು. ಪಾರ್ವತಿ ಅವರಿಬ್ಬರ ಆಟವನ್ನೇ ನೋಡಿದಳು. ಮುದ್ದಣ-ಮನೋರಮೆಯರ ಕಾವ್ಯ ನೆನಪಾಗಿತ್ತು... ಇಷ್ಟೊಂದು ಆಸ್ತಿ ಪಾಸ್ತಿ ಇದೆ ಮನೆ ತುಂಬಾ ಮಕ್ಕಳಾಗಿದ್ದಿದ್ದರೆ ಎಷ್ಟು ಚೆನ್ನಾಗಿರ್ತಿತ್ತು ! ಗಂಡ ಹೆಂಡತಿ ಅನ್ಯೋನ್ಯವಾಗಿಯೇ ಇದಾರೆ... ಅವಳದೇ ಮೇಲುಗೈ... ಆದರೂ ಮಕ್ಕಳ್ಯಾಕೆ ಆಗಲಿಲ್ಲ ವೋ?... ದೇವರು ತಾನೇ ಹುಟ್ಟಿಸಿದ ಮನುಷ್ಯರುಗಳಲ್ಲಿ ಎಷ್ಟು ತಾರತಮ್ಯವನ್ನು ಸೃಷ್ಟಿಸಿಬಿಡುತ್ತಾನೆ? ಹಲ್ಲಿದ್ದವರಿಗೆ ಕಡಲೆ ಇಲ್ಲ; ಕಡಲೆ ಇದ್ದವರಿಗೆ ಹಲ್ಲಿಲ್ಲ. ಹೀಗ್ಯಾಕೋ. ... ನೆಪ ಮಾತ್ರಕ್ಕೆ ಸಾಕಿಕೊಂಡಿರುವ ಚಂದ್ರು ಮೇಲೆ ಇವಳಿಗೆ ಪ್ರೀತಿಯೇ ಇಲ್ಲ.... ಇನ್ನು ಸೊಸೆಯ ಬಗ್ಗೆ ಯಾವ ಪ್ರೀತಿ ಬರುತ್ತೆ ? ಆದರೂ.... ಲೀಲಾ ಏನಾದ್ರೂ ಈ ಮನೆಯ ಸೊಸೆಯಾದರೆ.... ಇವಳ ಜತೆಯಲ್ಲಿರಬೇಕಾಗಿಲ್ಲ... ಮುಂದೆ ಈ ಸಮಸ್ತ ಆಸ್ತಿಯೆಲ್ಲಾ ಲೀಲಳ ಮಕ್ಕಳಿಗೇ ಸಿಕ್ಕುತ್ತದೆ... ಚಂದ್ರು ಹತ್ತಿರ ಮಾತನಾಡಿ

ಅವನ ಮನಸ್ನಲ್ಲಿ ಏನಿದೆ ಅಂತ ಮೊದಲು ತಿಳಿದುಕೊಳ್ಳಬೇಕು ಅಂತಂದುಕೊಂಡಳು.

ಂ ಂ ಂ

ಚಂದ್ರು ಹಾಗೂ ಮಾಧು ಟಿಕೆಟ್‌ಗಾಗಿ ಕ್ಯೂನಲ್ಲಿ ನಿಂತರು. ಸ್ವಲ್ಪ ಹೊತ್ತಿನಲ್ಲೇ ಟಿಕೆಟ್ ಮುಗಿದು ಹೋಗಿದೆಯೆಂದು ಮುಂದೆ ನಿಂತಿದ್ದವರು ತಮ್ಮ ತಮ್ಮಲ್ಲೇ ಮಾತಾಡಿಕೊಂಡರು.... ಟಿಕೆಟ್ ಸಿಗದವರೆಲ್ಲಾ ನಿರಾಶರಾಗಿ ಚದುರಿದ್ದರು. ಕೆಲವರು ಬೇರೊಂದು ಥಿಯೇಟರ್‌ಗೆ ಓಡಿ ಹೋಗಿದ್ದರು. "ಸರಿ ಮನೆಗೆ ಹೋಗೋಣ... ಇನ್ನೊಂದು ಟಾಕೀಸ್‌ನಲ್ಲೂ ಟಿಕೆಟ್ ಸಿಗುತ್ತೆ ಅಂತ ಏನು ಗ್ಯಾರಂಟಿ?" ಮಾಧು ಹೇಳಿದಾಗ, ಇವರಿಬ್ಬರಿಗೂ ಸರಿ ಎನಿಸಿತ್ತು.

"ಮಾಧು, ನೀನು ಇವಳನ್ನು ಮನೆಗೆ ಕರ್ಕೊಂಡ್ಹೋಗು... ನಾನು ನನ್ನ ಫ್ರೆಂಡ್ ಒಬ್ಬರನ್ನು ನೋಡ್ಕೊಂಡು ನಿಧಾನವಾಗಿ ಮನೆಗೆ ಬರ್ತೀನಿ" ಎಂದ.

"ದೊಡ್ಡಪ್ಪಾ, ತರಕಾರಿ ತಗೊಂಡ್ಬನ್ನಿ ಅಂತ ಹೇಳಿದ್ರು...."

ನಾನು ತಗೊಂಡ್ಬರ್ತೀನಿ. ನೀವು ಸೀದಾ ಮನೆಗೆ ಹೋಗಿ... ಈಗ ಹೇಗೆ, ಯಾವ ರಸ್ತೆಯಲ್ಲಿ ಬಂದೆವೋ ಅದೇ ರಸ್ತೆಯಲ್ಲಿ ವಾಪಸ್ಸು ಹೋಗಿ ಹತ್ತಿರವೂ ಆಗುತ್ತೆ. ರಸ್ತೆಯೂ ತಪ್ಪುವಲ್ಲ..."

"ನಾನು ಬಳೇ ಅಂಗಡಿಗೆ ಹೋಗ್ಬೇಕಾಗಿತ್ತು" ಲೀಲಾ ರಾಗ ಎಳೆದಳು.

"ನಾಳೆ ಬೆಳಿಗ್ಗೇನೇ ಬರೋಣ. ಈಗ ಅಂಗಡಿ ಎಲ್ಲಾ ಬಾಗಿಲು ಹಾಕಿರುತ್ತೆ. ತೆಗೆಯೋದು ಎಷ್ಟು ಹೊತ್ತಾಗುತ್ತೋ.... ಈ ಬಿಸಿಲ್ನಲ್ಲಿ ಎಲ್ಲಿ ತಿರುಗಾಡೋದು...? ಫಸ್ಟ್ ಷೋಗೆ ಇನ್ನೂ ತುಂಬಾ ಕಾಯಬೇಕಾಗುತ್ತೆ.... ನಾಳೆ ಮಾರ್ನಿಂಗ್ ಷೋ ಸಿನಿಮಾಕ್ಕೆ ಕರ್ಕೊಂಡು ಬರ್ತೀನಿ" ಎಂದು ಹೇಳಿ ಅವರಿಬ್ಬರನ್ನು ಕಳಿಸಿದ. ತಾನು, ಪಂಕಜ ಟೀಚರ್ ಆಗಿದ್ದ ಸ್ಕೂಲಿಗೆ ಬಂದ. ಹೆಡ್ ಮಾಸ್ಟರ್ ರೂಮಿಗೆ ಬಂದು ಮಾತನಾಡಿ ಪಂಕಜಳಿಗೆ ಹೇಳಿ ಕಳಿಸಿದ.

ಜವಾನ, ಅವಳನ್ನು ಹುಡುಕಿ ಕರೆತರಲು ಸಾಕಷ್ಟು ಸಮಯವೇ ಆಯಿತು. ಏದುಸಿರು ಬಿಡುತ್ತಾ, ಗಾಬರಿಯಿಂದ ಬರುತ್ತಿದ್ದ ಪಂಕಜ, ಚಂದ್ರುವನ್ನು ಕಂಡು ನಡಿಗೆಯ ಗತಿಯನ್ನು ಮಂದಗೊಳಿಸಿದಳು. ಮುಖ್ಯದ್ವಾರದ ಕಡೆ ನಿಂತಿದ್ದವನ ಕಡೆಗೆ ಬಂದಳು. ಗಾಬರಿ ಮುಖದಲ್ಲಿ ಗೋಚರಿಸುತ್ತಿತ್ತು. "ನೀವಾ? ಇಲ್ಯಾಕೆ ಬಂದಿದೀರಿ? .... ಟೆಲಿಗ್ರಾಂ ಏನಾದ್ರೂ ಬಂದಿತ್ತಾ ?" ಆತಂಕದಿಂದ ಕೇಳಿದಳು.

"ಟೆಲಿಗ್ರಾಂ ? ಯಾರಿಂದ ಬರ್ಬೇಕಾಗಿತ್ತು?" ಕೇಳಿದ.

"ಊರಿಂದ ಏನಾದ್ರೂ ಬಂತೇನೋ ಅಂತ ಅಂದ್ಕೊಂಡು ಕೇಳಿದೆ. ಮತ್ತೆ ನೀವು ಇಲ್ಲಿ?"

"ಪರ್ಮಿಷನ್ ತಗೊಂಡು ಬರ್ತೀರಾ?... ಒಟ್ಟಿಗೇ ಕಾಫಿ ಕುಡಿಯೋಣ..."

"ಈಗ ?.... ಈಗ ಪರ್ಮಿಷನ್ ಕೇಳುಕ್ಕಾಗುಲ್ಲ ಚಂದ್ರೂ ಅವರೇ.... ನಮ್ಮ ಹೆಡ್ಮಾಸ್ಟ್ರಿಗೆ ಅನುಮಾನ ಬರುತ್ತೆ... ನೀವ್ಯಾಕೆ ಇಲ್ಲಿಗೆ ಬಂದ್ರಿ ? ಮನೆಗೇ ಬಂದಿದ್ರೆ, ನಾನೇ ಕಾಫಿ ಮಾಡಿ ಕೊಡ್ತಿದ್ದೆ... ಈಗ ನಾನು ಹೋಗ್ತೀನಿ. ನೀವು ಈಗ ಹೋಗಿ ಆಮೇಲೆ ಮನೆಗೆ ಬನ್ನಿ."

"ನಾವು ಸಿನಿಮಾಕ್ಕೆ ಅಂತ ಬಂದೆವು... ಟಿಕೆಟ್ ಸಿಗಲಿಲ್ಲ... ಅವರಿಬ್ರೂ ಮನೆಗೆ ಹೋದ್ರು... ನಾನು ನಿಮ್ಮ ಹತ್ರ ಮಾತನಾಡೋಣ ಅಂತ ಇಲ್ಲಿಗೆ ಬಂದೆ.... ಯಾಕೆ? ನಾನು ಬಂದದ್ದು ನಿಮಗೆ ಸರಿ ಹೋಗ್ಲಿಲ್ವಾ? ಹಾಗಾದ್ರೆ ಬರುಲ್ವಾ?"

"ಕಾರಣ ಕೇಳಿದ್ರೆ ಏನು ಹೇಳಲಿ?.... ನನಗೆ ಸುಳ್ಳು ಹೇಳುಕ್ಕಾಗುಲ್ಲ... ನಾನು ಆರುಗಂಟೆಯವರೆಗೂ ಇಲ್ಲಿಂದ ಹೊರಡುಕ್ಕೆ ಆಗುಲ್ಲ..."

"ಇವತ್ತೊಂದು ದಿನ.... ನನಗೋಸ್ಕರ ಬನ್ನಿ.... ನಿಮ್ಮ ಹತ್ರ ಮಾತಾಡೋಣ ಅಂತ ಅನ್ನಿಸ್ತು ಬಂದೆ... ನಾನೇ ನಿಮ್ಮ ಹೆಡ್‌ಮಾಸ್ಟರ್ ಹತ್ರ ಮಾತಾಡ್ಲಾ?"

"ನೀವು ಯಾರು ಅಂತ ಕೇಳಿದ್ರೆ ಏನು ಹೇಳ್ತೀರಿ?... ಫ್ರೆಂಡು ಅಂತ ಹೇಳಿದ್ರೆ, ಊಹಾ ಪೋಹಗಳು ಹುಟ್ಟಿಕೊಳ್ಳುತ್ವೆ... ಅಪವಾದ ಬರುತ್ತೆ. ಬೇಡ ಬಿಡಿ..."

"ಹಾಗಾದ್ರೆ ನೀವು ಈಗ ಬರುಲ್ಲ..."

"ಇಲ್ಲ ಚಂದ್ರೂ.... ನಾವುಗಳು ಟೀಚರ್ ಆಗಿ, ಪ್ರಾಮಾಣಿಕವಾಗಿ ನಮ್ಮ ಕರ್ತವ್ಯವನ್ನು ನಿಭಾಯಿಸಬೇಕಾಗುತ್ತೆ. ತಪ್ಪು ತಿಳ್ಕೋಬಿಡಿ. ಇಲ್ಲಿ ಓಡಾಡ್ತಾ ಇರೋರೆಲ್ಲಾ ನಮ್ಮಿಬ್ಬರನ್ನೇ ನೋಡ್ತಿದಾರೆ... ದಯವಿಟ್ಟು ಈಗ ಹೋಗಿ...."

"ನೀವ್ಯಾಕೆ ಹೆದರ್ಬೇಕು?......

"ಹೆದರ್ಬೇಕಾಗುತ್ತೆ ಚಂದ್ರೂ.... ನಾನು ಹೆಂಗಸು.... ಮದುವೆಯಾಗಿದ್ದವಳು ಗಂಡನಿಲ್ಲದವಳು.... ಮೊದಲೇ ಜನರ ಕಣ್ಣು ನನ್ನಂಥೋಳ ಮೇಲೆ ಇರುತ್ತೆ.... ಅಪವಾದ ಹೊತ್ತರೆ ಬದುಕುಕ್ಕೆ ಆಗುತ್ತಾ ? ಅರ್ಥ ಮಾಡ್ಕೊಳ್ಳಿ..."

"ಕ್ಷಮಿಸಿ ಪಂಕಜ... ನಾನು ಇಷ್ಟೆಲ್ಲಾ ಯೋಚಿಸ್ಲೇ ಇಲ್ಲ... ತೊಂದರೆ ಕೊಟ್ಟೆ, ತಪ್ಪು ತಿಳ್ಕೋಬೇಡಿ." ಎಂದು ಹೇಳಿ, ಅಲ್ಲಿಂದ ಬಿರಬಿರನೆ ಹೊರನಡೆದ. ಅವನಿಗೆ ಸಿಟ್ಟು ಬಂತೇನೋ ಅಂತಂದುಕೊಂಡರೂ, ಬಂದರೆ ಬರಲಿ, ನಾನು ಹೇಳಿದ್ದರಲ್ಲಿ ತಪ್ಪು ಏನೂ ಇರಲಿಲ್ಲ ಎಂದು ತನ್ನನ್ನು ತಾನು ಸಮರ್ಥಿಸಿಕೊಂಡು ತನ್ನ ತರಗತಿಗೆ ಹಿಂತಿರುಗಿದಳು.

ಪಾರ್ಕಿನ ಕಲ್ಲು ಬೆಂಚಿನ ಮೇಲೆ ಕುಳಿತಿದ್ದ ಚಂದ್ರು, ಆರು ಗಂಟೆಯ ಸಮಯವಾದಾಗ, ರಸ್ತೆ ಬದಿಗೆ ಬಂದು ನಿಂತು ಪಂಕಜಳಿಗಾಗಿ ಕಾಯುತ್ತಾ ನಿಂತ. ಕೈಯಲ್ಲಿ ಪುಸ್ತಕಗಳನ್ನು ಹಿಡಿದು ಅದೇ ರಸ್ತೆಯಲ್ಲಿ ನಡೆದು ಬಂದ ಪಂಕಜ, ಇವನನ್ನು ನೋಡಲಿಲ್ಲ. ತನ್ನ ಪಾಡಿಗೆ ತಾನು ಮುಂದೆ ನಡೆದಳು. ಇವನು ಅವಳ ಹಿಂದೆ ಹಿಂದೆಯೇ

ನಡೆದ. ಅವಳು ಹಿಂತಿರುಗಿ ನೋಡಿರಲಿಲ್ಲ. ಬೀದಿಯಲ್ಲಿ ಅವಳನ್ನು ಕರೆದು ನಿಲ್ಲಿಸುವುದು ಸರಿಯಲ್ಲ ಅಂತಂದುಕೊಂಡು ನಡಿಗೆಯ ಗತಿಯನ್ನು ಹೆಚ್ಚಿಸಿದ. ಅವಳ ಅತಿ ಪಕ್ಕಕ್ಕೆ ಬಂದು ನಡೆಯತೊಡಗಿದಾಗ, ಅವಳು ಇತ್ತ ತಿರುಗಿದ್ದಳು. ಅಚ್ಚರಿಯಿಂದ ನೋಡಿದಳು "ಓ... ನೀವಾ.... ಮತ್ತೆ ಬಂದ್ರಾ?" ಕೇಳಿದಳು.

"ಹೋಗಿದ್ದರಲ್ಲವೆ ಮತ್ತೆ ಬರೋಕೆ? ಇಲ್ಲೇ ಕಾಯ್ತಾ ಇದ್ದೆ..."

"ನಿಜವಾಗಿಯೂ ?.... ಇದೆಂಥಾ ಹುಚ್ಚುತನ? ನಾನು ನಿಮ್ಮನ್ನು ನೋಡ್ಲೇ ಇಲ್ಲ..."

"ಅಕ್ಕಪಕ್ಕ ನೋಡುಲ್ಲ; ಹಿಂತಿರುಗಿ ನೋಡುಲ್ಲ. ಕರೆದ್ರೆ ಎಲ್ಲಿ ಬೈತೀರೋ ಅಂತ ಹೆದರ್ಕೊಂಡು ನಿಮ್ಮ ಹಿಂದೆ ಹಿಂದೇನೇ ಬಂದೆ.... ನೋಡ್ದೋರು ನಾನು ಯಾರೋ ಪೋಲಿ ಹುಡುಗ ಅಂತ ಅಂದ್ಕೊಂಡಾರು ಅಂತ ಪಕ್ಕಕ್ಕೆ ಬಂದೆ... ನಿಮ್ಮ ಅಭ್ಯಂತರ ಏನಿಲ್ಲ ತಾನೇ..."

"ಏನಿಲ್ಲ... ಆದರೆ ನನಗಾಗಿ ಕಾಯುವಂಥ ಗಹನವಾದ ವಿಷಯ ಏನಿತ್ತು?'

"ಅದ್ಯಾರೋ ಬಾಡಿಗೆಗೆ ಮನೇನ ಕೇಳಿದ್ರು ಅಂತ ಹೇಳಿದ್ರಲ್ಲ... ಅವರಿಗೆ ಬಂದು ಮನೆ ನೋಡ್ಕೊಂಡು ಹೋಗಿ ಅಂತ ಹೇಳು..."

"ಓ... ಅದಾ ? ಈ ವಿಷಯಾನ ಆಗ್ಲೇ ಹೇಳಿದ್ದಿದ್ರೆ, ಸ್ಕೂಲ್ನಲ್ಲೇ ಅವರಿಗೆ ಹೇಳ್ತಿದ್ದೆ... ನಾಳೆ ಹೇಳ್ತೀನಿ ಬಿಡಿ.... ಆದರೆ.... ಆ ಮನೇಲಿ ಯಾರೋ ದೀಪ ಉರಿಸ್ತಿರ್ತಾರಲ್ಲ.... ಅದರ ವಿಚಾರ... ಏನಾಯ್ತು?"

"ನೀವೇನೂ ಯೋಚ್ನೆ ಮಾಡ್ಬೇಡಿ. ಆ ಸಮಸ್ಯೆ ಬಗೆ ಹರಿದಿದೆ...." ಎನ್ನುತ್ತಾ ನಡೆದ ಘಟನೆಯನ್ನು ತಿಳಿಸಿದ." ಒಬ್ಬ ಹಾವಾಡಿಗ ಬಂದು ಸೇರ್ಕೊತಾನೆ ಅಂತ ನಾವಂತೂ ಊಹಿಸಿರಲಿಲ್ಲ.... ಎನ್ನುತ್ತಾ ನಸುನಕ್ಕ ...

"ತಮಾಷೆ ಹೇಳೋ ಥರ ಹೇಳ್ತಿದೀರಲ್ಲ... ಆ ಹಾವುಗಳನ್ನು ಏನು ಮಾಡಿದ್ರು.?"

"ಅದನ್ನೆಲ್ಲ ನಿಮ್ಮ ಮನೆಯ ಹತ್ರ ಬಿಟ್ಟಿದೀವಿ.... ನಿಮ್ಮ ಮನೆಯನ್ನು ಕಾವಲು ಕಾಯುಕ್ಕೆ...." ಎಂದ ಮತ್ತೆ ನಗುತ್ತಾ.

"ನಮ್ಮ ಮನೇಲಿ ಏನಿದೆ ಕಾವಲು ಕಾಯುಕ್ಕೆ... ಯಾವೋನಾದ್ರೂ ಕಳ್ಳ ಬಂದ್ರೂ ಅವನಿಗೆ ಸಿಗೋದು ಸ್ಕೂಲು ಪುಸ್ತಕಗಳು ಅಷ್ಟೇ...." ಅವಳು ನಕ್ಕಳು ಅವನು ಅವಳನ್ನೇ ದಿಟ್ಟಿಸಿದ. ಅವಳು ಮುಜುಗರಗೊಂಡಳು.... 'ನೀವು ನಗುವಾಗ ತುಂಬಾ ಚೆನ್ನಾಗಿ ಕಾಣ್ತೀರಿ ಎಂದು ಹೇಳಬೇಕೆಂದುಕೊಂಡವನು ಹೇಳಲಾಗದೇ ಸುಮ್ಮನಾದ ಇಬ್ಬರೂ ಮಾತನಾಡುತ್ತಾ ಮನೆಯನ್ನು ಸಮೀಪಿಸಿದ್ದರು... ಅವಳು ತನ್ನ ಮನೆಯ ದಾರಿಯ್ನು ಹಿಡಿದಳು.

"ಸಂಜೆಯಾಗಿದೆ. ಸ್ವಲ್ಪ ತಂಗಾಳಿ ಬೀಸ್ತಿದೆ... ಬಿಸಿ ಬಿಸಿ ಕಾಫೀನ ಕುಡೀಬೇಕು ಅಂತ ಅನ್ನಿಸ್ತಿದೆ. ಇಲ್ಲೇ ಹತ್ತಿರದಲ್ಲಿ ಹೋಟೆಲ್ಲಿದೆ. ಹೋಗಿ ಬರ್ತೀನಿ. ನೀವೂ ಬರ್ತೀರಾ ? ಕರೆದ.

"ಇಲ್ಲ... ಈಗಾಗ್ಲೇ ಹೊತ್ತಾಗಿದೆ.... ಮನೆ ದೀಪ ಹಾಕ್ಬೇಕು.... ಸ್ವಲ್ಪ ಡಿಕಾಕ್ಷನ್ ಇದೆ... ಮನೇಲೇ ಕುಡೀತೀನಿ.... ಒಂದು ಗಳಿಗೆ ಬಿಟ್ಟು ಅನುಮಾನಿಸುತ್ತಾ ಅವನನ್ನು ಕರೆದಳು... ಮನೆಯ ಕಾಫಿ ಕುಡೀಬೇಕು ಅಂತಿದ್ರೆ ನೀವೂ ಬರಬಹುದು."

"ಡಿಕಾಕ್ಷನ್ ಇಬ್ಬರಿಗೂ ಸಾಕಾಗುವಷ್ಟು ಇಲ್ಲದಿದ್ದರೆ?...."

"ಒನ್ ಬೈ ಟೂ ಕಾಫಿ ಕುಡಿಯೋಣ... ನಾವು ಟೀಚರ್ಸ್‌ಗಳೆಲ್ಲಾ ಹಾಗೇ ತಾನೇ ಕುಡಿಯೋದು..."

"ನಿಮಗೆ ತೊಂದರೆ ಏನಿಲ್ಲ ಅಂತಂದ್ರೆ ಬರ್ತೀನಿ... ಆದರೆ ನಮಗೆ ಮೈಲಿಗೆ ಇದೆಯಲ್ಲ..."

"ಇದ್ದರೇನಂತೆ ? ನೀವು ಬರೀ ಕಾಫೀ ತಾನೇ ಕುಡಿಯೋದು. ಅಲ್ಲದೇ ಸ್ಕೂಲ್ನಲ್ಲಿ ಕೆಲಸ ಮಾಡೋ ನಾವು ಇದನ್ನೆಲ್ಲ ನೋಡುಕ್ಕೆ ಆಗುಲ್ಲ... ಪರವಾಗಿಲ್ಲ ಬನ್ನಿ"ಅವಳು ಅಷ್ಟೇ ಹೇಳಿದ್ದೇ ಸಾಕು ಎಂಬಂತೆ ಅವಳೊಂದಿಗೆ ಹೆಜ್ಜೆ ಹಾಕಿದ. ಯಾವ ಅಂಜಿಕೆ ಅಳುಕು ಇಲ್ಲದೇ ಮಾತನಾಡುತ್ತಾ ಇಬ್ಬರೂ ಮನೆಯನ್ನು ತಲುಪಿದರು.

ವೆರಾಂಡದ ದೀಪವನ್ನು ಹಾಕಿ ಕುರ್ಚಿಯ ಕಡೆ ಕೈ ತೋರಿದಳು. ಕೂತ್ಕೊಳ್ಳಿ... ಐದು ನಿಮಿಷದಲ್ಲಿ ಕಾಫಿ ತರ್ತೀನಿ" ಎಂದು ಹೇಳಿ ಒಳಗೆ ಹೋದಳು.ಇವನು ಕುಳಿತು, ಕೈಯಲ್ಲಿ ಅಂದಿನ ದಿನ ಪತ್ರಿಕೆಯನ್ನು ಹಿಡಿದು ಕುಳಿತ. ಇದ್ದಕ್ಕಿದ್ದಂತೆ ಅವಳು ಕಿಟಾರನೆ ಕಿರುಚಿಕೊಂಡಾಗ, ಇವನು ಸರ್ರನೆ ಒಳಗೆ ಓಡಿದ. ಅಡಿಗೆ ಮನೆಯಿಂದ ಓಡಿ ಬಂದ ಅವಳು ಅವನಿಗೆ ಡಿಕ್ಕಿ ಹೊಡೆದು, ಅವನನ್ನು ತಬ್ಬಿಕೊಂಡು, ಕಣ್ಣು ಮುಚ್ಚಿಕೊಂಡಳು. ಅವನೂ ದಿಗ್ಭ್ರಮೆಗೊಂಡಿದ್ದ.... ನಿಧಾನವಾಗಿ ಅವಳನ್ನು ಸರಿಸಿದ..."ಏನಾಯ್ತು ? .... ಯಾಕೆ ಕಿರುಚ್ಕೊಂಡ್ರಿ? ಹೇಳಿ...." ಅವನು ಅವಳ ಭುಜಗಳನ್ನು ಹಿಡಿದು ಅಲುಗಾಡಿಸಿ ಕೇಳಿದ...

"ಹಾವು.... ಹಾವು.... ಅಲ್ಲಿ.... ಎನ್ನುತ್ತಾ ಅಡಿಗೆ ಮನೆಯ ಕಡೆಗೆ ಬೆರಳು ಮಾಡಿದಳು.

"ಹಾವಾ ...? ಹೇಗ್ಬಂತು? ಎಲ್ಲಿದೆ ತೋರಿಸಿ..." ಎಂದು ಹೇಳಿದ... ಇಬ್ಬರೂ ಅಡಿಗೆ ಮನೆಗೆ ಬಂದರು. ಬಚ್ಚಲು ಕಟ್ಟೆಯ ಮೂಲೆಯಲ್ಲಿ ಸುರುಳಿಯಾಗಿ ಸುತ್ತಿ ಮಲಗಿದ್ದ ಹಾವನ್ನು ಇವನೂ ಕಂಡ. ಫಳ ಫಳ ಹೊಳೆಯುವ ಹಾವು ಸುಮಾರು ದೊಡ್ಡದಾಗಿತ್ತು. ಇವನೂ ಹೆದರಿದ ಆದರೂ, ತಾನು ಹೆದರಿಲ್ಲ ಎಂಬಂತೆ ಎರಡು ಹೆಜ್ಜೆ ಮುಂದೆ ನಡೆದ... ಅವಳು ಅವನ ಕೈ ಹಿಡಿದು ಎಳೆದಳು.

"ಹೋಗ್ಬೇಡಿ... ಹೋಗ್ಬೇಡಿ...."

"ಅದನ್ನು ಓಡಿಸ್ಬೇಕಲ್ಲ.... ಒಳಕ್ಕೆ ಹೇಗೆ ಬಂದಿರಬಹುದು.

"ಬಚ್ಚಲು ಮೋರಿಯಿಂದ ಹೊರಗೆ ನೀರು ಹೋಗಲು ತೂತು ಇದೆ. ಅಲ್ಲಿಂದ ಬಂದಿರಬಹುದು. ಇವತ್ತು ಅದರ ಬಾಯಿಗೆ ಮರದ ಬಿರಟೆಯನ್ನು ಇಡುವುದನ್ನು ಮರೆತಿದ್ದೆ.... ಅಲ್ಲಿಂದ ಇಲಿ ಒಳಗೆ ಬಂದು ಬಿಡುತ್ತೆ...

"ಹುಶ್.... ಹುಶ್...." ಎಂದು ಹೆದರಿಸಿದ. ಅದು ಅಲ್ಲಾಡಿರಲಿಲ್ಲ. "ದೊಡ್ಡ ಕೋಲು ಇದೆಯಾ?....." ಕೇಳಿದ.

"ಹೊಡೀ ಬೇಡಿ.... ಎಂಥಾ ಹಾವೋ ಏನೋ?...."

"ಕೋಲಿನಿಂದ ತಿವಿದು ಹೊರಕ್ಕೆ ಕಳಿಸ್ತೀನಿ...."

"ತಿವಿದು ಪೆಟ್ಟು ಮಾಡ್ಬೇಡಿ ಚಂದ್ರು.... ಹೆಡೆ ಎತ್ತಿ ಕಚ್ಚಿದರೆ ಏನು ಮಾಡೋದು. .. ಅದರ ರೋಷ ಹನ್ನೆರಡು ವರ್ಷಗಳು ಇರುತ್ತಂತೆ..."

"ಅದನ್ನೆಲ್ಲ ನಂಬುಲ್ಲ... ನಾನು ಹೊರಗೆ ಹೋಗಿ ಯಾರನ್ನಾದ್ರೂ ಕರ್ಕೊಂಡು ಬರ್ತೀನಿ.... ನಾಲ್ಕು ಜನ ಸೇರಿದ್ರೆ ಓಡಿಸ್ತಾರೆ..." ಎನ್ನುತ್ತಾ ತಿರುಗಿದವನನ್ನು ತಡೆದಳು.

"ಇಲ್ಲಿ ನಾನೊಬ್ಬೇ ಹೇಗಿರಲಿ ? ಭಯ ಆಗುತ್ತೆ. ನೀವು ಇಲ್ಲೇ ನಿಂತುಕೊಂಡು ನೋಡ್ತಿರಿ. ನಾನೇ ಯಾರನ್ನಾದ್ರೂ ಕರ್ಕೊಂಡು ಬರ್ತಿನಿ..." ಬಾಗಿಲ ಬಳಿಗೆ ಸಮೀಪಿಸಿದವಳನ್ನು.... ನಿಲ್ಲಿಸಿದ."

"ಪಂಕಜಾ... ನಿಂತ್ಕೊಳ್ಳಿ..."

"ಹೊರಕ್ಕೆ ಹೊರಟು ಹೋಯ್ತಾ?" ಅಚ್ಚರಿಯಿಂದ ಕೇಳಿದಳು... ಅವಳನ್ನು ಹತ್ತಿರಕ್ಕೆ ಕರೆದ...

"ಇಷ್ಟೊತ್ನಲ್ಲಿ ನಿಮಗೆ ಯಾರು ಸಿಗ್ತಾರೆ ? ಒಂದು ಕೆಲಸ ಮಾಡಿ. ಅಡಿಗೆ ಮನೆಯ ಬಾಗಿಲನ್ನು ಹಾಕಿಬಿಡಿ.... ಎಲ್ಲಿಂದ ಬಂತೋ, ಅಲ್ಲಿಂದ ಅದೇ ವಾಪಸ್ಸು ಹೊರಟು ಹೋಗುತ್ತೆ. ಇಲ್ಲದಿದ್ದರೆ ಬೆಳಿಗ್ಗೆ ಬೆಳಕಿರುತ್ತೆ. ಜನ ಸಿಗ್ತಾರೆ ಓಡಿಸುಕ್ಕೆ ಸುಲಭ ಆಗುತ್ತೆ."

"ಇದನ್ನು ಮನೆಯೊಳಗೆ ಇಟ್ಟುಕೊಂಡು ನಾನು ಒಬ್ಬಳೇ ಹೇಗಿರಲಿ?" ಊಟ ಮಾಡ್ಬೇಡ್ವಾ?.... ಈಗ ಏನ್ಮಾಡ್ಲೀ?"

"ನಮ್ಮ ಮನೆಗೆ ಬಂದ್ಬಿಡಿ..."ತಟ್ಟನೆ ಹೇಳಿದ...

"ನಿಮ್ಮ ಮನೆಗಾ?...."

"ಯಾಕೆ ಅನುಮಾನಿಸ್ತೀರಿ ? ಈಗ ಸ್ವಲ್ಪ ಹೊತ್ನಲ್ಲಿ, ಸ್ಕೂಲ್ ಟೀಚರ್ಸ್‌ಗೆ ಮಡಿ ಮೈಲಿಗೆ ಬಗ್ಗೆ ಏನೂ ಇರಬಾರದು ಅಂತ...ನೀವೇ ಹೇಳಿದ್ರಿ."

"ಅದಲ್ಲ.... ಎಲ್ರೂ ಏನಂದ್ಕೊಳ್ತಾರೆ?..... ನಂಬದೇ ಇದ್ದರೆ?...."

"ನಾನು ಹೇಳ್ತೀನಿ.... ನಾನೂ ನೋಡಿದೀನಲ್ಲ...."

"ನೀವಾ?..... ನೀವು ಹೇಳಿದ್ರೆ ನಿಮ್ಮ ಮೇಲೆ ಅನುಮಾನ ಬರುಲ್ವಾ? ಇಲ್ಲಿ ನಮ್ಮ ಮನೆಗೆ ನೀವು ಯಾತಕ್ಕೆ ಬಂದಿದ್ರಿ ಅಂತ..."

"ಬಂದರೆ ಬಂತು.... ನೀವು ಕರೆದ್ರಿ ಅದಕ್ಕೇ ಬಂದೆ ಅಂತ ಹೇಳ್ತೀನಿ...."

"ಹಾಗೆ ಹೇಳಿದ್ರೆ ನನ್ನ ಬಗ್ಗೆ ಏನು ಮರ್ಯಾದೆ ಉಳಿಯುತ್ತೆ ಚಂದ್ರು ? ನನ್ನ ಮರ್ಯಾದೇನ ಕಳೀಬೇಕು ಅಂತ ಇದೀರಾ?...."

"ಛೇ.... ಹಾಗಲ್ಲ... ತಪ್ಪು ಅರ್ಥ ಕಲ್ಪಿಸೋದು ಯಾಕೆ ?..... ನಾನೇ ಬಂದೆ ಅಂತ ಹೇಳ್ತೀನಿ.... ನಂಗೆ ಯಾರ ಭಯವೂ ಇಲ್ಲ..."

"ನಿಮಗೆ ಯಾರ ಭಯ ಇಲ್ಲದಿರಬಹುದು. ನನಗೆ ಇದೆ. ನಾನು ಒಂಟಿ ಹೆಂಗಸು, ನೀವು ನಮ್ಮ ಮನೆಗೆ, ಸಾಯಂಕಾಲದ ಹೊತ್ತಿನಲ್ಲಿ ಯಾಕೆ ಬಂದಿದೀರಿ ಅಂತ ಜನ ಸಂಶಯ ಪಡುವುದಿಲ್ವಾ...? ಈಗ ನೀವು ಹೋಗಿ. ನಾನು ಏನೋ ಮಾಡ್ಕೋತೀನಿ..."

"ನಿಮ್ಮನ್ನು ಒಬ್ಬರನ್ನೇ ಬಿಟ್ಟು ಹೋಗುವುದು ಸರಿಯಲ್ಲ. ನೀವು ಹೆದರಿದೀರಿ. ನನ್ನ ಮಾತನ್ನು ಕೇಳಿ.... ಒಬ್ಬರೇ ಇಲ್ಲಿರಬೇಡಿ.... ನಮ್ಮ ಮನೆಗೆ ಬನ್ನಿ... ನಮ್ಮ ತಂದೆಗೆ ಹೇಳಿ... ಅವರಿಗೆ ಅರ್ಥವಾಗುತ್ತೆ..."

"ಸರಿ... ಈಗ ನೀವು ಮನೆಗೆ ಹೋಗಿ.... ಕೆಲವು ನಿಮಿಷಗಳನ್ನು ಬಿಟ್ಟು ನಾನು ಬರ್ತೀನಿ.... ಆದರೆ ನೀವು ಸುಮ್ಮನಿರಬೇಕು. ಇಲ್ಲಿಗೆ ನೀವು ಬಂದಿದ್ದೀರಿ ಅಂತ ಯಾರಿಗೂ ತಿಳಿಯಕೂಡದು..."

"ಸರಿ ಟೀಚರ್...." ತಲೆಯಾಡಿಸಿ ನಕ್ಕ. ಅವಳೂ ನಕ್ಕಳು. ಅವಳು ಅಡಿಗೆ ಮನೆಯ ಬಾಗಿಲನ್ನು ಭದ್ರಪಡಿಸಿದಳು. ಇಬ್ಬರೂ ಹೊರಬಂದರು. ಅವಳು ಬಾಗಿಲನ್ನು ಮುಂದಕ್ಕೆ ಎಳೆದುಕೊಂಡು ಚಿಲುಕ ಹಾಕಿದಳು. ಇಬ್ಬರೂ ಕಾಲುದಾರಿಗೆ ಬಂದರು."ರಾಮರಾಯರ ಮಗಳು ನಿಂತಿರುವಂತಿದೆ. ನಾನು ಈ ಕಡೆಯ ರಸ್ತೆಯಿಂದ ಮನೆಗೆ ಹೋಗ್ತೀನಿ" ಎನ್ನುತ್ತಾ ಚಂದ್ರು ಪಕ್ಕದ ಕಾಲುದಾರಿಯಲ್ಲಿ ನಡೆದ. ಪಂಕಜ ಮುಖದ ಬೆವರನ್ನು ಒರೆಸಿಕೊಳ್ಳುತ್ತಾ ರಾಮರಾಯರ ಮನೆಯ ಬಳಿಗೆ ಬಂದಳು ಜಗುಲಿಯ ಮೇಲೆ, ಮಂಗಳ ತನ್ನ ತಮ್ಮನನ್ನು ಹೆಗಲ ಮೇಲೆ ಮಲಗಿಸಿಕೊಂಡು ತಟ್ಟುತ್ತಿದ್ದಳು.

"ಸ್ಕೂಲ್ನಿಂದ ಈಗ ಬರ್ತಾ ಇದೀರಾ? ನಿಮ್ಮ ಜೊತೆಯಲ್ಲಿ ಯಾರೋ ಇದ್ದಂತಿತ್ತು." ಮಂಗಳ ಕೇಳಿದಾಗ ಇವಳ ಎದೆ ಧಸಕ್ಕೆಂದಿತು. ನಿಜ ಹೇಳದೋ ಬೇಡವೋ ಎಂದು ಅನುಮಾನಿಸುತ್ತಿದ್ದವಳನ್ನು ಕಂಡು ಮತ್ತೆ ಪ್ರಶ್ನಿಸಿದಳು. "ಏನಾದ್ರೂ ಬೇಕಾಗಿತ್ತಾ?.... "

"ಇಲ್ಲ ಮಂಗಳಾ... ಈಗ್ತಾನೇ ಸ್ಕೂಲ್ನಿಂದ ಬಂದೆ. ಕೈಕಾಲು ತೊಳದೆ ಅಡಿಗ

ಮನೆಗೆ ಕಾಫಿ ಮಾಡುಕ್ಕೆ ಅಂತ ಹೋದೆ. ಅಡಿಗೆ ಮನೆಯ ಬಚ್ಚಲು ಕಟ್ಟೆಯ ಹತ್ತಿರ ಒಂದು ಹಾವು ಮಲಗಿದೆ. ಭಯ ಆಯ್ತು ಜೋರಾಗಿ ಕಿರುಚ್ಕೊಂಡು ಹೊರಗೆ ಬಂದೆ. ಅಷ್ಟರಲ್ಲಿ ಅವರು ಯಾರೋ, ಬೀದೀಲಿ ಹೋಗ್ತಾ ಇದ್ದವರು ನಾನು ಕಿರುಚಿದ್ದನ್ನ ಕೇಳಿ, ಬಂದರು. ಏನೂಂತ ಕೇಳಿದ್ರು.... ಈಗ ಏನು ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ. ಒಳಗೆ ಹೇಗೆ ಇರಲಿ ? ಭಯ ಆಗುತ್ತೆ... ಅದನ್ನು ಓಡಿಸೋರು ಯಾರು ?"

"ಹೌದಾ ಹಾವಾ ?.... ಹೇಗೆ ಬಂತೋ.... ಹಾಗಾದ್ರೆ ಈಗ ಏನ್ಮಾಡ್ತೀರಿ?"

"ಮನೆ ಮಾಲೀಕರ ಮನೆಗೆ ಹೋಗಿ ಹೇಳ್ತೀನಿ.... ಎಲ್ಲಾ ಸೇರಿ ಓಡಿಸಿದ್ರೆ, ರಾತ್ರಿ ನಮ್ಮ ಮನೇಲೇ ಮಲಗಬಹುದು. ಇಲ್ಲಿದ್ರೆ ಏನ್ಮಾಡೋದು ಅಂತ ಗೊತ್ತಾಗ್ತಾ ಇಲ್ಲ."

"ಅವರ ಮನೇಲಿ ಮೂರು ಜನ ಗಂಡಸರಿದಾರೆ.... ಅದನ್ನು ಓಡಿಸಿದರೂ ಓಡಿಸಬಹುದು.... ಬಚ್ಚಲ ಬಾಯಿಂದ ಬಂದಿರಬಹುದು. ಅದನ್ನು ಮುಚ್ಚಿರಲಿಲ್ವಾ? ಇಲಿಗಳನ್ನು ತಿನ್ನುಕ್ಕೆ ಅಂತ ಬಂದಿರಬಹುದು"

"ದಿನ ನಿತ್ಯ ಬಚ್ಚಲು ಬಾಯಿಗೆ ಬಿರುಡೆ ಇಟ್ಟು, ಇಟ್ಟಿಗೆ ಇಟ್ಟು ಹೋಗ್ತೀನಿ. ಇವತ್ತು ಮರೆತಿದೀನಿ.... ಅವರ ಮನೆಗೆ ಒಬ್ಬಳಿಗೇ ಹೋಗಲು ಮುಜುಗರವಾಗುತ್ತೆ. ನೀವು ಜತೆಗೆ ಬರ್ತೀರಾ?..."

"ಸರಿ.... ಬರ್ತೀನಿ.... ಇವನನ್ನನ್ನು ಮಲಗಿಸಿ ಬರ್ತೀನಿ. ಒಳಗೆ ಬನ್ನಿ, ಕಾಫಿ ಕುಡಿಯೋರಂತೆ.... ಕಾಫಿ ಕೂಡಾ ಕುಡಿದಿಲ್ಲ ಅಂತ ಕಾಣುತ್ತೆ..."

"ಹೌದು... ಮಾಡ್ಲೇ ಇಲ್ಲ. ಪರವಾಗಿಲ್ಲ ಬಿಡಿ. ಒಂದು ದಿನ ಕಾಫೀನ ಕುಡೀದೇ ಇದ್ದರೆ ಏನಾಯ್ತು?... ನಿಮ್ಮ ತಂದೆ ಇದಾರೇನೋ?"

"ಇಲ್ಲ ಅವರು ಊರಲ್ಲಿಲ್ಲ... ಅವರ ತಂಗಿಯನ್ನು ನೋಡುಕ್ಕೆ ಹೋಗಿದಾರೆ..." ಎಂದಳು. ಇಬ್ಬರೂ ಒಳಗೆ ಬಂದರು. ಮಲಗಿದ್ದ ಜಾನಕಿಯನ್ನು ಮಾತನಾಡಿಸಿದಳು.

"ಹೇಗಿದೀರಿ ಅಮ್ಮ?.... ಮತ್ತೆ ಡಾಕ್ಟರ ಹತ್ತಿರ ಹೋಗಿದ್ರಾ ?"

"ಇನ್ನೂ ಹೋಗಿಲ್ಲ. ಹೋಗ್ಬೇಕು ಇವರೂ ಊರಲ್ಲಿಲ್ಲ" ತಮ್ಮನನ್ನು ಮಲಗಿಸಿ, ಮಂಗಳ ಅಡಿಗೆ ಮನೆಗೆ ಹೋಗಿದ್ದಳು. ನಿಮ್ಮ ತಂದೆ ಈಗ ಹೇಗಿದಾರೆ? ಮನೇಲಿ ಒಬ್ಬರೇ ಇರ್ತೀರಿ.... ಬೇಜಾರಾಗುಲ್ವಾ?" ಪ್ರಶ್ನಿಸಿದಳು.

"ಬೇಜಾರಾಗುಲ್ಲ. ಸ್ಕೂಲಿಗೆ ಹೋಗಿರ್ತೀನಲ್ಲ... ಇದುವರೆಗೆ ಎಂದೂ ಭಯ ಕೂಡಾ ಆಗಿರ್ಲಿಲ್ಲ. ಒಂದು ಹಾವು ಅಡಿಗೆ ಮನೆಯಲ್ಲಿ ಬಂದು ಸೇರಿಕೊಂಡಿದೆ. ಓಡಿಸ್ಬೇಕು.... ಅದಕ್ಕೇ ಮಾಲೀಕರ ಮನೆಗೆ ಹೋಗ್ತಾ ಇದೀನಿ. ಮಂಗಳಾನೂ ನನ್ನ ಜೊತೆಗೆ ಬಂದರೆ ಸುಲಭ ಆಗುತ್ತೆ..." ಅಷ್ಟರಲ್ಲಿ ಮರಿಗಳ ಕಾಫಿಯ ಬಟ್ಟಲುಗಳನ್ನು ಹಿಡಿದು ಬಂದಳು. ಇಬ್ಬರಿಗೂ ಕೊಟ್ಟಳು.

ಬಿಸಿ ಬಿಸಿ ಕಾಫಿಯನ್ನು ಕುಡಿದಳು. ಮೈ ಮನಸ್ಸು ಉಲ್ಲಾಸಗೊಂಡಿತ್ತು. ಮಂಗಳ ನನ್ನು ತನ್ನೊಡನೆ ಕರೆದುಕೊಂಡು ಮಾಲೀಕರ ಮನೆಗೆ ಬಂದಳು. ಮುಂಬಾಗಿಲಿನಲ್ಲಿ ಚಂದ್ರು ಪಂಕಜಳಿಗಾಗಿ ಕಾಯುತ್ತಾ ನಿಂತಿದ್ದ. ಅವನೇನಾದರೂ ಕೇಳುವ ಮೊದಲೇ ಪಂಕಜ ಪ್ರಶ್ನಿಸಿದಳು." ನಿಮ್ಮ ತಂದೆ ಇದಾರಾ....?"

"ಏನು ವಿಷಯ?" ಏನನ್ನು ಅರಿಯದವನಂತೆ ಕೇಳಿದ. ಮಂಗಳ ಅನುಮಾನದಿಂದ ಅವನ ಕಡೆ ನೋಡಿದಳು. ಅವನೇ ಪಂಕಜಳ ಮನೆಯ ಒಳಗಿನಿಂದ ಹೊರಗೆ ಬಂದವನು ಎಂಬ ಸಂದೇಹ ಅವಳಲ್ಲಿ ಮೂಡಿತು. ಅಷ್ಟರಲ್ಲಿ ಗೋಪಾಲಯ್ಯ ಹೊರಕ್ಕೆ ಬಂದಿದ್ದ... ಇಬ್ಬರನ್ನು ನೋಡಿ ಪ್ರಶ್ನಿಸಿದ.

"ಓ.... ಟೀಚರ್ರು.... ಮಂಗಳಾ.... ಏನು ವಿಷಯ? ಒಟ್ಟಿಗೇ ಬಂದಿದೀರಿ?"

"ಪಂಕಜ ವಿಷಯವನ್ನು ತಿಳಿಸಿದಳು. ನಂಗೆ ಭಯ ಆಗ್ತಿದೆ ಸಾರ್.... ಮನೇಲಿ ನಾನು ಒಬ್ಬಳೇ.... ಏನ್ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ. ಓಡಿಸುಕ್ಕೆ ಯಾರಾದ್ರೂ ಆಳುಗಳನ್ನು ಕರಿಸ್ತೀರಾ ಸಾರ್?"

"ಇಷ್ಟೊಹೊತ್ನಲ್ಲಿ ಯಾರಮ್ಮ ಸಿಗ್ತಾರೆ?.... ಅಡಿಗೆ ಮನೆಯ ಬಾಗಿಲನ್ನು ಭದ್ರ ವಾಗಿ ಹಾಕ್ಕೊಂಡಿರು... ಮಂಗಳಾ ನಿಮ್ಮ ಮನೆಯಲ್ಲೇ ಈ ರಾತ್ರಿ ಮಲಗಬಹುದು... ಆಗುತ್ತೇನಮ್ಮಾ ನಿನಗೆ?"

"ಅಡಿಗೆ ಮನಗೆ ಹೋಗದೇ ಹೇಗೆ ಇರಲಿ ಸಾರ್? ಊಟ ಆಗಿಲ್ಲ..."

"ನಮ್ಮ ಮನೇಲಿ ಊಟ ಮಾಡು.... ನನ್ನ ಅಕ್ಕ ಅಡಿಗೆ ಮಾಡ್ತಾಳೆ... ಯಾವ ಅಡ್ಡಿ ಇಲ್ಲ..."

"ಅಪ್ಪ.... ಅಮ್ಮನ್ನ ಒಂದ್ಮಾತು ಕೇಳಿ..." ಚಂದ್ರು ಎಂದ. ಗೋಪಾಲಯ್ಯನ ಮುಖ ಕಪ್ಪಿಟ್ಟಿತು. ಆದರೂ ಸಾವರಿಸಿಕೊಂಡ

"ಕೇಳಿದ್ರಾಯ್ತು.... ಅದಕ್ಕೇನು?" ಅಂತಂದುಕೊಂಡು ಒಳಗೆ ನಡೆದ.

ಕೆಲವೇ ನಿಮಿಷಗಳಲ್ಲಿ ಹೊರಗೆ ಬಂದು, ಒಳಗೆ ಬನ್ನಿ ಎಂದು ಹೇಳಿ ಅವರುಗಳನ್ನೂ ಒಳಕ್ಕೆ ಕರೆದೊಯ್ದ. ನಂಗೆ ಈ ಅನುಮಾನ ಮೊದಲೇ ಇತ್ತು. ಎಷ್ಟು ದಿನಗಳಿಂದ ನಿಮ್ಮ ಮನೆ ಒಳಗೆ ಸೇರಿಕೊಂಡಿದೆಯೋ?| ನಿನಗೆ ಇವತ್ತು ಕಂಡಿದೆ. ಮನೆಯೊಳಗೆ ಸದ್ದಿಲ್ಲ ಗದ್ದಲವಿಲ್ಲ. ದೇಗುಲದ ಹಾಗೆ ನಿಶ್ಯಬ್ಧದಿಂದ ಇರುತ್ತೆ. ಅದಕ್ಕೇ ಬಂದಿರಬಹುದು.... ಅದಕ್ಕೆಲ್ಲ ಹೆದರ್ತಾರಾ?" ಲಕ್ಷ್ಮಿದೇವಮ್ಮ ಹೇಳಿದಾಗ ಎಲ್ಲರೂ ಬೆರಗುಗೊಂಡರು.

"ಲಕ್ಷ್ಮೀ.... ಏನು ಹೇಳ್ತಿದೀಯ.... ಹೀಗೆ ಏಕಾಏಕಿ ಹಾವನ್ನು ಕಂಡರೆ ನಿಂಗೆ ಭಯ ಆಗುಲ್ವಾ?"

"ಆಗುತ್ತೆ. ಆದರೆ ಏನು ಮಾಡುಕ್ಕೆ ಆಗುತ್ತೆ? ಅದೂ ನಮ್ಮ ಹಾಗೇ ಪ್ರಾಣಿ....

ಬರುತ್ತೆ ಹೋಗುತ್ತೆ." ಪಂಕಜಂಗೆ ಕೋಪದಿಂದ ಅಳು ಬರುವಂತಾಗಿತ್ತು... ಆಕೆಯೊಡನೆ ಮಾತನ್ನು ಆಡಬೇಕೆನಿಸಲಿಲ್ಲ... ಅಸಹಾಯಕಳಂತೆ ಚಂದ್ರು ಕಡೆ ನೋಡಿದಳು ಅವನು ಅವಳ ಸಹಾಯಕ್ಕೆ ಬಂದ.

"ಬೆಳಿಗ್ಗೆ ಯಾರಾದ್ರೂ ಆಳುಗಳನ್ನು ಕರೆಸಿ, ಹೊರಕ್ಕೆ ಓಡಿಸುವ ಏರ್ಪಾಡನ್ನು ಮಾಡಿ ಅಪ್ಪಾ.... ಮನೆಯೊಳಗೆ ಹಾವು ಸೇರಿಕೊಂಡಿದೆ ಅಂತ ಗೊತ್ತಿದ್ದೂ ಗೊತ್ತಿದ್ದೂ ಧೈರ್ಯವಾಗಿ ಮಲಗುಕ್ಕೆ ಆಗುತ್ತಾ? ಭಯಕ್ಕೆ ನಿದ್ದೆ ಬರುತ್ತಾ?....

"ಸರಿಯಮ್ಮ.... ಈಗ ಒಂದು ರಾತ್ರೀನ, ಜೋಷಿ ಮನೇಲೋ, ರಾಮರಾಯರ ಮನೇಲೋ ಕಳೆದು ಬಿಡಮ್ಮ ಬೆಳಿಗ್ಗೆ ನಾನು ಏನಾದ್ರೂ ವ್ಯವಸ್ಥೆ ಮಾಡ್ತೀನಿ" ಎಂದು ಹೇಳಿ, ಕಣ್ಣು ಸಂಜ್ಞೆ ಮಾಡಿ ಅವರುಗಳನ್ನು ಹೊರಕ್ಕೆ ಕರೆತಂದ... ಪಂಕಜ ಮೌನವಾಗಿರುವುದನ್ನು ಚಂದ್ರು ಗಮನಿಸಿದ. ಮನಸ್ಸಿಗೆ ಬೇಸರವಾಗಿತ್ತು.... ಅಷ್ಟರಲ್ಲಿ ಪಾರ್ವತಿ ಹೊರಕ್ಕೆ ಬಂದಳು.

"ಗೋಪಿ, ಇವರಿಗೆ ಈ ರಾತ್ರಿ ಇಲ್ಲೇ ಊಟ ಮಾಡಿ, ಇಲ್ಲೇ ಮಲಗುವಂತೆ ಹೇಳು.... ನೀನು ಈ ವಠಾರದ ಮಾಲೀಕ... ನಿನಗೆ ಜವಾಬ್ದಾರಿ ಇರಬೇಕು ಅಲ್ವಾ?.."

"ಹೌದಮ್ಮ.... ಅಕ್ಕ ಹೇಳೋದು ಸರಿ... ಇಲ್ಲೇ ಊಟ ಮಾಡಿ ಇಲ್ಲೇ ಮಲಗು.... ನಮಗೆ ಯಾವ ತೊಂದರೆಯೂ ಆಗುಲ್ಲ..."

"ಬೇಡ ಸಾರ್.... ನಾನು ಮಂಗಳನ ಮನೆಗೆ ಹೋಗ್ತೀನಿ." ಅಷ್ಟನ್ನು ಹೇಳುವಷ್ಟರಲ್ಲಿ ಅವಳ ಗಂಟಲು ಉಬ್ಬಿ ಬಂದಿತ್ತು. ಅಲ್ಲಿ ನಿಲ್ಲದೇ ಮುಂದೆ ಮುಂದೆ ನಡೆದು ಬಿಟ್ಟಳು. ಮಂಗಳಾ ಅವಳನ್ನು ಅನುಸರಿಸಿದಳು. ಚಂದ್ರು ಹಲ್ಲು ಕಡಿದ. ಗೋಪಾಲನ ಸಮೀಪಕ್ಕೆ ಬಂದ.

"ಅಲ್ಲಪ್ಪಾ.... ಸಮಯ ಅಂತಂದ್ರೆ, ಹೀಗಾ ಮಾತಾಡೋದು? ಅವರು ನಮ್ಮ ವಠಾರದಲ್ಲಿರುವವರು. ಅಮ್ಮಂಗೆ ಇಷ್ಟೂ ಅರ್ಥವಾಗುಲ್ವಾ?"

"ಚಂದ್ರು ನೀನೀಗ ಸುಮ್ಮನಿರು... ನಿನಗೆ ಎಷ್ಟೋ ವಿಷಯ ಅರ್ಥವಾಗುಲ್ಲ."

"ಹೋಗಲಿ ಬಿಡು ಚಂದ್ರು.... ಇನ್ನು ವಾದ ಯಾಕೆ ? ಅವರು ಹೋದ್ರಲ್ಲ. ಬೆಳಿಗ್ಗೆ ನೋಡ್ಕೊಂಡ್ರಾಯ್ತು. ಲಕ್ಷ್ಮಿ ಸ್ವಭಾವ ಯಾರಿಗೂ ಹೊಸದಲ್ಲ..." ಕೆಳದನಿಯಲ್ಲಿ ಪಾರ್ವತಿ ನುಡಿದಳು. ಗೋಪಾಲಯ್ಯ ರಾಮರಾಯರ ಮನೆಯ ಕಡೆಗೆ ನಡೆದು ಆ ಹುಡುಗಿಯರನ್ನು ಸೇರಿಕೊಂಡ. ಚಂದ್ರು ಅಲ್ಲೇ ಮೆಟ್ಟಿಲ ಮೇಲೆ ಕುಳಿತ. ಬೆಳಿಗ್ಗೆ ಆ ದಿಬ್ಬದ ಮನೆಯಲ್ಲಿ ಹಾವಾಡಿಗ ಎಸೆದ ಹಾವು ಇರಬಹುದು. ಹಲ್ಲುಗಳನ್ನು ಕಿತ್ತಿರಬಹುದು. ಅದರಿಂದ ಅಪಾಯ ಏನಿಲ್ಲ... ಆದರೂ ಭಯ ಆಗದೇ ಇರುತ್ತಾ? .... ಅದನ್ನು ಕಂಡ ಕೂಡಲೇ ಭಯದಿಂದ ಕಿರುಚಿ, ತನ್ನನ್ನು ಬಂದು ತಬ್ಬಿಕೊಂಡಳಲ್ಲ... ಆ ನೆನಪು ತಂಗಾಳಿಯಂತೆ ಸುಳಿಯಿತು... ಹೆಣ್ಣಿನ ಆಲಿಂಗನ ಅವನಿಗೆ ಮೊದಲ

ಅನುಭವ.... ಮತ್ತೊಮ್ಮೆ ಧಮನಿಗಳಲ್ಲಿ ರಕ್ತ ವೇಗವಾಗಿ ಹರಿಯಿತು.... ಹೆದರಿ, ತನಗೆ ಆತುಕೊಂಡಳು.... ತಾನು ಏನನ್ನು ಮಾಡಲಾಗುತ್ತಿಲ್ಲವಲ್ಲ ಎಂದು ಮನಸ್ಸು ಮುದುಡಿತು. ಈ ಅಮ್ಮನ ಸಹವಾಸದಲ್ಲಿ, ಅಪ್ಪನಂತೆ ತಾನೂ ಅಸಹಾಯಕನಾಗಿ ಬಿಟ್ಟನೇ.... ಹಾಗಾಗಬಾರದು... ಎಂದುಕೊಂಡು ಎದ್ದು, ತಾನೂ ರಾಮರಾಯನ ಮನೆಯ ಕಡೆಗೆ ಹೆಜ್ಜೆ ಹಾಕಿದ... ಪಂಕಜ ಪೆಚ್ಚಾಗಿ ನಿಂತಿದ್ದಾಳೆನಿಸಿತ್ತು.

"ಬನ್ನಿ ಟೀಚರ್.... ನಾನು ಈಗಲೇ ಓಡಿಸ್ತೀನಿ.... ಬೇಕಾದ್ರೆ ನಾನೇ ಈ ರಾತ್ರಿ ನಿಮ್ಮ ಮನೇಲಿ ಮಲಗ್ತೀನಿ...."ಎಂದ.

ಪಂಕಜ ಎಚ್ಚೆತ್ತಳು." ಪರವಾಗಿಲ್ಲ... ಕತ್ತಲೆಯ ಹೊತ್ನಲ್ಲಿ ಓಡಿಸೋದು ಕಷ್ಟವೇ... ಅಲ್ಲಿಂದ ಎಲ್ಲಿಗೆ ಹೋಗಿ ಸೇರಿಕೊಳ್ಳುತ್ತೆ ಅಂತ ಹೇಗೆ ಕಾಣಿಸುತ್ತೆ... ನಾನು ಈಗ ಮಂಗಳನ ಮನೇಲಿ ಇರ್ತೀನಿ. ಬೆಳಿಗ್ಗೆ ಒಂದಿಬ್ಬರು ಆಳುಗಳನ್ನು ಕರೆದು ಕೊಂಡು ಬನ್ನಿ, ಅಷ್ಟು ಮಾಡಿ...." ಎಂದು ಹೇಳಿ ಅವಳು ಅಲ್ಲಿ ನಿಲ್ಲದೇ ರಾಮರಾಯನ ಮನೆಯೊಳಕ್ಕೆ ಹೊರಟು ಹೋದಳು. ಮಂಗಳನೂ ಅವಳ ಹಿಂದೆ ನಡೆದಳು.

ಇವನಿಗೆ ಅವಮಾನವಾದಂತಾಗಿತ್ತು."ನೋಡಿದ್ರಾ ಅಪ್ಪಾ... ಟೀಚರ್‌ಗೆ ಬೇಜಾರಾಯ್ತು... ಅದು ದಿಬ್ಬದ ಮನೆಯಿಂದ ಹೊರ ಬಂದ ಹಾವು.... ತಪ್ಪು ನಮ್ಮದೇ ಅಲ್ಲವೇನಪ್ಪಾ...?"

"ಹೌದು ಚಂದ್ರೂ... ಬೆಳಿಗ್ಗೇನೇ ನೀನು ಹೋಗಿ, ನಾಲ್ಕು ಆಳುಗಳನ್ನು ಕರೆತಂದು ಅದನ್ನು ಹೊರಕ್ಕೆ ಓಡಿಸುವ ಕೆಲಸ ಮಾಡು.... ಅಮ್ಮಂಗೆ ಹೇಳೋದೇ ಬೇಡ... ತಿಳೀತಾ?"

"ಯಾಕಪ್ಪಾ ಅಮ್ಮಂಗೆ ಹೆದರ್ಬೇಕು? ನಾವೇನು ಅಪರಾದ ಮಾಡ್ತಿದೀವಾ?"

"ಹಾಗಲ್ಲ ಚಂದ್ರು....."

"ಏನೂ ಹೇಳ್ಬೇಡಿ ಅಪ್ಪಾ... ನೀವು ಅಮ್ಮಂಗೆ ಹೆದರಬಹುದು... ಆದರೆ ನಾನ್ಯಾಕೆ ಹೆದರ್ಬೇಕು?.... ನನಗೆ ಯಾವ ಮುಲಾಜೂ ಇಲ್ಲ..." ಎಂದ. ಗೋಪಾಲಯ್ಯ ಉತ್ತರ ಕೊಡಲಿಲ್ಲ. ಸುಮ್ಮನೇ ಮೌನವಾಗಿ ಮನೆಗೆ ಹಿಂತಿರುಗಿದ.

ಗೋಪೀ, ಚಂದ್ರು ಎಲ್ಲೋ? ಸಿನೆಮಾಕ್ಕೆ ಟಿಕೆಟ್ ಸಿಗಲಿಲ್ಲ ಅಂತ ಇವರಿಬ್ಬರನ್ನು ಆಗಲೇ ವಾಪಸ್ಸು ಕಳಿಸಿ ಬಿಟ್ಟ. ತಾನು ಎಲ್ಲೆಲ್ಲೋ ತಿರುಗಾಡಿಕೊಂಡು ಈಗ ಬಂದ. ಬಂದವನು ಸೀದಾ ಒಳಗೂ ಬರದೇ ಮತ್ತೆಲ್ಲಿಗೆ ಹೋದ? ಆಳುಗಳನ್ನು ಕರ್ಕೊಂಡು ಬರೋಕೆ ಕಳಿಸಿದ್ಯಾ?"

"ಇಲ್ಲ ಪಾರ್ವತಿ... ಮನಸ್ಸಿಗೆ ಏನೋ ಬೇಸರ ಮಾಡ್ಕೊಂಡಿದ್ದಾನೆ..." ತಂಗಾಳೀಲಿ ನಿಂತಿದಾನೆ ಬರ್ತಾನೆ ಬಿಡು..."

"ಕೆಲಸದ್ದು ಏನಾದ್ರೂ ತಿಳೀತಾ?"

"ಇನ್ನು ಇಲ್ಲ. ಅದೇ ಯೋಚನೆ ಇರಬಹುದು... ಏನೇ ಲೀಲಾ, ಅಂಗಡಿ ಗಿಂಗಡಿಗೆ ಹೋಗ್ಲೇ ಇಲ್ವಾ...?"

"ಇಲ್ಲ ಮಾವ.... ನನ್ನ ಹತ್ತಿರವೂ ದುಡ್ಡಿರಲಿಲ್ಲ... ಮಾಧೂ ಹತ್ತಿರವೂ ಇರ್ಲಿಲ್ಲ... ಚಂದ್ರು ಕೊಡದೇ ಹಾಗೇ ಹೊರಟು ಹೋಗಿದ್ದ..."

"ಅವನ ಹತ್ರ ತಾನೇ ಎಲ್ಲಿದೆ ದುಡ್ಡು? ಬೇಕಾ ಬಿಟ್ಟಿ ಖರ್ಚು ಮಾಡೋಕೆ. ಸಧ್ಯಕ್ಕೆ ಅವನಿಗೆ ಕೆಲಸವೂ ಇಲ್ಲ. ಸಂಪಾದನೆಯೂ ಇಲ್ಲ." ಲಕ್ಷ್ಮಿ ಮಧ್ಯೆ ಮಾತಾಡಿದಳು.

"ಮೈಸೂರ್ನಲ್ಲಿ ಒಂದಲ್ಲ ಒಂದು ಕೆಲ್ಸ ಸಿಗುತ್ತೆ... ಇದು ಅಷ್ಟು ದೊಡ್ಡ ಊರಲ್ಲ... ಅಲ್ಲೇ ಹುಡಿಕ್ಕೊಂಡಿದ್ರೆ ಆಗ್ತಿತ್ತು..."ಪಾರ್ವತಿ ಲಕ್ಷ್ಮಿಯ ಕಡೆ ನೋಡುತ್ತಾ ನುಡಿದಳು. ಲಕ್ಷ್ಮಿ ಸುಮ್ಮನಿದ್ದಳು. ಮಾಧೂ ಹೋಗೋ, ಅವನನ್ನು ಕರ್ಕೊಂಡು ಬಾ... ಅಡಿಗೆ ಬಿಸಿ ಬಿಸಿ ಇದೆ. ಬೇಗ ಊಟ ಮಾಡಿದ್ರೆ ಬೇಗ ಮಲಗಬಹುದು" ಪಾರ್ವತಿ ಮಾಧವನನ್ನು ಕಳಿಸಿದಳು.

೦ ೦ ೦

ನಿದ್ದೆ ಬಾರದೇ ಹೊರಳಾಡುತ್ತಿದ್ದ ಪಂಕಜಳನ್ನು ಮಂಗಳ ಗಮನಿಸಿದಳು. "ನಿದ್ದೆ ಬರ್‍ತಾ ಇಲ್ವಾ ಟೀಚರ್?" ಹೊಸ ಜಾಗ.

"ನಾನು, ವಾಪಸ್ಸು ನಮ್ಮೂರಿಗೇ ಹೊರಟು ಹೋಗ್ತಾ ಅಂತ ಯೋಚಿಸ್ತಿದೀನಿ..."

"ಯಾಕೆ ? ಒಬ್ಬರಿಗೇ ಇರುಕ್ಕೆ ಭಯ ಆಗುತ್ತಾ?"

"ಭಯ ಆಗದೇ ಇರುತ್ತಾ ಮಂಗಳಾ ರಾತ್ರಿಯ ಹೊತ್ತು ಒಬ್ಬಳೇ ಇರ್ತೀನಿ... ಈಗ ನೋಡಿದ್ರೆ ಹಾವು ಬಂದು ಸೇರಿಕೊಂಡಿದೆ. ಮನೆಯೊಳಗೇ ಓಡಾಡುಕ್ಕೆ ಹೆದರಿಕೆ ಆಗುತ್ತೆ.....

"ಇದಕ್ಕೋಸ್ಕರ ಊರನ್ನು ಬಿಟ್ಟು ಹೋಗ್ತಾರಾ ಟೀಚರ್.... ಬೇರೆ ಮನೆ ನೋಡಿದ್ರಾಯ್ತು... ದಿಬ್ಬದ ಮೇಲಿರುವ ಮನೆ ನಿಮಗೆ ದೊಡ್ಡದು ಆದರೂ....."

"ಇಲ್ಲ ಮಂಗಳಾ.... ಆ ಮನೆ ಇದುವರೆಗೂ ಪಾಳು ಬಿದ್ದಿತ್ತು... ದೆವ್ವಗಳು ವಾಸವಾಗಿವೆ ಅಂತ ಕೂಡಾ ಆಡ್ಕೊಳ್ತಿದ್ರು.... ಈ ಹಿಂದೆ ಆ ಮನೇಲಿ ಇದ್ದವರು ಒಬ್ಬರು ಆತ್ಮಹತ್ಯೆ ಮಾಡ್ಕೊಂಡಿದ್ರಂತೆ.... ಒಂದೊಂದು ಸಲ ಆ ಮನೆಯ ಕಡೆ ತಿರುಗಿ ನೋಡೋಕು ಸಹ ಭಯ ಆಗುತ್ತೆ... ನಿಮಗೆ ಈ ವಿಷಯ ಗೊತ್ತಿಲ್ವಾ?

"ಹೂಂ. ಸ್ವಲ್ಪ ಸ್ವಲ್ಪ ಗೊತ್ತಿದೆ. ಭಯ ಪಡೋಕೂ ನನಗೆ ಪುರಸೊತ್ತು ಎಲ್ಲಿದೆ?.... ಆ ಮನೇನ ರಿಪೇರಿ ಮಾಡಿಸಿ, ಪುಣ್ಯಾಹ ಎಲ್ಲಾ ಮಾಡಿಸಿದಾರಲ್ಲ..."

"ಯಾರ್ರೇ ಅದು ಗುಸು ಗುಸು ಮಾತಾಡ್ತಾ ಇರೋದು ಹನ್ನೆರಡು ಗಂಟೆ ಆಗ್ತಾ ಇದೆ. ಮಲಗ್ತಾರ್ದಾ? ರಾಮರಾಯ ತಾನು ಮಲಗಿದ್ದಲ್ಲಿಂದಲೇ...ಎಲ್ಲರೂ ಬೆಚ್ಚಿಸು

ವಂತೆ ಹೇಳಿದಾಗ ಮಂಗಳ ಬೇಸರಗೊಂಡಳು.

"ಈ ಅಪ್ಪ ಒಬ್ಬರು ಮಾತಾಡೋಕೂ ಬಿಡುಲ್ಲ... ನಾವೇನು ದಿನ ದಿನ ಮಾತಾಡ್ತೀವಾ ಟೀಚರ್.. ಯಾವಾಗ್ಲೂ ಹೀಗೇ... ಯಾವುದೂ ಸರಿ ಹೋಗುಲ್ಲ ಇವರಿಗೆ..." ಬೇಸರದಿಂದ ನುಡಿದಳು.

"ಅವರ ನಿದ್ದೆಗೆ ತೊಂದರೆ ಅಗುತ್ತಿರಬಹುದು... ಎಚ್ಚರ ಆಯ್ತೇನೋ..."

"ಅವರು ಎಷ್ಟು ಜೋರಾಗಿ ಕನವರಿಸ್ತಾರೆ ಅಂತಂದ್ರೆ, ಸುತ್ತ ಮುತ್ತಲಿನ ಮನೆಯವರು ಬೆಚ್ಚಿ ಏಳ್ಬೇಕು.... ಅವರಿಂದ ನಮ್ಮ ನಿದ್ದೆಗೂ ತೊಂದರೆ ಆಗುಲ್ವಾ?"

"ಈಗ ನಿಮ್ಮ ತಾಯಿ ಆರೋಗ್ಯ ಹೇಗಿದೆ... ಕೋಲೂರಿಕೊಂಡು ನಡೆಯೋದನ್ನ ಅಭ್ಯಾಸ ಮಾಡ್ಕೊಂಡ್ರಾ?.... ಕೆಳದನಿಯಲ್ಲಿ ಪ್ರಶ್ನಿಸಿದಳು.

"ಅದನ್ನು ನಾನೇ ಮಾಡಿಸ್ಬೇಕು ಟೀಚರ್... ಬಿಡುವೇ ಆಗುಲ್ಲ ಅಷ್ಟು ಕೆಲಸ.... ನಾನೂ ನಿಮ್ಮ ಹಾಗೇ, ಯಾವುದಾದ್ರೂ ಕೆಲಸಕ್ಕೆ ಸೇರ್ಕೊಂಡಿದ್ರೆ ಇದೆಲ್ಲಾ ತಪ್ಪುತ್ತಿತ್ತು..."

"ನಾನೇನು ಆಸೆಯಿಂದ ಸೇರ್ಕೊಳ್ಳಿಲ್ಲ ಮಂಗಳಾ... ಪರಿಸ್ಥಿತಿ ಹಾಗೆ ಮಾಡಿತು... ಅಪ್ಪ ಅಮ್ಮನಿಗೆ ಹೊರೆಯಾಗಿ ಇರಲು ಇಷ್ಟ ಇಲ್ಲದೇ ಕೆಲ್ಸಕ್ಕೆ ಸೇರ್ಕೊಂಡೆ..."

"ಆದರೂ ನೀವು ಆರಾಮವಾಗಿದೀರಿ... ನಿಮಗೆ ಹೇಗೆ ಬೇಕೋ ಹಾಗೆ ಇದೀರಿ... ಯಾರೂ ನಿಮ್ಮನ್ನು ಏನೂ ಅನ್ನುಲ್ಲ... ಸ್ವಾತಂತ್ರ್ಯ ಇದೆ ನಿಮಗೆ..."

"ಇಂಥಾ ಜೀವನ ಯಾರಿಗೂ ಬೇಡ ಮಂಗಳಾ.... ಆ ಕಷ್ಟ ಏನೂಂತ ನನಗೆ ಮಾತ್ರ ಗೊತ್ತು. ಹೇಳಿಕೊಳ್ಳುವ, ಕೇಳಿಕೊಳ್ಳುವ ವಿಷಯ ಅಲ್ಲವೇ ಅಲ್ಲ. ಹೋಗಲಿ ಬಿಡಿ. ನಿಮ್ಮ ವಿಷಯ ಹೇಳಿ.... ಮದುವೆಗೆ ದಿನ ಗೊತ್ತು ಮಾಡಿದ್ವಾಯ್ತಾ?.... ತಯಾರಿ ಶುರುವಾಗಿದೆಯಾ?....

"ಇಲ್ಲ ಟೀಚರ್.. ಮದುವೆ ಮುಂದಕ್ಕೆ ಹೋಯಿತು.. ಅಮ್ಮಂಗೆ ಹೀಗಾಯ್ತಲ್ಲ. ಅಲ್ಲದೇ ನನ್ನಕ್ಕ ಬಾಣಂತನಕ್ಕೆ ಬರ್ತಾಳೆ...." ಮಂಗಳನ ಧ್ವನಿಯಲ್ಲಿ ಬೇಸರವಿದ್ದುದನ್ನು ಪಂಕಜ ಗುರುತಿಸಿದಳು... ಮುಂದೆ ಏನು ಕೇಳಬೇಕೆಂದು ತಿಳಿಯಲಿಲ. ಮೌನಿ ಯಾದಳು... ಮಂಗಳನೂ ಸುಮ್ಮನಾದಳು... ತನಗೆ ಬಂದ ಪತ್ರಗಳಿಗೆ ಉತ್ತರ ಬರದೇ ಇಲ್ಲ ಎನ್ನುವುದು ನೆನಪಿಗೆ ಬಂತು. ಅವನಾದರೂ ಬಂದಿದ್ದರೆ, ತನ್ನ ಬೇಗುದಿಯನ್ನು ಹೇಳಿಕೊಳ್ಳಬಹುದಾಗಿತ್ತು ಎನಿಸಿತ್ತು.. ಮತ್ತೊಮ್ಮೆ ಆ ಪತ್ರಗಳನ್ನು ಓದಬೇಕೆಂದು ಕೊಂಡಳು... ನಿಧಾನವಾಗಿ ನಿದ್ದೆ ಆವರಿಸಿತು.

ಬೆಳಕು ಹರಿದಿತ್ತು. ಮುಖ ತೊಳೆದು ಕಾಫಿ ಕುಡಿದ ಪಂಕಜ ಏನು ಮಾಡಬೇಕೆಂದು ತೋಚದೇ ಹಾಗೇ ಕುಳಿತಿದ್ದಳು. ಚಂದ್ರು ಒಂದಿಬ್ಬರು ಆಳುಗಳನ್ನು ಕರೆತಂದು, ಅವಳ ಮನೆಯ ಮುಂದೆ ನಿಲ್ಲಿಸಿ, ಇತ್ತ ಬಂದ. ಪಂಕಜ ಎದ್ದಳು. "ಬೀಗದ ಕೈಯನ್ನು

ಕೊಡಿ ಟೀಚರ್... ಆಳುಗಳು ಬಂದಿದಾರೆ..." ಎಂದ.

"ನಾನೂ ಬರ್ಲಾ?.... " ಬೀಗದ ಕೈಯನ್ನು ಕೊಟ್ಟು ಕೇಳಿದಳು.

"ಬೇಡ ಜನಕ್ಕೆ ಜನ ಸೇರಿದರೆ, ಓಡಿಸೋದು ಕಷ್ಟ ಆಗುತ್ತೆ. ನಾನು ಇರ್ತೀನಲ್ಲ... ಓಡಿಸಿ ಆದ್ಮೇಲೆ ಬರೋರಂತೆ" ಎನ್ನುತ್ತಾ ಅವಳನ್ನೇ ದಿಟ್ಟಿಸಿ ನೋಡಿದ.

"ರಾತ್ರಿ ನಿದ್ದೆ ಬಂದ ಹಾಗಿಲ್ಲ..."ಎಂದ.

"ಹೌದು... ಹೊಸ ಜಾಗ... ಅಲ್ಲದೇ ನಾನೂ ಮಂಗಳಾ ಇಬ್ಬರೂ ತುಂಬಾ ಹೊತ್ತು ಮಾತನ್ನಾಡುತ್ತಿದ್ದೆವು... ಕಾಫಿ ಕುಡೀತೀರಾ?.... ಮುಗುಳ್ನಕ್ಕು ಕೇಳಿದಳು.

"ಮೊದಲು ನಿಮ್ಮ ಮನೆಯಿಂದ ಆ ನಾಗಪ್ಪನ್ನ ಕಳಿಸೋಣ. ಆಮೇಲೆ ಇಬ್ಬರೂ ಕುಳಿತು ಕಾಫಿ ಕಾಡಿಯೋಣ.... ಅವರುಗಳು ಕಾಯ್ತಾ ಇದಾರೆ..." ಎಂದು ಹೇಳಿ ನಡೆದ. ಇವನ್ಯಾಕೆ ನನಗೋಸ್ಕರ ಯೋಚಿಸುತ್ತಾನೆ ಎಂದು ಚಿಂತಿಸಿದಳು.

ಆಳುಗಳು ಅಡಿಗೆ ಮನೆಯ ಬಾಗಿಲನ್ನು ತೆರೆದು, ಬಚ್ಚಲ ಬಳಿಗೆ ಬಂದರು. ಹಾವು ಮಲಗಿದ್ದಲ್ಲೇ ಮಲಗಿತ್ತು. ಆಳುಗಳು ತಮ್ಮ ಕೈಯಲ್ಲಿ ಹಿಡಿದಿದ್ದ ದೊಣ್ಣೆಯನ್ನು ಕುಟ್ಟಿ ಹಾವನ್ನು ಎಚ್ಚರಿಸಿದರು. ಅದು ಅಲ್ಲೇ ಮಿಸುಕಾಡಿತು. "ಏನೋ ಭಾರಿ ಪ್ರಾಣೀನೇ ನುಂಗಿರ್ಬೇಕು..... ಅಲ್ಲಾಡದೆ ಮಲಗಿದೆ".... ಎಂದು ಹೇಳುತ್ತಾ ತಾವು ಹಿಡಿದಿದ್ದ ಗೋಣಿಚೀಲದೊಳಕ್ಕೆ ಉಪಾಯವಾಗಿ ಹಾವನ್ನು ಸೇರಿಸಿದರು. ಪೊರೆ ಕಳಚುವ ಸಮಯ ಬಂದಿದೆ... ಅದಕ್ಕೇ ಶಕ್ತಿ ಇಲ್ಲದಂತೆ ಮಲಗಿದೆ." ಎಂದುಕೊಂಡು ಚೀಲದ ಬಾಯಿಗೆ ಬಲವಾಗಿ ಚಳ್ಳೆಹುರಿಯನ್ನು ಕಟ್ಟಿ ಎತ್ತಿದರು. ತಾನು ಬಂಧನಕ್ಕೆ ಸಿಕ್ಕಿಬಿದ್ದೆ ಎಂದು ಅರಿವಿಗೆ ಒಳಗಾದ ಹಾವು ಮೆಲ್ಲನೆ ಭುಸುಗುಟ್ಟುತ್ತಾ, ತಪ್ಪಿಸಿಕೊಳ್ಳಲು ಹವಣಿಸುತ್ತಿತ್ತು.

"ಬೇಗ ಹೊರಕ್ಕೆ ತಗೊಂಡು ಹೋಗಪ್ಪಾ.... ಚೀಲದಿಂದ ಹೊರಕ್ಕೆ ಜಿಗಿದುಬಿಟ್ಟೀತು" ಚಂದ್ರು ಎಚ್ಚರಿಸಿದ.

"ಏ... ಹಂಗೆಂಗೆ ಹೊರಕ್ಕೆ ಬಂದೀತು? ನಾವಿಲ್ಲವ್ರಾ ? ಕಾಸು ಕೊಟ್ಟು ಬಿಡಿ... ನಾವು ಹೋಗ್ತೀವಿ...." ಒಬ್ಬನೆಂದ. ದೂರದಲ್ಲಿ ನಿಂತಿದ್ದ ಪಂಕಜ ತನ್ನ ಪರ್ಸಿನಿಂದ ಹಣವನ್ನು ತೆಗೆದಳು.... ಅಷ್ಟರಲ್ಲಿ ಚಂದ್ರು ತಡೆದ.

"ನಾನು ಕೊಟ್ಬಿರ್ತೀನಿ... ಆಮೇಲೆ ನಿಮ್ಹತ್ರ ಇಸ್ಕೋತೀನಿ..."

"ಎಂಥಾ ಹಾವೋ?" ಎನ್ನುತ್ತಾ ರಾಮರಾಯ ಬಂದು ನಿಂತ. ಅವನ ಹಿಂದೆ ಎದ್ದಿದ್ದ ಮಕ್ಕಳುಗಳೂ ಬಂದು ನಿಂತಿದ್ದರು.

"ಭಾರೀ ಹಾವು ಸಾಮೀ... ನೋಡ್ತಿರೇನು?"ಆಳು ತಮಾಷೆ ಮಾಡಿದ.

"ಕಷ್ಟಪಟ್ಟು ಹಿಡ್ಡಿದೀರಿ.... ತೆಗೀಬೇಡಿ... ದೂರ ಎಲ್ಲಿಗಾದ್ರೂ ತಗೊಂಡು ಹೋಗಿ ಬಿಟ್ಬಿಡಿ.... ಬದುಕಿಕೊಳ್ಳಲಿ..."

"ಹೌದಪ್ಪಾ... ಹತ್ರ ಪತ್ರ ಎಲ್ಲಾದ್ರೂ ಬಿಟ್ಟು ಗಿಟ್ಟೀರಿ ಜೋಕೆ...."ಚಂದ್ರು

ದನಿಗೂಡಿಸಿದ.

"ನಾವೇನು ಮಾಡ್ಬೇಕು ಅಂತ ನಮಗೆ ಗೊತ್ತು ಸಾಮೀ.... ನಾವು ಹೊಂಟೋ... ಎನ್ನುತ್ತಾ ಅವರಿಬ್ಬರೂ ಕಾಸನ್ನು ತೆಗೆದುಕೊಂಡು ಹೊರ ನಡೆದರು. ಅಷ್ಟರಲ್ಲಿ ಗೋಪಾಲಯ್ಯನೂ ಅಲ್ಲಿಗೆ ಬಂದು ಸೇರಿದ.

"ಕೆಲಸದ ಆಳುಗಳು ಒಳಗೆ ಬಂದು ಅಡಿಗೆ ಮನೆಯಲ್ಲಿ ಓಡಾಡಿದಾದಾರೆ ಹಾವು ಬೇರೆ ಬಂದಿದೆ. ಮನೆಗೆ ಪುಣ್ಯಾಹ ಮಾಡಿಸ್ಬೇಕು.' ರಾಮರಾಯನೆಂದ. ಪಂಕಜ ಚಂದ್ರು ಕಡೆ ನೋಡಿದಳು.

"ಅದನ್ನೆಲ್ಲ ಮಾಡಿಸಿದ್ರಾಯ್ತು... ಇವರ ತಂದೆ ತಾಯಿಯನ್ನು ಕರೆಸಿ ಮಾಡಿಸ್ತಾರೆ. ಅಲ್ವಾ ಟೀಚರ್?'ಅವಳು ಹೌದನ್ನುವಂತೆ ತಲೆಯಾಡಿಸಿದಳು. ಚಂದ್ರು ಅಲ್ಲಿದ್ದವರೆಲ್ಲಾ ಹೊರಡುವವರೆಗೂ ಕಾದಿದ್ದು ಪಂಕಜಳ ಕಡೆ ಸ್ನೇಹ ಪೂರ್ವಕವಾಗಿ ನೋಡಿ ಹೇಳಿದ." ಇನ್ನು ನೀವು ಈ ಮನೆಯಲ್ಲಿ ಒಬ್ಬರೇ ಇರುವುದು ಒಳ್ಳೆಯದಲ್ಲ... ನಿಮ್ಮ ಮನೆಯವರ್ಯಾರಿಗಾದರೂ ಬಂದು ನಿಮ್ಮ ಜೊತೆ ಇರುವಂತೆ ಕರೆಸಿಕೊಳ್ಳಿ... ಇಲ್ಲದಿದ್ದರೆ, ನಿಮ್ಮ ಊರಿಗೇ ಹೊರಟು ಹೋಗಿ... ಈ ವಠಾರದಲ್ಲಿ ಇನ್ನು ಎಷ್ಟು ಹಾವುಗಳಿವೆಯೋ?.... ನಿಮಗೆ ನೆಮ್ಮದಿಯಿಂದ ನಿದ್ದೆ ಕೂಡಾ ಮಾಡುಕ್ಕೆ ಬಿಡುಲ್ಲ..."

"ಏಕಾಏಕೀ, ಊರ್ನಿಂದ ಯಾರು ಬರ್ತಾರೆ ಹೇಳಿ?.... ನಾನೂ ಕೂಡಾ ತಕ್ಷಣಕ್ಕೆ ಕೆಲಸ ಬಿಡುಕ್ಕೆ ಆಗುಲ್ಲ... ಅಲ್ಲಿಯವರೆಗೆ?".... ಅತಂಕದಿಂದ ಪ್ರಶ್ನಿಸಿದಳು.

"ರಾಮರಾಯರ ಮನೆಯಲ್ಲಿ ಮಲಗಿಕೊಳ್ಳಿ... ಒಬ್ಬರೇ ಮಾತ್ರ ಇರ್ಬೇಡಿ... ನಿಮ್ಮ ಅಭ್ಯಂತರ ಇಲ್ಲದಿದ್ದರೆ, ನಾನು ಇಲ್ಲಿ ಬಂದು ಮಲಗ್ತೀನಿ..." ಅವಳು ನೇರವಾಗಿ ಅವನನ್ನು ದಿಟ್ಟಿಸಿ ನುಡಿದಳು.

"ನನ್ನ ಅಭ್ಯಂತರ ಇದೆ... ನೀವು ಇಲ್ಲಿ ಬಂದು ಮಲಗಲು ನನ್ನ ಸಮ್ಮತಿ ಇಲ್ಲ. ಅದು ಸರಿಯಾದ ಆಲೋಚನೆಯೇ ಅಲ್ಲ... ಕಾರಣ ನಿಮಗೂ ಗೊತ್ತು...."

"ಗೊತ್ತಿದೆ ಪಂಕಜಾರವರೇ, ನಿಮ್ಮ ಆಪ್ತ ಸ್ನೇಹಿತೆಯರು ಯಾರಾದರೂ ಇದ್ದರೆ.... ಅವರ ಮನೇಲಿ ಇರಬಹುದಲ್ಲ..."

"ಇಲ್ಲ.. ಅದ್ಯಾವುದೂ ನಡೆಯುವ ಮಾತಲ್ಲ... ನಾನು ಒಂದೆರಡು ದಿನಗಳ ಮಟ್ಟಿಗೆ ರಜ ಹಾಕಿ ಊರಿಗೆ ಹೋಗ್ತೀನಿ. ಬರುವಾಗ ಜತೆಗೆ ಯಾರನ್ನಾದರೂ ಕರೆತರ್ತೀನಿ.... ಅಲ್ಲಿಯವರೆಗೂ, ರಾಮರಾಯರ ಮನೆಯಲ್ಲಿ ರಾತ್ರಿಯ ಹೊತ್ತು ಮಲಗ್ತೀನಿ.... ನೀವು ಏನೂ ಚಿಂತಿಸ್ಬೇಡಿ.... ಅದು ಅನರ್ಥಕ್ಕೆ ಎಡೆ ಮಾಡುತ್ತೆ...'

"ಯಾಕೆ ಹೀಗೆ ಅನುಮಾನ ಪಡ್ತೀರಿ ಪಂಕಜಾ....?"

"ಅಪವಾದಕ್ಕೆ ಅಂಜಿಕೆ ಆಗುತ್ತೆ ಚಂದ್ರು.... ನಿಮ್ಮ ಮನಸ್ಸಿನಲ್ಲಿ ಏನೇ ಕಲ್ಮಶ ಇಲ್ಲದಿರಬಹುದು. ಆದರೆ ಬೇರೆಯವರಿಗೆ ಹೇಗೆ ತಿಳಿಯುತ್ತೆ?"

"ನನ್ನ ಬಗ್ಗೆ ನಿಮಗೆ ಏನನ್ನಿಸುತ್ತೆ? ನೇರವಾಗಿ ಹೇಳಿ...."

"ನೀವೊಬ್ಬರು ಒಳ್ಳೆಯ ಸ್ನೇಹಿತರು... ನನ್ನ ಬಗ್ಗೆ ನಿಮಗೆ ಗೌರವ ಇದೆ.... ಅದು ನನಗೆ ಅರ್ಥ ಆಗುತ್ತೆ.... ಆದರೆ...."

"ಹೋಗಲಿ ಬಿಡಿ... ನಿಧಾನವಾಗಿ ಮತ್ತೆ ಮಾತನಾಡೋಣ... ಎಲ್ಲರೂ ಹೊರಟು ಹೋದರು. ಆಳುಗಳು ಬಂದು ಓಡಾಡಿದಾರೆ... ನಾನೇನಾದ್ರೂ ಸಹಾಯ ಮಾಡ್ಲಾ?"

"ಏನೂ ಬೇಡ... ನಾನೀಗ ಸ್ಕೂಲಿಗೆ ಸಿದ್ಧಳಾಗ್ಬೇಕು... ರಾಮರಾಯರ ಮನೇಲಿ ತಿಂಡಿಗೆ ಕರೆದಿದಾರೆ.... ಅಲ್ಲಿಂದಲೇ ಸ್ಕೂಲಿಗೆ ಹೋಗ್ತೀನಿ...."

"ನೀವಿನ್ನು ಹೊರಡಿ ಅಂತ ಸೂಚ್ಯವಾಗಿ ಹೇಳ್ತಿದೀರಿ.... ಸರಿ ಹೊರಡ್ತೀನಿ... ನಿಮಗೇಕೆ ನನ್ನಿಂದ ತೊಂದರೆ?"

"ನಾನೊಂದು ಮಾತು ಹೇಳ್ತೀನಿ... ತಪ್ಪು ತಿಳ್ಕೋಬೇಡಿ...."

"ಇಲ್ಲ... ಹೇಳಿ....."

"ದಯವಿಟ್ಟು ಸ್ಕೂಲಿಗೆ ಬರದೇ ಇದ್ದರೇ..."

"ಅರ್ಥವಾಯಿತು ಬಿಡಿ... ಬರುಲ್ಲ... ನನ್ನಿಂದ ನಿಮಗೆ ತೊಂದರೆ ಅಂತ ಅನ್ನಿಸಿದರೆ, ನಾನು ನಿಮ್ಮ ಎದುರಿಗೇ ಬರುಲ್ಲ... ಮಾತನ್ನಾಡಿಸುಲ್ಲ." ಎಂದು ಹೇಳಿ, ಬಾಗಿಲನ್ನು ದಾಟಿ ಹೊರನಡೆದ... ತನ್ನ ಮಾತಿನಿಂದ ಅವನಿಗೆ ಬೇಸರವಾಯಿತೆಂದು ಅನ್ನಿಸಿತು...

"ಚಂದ್ರೂ.... ನಿಂತ್ಕೊಳ್ಳಿ" ಎಂದು ಹಿಂದಿನಿಂದ ಕರೆದರೂ, ಕೇಳಿಸದವನಂತೆ ದುಡು ದುಡು ತನ್ನ ಮನೆಯ ಕಡೆಗೆ ತಿರುಗುವ ಮೊದಲು ಹಿಂತಿರುಗಿ ನೋಡಿದ. ಅವಳು ಮುಂಬಾಗಿಲಿನಲ್ಲಿ ನಿಂತಿದ್ದಳು.... ಅವಳ ಬಗ್ಗೆ ಮನಸ್ಸು ಕರಗಿತು.... ತಪ್ಪು ತನ್ನದೇ ಅಂತ ಹೇಳಿಕೊಂಡು ಮನೆಯೊಳಕ್ಕೆ ಬಂದ...

ಅವನು ಹಿಂತಿರುಗಿ ನೋಡಿದ್ದನ್ನು ಅವಳು ಗಮನಿಸಿದಳು. ಹೃದಯ ಹಗುರ ವಾಯಿತು ತನ್ನ ಮೇಲೆ ಬೇಸರಗೊಂಡಿಲ್ಲ ಎಂದು ಅರಿವಾಯಿತು.... ಅವನು ಮತ್ತೆ ಬರಲಿ, ಮಾತನ್ನಾಡಿಸಲಿ ಎಂದು ಮನಸ್ಸು ಬಯಸಿತು... ಆದರೆ... ಅದು ಸರಿಯಲ್ಲ ಎಂದು ವಿವೇಕ ಹೇಳಿತು... ನಿಟ್ಟುಸಿರನ್ನು ಬಿಟ್ಟು ಒಳಕ್ಕೆ ನಡೆದಳು. ಒಳಗೆ ಧೈರ್ಯವಾಗಿ ಹೆಜ್ಜೆ ಇಡುವಂತಿರಲಿಲ್ಲ. ಎಲ್ಲಿ ಯಾವ ಜಂತು ಕಂಡು ಬಿಡುತ್ತದೋ ಎಂಬ ಭಯದಲ್ಲೇ ಸ್ಟವ್ ಹತ್ತಿಸಿ. ಬಿಸಿ ನೀರನ್ನು ಕಾಯಿಸಿಕೊಂಡು ಸ್ನಾನಕ್ಕೆ ಸಿದ್ಧಳಾದಳು. ಸ್ಕೂಲಿಗೆ ತೆಗೆದುಕೊಂಡು ಹೋಗಬೇಕಾದ, ಪುಸ್ತಕ, ನೋಟ್ಸ್ ಇತ್ಯಾದಿಗಳನ್ನು ತೆಗೆದಿಟ್ಟುಕೊಂಡಳು. ಸಿದ್ಧತೆಗಳನ್ನು ಮುಗಿಸಿಕೊಂಡು, ಮನೆಯ ಮುಂಬಾಗಿಲಿಗೆ ಬೀಗವನ್ನು ಹಾಕಿ ರಾಮರಾಯರ ಮನೆಗೆ ಬಂದಳು.

೦ ೦ ೦

ಗೋಪಾಲಯ್ಯ ಪಾರ್ವತಿ, ಲೀಲಾ ಹಾಗೂ ಮಾಧವನೊಂದಿಗೆ, ಮೈಸೂರಿಗೆ ತೆರಳಿದ್ದ. ಲಕ್ಷ್ಮಿದೇವಮ್ಮ ತಾನು ಬರುವುದಿಲ್ಲವೆಂದು ಒಂದೇ ಮಾತಿನಲ್ಲಿ ಖಡಾ ಖಂಡಿತವಾಗಿ ಹೇಳಿಬಿಟ್ಟಿದ್ದಳು. ಅವಳು ಯಾರ ಬಲವಂತಕ್ಕೂ ಮಣಿಯುವುದಿಲ್ಲ ವೆಂದು ಎಲ್ಲರೂ ಸುಮ್ಮನಾಗಿದ್ದರು. ಆಕೆ ಒಬ್ಬಳೇ ಆಗುತ್ತಾಳೆಂದು ಚಂದ್ರು ಇಲ್ಲಿಯೇ ಉಳಿದುಕೊಳ್ಳ ಬೇಕಾಯಿತು. ಅದು ಅವನಿಗೆ ಇಷ್ಟವಿರಲಿಲ್ಲವಾದರೂ, ಅಲ್ಲಿಗೆ ಹೋಗುವ ಮನಸ್ಸೂ ಇರಲಿಲ್ಲವಾದುದರಿಂದ ಏನನ್ನೂ ಆಡಿರಲಿಲ್ಲ.

ಪಂಕಜ ಎರಡು ದಿನಗಳ ಮಟ್ಟಿಗೆ ಊರಿಗೆ ಹೋಗಿ, ತನ್ನ ತಂದೆಯನ್ನು ತನ್ನೊಂದಿಗೆ ಕರೆತರುವುದಾಗಿ ಹೇಳಿದ್ದಳು. ಅವಳ ಬರುವಿಕೆಯನ್ನು ನಿರೀಕ್ಷಿಸುತ್ತಾ ತನ್ನ ಪಾಡಿಗೆ ತಾನು ಇದ್ದ. ಲಕ್ಷ್ಮಿದೇವಮ್ಮ ಮಂಗಳಾ ಹಾಗೂ ವನಜಳ ಸಹಕಾರ ಹಾಗೂ ಸಹಾಯಗಳೊಂದಿಗೆ ಮನೆಯ ಮೈಲಿಗೆಯನ್ನು ತೊಳೆದು ಶುದ್ಧಿ ಗೊಳಿಸುವ ಕಾರ್ಯದಲ್ಲಿ ನಿರತಳಾಗಿದ್ದಳು. ಮನೆಯ ಒಳಗೆ ಹೊರಗೆ, ಧಾರಾಳವಾಗಿ ಗೋಮೂತ್ರ ವನ್ನು ಚುಮುಕಿಸಿ ಶುಚಿಗೊಳಿಸಿದಳು. "ನಾಳೆ ಪುಣ್ಯಾಹ ಮಾಡಿಸ್ಬೇಕು. ಬೆಳಿಗ್ಗೆ ಬೇಗನೇ ಬಂದ್ಬಿಡಿ ಅಂತ ಶಾಸ್ತ್ರಿಗಳಿಗೆ ಹೇಳ್ಬಿಟ್ಟು ಬಾ" ಎಂದು ಚಂದ್ರುಗೆ ಹೇಳಿದಳು. ಇದೇ ಸಮಯದಲ್ಲಿಯೇ, ಪಂಕಜಳ ಮನೆಗೂ ದಿಬ್ಬದ ಮೇಲಿನ ಮನೆಗೂ ಪುಣ್ಯಾಹ ಮಾಡಿಸಿ ಬಿಡಬೇಕೆಂದುಕೊಂಡ. ಆದರೆ ಈ ವಿಷಯವನ್ನು ಅಮ್ಮನಿಗೆ ತಿಳಿಸುವುದು ಹೇಗೆ ? ತಿಳಿಸಿದರೂ ಆಕೆ ಒಪ್ಪುವಳೆಂಬ ನಂಬಿಕೆ ಇರಲಿಲ್ಲ. ಲಕ್ಷ್ಮಿದೇವಮ್ಮನಿಗೆ ತಿಳಿಯದಂತೆ ಮಂಗಳನೊಡನೆ ಮಾತನಾಡಿದ.

ದಿಬ್ಬದ ಮನೆಯೊಳಗೆ ಹಾವಾಡಿಗರು ವಾಸ ಮಾಡಿಕೊಂಡಿದ್ದ ವಿಷಯವನ್ನು ತಿಳಿಸಿದ. ಈ ವಿಷಯ ಅಮ್ಮನಿಗೆ ಗೊತ್ತಿಲ್ಲ. ತಿಳಿದರೆ, ಏನಾದರೂ ಮಾತನಾಡದೇ ಬಿಡುವುದಿಲ್ಲ. ಅವರಿಗೆ ತಿಳಿಯದಂತೆ, ಆ ಮನೆಗೂ, ಟೀಚರ್ ಮನೆಗೂ ಕಲಶದ ನೀರನ್ನು ಚುಮುಕಿಸಿ, ಶುಚಿ ಮಾಡಬೇಕು ಅಂತ ನನಗೆ ಅನ್ನಿಸ್ತಿದೆ. ನೀವು ಮಾಡಿಸುಕ್ಕೆ ಆಗುತ್ತಾ ?" ಅಂತ ಪ್ರಶ್ನಿಸಿದ.

"ಆಯ್ತು... ಪ್ರಯತ್ನ ಪಡತೀನಿ. ಶಂಕರಂಗೆ ಮುಂಜಿ ಆಗಿದೆ. ಅವನಿಗೆ ಹೇಳಿದರೆ, ಅವನೇ ಮಂತ್ರ ಹೇಳಿಕೊಂಡು ಪ್ರೋಕ್ಷಣೆ ಮಾಡ್ತಾನೆ. ಶಾಸ್ತ್ರಿಗಳ ಹತ್ತಿರ ಮಾತನಾಡಿ, ಕಲಶದ ನೀರನ್ನು ಸ್ವಲ್ಪ ಹೆಚ್ಚಾಗಿಯೇ ಇಡುವಂತೆ ಹೇಳಿಬಿಡಿ....

"ನಾನೂ ಹೇಳ್ತೀನಿ.... ಈ ಬಗ್ಗೆ ನಿಮಗೂ ಗಮನವಿರಲಿ.... ಅಮ್ಮನಿಗೆ ಸಹಾಯ ಮಾಡುಕ್ಕೆ ಬರ್ತೀರಲ್ಲ.... ನನಗಿಂತ ಚೆನ್ನಾಗಿ ನಿಮಗೆ ಎಲ್ಲಾ ಗೊತ್ತಾಗುತ್ತದೆ." ಅವನು ಹೊಗಳಿದ... ಅವಳು ನಾಚಿ, ಮುಗುಳ್ನಕ್ಕಳು.

"ನೇರವಾಗಿ ನೀವೇ ಯಾಕೆ ನಿಮ್ಮ ತಾಯಿಯ ಹತ್ತಿರ ಮಾತಾಡ್ಬಾರ್ದು?"

"ಏನೋ ಆ ಸಲುಗೆ ನನಗೆ ಬರಲೇ ಇಲ್ಲ.... ಹೀಗೇ ಬೆಳೆದೆ...."

"ಇನ್ನು ಮುಂದಾದ್ರೂ ಸಲುಗೆಯ ಭಾವವನ್ನು ಬೆಳೆಸಿಕೊಳ್ಳಿ.... ಇಲ್ಲೇ ಹೇಗೂ ಇರಬೇಕಲ್ಲ...."

"ಹಾಗಂತ ನಿಮಗೆ ಯಾರೂ ಹೇಳಿದ್ರು? ನಾನಂತೂ ಇಲ್ಲಿ ಇರುಲ್ಲ..."

"ಲೀಲಾ ಹೇಳಿದ್ರು... ನಿಮಗೆ ಕೆಲಸ ಸಿಕ್ಕಿದೆಯಂತೆ ಇಲ್ಲೇ..."

"ಇಲ್ಲ.... ಇನ್ನೂ ಫಲಿತಾಂಶ ತಿಳಿದಿಲ್ಲ... ಒಂದು ವೇಳೆ ಸಿಕ್ಕಿದರೂ. ಬಿಟ್ಟು ಬೇರೆ ಊರಿಗೆ ಹೊರಟು ಹೋಗ್ತೀನಿ..... ಇಲ್ಲಿ ಈ ಬಂಧನದಲ್ಲಿ ಮಾತ್ರ ಇರುಲ್ಲ..."

"ಯಾಕೆ? ಅಷ್ಟು ಬೇಸರ ಆಗುತ್ತಾ ಈ ಪರಿಸರ ?.... ಈ ಮನೆ.... ಈ ಸಂಬಂಧ?"...

" ಆ ಬಗ್ಗೆ ಮಾತನ್ನಾಡದಿದ್ರೇ ವಾಸಿ.... ಹೋಗಲಿ ನಿಮಗೆ ಈ ವಠಾರದ ಪರಿಸರ ಇಷ್ಟ ಆಯ್ತಾ?"

"ಇಷ್ಟ ಆಗ್ಲಿ ಬಿಡ್ಲಿ.... ಕೆಲವಕ್ಕೆ ಹೊಂದಿಕೊಳ್ಳದೇ ಬೇಕಾಗುತ್ತೆ.... ಹೇಗೂ ಸದಾ ಕಾಲಕ್ಕೂ ಇಲ್ಲಿ ಇರುಲ್ಲವಲ್ಲ..."

"ನೀವು ಹೆಣ್ಣು ಮಕ್ಕಳು ಅದೃಷ್ಟವಂತರು ಬಿಡಿ..... ಹುಟ್ಟಿ ಬೆಳೆದ ಮನೆಯಲ್ಲೂ ಸರಿ ಹೋಗಿಸ್ಕೊಳ್ತೀರಿ.... ಸೇರಿದ ಮನೆಯನ್ನು ಸರಿ ಮಾಡ್ಕೊತೀರಿ.... ನಮ್ಮಂಥೋರ್ಗೇ ಆ ಕಷ್ಟವೆಲ್ಲಾ..." ಬಲವಂತದ ನಗೆಯನ್ನು ನಕ್ಕ....

"ನಾನೊಂದು ಮಾತು ಕೇಳ್ಲಾ? ಬೇಸರ ಮಾಡ್ಕೋಬಾರ್ದು..."

"ಪರವಾಗಿಲ್ಲ ಕೇಳಿ.... ನೀವು ಏನು ಕೇಳ್ತೀರಿ ಅಂತ ನಂಗೊತ್ತು... ಕೇಳ್ದೋರಿಗೆಲ್ಲಾ ಸಹನೆಯಿಂದ ಉತ್ತರ ಕೊಟ್ಟಿದ್ದೀನಿ... ಹೂಂ... ಕೇಳಿ...."

"ನಿಮ್ಮ ಸ್ವಂತ ತಂದೆ ತಾಯೀನ... ಯಾವತ್ತೂ ನೀವು ಪ್ರಶ್ನಿಸಲೇ ಇಲ್ವಾ?.... ನನ್ನನ್ಯಾಕೆ ದತ್ತು ಕೊಟ್ರಿ ಅಂತ?"....

"ಓ ನಾನು ದತ್ತು ಪುತ್ರ ಅನ್ನೋ ವಿಷಯ ನಿಮಗೂ ತಿಳೀತಾ? ಇದನ್ನು ಲೀಲಾ ಹೇಳಿದ್ಲಾ ? ಅವಳಿಗೆ ಬೇರೆ ಕೆಲಸ ಇಲ್ಲ....

"ಅವರೊಂದಿಗೆ ನಿಮ್ಮ ಮದುವೆ ನಿಶ್ಚಯ ಆಗಲಿದೆಯಂತೆ.... ಅವರಿಗೆ ಯಾವ ಬೇಸರವೂ ಇಲ್ಲವಂತೆ...."

"ಆಂ! ನನ್ನ ಮದುವೆ ಲೀಲಳ ಜೊತೆ ? ಹಾಗಂತ ಅವಳೇ ಹೇಳಿದ್ಲಾ! ಇಂಥಾ ಸುಳ್ಳು ಸುದ್ದಿಯನ್ನು ಯಾಕೆ ಹರಡ್ತಾರೋ? ಮೊದಲೇ ಗೊತ್ತಾಗಿದ್ದಿದ್ರೆ ಚೆನ್ನಾಗಿ ಛೀಮಾರಿ ಹಾಕ್ತಿದ್ದೆ"

"ತಮಾಷೆಗೆ ಹೇಳಿರಬಹುದು. ಹೋಗಲಿ ಬಿಡಿ ಅದಕ್ಯಾಕೆ ಇಷ್ಟು ಸಿಟ್ಟು ? ನಾನು ಕೇಳಲೇ ಬಾರದಾಗಿತ್ತು. ನನ್ನದೇ ತಪ್ಪು... ಕ್ಷಮಿಸಿ..."

"ಇದರಲ್ಲಿ ನಿಮ್ಮ ತಪ್ಪು ಏನಿದೆ ? ಹೋಗಲಿ ಬಿಡಿ ಈಗ ನಾನು ಶಾಸ್ತ್ರಿಗಳ

ಮನೆಗೆ ಹೋಗ್ತಾ ಇದೀನಿ.... ನಾಳೆ ವಿಷಯ ಮರೀಬೇಡಿ...."

"ಶಾಸ್ತ್ರಿಗಳು ನಿಮಗೆ ಮೊದಲ್ನಿಂದ್ಲೂ ಪರಿಚಯಾನಾ? ಜಾತಕ ನೋಡಿ ಭವಿಷ್ಯ ಹೇಳ್ತಾರಾ?"

"ಯಾರ ಭವಿಷ್ಯ ತಿಳ್ಕೋಬೇಕಾಗಿದೆ ಈಗ? ನಿಮ್ಮದಾ?...."

"ಹೂಂ.... ನಂದು.... ನಮ್ಮ ತಾಯೀದು.... ನನ್ನ ತಮ್ಮಂದಿರದ್ದು...."

"ಒಟ್ನಲ್ಲಿ ಎಲ್ಲಾರ್ದ್ದೂ.... ಅನ್ನಿ. ಕೇಳಿ ಹೇಳ್ತೀನಿ ನಿಮಗೆ.... ಈಗ ಹೊತ್ತಾಯ್ತು. .. ಮತ್ತೆ ಮಾತಾಡೋಣ" ಎಂದು ಹೇಳಿ ಸೈಕಲನ್ನು ಏರಿದ. ಅವನತ್ತ ಹೋದ ಕೂಡಲೇ ಲಕ್ಷ್ಮಿದೇವಮ್ಮ ಮಂಗಳನನ್ನು ಕರೆದಳು.

"ಚಂದ್ರು ಏನು ಹೇಳ್ದ ನಿನ್ನ ಕೈಲಿ?" ನೇರವಾಗಿ ಪ್ರಶ್ನಿಸಿದಳು. ಮಂಗಳ ತಬ್ಬಿಬ್ಬಾದಳು. ಕಸಿವಿಸಿಯಿಂದ ಮುಖ ಕಪ್ಪಾಗಿತ್ತು. ಸಾವರಿಸಿಕೊಂಡಳು.

"ನನಗೆ ಮದುವೆ ಗೊತ್ತಾಗಿದೆಯಲ್ಲ ಆ ಬಗ್ಗೆ ವಿಚಾರಿಸುತ್ತಿದ್ದರು. ಯಾವೂರು? ಏನು ಕೆಲಸ? ಅಂತ ಕೇಳ್ತಿದ್ರು...."

"ಅದೆಲ್ಲಾ ಇವನಿಗೆ ಯಾಕಂತೊ?.... ತನ್ನದಲ್ಲದ ವಿಷಯದಲ್ಲಿ ಬಾಯಿ ಹಾಕದೇ ಇದ್ದರೆ ಆಗುಲ್ವಾ?....."ಮಂಗಳ ಉತ್ತರಿಸಲಿಲ್ಲ. ಆಕೆಯೇ ಮತ್ತೆ ಪ್ರಶ್ನಿಸಿದಳು.... "ನಿನ್ನ ಮದುವೆ ಯಾವಾಗ?" ಮಂಗಳ ಮುಜುಗರಗೊಂಡಳು.

"ಮುಂದಕ್ಕೆ ಹೋಗಿದೆ. ಅಮ್ಮಂಗೆ ಹುಶಾರಿಲ್ಲವಲ್ಲ... ಅದಕ್ಕೇ..."

"ಈಗ ನಿಮ್ಮಮ್ಮ ಹೇಗಿದ್ದಾರೆ...." ಕೋಲೂರಿಕೊಂಡು ನಡೆದಾಡ್ತಾರಾ?"

"ಹೂಂ... ಸ್ವಲ್ಪ ಸ್ವಲ್ಪ ಓಡಾಡ್ತಾರೆ... ಹೆಚ್ಚು ಓಡಾಡಿದ್ರೆ ನೋಯುತ್ತಂತೆ...."

"ಸರಿ... ಈಗ ನೀನು ಹೋಗು... ಸಾಯಂಕಾಲದ ಹೊತ್ತಿಗೆ ನಿನ್ನ ತಂಗೀನ, ನಿನ್ನ ತಮ್ಮ ಶಂಕರನ್ನ ಕಳಿಸಿಕೊಡು. ಸ್ವಲ್ಪ ಕೆಲಸ ಇದೆ." ಎಂದು ಹೇಳಿ ಅಲ್ಲಿ ನಿಲ್ಲದೇ, ಒಳಗೆ ಹೋಗಿದ್ದಳು ಮಂಗಳ ಗೊಂದಲಗೊಂಡಿದ್ದಳು... ಈಕೆಯ ಸಹವಾಸ ಬಹಳ ಕಷ್ಟ. ಬಹಳ ಎಚ್ಚರದಿಂದ ಇರಬೇಕು ಎಂದುಕೊಂಡಳು ಸಧ್ಯ ಈ ವಠಾರದಿಂದ, ಈ ಪರಿಸರದಿಂದ ಆದಷ್ಟು ಬೇಗ ಹೋದರೆ ಸಾಕು... ತಾನು ತನ್ನ ಭಾವಿ ಪತಿಗೆ ಪತ್ರವನ್ನೇ ಬರೆದಿಲ್ಲ.... ಅವನೂ ನನ್ನ ಪತ್ರವನ್ನೂ ನಿರೀಕ್ಷಿಸಿ ನಿರೀಕ್ಷಿಸಿ ಬೇಸರಗೊಂಡಿರ ಬಹುದು.... ಪತ್ರವನ್ನು ಬರೆಯಲು ಸಮಯವೂ ಸಿಗುತ್ತಿಲ್ಲ... ಮನಸ್ಸೂ ಆಗುತ್ತಿಲ್ಲ ಯಾಕೆ ?.... ಮದುವೆ ಮುಂದೆ ಹೋಗದೇ ಇದ್ದಿದ್ದರೆ ಚೆನ್ನಾಗಿತ್ತೆನ್ನಿಸಿತ್ತು.

○ ○ ○

ಸಮಯಕ್ಕೆ ಸರಿಯಾಗಿ ಶಾಸ್ತ್ರಿಗಳು ಬಂದು, ಪುಣ್ಯಾಹದ ಕಲಾಪವನ್ನು ಪ್ರಾರಂಭಿಸಿದ್ದರು, ಬೆಳಿಗ್ಗೆ ನಿತ್ಯಕ್ಕಿಂತ ಬೇಗನೇ ಎದ್ದ ಲಕ್ಷ್ಮಿದೇವಮ್ಮ ಮುಂಬಾಗಿಲ ಬಳಿ, ಗುಡಿಸಿ ಸಾರಿಸಿ ರಂಗವಲ್ಲಿಯನ್ನು ಹಾಕಿದ್ದಳು.... ಚಂದ್ರುಗೂ ಬೇಗನೇ ಎದ್ದು,

ಶಾಸ್ತ್ರಿಗಳು ಬರುವ ಹೊತ್ತಿಗೆ ಸ್ನಾನ ಮಾಡಿರಬೇಕೆಂದು ಹೇಳಿದ್ದಳು.

ಶಾಸ್ತ್ರಿಗಳು ಸ್ಫುಟವಾಗಿ ಮಂತ್ರವನ್ನು ಹೇಳುತ್ತಾ ಪೂಜಾವಿಧಿಯನ್ನು ಮುಗಿಸಿದರು. ಧೂಪ, ದೀಪ, ನೇವೇದ್ಯ ಮಂಗಳಾರತಿಯ ನಂತರ, ಸ್ಥಾಪಿಸಿದ್ದ ಕಲಶವನ್ನು ಕದಲಿಸಿ, ಅದರಲ್ಲಿದ್ದ ನೀರನ್ನೂ ಎಲ್ಲರಿಗೂ ತೀರ್ಥದಂತೆ ಕೊಟ್ಟು ಮಾವಿನ ಎಲೆಗಳಲ್ಲಿ ನೀರನ್ನು ಅದ್ದಿ ಎಲ್ಲರಿಗೂ ಪ್ರೋಕ್ಷಿಸಿ, ಮನೆಯ ಎಲ್ಲಾ ಕೊಠಡಿಗಳಲ್ಲೂ, ಸಂಧಿ ಮೂಲೆ ಗಳಲ್ಲೂ ಮಂತ್ರೋಚ್ಛಾರಣೆಯೊಂದಿಗೆ ನೀರನ್ನು ಸಿಂಪಡಿಸಿ, ಶುಚಿಗೊಳಿಸುವ ಕಾರ್ಯವನ್ನು ನೆರವೇರಿಸಿದರು.

ಲಕ್ಷ್ಮಿದೇವಮ್ಮ ಅವರಿಗೆ ಕುಡಿಯಲು, ಹದವಾಗಿ ಕಾಸಿದ್ದ ಹಾಲನ್ನು ತಂದು ಕೊಟ್ಟಳು. ಚಂದ್ರು ಕೈಯಲ್ಲಿ ಸಂಭಾವನೆಯನ್ನೂ ತಾಂಬೂಲದೊಂದಿಗೆ ಕೊಡಿಸಿದಳು. ನಮಸ್ಕರಿಸಿದ ಚಂದ್ರುಗೆ, "ಶೀಘ್ರಮೇವ ಕಲ್ಯಾಣ ಪ್ರಾಪ್ತಿರಸ್ತು" ಎಂದು ಆಶೀರ್ವದಿಸಿ ದರು. ಮಗನಿಗೆ ಯಾವುದಾದ್ರೂ ಕನ್ಯೇನ ನೋಡಿದೀರಾ ತಾಯೀ..." ಪ್ರಶ್ನಿಸಿದರು.

"ಇಲ್ಲ ಶಾಸ್ತ್ರಿಗಳೇ.... ಮೊದಲಿಗೆ ಗಟ್ಟಿಯಾದ ನೌಕರಿ ಸಿಗಲಿ.... ಆಮೇಲೆ ಮದುವೆ ಸಂಸಾರ ಎಲ್ಲಾ...."

ಅದು ಸರಿ... "ಉದ್ಯೋಗಂ ಪುರುಷ ಲಕ್ಷಣಂ" ಅಂತ... ಮೊದಲು ಯೋಗ್ಯ ವಾದ ಸಂಪಾದನೆ... ನಂತರ ಹೆಂಡತಿ ಮಕ್ಕಳು..." ಎನ್ನುತ್ತಾ ಹಾಲನ್ನು ಕುಡಿದು ಕೈ ಮುಗಿದು ಎದ್ದರು...

"ಇವರನ್ನು ಮನೆಗೆ ತಲುಪಿಸಿ ಬರ್ತೀನಿ" ಎಂದು ಹೇಳಿ ಚಂದ್ರು ಸೈಕಲನ್ನು ವೆರಾಂಡದಿಂದ ಬಾಗಿಲ ಆಚೆ ತಂದು ನಿಲ್ಲಿಸಿದ. ಶಾಸ್ತ್ರಿಗಳು ಅಕ್ಕಿ ಬೆಲ್ಲ ಕಾಯಿ, ಬಾಳೆ ಹಣ್ಣು ಮುಂತಾದುವನ್ನು ದಾನ ದಕ್ಷಿಣೆಯನ್ನು ಚೀಲದೊಳಕ್ಕೆ ತುಂಬಿಟ್ಟುಕೊಂಡರು. ಅಷ್ಟರಲ್ಲಿ ಶಂಕರ, ತಮ್ಮ ಮನೆಯಿಂದ, ಒಂದು ತಾಮ್ರದ ಚೊಂಬನ್ನು ತಂದಿದ್ದ. ಲಕ್ಷ್ಮಿದೇವಮ್ಮ ಅಡಿಗೆ ಮನೆಯಲ್ಲಿದ್ದಳು. ಕಲಶದ ನೀರನ್ನು ತಾಮ್ರದ ಚೊಂಬಿಗೆ ಸುರಿದರು.

"ಈಗ, ನೀನು ಇದನ್ನು ತೆಗೆದ್ಕೊಂಡು ಹೋಗಿ, ಟೀಚರ್ ಮನೆಯ ಹತ್ತಿರ ಇರು... ನಾನು ಶಾಸ್ತ್ರಿಗಳನ್ನು ಅಲ್ಲಿಗೆ ಕರೆದ್ಕೊಂಡು ಬರ್ತೀನಿ... ಅವರ ಮನೆಯ ಬೀಗದ ಕೈ ತಂದಿದೀಯಾ?" ಕೇಳಿದ.

ಹೂಂ... ಎಂದು ಹೇಳಿ ಶಂಕರ ತನ್ನ ನಿಕ್ಕರ್ ಜೇಬನ್ನು ಮುಟ್ಟಿಕೊಂಡು ಚೊಂಬನ್ನು ಎತ್ತಿಕೊಂಡು ಅಲ್ಲಿಂದ ಹೊರ ನಡೆದ. ಚಂದ್ರು ಸೈಕಲನ್ನು ಸಿದ್ಧವಾಗಿಟ್ಟು ಕೊಂಡ. "ಅಮ್ಮಾ ಬರ್ತೀನಮ್ಮಾ..."ಶಾಸ್ತ್ರಿಗಳು ನುಡಿದರು. ಲಕ್ಷ್ಮಿದೇವಮ್ಮ ಹೊರಬಂದಳು ಬೇಗ ಅವಸರದಿಂದ ಚೀಲಗಳನ್ನು ಹಿಡಿದು ಶಾಸ್ತ್ರಿಗಳು ಹೊರಬಂದರು. ಸೈಕಲ್ಲಿನ ಹ್ಯಾಂಡಲ್‌ಗಳಿಗೆ ಚೀಲಗಳನ್ನು ಸಿಕ್ಕಿಸಿ ಚಂದ್ರು ಸೈಕಲನ್ನು ಏರಿದ. ಶಾಸ್ತ್ರಿಗಳು

ಕ್ಯಾರಿಯರ್ ಮೇಲೆ ಕುಳಿತರು.

ಅವರಿಬ್ಬರೂ, ಮತ್ತೊಂದು ಗೇಟ್ ಕಡೆಯಿಂದ ಪಂಕಜ ಟೀಚರ್ ಮನೆಯ ಬಳಿಗೆ ಬಂದರು. ಶಂಕರ ಮುಂಬಾಗಿಲಿಗೆ ಹಾಕಿದ್ದ ಬೀಗವನ್ನು ತೆಗೆದು ನಿಂತಿದ್ದ. ಶಾಸ್ತ್ರಿಗಳು ಅವನ ಕೈಯಲ್ಲಿದ್ದ ತಂಬಿಗೆಯನ್ನು ತೆಗೆದುಕೊಂಡು ಅದರೊಳಗಿದ್ದ ಕಲಶದ ನೀರನ್ನು ಮಂತ್ರವನ್ನು ಹೇಳಿಕೊಂಡು ಮನೆಯ ಒಳಗೆ ಎಲ್ಲಾ ಕೋಣೆಗಳಲ್ಲೂ ಚಿಮುಕಿಸಿದರು. ಮುಂಬಾಗಿಲಿಗೆ ಮಾವಿನ ಸೊಪ್ಪಿನ ಎಲೆಯನ್ನು ಸಿಕ್ಕಿಸಿ ಯಾವ ಕೆಟ್ಟಗಾಳಿಯೂ ಪ್ರವೇಶಿಸುವುದಿಲ್ಲ..." ಎಂದರು.

"ಶಂಕರಾ ಹೋಗು, ಸ್ವಲ್ಪ ಮಾವಿನ ಎಲೆಗಳನ್ನು ಕಿತ್ಕೊಂಡು ಬಾ..."

"ಅತ್ತೆ ನೋಡಿದ್ರೆ?..... ಬೈದರೇ...."

"ನಾನು ಹೇಳ್ದೆ ಅಂತ ಹೇಳು... ಶಾಸ್ತ್ರಿಗಳಿಗೆ ಬೇಕಂತೆ ಅಂತ ಹೇಳು" ಶಂಕರ ಮಾವಿನ ಮರ ಇದ್ದಲ್ಲಿಗೆ ಓಡಿದ್ದ... ಅಷ್ಟರಲ್ಲಿ ಅವರುಗಳು ದಿಬ್ಬದ ಮೇಲಿನ ಮನೆಗೆ ಬಂದಿದ್ದರು.

"ಚಂದ್ರು... ಅದೇನು ಇಷ್ಟು ಗಬ್ಬು ವಾಸನೆ ಹೊಡೀತಿದೆ..." ಮುಂಬಾಗಿಲನ್ನು ತೆರೆಯುತ್ತಿದ್ದಂತೆಯೇ ನುಡಿದರು.

"ಹೊಸ್ದಾಗಿ ಸುಣ್ಣ ಬಣ್ಣ ಮಾಡ್ಸಿದ್ದೆವು.... ಯಾರೋ ಕೂಲಿಯವರು ಸೇರ್ಕೊಂಡು ಗಬ್ಬು ಎಬ್ಸಿದಾರೆ.... ಏನು ಅಡಿಗೆ ಬೇಯಿಸ್ತಿದ್ರೋ...."

"ಬರೀ ಇಷ್ಟು ತೀರ್ಥದ ನೀರು ಸಾಕುಗುಲ್ಲ ಚಂದ್ರೂ... ಮೊದಲು ಮನೇನೆಲ್ಲಾ ಚೆನ್ನಾಗಿ ತೊಳೆಸಿ, ಗುಡಿಸಿ, ಒರೆಸಿ ಶುದ್ಧಿ ಮಾಡಿಸಿ ಪುಣ್ಯಾಹ ಮಾಡಿಸ್ಬೇಕು ಇಲ್ದಿದ್ರೆ ಉಪಯೋಗವಿಲ್ಲ..."

"ಸುಮ್ಸುಮ್ನೆ ಹೇಗೆ ಮಾಡಿಸೋದು ಶಾಸ್ತ್ರಿಗಳೇ... ಬಾಡಿಗೆಗೆ ಯಾರಾದ್ರೂ ಸಿಕ್ಕಿದ್ರೆ ಮಾಡಿಸಿ ಕೊಡಬಹುದು...."

"ನಾನು ನಿಮ್ಮ ತಂದೆಯ ಹತ್ರ ಮಾತಾಡ್ತೀನಿ."

"ಬೇಡ ಬೇಡ. ಅಮ್ಮನಿಗೆ, ಮನೆ ಇಷ್ಟು ಕೊಳಕಾಗಿದೆ ಅಂತ ತಿಳಿದಿಲ್ಲ... ಹೇಳಿದ್ರೆ ಅದೇ ದೊಡ್ಡ ರಂಪವಾಗುತ್ತೆ.... ಸಧ್ಯಕ್ಕೆ ಇಷ್ಟು ಮಾಡಿಸಿರೋಣ.... ಮನೆಗೆ ಬಾಡಿಗೆಯವರು ಗೊತ್ತಾದರೆ, ಅವರೇ ಮಾಡಿಸ್ಕೊಳ್ತಾರೆ ಬಿಡಿ...."

"ಸರೀಪ್ಪಾ... ನಿಮ್ಮಿಷ್ಟ...." ಎನ್ನುತ್ತಾ ಮಂತ್ರೋಚ್ಚಾರಣೆಯನ್ನು ಪ್ರಾರಂಭ ಮಾಡಿದರು... ಅಷ್ಟರಲ್ಲಿ ಶಂಕರ ಮಾವಿನ ಸೊಪ್ಪನ್ನು ಕೊಯ್ದು ತಂದಿದ್ದ.

"ಯಾರೂ ನೋಡ್ಲಿಲ್ಲವೇನೋ...." ಎನ್ನುತ್ತಾ ಚಂದ್ರು ಮುಂಬಾಗಿಲಿಗೆ ಮಾವಿನ ಸೊಪ್ಪನ್ನು ಸಿಕ್ಕಿಸಿದ. ಶಾಸ್ತ್ರಿಗಳು ಮುಖ ಸಿಂಡರಿಸಿಕೊಂಡು ಒಳಗಿನ ಕೋಣೆಗಳಿಗೆ ನೀರನ್ನು ಪ್ರೋಕ್ಷಣೆ ಮಾಡಿದರು ಚಂದ್ರು ಅವರಿಗೆ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿದ.

ಶಂಕರನೂ ನಮಸ್ಕರಿಸಿದ. ಶಾಸ್ತ್ರಿಗಳು ಸಂತುಷ್ಟರಾದರು.

ಶಾಸ್ತ್ರಿಗಳು ಅತ್ತ ಹೊದ ಮೇಲೆ, ಚಂದ್ರು, ಶಂಕರನ ಕೈಗೆ ಒಂದು ರುಪಾಯಿ ಕೊಟ್ಟ. ಮಂಡಕ್ಕಿಪುರಿ, ಕಡಲೆ ತಗೊಂಡು, ನೀನೂ ತಿನ್ನು, ನಿನ್ನ ತಮ್ಮ ತಂಗಿಯರಿಗೂ ಕೊಡು" ಎಂದ. ಶಂಕರು ತಲೆಯಾಡಿಸಿ, ನೋಟನ್ನು ತನ್ನ ನಿಕ್ಕರು ಜೇಬಿನೊಳಕ್ಕೆ ಇಳಿಬಿಟ್ಟ. ಮುಂಬಾಗಿಲಿಗೆ ಬೀಗ ಹಾಕಿದರು. ಚಂದ್ರು ಪಂಕಜಳ ಮನೆಯ ಮುಂಬಾಗಿಲಿಗೆ ಮಾವಿನ ಸೊಪ್ಪನ್ನು ಸಿಕ್ಕಿಸಿದ. ಇಬ್ಬರೂ ತಮ್ಮ ತಮ್ಮ ಮನೆಗೆ ಹಿಂದಿರುಗಿದರು.

೦ ೦ ೦

"ಹೇಳ್ದೇ ಕೇಳ್ದೇ ಎಲ್ಲಿಗೋ ಹೊರಟು ಹೋಗ್ತೀಯ?. ಹೋಗು ರಾಮರಾಯರ ಮನೆ ಮಂಗಳನ್ನ ಸ್ವಲ್ಪ ಕರೆದ್ಬಾ.... ಹಾಗೇ ಚಿಕ್ಕದನ್ನ ಕರ್ಕೊಂಡು ಬರ್ಬೇಕಂತೆ ಅಂತ ಹೇಳು...." ಲಕ್ಷ್ಮಿದೇವಮ್ಮ ಚಂದ್ರುವನ್ನು ಕಂಡೊಡನೆ ಹೇಳಿದಳು. ಅವನು ಮುಖ ಸಿಂಡರಿಸಿದ.

"ಆಗ್ಲೇ ಹೇಳ್ಬಾರ್ದಾಗಿತ್ತಾ? ಶಂಕರೂನೂ ಇಲ್ಲೇ ಇದ್ದ... ಅವನಿಗೇ ಹೇಳ ಬಹುದಾಗಿತ್ತಲ್ಲ."

"ಆಗ ತುಳಸೀಪೂಜೆಗೆ ಏನೂ ಸಿದ್ಧ ಮಾಡ್ಕೊಂಡಿರ್ಲಿಲ್ಲ... ಎಷ್ಟು ದಿನಗಳಾದ್ವು... ತುಳಸಿಗೆ ಒಂದು ಚೊಂಬು ನೀರೂ ಸಹ ಹಾಕಿಲ್ಲ... ಇಷ್ಟು ಸಣ್ಣ ಕೆಲಸ ಕೂಡಾ ನಿನ್ನಿಂದ ಆಗುಲ್ವಾ? ಅವರು ಇದ್ದಿದ್ರೆ ನಿಂಗೆ ಹೇಳ್ತಿದ್ನಾ?...."

"ಸರಿ ಕರೆದು ಬರ್ತೀನಿ" ಎನ್ನುತ್ತಾ ಮತ್ತೆ ಆಚೆ ನಡೆದ. ವಾಪಸ್ಸು ಬರುವಾಗ ತನ್ನೊಡನೆ ಬಾಲುವನ್ನು ಕರೆತಂದಿದ್ದ. ಲಕ್ಷ್ಮಿದೇವಮ್ಮ ಒಳಬಾಗಿಲಲ್ಲಿ ನಿಂತು ನೋಡಿದಳು ಚಂದ್ರು ಅವನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು, ಏನೋ ಮಾತಾಡುತ್ತಿದ್ದ. ಒಂದು ಗಳಿಗೆ ಮನಸ್ಸು ಹೊಯ್ದಾಡಿತು... ಮರುಗಳಿಗೆಯೇ ಗಟ್ಟಿಯಾಯಿತು...

"ಮಂಗಳಾ ಬರ್ಲಿಲ್ವಾ?....."

"ಅವರು ಬರುವ ಹಾಗಿಲ್ಲವಂತೆ...." ಅವನು ಕತ್ತೆತ್ತದೇ ನುಡಿದ.

"ಯಾರೂ ಇರ್ಲಿಲ್ಲ. ಇವನನ್ನು ನಾನೇ ಕರ್ಕೊಂಡ್ಬಂದೆ...." ಲಕ್ಷ್ಮಿದೇವಮ್ಮ ಮತ್ತೇನನ್ನೂ ಹೇಳದೇ ತುಳಸೀ ಪೂಜೆಗೆ ಸಿದ್ಧ ಮಾಡಿಕೊಂಡಳು.

"ಇವನನ್ನು ತುಳಸೀ ಕಟ್ಟೆಯ ಹತ್ತಿರಕ್ಕೆ ಕರ್ಕೊಂಡು ಬಾ... ದೂರದಲ್ಲೇ ನಿಲ್ಲಿಸ್ಕೋ.... ಓಡಿ ಬಂದು ಮುಟ್ಟಿ ಬಿಟ್ಟಾನು" ಎನ್ನುತ್ತಾ ಬೆಳ್ಳಿಯ ಅರಿಶಿನ ಕುಂಕುಮದ ತಟ್ಟೆಯನ್ನು, ಪೂಜೆಯ ಸಲಕರಣೆಗಳನ್ನು ಹಿಡಿದು ಹೊರಕ್ಕೆ ಬಂದಳು. ಚಂದ್ರು ಬಾಲುವನ್ನು ಎತ್ತಿಕೊಂಡು ಅವರ ಹಿಂದೆ ಬಂದ. ಲಕ್ಷ್ಮಿದೇವಮ್ಮ

ಅಚ್ಚುಕಟ್ಟಾಗಿ ತುಳಸೀ ಪೂಜೆಯನ್ನು ಮಾಡಿ, ನೈವೇದ್ಯದ ಹಾಲನ್ನು ಬಾಲುವಿಗೆ ಕುಡಿಸಿ, ದ್ರಾಕ್ಷಿಯನ್ನು ಕೈಗಿತ್ತಳು. ಚಂದ್ರು ನಿಬ್ಬೆರಗಾಗಿ ಆಕೆಯನ್ನೇ ದಿಟ್ಟಿಸಿದ.

ಅರಿಶಿನ ಹಚ್ಚಿದ ನುಣುಪಾದ ಕೆನ್ನೆಗಳು, ಹಣೆಗೆ ಇರಿಸಿದ್ದ ಕಾಸಿನಗಲದ ಕೆಂಪನೆಯ ಕುಂಕುಮ. ಅರೆ ಒದ್ದೆಯಾಗಿದ್ದ ತಲೆಗೂದಲನ್ನು ಅಳ್ಳಕವಾಗಿ ಕಟ್ಟಿ, ಮುಡಿಗೆ ಸಿಕ್ಕಿಸಿದ್ದ ಹೂವು... ಉಟ್ಟಿದ್ದ ಮಡಿಯ ರೇಶಿಮೆಯ ಸೀರೆ, ಅದಕ್ಕೆ ಒಪ್ಪದ ರೇಶಿಮೆ ರವಿಕೆ... ಕೈಯಲ್ಲಿ ಝುಣ ಗುಟ್ಟುವ ಗಾಜಿನ ಬಳೆಗಳು, ಕಾಲುಂಗುರ, ಎಲ್ಲವನ್ನೂ ಮೊದಲ ಬಾರಿಗೆ ಎಂಬಂತೆ ಗಮನಿಸಿದ. ಆಕೆಯ ಬಗ್ಗೆ ಗೌರವ ಉಕ್ಕಿತು.... ಹೃದಯ ಅರಳಿತ್ತು... ತಾನೇಕೆ ಈಕೆಯನ್ನು ಆದರಿಸುವುದಿಲ್ಲ...? ನೋಡಿದರೆ, ಭಕ್ತಿ ಭಾವ ಉಕ್ಕುವಂಥ ವರ್ಚಸ್ಸು? ಆದರೆ ಹೃದಯ ಉಕ್ಕಿನಂತೆ... ತಕ್ಷಣವೇ ಅವನ ಮನವೂ ಹೆಪ್ಪುಗಟ್ಟಿತು...

"ಹಿಡೀ.... ಹಿಡೀ...." ಆಕೆಯ ಧ್ವನಿ ಅವನನ್ನು ಎಚ್ಚರಿಸಿತು. ಆಕೆ ಉದ್ಧರಣೆಯಿಂದ ತೀರ್ಥವನ್ನು ಹಾಕಿದಳು... ತಟ್ಟೆಯಲ್ಲಿದ್ದ ಒಂದು ಬಾಳೆಹಣ್ಣನ್ನು ಅವನ ಕೈಗೆ ಮೇಲಿನಿಂದ ಹಾಕಿದಳು" ಹೋಗು.... ಇವನನ್ನು ಮನೆಗೆ ಬಿಟ್ಟು ಬಾ.... ಒಳಗೆ ಬೇಕಾದಷ್ಟು ಕೆಲಸ ಇದೆ....

"ಇವನಿಗೊಂದು ಬಾಳೆ ಹಣ್ಣಿದ್ರೆ ಕೊಡಿ...." ಬಾಲುವನ್ನು ಎತ್ತಿಕೊಂಡ...

"ತಟ್ಟೇಲಿ ಇದ್ದದ್ದೇ ಒಂದು... ಇದನ್ನು ಅವನಿಗೆ ಕೊಡು.... ಹೇಗೂ ದ್ರಾಕ್ಷೀನ ಕೊಟ್ಟಿದ್ನಲ್ಲ ಅಂತ ಅಂದ್ಕೊಂಡೆ.... ಒಳಗೆ ಇನ್ನೊಂದು ಇದ್ದರೆ ಕೊಡ್ತೀನಿ... ಆ ಶಾಸ್ತ್ರಿ ಏನನ್ನಾದ್ರೂ ಬಿಟ್ನೋ ಎಲ್ಲಾದನ್ನೂ ತಗೊಂಡು ಹೋದ್ನೋ...." ಚಂದ್ರು ಉತ್ತರಿಸಲಿಲ್ಲ. ಅವನು ಆಕೆಗೆ ಬೆನ್ನು ಮಾಡಿ ನಡೆದಿದ್ದ. ಬಾಳೆ ಹಣ್ಣನ್ನು ಬಿಡಿಸಿ, ತಾನೊಂದು ಚೂರನ್ನು ತಿಂದು, ಉಳಿದುದನ್ನು ಬಾಲುಗೆ ತಿನ್ನಿಸಿದ.... ಅವನನ್ನು ಅವರ ಮನೆಗೆ ತಲುಪಿಸಿದ. ಅಲ್ಲಿಯೇ ಜಗುಲಿಯ ಮೇಲೆ ಕುಳಿತು ಮಂಗಳಳೊಡನೆ ಮಾತನಾಡುವ ಮನಸ್ಸಾಗಿತ್ತು. ಆದರೆ ಅವಳು ಆಚೆಗೆ ಬಂದಿರಲಿಲ್ಲ. ಹೊರಬಂದ ಶಂಕರನೊಡನೆ ಮಾತನಾಡುವ ಇಚ್ಛೆ ಆಗಲಿಲ್ಲ. ಮನೆಗೆ ಬೇಗ ವಾಪಸ್ಸು ಬರದಿದ್ದರೆ, ಆಕೆ ಪ್ರಶ್ನಿಸದೇ ಬಿಡುವವಳಲ್ಲ ಎಂದುಕೊಂಡು ಭಾರವಾದ ಹೆಜ್ಜೆಗಳನ್ನಿಡುತ್ತಾ ತನ್ನ ಮನೆಗೆ ಬಂದು... ಆಕೆಗೆ ಕಾಣುವಂತೆ ನಿಂತ. ಕುಟ್ಟಾಣೆಯನ್ನು ಅವನ ಮುಂದೆ ತಳ್ಳಿದಳು..."ಎರಡು ಯಾಲಕ್ಕಿ ಇದೆ. ಕುಟ್ಟಿಕೊಡು. ಸಿಪ್ಪೇನ ಬಿಸಾಕ್ಬೇಡ.... ಗೋಡಂಬೀನ ಸಣ್ಣಗೆ ಕತ್ತರಿಸಿಡು... ದ್ರಾಕ್ಷಿ ತೊಟ್ಟು ಇದ್ದರೆ ತೆಗೆದು ಹಾಕು... ಒಂದೊಂದಾಗಿ ಕೆಲಸವನ್ನು ಹೇಳಿದಳು...

ಈ ಕೆಲಸಗಳನ್ನು ಇವನೆಂದೂ ಮಾಡಿದವನಲ್ಲ. ಅಪ್ಪ ಮಾಡುತ್ತಿದ್ದರೇನೋ... ಈ ಕೆಲಸಕ್ಕೆಂದೇ ಮಂಗಳನ್ನ ಬರಹೇಳಿರಬಹುದು... ಅವಳು ಬರಲಿಲ್ಲ. ಅಂತೂ

ಇವತ್ತು ನನ್ನಿಂದ ಈ ಮಾತೃಸೇವೆ... ಎಂದು ಮನದಲ್ಲೇ ನಗುತ್ತಾ ಚಕ್ಕಲ ಮಕ್ಕಲ ಹಾಕಿ ನೆಲದ ಮೇಲೆ ಕುಳಿತು ಯಾಲಕ್ಕಿಯನ್ನು ಕೈಗೆತ್ತಿಕೊಂಡ... ಬಹುಶಃ ರವೆ ಪಾಯಸ ಮಾಡುತ್ತಿರಬಹುದು... ಮನೆಯೊಳಗೆ ಘಂ ಎನ್ನುವ ವಾಸನೆ ತುಂಬಿಕೊಂಡಿದೆ ಎಂದುಕಂಡು ಯಾಲಕ್ಕಿಯನ್ನು ಕುಟ್ಟತೊಡಗಿದ.

"ನಿಧಾನವಾಗಿ ಕುಟ್ಟು... ಹಾರುತ್ತೆ...." ಆಕೆ ನುಡಿದಾಗ ಬೆಚ್ಚಿದ... "ಎಲ್ಲಿದೆ ನಿನ್ನ ಧ್ಯಾನ?.... ಕೆಲಸದ್ದೇನಾಯ್ತು? ಇಂಟರ್‌ವ್ಯೂದು ಏನಾಯ್ತು?"...

"ಏನೋ ಗೊತ್ತಿಲ್ಲ.... ಹೋಗಿ ನೋಡ್ಬೇಕು..."

"ಊಟ ಆದ್ಮೇಲೆ ಹೋಗಿ ನೋಡ್ಕೊಂಡ್ಬಾ.... ಸ್ವಲ್ಪ ಕೈ ಬೇಗ ಓಡಿಸು... ಎಷ್ಟು ನಿಧಾನ ಮಾಡ್ತೀಯ.... ಇತ್ಲಾಗೆ ತತ್ತಾ ನಾನೇ ಮಾಡ್ಕೊತೀನಿ..."

"ಪರವಾಗಿಲ್ಲ. ನಾನೇ ಮಾಡ್ತೀನಿ..." ಎನ್ನುತ್ತಾ ಗೋಡಂಬಿಯನ್ನು ಸಣ್ಣ ಚೂರುಗಳನ್ನಾಗಿ ಮುರಿದು, ದ್ರಾಕ್ಷಿಯನ್ನು ಶೋಧಿಸಿಟ್ಟ. ಆಕೆ ಎಲ್ಲವನ್ನು ಒಳಕ್ಕೆ ಎತ್ತಿಕೊಂಡು ಹೋಗಿದ್ದಳು ಅಷ್ಟರಲ್ಲಿ ಹೊರಗೆ ಯಾರೋ ಕರೆದಂತಾಗಿತ್ತು. ಎದ್ದು ಬಂದ... ಬಾಗಿಲಲ್ಲಿ ನಿಂತಿದ್ದ ವ್ಯಕ್ತಿ ಇವನನ್ನು ಕಂಡು ಕೈ ಜೋಡಿಸಿತು.

"ಬಾಡಿಗೆಗೆ ಮನೆ ಖಾಲಿ ಇದೆ ಅಂತ ತಿಳೀತು. ನೋಡೋಣ ಅಂತ ಬಂದೆ.... ಮನೇನ ನೋಡಬಹುದೋ?.... ವಿಚಾರಿಸಿದ.

"ಒಂದ್ನಿಮಿಷ ಈಗ್ಬಂದೆ" ಎಂದ ಹೇಳಿ ಅಡಿಗೆ ಮನೆಯ ಬಾಗಿಲಿಗೆ ಬಂದು ನಿಂತ.... "ಬಾಡಿಗೆಗೆ ಕೇಳ್ಕೊಂಡು ಯಾರೋ ಬಂದಿದ್ದಾರೆ..." ಆಕೆಗೆ ಕೇಳಿಸುವಂತೆ ಹೇಳಿದ ಆಕೆ ತಿರುಗಿದಳು.

"ನಾಲ್ಕು ದಿನ ಬಿಟ್ಟು ಬನ್ನಿ ಅಂತ ಹೇಳು.... ಈಗೇನು ತೋರ್ಸೋದು ?".... ವಿಧೇಯನಂತೆ, ಅದನ್ನೇ ಬಂದು ಉಸುರಿದ.

"ಯಾಕೆ ? ಏನು ತೊಂದರೆ?..... ಇನ್ನೂ ಖಾಲಿಯಾಗಿಲ್ವಾ? ನಮಗೆ ಅರ್ಜೆಂಟಾಗಿ ಮನೆ ಬೇಕಾಗಿತ್ತು..."

"ಅದೆಲ್ಲಾ ನಂಗೆ ಗೊತ್ತಿಲ್ಲ... ನಾನು ಮನೆ ಮಾಲೀಕನಲ್ಲ... ಅವರು ಹೇಳಿದ್ದನ್ನು ನಿಮಗೆ ಹೇಳಿದ್ದೀನಿ.... ಮತ್ತೆ ಬರೋದಾದ್ರೆ ಬನ್ನಿ" ಅವನು ಎತ್ತರದ ಧ್ವನಿಯಲ್ಲಿ ಹೇಳಿದ್ದು, ಒಳ ಮನೆಯಲ್ಲಿ ನಿಂತಿದ್ದ ಲಕ್ಷ್ಮೀದೇವಮ್ಮನಿಗೆ ಕೇಳಿಸಿತ್ತು. ಮುಖ ಕೆಂಪಾಗಿತ್ತು... ಅವನು ಒಳಕ್ಕೆ ಬರೋದನ್ನೇ ಕಾದಿದ್ದಳು.

"ಹೀಗಾ ಮಾತಾಡೋದು.... ನಯ ವಿನಯ ಒಂದೂ ಗೊತ್ತಿಲ್ಲವಲ್ಲ... ಒರಟು ಜನ ಅಂತ ಅಂದ್ಕೊಳುಲ್ವಾ?"

"ನನ್ನನ್ನ ತಾನೇ ಅಂದ್ಕೊತಾರೆ.... ನೀವೇ ಬಂದು ಹೇಳ್ಬೇಕಾಗಿತ್ತು...."

"ನಾನು ಮಡೀಲಿದ್ದೆ... ಇಲ್ದಿದ್ರೆ ನಾನೇ ಆಡ್ತಿದ್ದೆ... ನಿಮ್ಮಪ್ಪನೋ ಅಲ್ಲಿ ಹೋಗಿ

ಕೂತಿದಾರೆ.... ಅಡಿಗೆ ಆಗಿದೆ. ಎಲೆ ಹಾಕ್ಕೋ.... ನಿನಗೆ ಬಡಿಸಿ, ನಾನೂ ಊಟ ಮಾಡ್ತೀನಿ".... ಎಂದು ಹೇಳಿದಳು. ಅವನು ಎಲೆಯನ್ನು ಹಾಕಿಕೊಂಡು, ನೀರಿನ ಲೋಟವನ್ನಿಟ್ಟುಕೊಂಡು ಕುಳಿತ. ಆಕೆ ಮಾತಿಲ್ಲದೇ ಬಡಿಸಿದಳು. ಇವನು ಮೌನವಾಗಿ ಉಂಡ. ಎಲೆ ತೆಗೆದು ಗೋಮೆ ಹಚ್ಚುವವರೆಗೂ ಕಾದಿದ್ದು, ಆಕೆ ಊಟಕ್ಕೆ ಕುಳಿತಳು.

"ಅಮ್ಮಾ ಅವರು ಕಾಗ್ದ ಬರ್ದಿದ್ದಾರೆ..." ಅರೆ ಬೇಸರ, ಅರೆ ನಾಚಿಕೆಯಿಂದ ಮಂಗಳ ನುಡಿದಳು.

'ಏನಂತೆ?.... ಮದ್ವೆ ವಿಷಯ ತಾನೇ.... ಏನು ಅವಸರವೋ ? ನಮ್ಮ ಪರಿಸ್ಥಿತಿ ಯಾಕೆ ಅರ್ಥವಾಗುಲ್ಲ ಅಂತೀನಿ?"....

"ಅವರಿಗೆ ಊಟಕ್ಕೆ ತೊಂದರೆ ಆಗ್ತಿದೆಯಂತೆ.... ಹೋಟೆಲ್ಲಿನ ಊಟ ಬೇಸರ ಆಗಿದೆಯಂತೆ..."

"ಅದಕ್ಕೇ.. ನಿನ್ನನ್ನ ಕಳಿಸಿ ಬಿಡ್ಬೇಕಂತಾ?.. ಇಲ್ಲಿ ನಮ್ಮ ಕಷ್ಟಾನ ಕೇಳೋರು ಯಾರು? ಇದುವರೆಗೂ ಹೋಟೆಲ್ಲಿನ ಊಟವೇ ತಾನೇ ಮಾಡ್ತಿದ್ದದ್ದು! ಇನ್ನೊಂದೆರಡು ತಿಂಗಳು ಮಾಡ್ಕೊಳ್ಳಲಿ... ಹಾಗಂತ ಬರಿ... ಇವರ ಅವಸರಕ್ಕೆ ಕುಣೆಯುಕ್ಕೆ ಆಗುಲ್ಲ..."

"ನಾನು ಬರೆಯುಲ್ಲ, ಅಣ್ಣಂಗೆ ಹೇಳು..."

"ನೀನು ಬರೆದ್ರೆ ಒಪ್ಕೋತಾರೆ ಕಣೇ... ರಜ ಇದ್ದರೆ, ಎರಡು ದಿನಕ್ಕೆ ಬಂದು ಹೋಗಿ ಅಂತ ಬರೀ.... ನಿನ್ನ ಕೈಯ ಅಡಿಗೇನ ಊಟ ಮಾಡ್ಲೀ... ಸಿನಿಮಾ ಗಿನಿಮಾ ಅಂತ ಹೋಗ್ಬನ್ನಿ..."

"ಅದೆಲ್ಲಾ ಏನೂ ಬೇಡ... ಇಲ್ಲಿ ಅವರಿಗೆ ಜಾಗ ಎಲ್ಲಿದೆ ?| ಮನೆ ತುಂಬಾ ಜನ ; ಚಿಕ್ಕ ಮನೆ ನಕ್ಕೋತಾರೆ ಅಷ್ಟೇ.... ನಮ್ಮ ಮನೆಯ ಈ ಸ್ಥಿತೀನ ನೋಡುಕ್ಕೆ ಅವರ್‍ಯಾರೂ ಬರೋದು ಬೇಡ..."

"ಅಳಿಯ ಆದ್ಮೇಲೆ ಬಂದೂ ಹೋಗಿ ಮಾಡುಲ್ವೇನೆ? ಈಗ ಬಂದರೆ ಏನಾಯ್ತು?...."

"ಅಷ್ಟು ಹೊತ್ತಿಗೆ ಬೇರೆ ಮನೆ ಮಾಡಿ ಅಂತ ಅಣ್ಣಂಗೆ ಹೇಳು..."

"ದೊಡ್ಡ ಮನೆಗೆ ಜಾಸ್ತಿ ಬಾಡಿಗೆ ಕೊಡುಕ್ಕೆ ನಿಮ್ಮಣ್ಣನ ಹತ್ರ ದುಡ್ಡೆಲ್ಲಿದೆ? ಇನ್ನೂ ಎಷ್ಟು ಖರ್ಚು ಇದೆ...."

"ನಾನೂ ಕೆಲಸಕ್ಕೆ ಸೇರ್ಕೊಳ್ತೀನಿ... ಪಂಕಜ ಟೀಚರ್‌ಗೆ ಹೇಳಿದ್ರೆ ಅವರ ಸ್ಕೂಲ್ನಲ್ಲಿ ಕೆಲ್ಸ ಕೊಡಿಸ್ತಾರೆ."

"ಏನೂ ಬೇಡ. ಆಕೆಗಂತೂ ವಿಧಿ ಇಲ್ಲ. ಗಂಡ ಇಲ್ಲ. ಸಂಸಾರ ಇಲ್ಲ, ಕೆಲವೇ ತಿಂಗಳಿಗೋಸ್ಕರ, ನೀನು ದುಡಿದು ಸಂಪಾದಿಸೋದು ಏನೂ ಬೇಡ. ಅವರುಗಳಿಗೆ ತಿಳಿದ್ರೆ ಏನಂದ್ಕೋಳ್ತಾರೆ ?

"ಎಲ್ಲಾದಕ್ಕೂ ಅಂದ್ಕೋಳ್ತಾರೆ ಅಂತ ಯಾಕೆ ಹೆದರ್ಬೇಕು ?... ನಮ್ಮನೆ ಸ್ಥಿತಿ ಸುಧಾರಿಸುತ್ತೆ...

"ಏನೂ ಬೇಡ ತಾಯೀ... ಹೆಣ್ಣು ಮಕ್ಕಳ ಕೈಲಿ ದುಡಿಸಿ, ಸಂಪಾದಿಸಿ ತಿಂದರು ಅನ್ನೋ ಅಪಖ್ಯಾತಿ ನಮಗೆ ಬೇಡ... ಗಂಡನ ಮನೆಗೆ ಹೋಗೋವರೆಗೂ ತೆಪ್ಪಗಿರು... ಆಮೇಲೆ ಅಲ್ಲಿ ನಿನ್ನದೇ ರಾಜ್ಯ..."ಮಂಗಳ ಉತ್ತರಿಸದೇ ಹೊರಬಂದು ಜಗುಲಿಯ ಮೇಲೆ ನಿಂತಳು. ನೋಟ ಎದುರು ಮನೆಯತ್ತ ಹರಿಯಿತು. ಮುಂಬಾಗಿಲಿನಲ್ಲಿ ದತ್ತ ನಿಂತಿದ್ದ... ಅಚ್ಚರಿ ಎನಿಸಿತು... ತಿಂಗಳ ಕೆಳಗೆ ಮದುವೆಗೆ ಬಂದವನು ವಾಪಸ್ಸು ಹೋಗಿದ್ದ ಮತ್ತೆ ಬಂದಿದಾನೆ? ಯಾಕಿರಬಹುದು? ಯಾರಿಗಾದರೂ ಏನಾದರೂ ಅನಾರೋಗ್ಯವಿರಬಹುದೆ? .... ಸೀತಳನ್ನೂ ಕೇಳಿದರೆ ತಿಳಿಯುತ್ತದೆಂದುಕೊಂಡಳು. ಅವನು ಇವಳ ಕಡೆ ನೋಡದೇ, ಹಾಗೆಯೇ ಹೊರಟು ಹೋಗಿದ್ದ. ಇವಳಿಗೆ ಮತ್ತೂ ಅಚ್ಚರಿಯೆನಿಸಿತ್ತು.... ಮುಖ ಪೆಚ್ಚಾಗಿತ್ತು ಆದರೂ ಕುತೂಹಲ ಅಡಗಲಿಲ್ಲ.

ಸೀತಾ ಕಾಣುವುದನ್ನೇ ಕಾದಿದ್ದು, ಕರೆದಳು..."ಏನಕ್ಕಾ ಏನಾದ್ರೂ ಬೇಕಾಗಿತ್ತೇನು?"

"ಸುಮ್ನೇ ಕರ್ದೆ, ಯಾರೋ ನೆಂಟರು ಬಂದ್ಹಾಗಿದೆ..."

"ಯಾರಿಲ್ರೀ.... ಅಣ್ಣ ಬಂದಾನ..."

"ಅತ್ತಿಗೇನೂ ಬಂದಿದಾರೇನು?" ಅನುಮಾನದಿಂದ ಕೇಳಿದಳು.

"ಇಲ್ರೀ.. ಇವಗಿನ್ನೂ ಲಗ್ನ ಆಗಿಲ್ಲರ್ರೀ.. ಹುಡ್ಗೀನ ನೋಡೋಕೆ ಬಂದಾನ್ರೀ.."

"ಯಾವ ಅಣ್ಣನ ಬಗ್ಗೆ ಹೇಳ್ತಿದೀಯ ?.... ದೊಡ್ಡಣ್ಣ ಅಲ್ವಾ?"

ಸೀತ ನಕ್ಕಳು. "ಅಲ್ರೀ ಇವ ಎರಡನೇಯವನು. ದತ್ತಣ್ಣನ ಹಂಗೇ ಕಾಣ್ತಾನ್ರೀ..."

"ಓ.... ನಾನು ಅವರೇ ಅಂತ ಅಂದ್ಕೊಂಡೆ..."

"ಅವ ಈಗ ಭಾಳ ಬೇಸಕರದಲ್ಲಿದ್ದಾನ್ರೀ.... ವೈನಿಗೆ ಸಖತ್ ಖಾಯಿಲಿ ಆಗದ.... ಆಕಿ ಆಸ್ಪತ್ರೇಲಿದಾಳ..." ಕೆಟ್ಟ ಮುಖ ಮಾಡಿದಳು.

"ಓ... ಹೌದಾ?..... ಯಾವಾಗ ಸೇರಿಸಿದ್ರು? ಅಂಥಾದ್ದೇನಾಯ್ತು?.... ಹೆರಿಗೆಗೆ ಸೇರಿಸಿದಾರೇನು ?....

"ಇಲ್ರೀ... ಹೆರಿಗಿ ಅಲ್ರೀ.. ಏನಾಗದೆಯೋ ಸರ್ಯಾಗಿ ತಿಳಿದಿಲ್ರೀ... ಅವ್ವಗ ಕೇಳಿದ್ರೆ ಬೈತಾಳ್ರೀ ಹೇಳೂದಿಲ್ಲ... ವೈನಿ ಆರೋಗ್ಯ ಶಾನೀ ಕೆಟ್ಟಿತಂತ್ರಿ.. ವಾಸಿಯಾಗೋದು ತಡ ಆಗತೈತಂತ್ರೀ... ದಿನಾ ಸೂಜಿ ಚುಚ್ಚಬೇಕಂತ್ರೀ.... ಆಕಿ ಮೈಯಾಗ ರಕ್ತವೇ ಇಲ್ರೀ.. ಅದ್ಹೆಂಗೆ ತಡಕೊಂಡಾಳೋ.... ನಮಗೆಲ್ಲಾ ಭಯ ಆಗತೈತ್ರೀ.... ಆಕಿ ಏನಾದ್ರೂ ತೀರಿ ಹೋದ್ರು... ಅಣ್ಣನ ಗತಿ ಏನ್ರೀ...?"

"ಥೂ ಬಿಡ್ತು ಅನ್ನು... ಹಾಗ್ಯಾಕೆ ಹೇಳ್ತೀಯ ಅತ್ತಿಗೆ ವಾಸಿಯಾಗ್ತಾರೆ..."

"ಇಲ್ರೀ ಡಾಕ್ಟರು ಹೇಳ್ಯಾರಂತ.... ಭಾಳ ಕಷ್ಟ ಅದ ಅಂತ... ಆಕಿಗೆ ಟಿ.ಬಿ. ಆಗದಂತ.... ಹಂಗಂದ್ರೆ ಏನ್ರೀ...."

ಮಂಗಳನ ಮುಖ ಬೆಳ್ಳಗಾಯಿತು. ಟಿ.ಬಿ. ಒಂದು ಕೆಟ್ಟ ಖಾಯಿಲೆ ಅಂತ ಗೊತ್ತಿತ್ತು... ವಾಸಿಯಾಗೋದು ಕಷ್ಟ ಅಂತ ಅವರಿವರು ಹೇಳಿದ್ದು ಗೊತ್ತಿತ್ತು... ಆದರೆ ಅದನ್ನು ಈ ಹುಡುಗಿಗೆ ತಿಳಿಸುವುದು ಹೇಗೆ ?ಅತ್ತಿಗೆಯ ಮೇಲಿನ ಪ್ರೀತಿಯಿಂದ ಅತ್ತು ರಂಪ ಮಾಡಿದರೆ...

"ಯಾಕ್ರೀ... ಅಕ್ಕಾ... ನೀವೂ ಸುಮ್ಮನಾಗಿ ಬಿಟ್ರೀ.... ವೈನಿಗೆ ಏನೂ ಆಗೂದಿಲ್ಲ ಅಲ್ಲೇನ್ರೀ.... ವೈನಿಗೆ ಮಕ್ಕಳಾಗಿಲ್ಲ ಅಂತ ಈ ಕಕ್ಕೀ ಸದಾ ಏನಾದ್ರೂ ಅಂತಿದ್ಲು.... ದತ್ತಗೂ ಬೇಸರವಾಗ್ತಿತ್ತು... ಅಣ್ಣಾಗ ಸುಖ ಇಲ್ರೀ... ಅವನೂ ಸನ್ಯಾಸಿಯಾಗಿ ಹೊಂಟೋದ್ರೇ ಏನ್ಗತಿ ಅಂತ ಅವ್ವ ಅಳ್ತಿದ್ಲು....

"ಅಂದರೇ..... ಸನ್ಯಾಸೀನಾ? ಏನ್ಹೇಳ್ತೀಯಾ?"

"ಹೂಂ ನ್ರೀ ಅಕ್ಕಾ ನನ್ನ ಮೂರನೇ ಅಣ್ಣ, ಶಾಲಿಗೆ ಹೋಗೋದನ್ನ ಬಿಟ್ಟು, ಮನೀಲಿದ್ದ ರೊಕ್ಕ ಎತ್ಕೊಂಡು ಪರಾರಿಯಾದ... ಯಾವುದೋ ಆಶ್ರಮದಲ್ಲಿ ಸನ್ಯಾಸಿಯಾಗಿದಾನಂತೆ... ಅವ್ವ ಹೇಳ್ಕೊಂಡು ಅಳ್ತಿದ್ಲು... ದತ್ತನೂ ಸನ್ಯಾಸಿ ಆಗಿಬಿಟ್ರೆ ಅವ್ವಗೆ ತಡಕೊಳ್ಳೂಕೂ ಆಗೂದಿಲ್ಲ..." ಅಳು ಮುಖ ಮಾಡಿದ್ದಳು.

"ಛೇ.... ಏನೇನೋ ಮಾತಾಡ್ಬೇಡ ಸೀತಾ... ಹಾಗೆಲ್ಲಾ ಏನೂ ಆಗುಲ್ಲ... ನೀನೀಗ ಮನೆಗೆ ಹೋಗು. ನನ್ಹತ್ರ ಇದನ್ನೆಲ್ಲ ಹೇಳ್ದೆ ಅಂತ ಯಾರ್ಗೂ ಹೇಳ್ಬೇಡ. ಆಮೇಲೆ ಬಿಡುವಾಗಿದ್ರೆ ಬಾ.... ಚೌಕಾಬಾರ ಆಟ ಆಡೋಣ..."

"ಹೂಂ.... ನ್ರೀ ಅಕ್ಕಾ...."ಎನ್ನುತ್ತಾ ಲಂಗವನ್ನು ಕೈಯಿಂದ ಸ್ವಲ್ಪ ಹಿಡಿದೆತ್ತಿ ಓಡಿದ್ದಳು. ಮಂಗಳನ ಮನ ಕಂದಿತ್ತು. ತಾನು ಕೇಳಲೇ ಬಾರದಾಗಿತ್ತೇನಿಸಿತ್ತು. ದತ್ತ ಒಳ್ಳೆಯವನಂತೆ ಕಾಣುತ್ತಾನೆ. ಅವನಿಗೆ ಹೀಗಾಗಬಾರದಾಗಿತ್ತೆನಿಸಿತು. ಒಳಗೆ ಬಂದೊಡನೆಯೇ ಜಾನಕಿ ಪ್ರಶ್ನಿಸಿದ್ದಳು.

"ಸೀತಾ ಅದೇನೋ ಹೇಳ್ತಿದ್ಲು, ಯಾರಿಗೆ ಹುಶಾರಿಲ್ವಂತೆ?"

"ರಾಧಾ ಬಾಯಿಗೆ ಹುಶಾರಿಲ್ವಂತೆ.... ಅವರ ತಂದೆ ತಾಯಿ ಕರ್ಕೊಂಡು ಹೋಗಿದಾರಲ್ಲ."

"ಹುಶಾರಿಲ್ಲ ಅಂತಂದ್ರೆ ಇನ್ನೇನು? ಬಸಿರಿ ಇರಬಹುದು. ಕಡ್ಡಿ ಹಾಗೆ ಕೃಶವಾಗಿ ದ್ದಳು. ಅಲ್ಲಿ ಆರೈಕೆ ಮಾಡಿ ಕಳಿಸ್ತಾರೆ. ಬಾಣಂತನ ಮುಗಿಯೋವರ್ಗೂ ಪರವಾಗಿಲ್ಲ. ಇಲ್ಲಿಗೆ ಬಂದರೆ ಕತ್ತೆ ಚಾಕರಿ ಇದ್ದದ್ದೇ. ಮನೆ ತುಂಬಾ ಜನ ಬಿಡುವೇ ಇಲ್ಲ ಆ ಹುಡುಗಿಗೆ. ಕಂಡೋರ ಮನೆ ಹೆಣ್ಣು ಮಕ್ಕಳನ್ನು ಮನೆ ತುಂಬಿಸ್ಕೊಂಡು ಅದೇನು ದುಡಿಸ್ತಾರೋ.... ಆ ದೇವರೇ ಬಲ್ಲ."

"ಹೆಣ್ಣಾಗಿ ಹುಟ್ಟಲೇಬಾರದು. ಈ ಚಾಕರಿ ತಪ್ಪಿದ್ದೇ ಅಲ್ಲ." ಅವಳು ಗೊಣಗಿದ್ದು ಜಾನಕಿಗೆ ಕೇಳಿಸಿದರೂ ಸುಮ್ಮನಾಗಿದ್ದಳು. ಇವಳಿಗೆ ಆಶ್ಚರ್ಯವಾಗಿತ್ತು. ಏನಾದ್ರೂ ಹೇಳಿದ್ರೆ ತಾನೂ ಸುಮ್ಮನಿರುವುದಿಲ್ಲ. ತನಗೂ ಈ ನಡುವೆ ಸಹನೆಯೇ ಇಲ್ಲ. ಏನಾಗ್ತಿದೆ ತನಗೆ ? ಮದುವೆ ಮಾಡಿಕೊಂಡು ಈ ಮನೆಯಿಂದ ಹೋದರೆ ಸಾಕು ಅಂತ ಅನ್ನಿಸಿದರೂ, ಏಕೋ ಏನೋ, ಭಾವೀಪತಿಯ ಮೇಲಿನ ಆಸಕ್ತಿ ಕಡಿಮೆ ಆಗುತ್ತಿದೆ. ಅವನ ಪತ್ರಗಳನ್ನು ಓದಿಲ್ಲ. ಅವನಿಗೆ ಪತ್ರಗಳನ್ನು ಬರೆದಿಲ್ಲ. ಅವನ ಬಗ್ಗೆ ಯೋಚಿಸುವುದೂ ಕಡಿಮೆ ಆಗುತ್ತಿದೆ. ಯಾಕೆ ಹೀಗಾಗುತ್ತಿದೆ?....

"ಮಂಗಳಾ ಸ್ವಲ್ಪ, ನೀಲಗಿರಿ ತೈಲಾನ ತಿಕ್ತೀಯ? ಕೂತೂ ಕೂತೂ ಸೊಂಟ ನೋಯ್ತಿದೆ." ತಾಯಿ ಹೇಳಿದಾಗ ಮಾತಾಡದೇ ತೈಲದ ಶೀಷೆಯನ್ನು ತಂದು, ಸೊಂಟಕ್ಕೆ ಎಣ್ಣೆಯನ್ನು ತಿಕ್ಕಿ ನೀವತೊಡಗಿದಳು. "ಸರೋಜ ಹೇಗಿದಾಳೋ ಏನೋ? ಚೊಚ್ಚಲ ಬಸಿರಿ, ತವರಿಗೆ ಬರಬೇಕು ಅಂತ ಅನ್ನಿಸ್ತಿರುತ್ತೆ. ಬಂದರೆ ಇಲ್ಲಿ ಆರೈಕೆ ಮಾಡೋರ್‍ಯಾರು? ಹಾಗಂತ, ಬರದಿರಲಿ ಅಂತ ಅಂದುಕೊಳ್ಳೋಕೆ ಆಗುತ್ತಾ ? ನಾನು ಯಾವಾಗ ಪೂರ್ತಿ ಸರಿ ಹೋಗ್ತೀನೊ?"

"ಕರೆಸ್ಬೇಕು ಅಂತ ಇದ್ದರೆ ಕರೆಸು. ನಾನು ಇದೀನಲ್ಲ... ಸಹಾಯ ಮಾಡ್ತೀನಿ."

"ವ್ಯಂಗ್ಯ ಸಾಕು. ಹಂಗಿಸಿ ಅನ್ತಾನೇ ಇತೀಯಲ್ಲ..."

"ವ್ಯಂಗ್ಯವೂ ಅಲ್ಲ, ಹಂಗಿಸ್ತಾನೂ ಇಲ್ಲ, ನಾನು ಇರೋದು ನಿಜ ತಾನೇ... ನಿನಗೆ ಆಸೆ ಇರೋದು ಸಹಜ ತಾನೇ.... ನನ್ನ ಎಲ್ಲಾ ಮಾತಿಗೂ ನೀನ್ಯಾಕೆ ತಪ್ಪು ಅರ್ಥ ಕಲ್ಪಿಸ್ತೀಯಾ..."

"ಅಳುಕುತ್ತೆ ಕಣೇ.... ಮನಸ್ಸು ಅಳುಕುತ್ತೆ.... ನಿನ್ನ ಮದುವೆ ತಯಾರಿ ಮಾಡಬೇಕಾದ ಸಮಯದಲ್ಲಿ ಕೈಲಾಗದೇ ಕೂತಿದೀನಲ್ಲ... ಇದಕ್ಕಿಂತ ಬೇರೆ ಕರ್ಮ ಬೇಕಾ?"

"ಮತ್ತೆ ಶುರು ಮಾಡಿದ್ಯಾ ನಿನ್ನ ವರಸೇನ.... ನಾನು ಮದುವೇನೇ ಆಗ್ಬಾರ್ದು ಅಂತ ನಿರ್ಧರಿಸಿದ್ದೀನಿ.... ಹಾಗಂತ ಅವರಿಗೆ ಬರೆದು ಬಿಡ್ತೀನಿ...."

"ಅದೇನು ಮಾತು ಅಂತ ಆಡ್ತೀಯ? ಗೊತ್ತಾಗಿರುವ ಮದುವೇನ ನಾವಾಗಿಯೇ ಮುರಿಯೋಕೆ ಆಗುತ್ತಾ?... ಅವರ ಪತ್ರಕ್ಕೆ ಉತ್ತರ ಬರೆದಿಲ್ವಾ? ಅವರು ಏನಂದ್ಕೊ ಳ್ಳಾರೆ? .... ಮತ್ತೆ ಕಾಗದ ಬಂದಿತ್ತಾ?....

"ಇಲ್ಲಮ್ಮ ತುಂಬಾ ದಿನಗಳಾದ್ವು.... ಅವರಿಗೆ ನನ್ನ ಮೇಲೆ ಕೋಪ ಇರ ಬಹುದು... ಅವರಿಗೆ ಮದುವೆ ಮುಂದಕ್ಕೆ ಹಾಕಿದ್ದು ಇಷ್ಟವಾಗಿಲ್ಲ. ಹಾಗಂತ ಬರೆದಿದ್ರು. ಅದಕ್ಕೆ ನಾನು ಉತ್ತರಾನೇ ಬರೆದಿಲ್ಲ... ಏನೂಂತ ಬರೀಲಿ... ನಂಗೆ ಇಷ್ಟವಾಗ್ತಿಲ್ಲ..."

"ಈಗ ಹೇಳ್ತಿದೀಯಲ್ಲೇ... ಒಂದು ಸಾರಿ ಬಂದು ಹೋಗಿ ಅಂತ ಬರಿ.... ಪರಿಸ್ಥಿತೀನ ಖುದ್ದಾಗಿ ನೋಡಿದ್ರೆ ಅವರಿಗೂ ಅರ್ಥವಾಗುತ್ತೆ."

"ನಾನು ಬರೆಯುಲ್ಲ. ಬೇಕಿದ್ರೆ ಅವರೇ ಬರಲಿ..."

"ಹಾಗೆ ಹೇಳುಕ್ಕಾಗುತ್ತಾ ಮಂಗಳಾ...? ಬಂದು ಮಾತನಾಡಿದರೆ, ಅವರಿಗೂ ಸಮಾಧಾನವಿರುತ್ತೆ..." ಯಾಕೋ ಏನೋ ಮಂಗಳಂಗೆ ದುಃಖ ಉಕ್ಕಿ ಬಂದಿತ್ತು. ನೀವುವುದನ್ನು ನಿಲ್ಲಿಸಿ, ಸೆರಗಿನಿಂದ ಕಣ್ಣುಗಳನ್ನು ಒರೆಸಿಕೊಂಡು, ರೂಮಿಗೆ ಹೋಗಿ ಬಾಗಿಲನ್ನು ಹಾಕಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು.... ಅದೇಕೆಂದು ಅವಳಿಗೇ ಅರ್ಥವಾಗಿರ ಲಿಲ್ಲ. ಜಾನಕಿಗೆ ಮಗಳ ಅಳು ಕೇಳಿಸಿತ್ತು. ಅವಳು ಅರ್ಥೈಸಿದ್ದೇ ಬೇರೆ.

ಚಂದ್ರೂಗೆ, ಸಮೀಪದ ಬೇರೊಂದು ಊರಿನ ಸಣ್ಣ ಆಫೀಸ್ ಒಂದರಲ್ಲಿ ಕ್ಲರ್ಕ್ ಕೆಲಸಕ್ಕೆ ಆಯ್ಕೆಯಾಗಿರುವನೆಂದು ತಿಳಿಸುವ ಪತ್ರ ಬಂದಿತ್ತು. ಪತ್ರವನ್ನು ಓದಿದರೂ ಅವನಿಗೆ ಸಂತಸವಾಗಿರಲಿಲ್ಲ. ಸಂಬಳವೂ ಹೆಚ್ಚಿರಲಿಲ್ಲ. ಈ ಇಂಟರ್‌ವ್ಯೂಗೆ ತಾನು ಹೋಗಲೇ ಬಾರದಾಗಿತ್ತು ಎಂದುಕೊಂಡ. "ಕೆಲಸ ಏನೋ ಸಿಕ್ಕಿದೆ... ಆದರೆ ಮನಸ್ಸಿಗೆ ಸಮಾಧಾನವಿಲ್ಲ... ನಾನು ಮತ್ತೆ ಮೈಸೂರಿಗೇ ಹೊರಟು ಹೋಗ್ತೀನಿ." ಗೋಪಾಲನಿಗೆ ಹೇಳಿದ.

"ಸಿಕ್ಕಿರುವ ಕೆಲಸವನ್ನೂ ಬಿಟ್ಟು, ಏನೂ ಇಲ್ಲದ ಊರಿಗೆ ಹೋಗಿ ಏನ್ಮಾಡ್ತೀಯ? ಹೋಗಿ ಸೇರ್ಕೋ.... ಸರಿ ಹೋದರೆ ಸರಿ... ಇಲ್ಲದಿದ್ದರೆ ಮತ್ತೆ ಬೇರೆ ನೋಡಿದ್ರಾಯ್ತು...."

"ಈ ಇಂಟರ್‌ವ್ಯೂ ಇದೆಲ್ಲಾ ಬೇಸರವಾಗಿ ಹೋಗಿದೆ. ಯಾವುದಾದರೂ ವ್ಯಾಪಾರ ಮಾಡಿದರೆ ಹೇಗೆ ಅಂತ ಯೋಚಿಸ್ತಿದೀನಿ..."

"ಪೆದ್ದ ಅಂತಾರೆ.... ವ್ಯಾಪಾರ ಸುಲಭವಲ್ಲ... ಅದಕ್ಕೆ ಚತುರತೆ ಇರಬೇಕು... ಬಂಡವಾಳ ಹೂಡ್ಬೇಕು... ನಮ್ಮಂಥೋರಿಗೆ ಇಂಥಾ ಕೆಲಸವೇ ಸರಿ. ತಿಂಗಳ ಮೊದಲನೇ ತಾರೀಖು ಕೈಗೆ ಹಣ ಬರುತ್ತೆ."

"ಸಂಬಳ ಕಡಿಮೆ ಅಲ್ವೇನಪ್ಪಾ....?"

"ಈಗ ಕಡಿಮೆ ಆದ್ರೇನು ಭಡ್ತಿ ಸಿಗುತ್ತೆ.... ಅಲ್ಲದೇ ಆ ಊರಿನಲ್ಲಿ ಖರ್ಚುವೆಚ್ಚ ಹೆಚ್ಚಿಲ್ಲ. ಕಡಿಮೇಲೇ ಎಲ್ಲಾ ನಡೆಯುತ್ತೆ.... ಎಷ್ಟು ಬರುತ್ತೋ ಅಷ್ಟರಲ್ಲೇ ಸಂಸಾರ ತೂಗಿಸ್ಬೇಕು ಚಂದ್ರೂ.... ಅದು ಜಾಣತನ... ಅಷ್ಟೂ ನಿನಗೆ ಬೇಕಾದರೆ ಸಂಕೋಚ ವಿಲ್ಲದೇ ನನ್ನನ್ನು ಕೇಳು ಕೊಡ್ತೀನಿ..." ಮಗನ ಭುಜವನ್ನು ತಟ್ಟಿದ.

"ಚಂದ್ರೂ ಸುಮ್ಮನೇ ಪಿಳಿ ಪಿಳಿ ನೋಡಿದ. ಒಟ್ನಲ್ಲಿ ಈ ಅಪ್ಪ ನನ್ನನ್ನು ಒಲಿಸಿ ಕೊಳ್ಳಲು ನೋಡ್ತಿದಾರೆ.... ಆದರೆ ಇವರ ಹತ್ರ ತಾನೇ ಎಲ್ಲಿದೆ ಹಣ?.... ಸುಮ್ಮನೇ ಹೇಳ್ತಿರಬಹುದು ಅಂತಂದುಕೊಂಡ...

"ಏನು ಯೋಚ್ನೆ ಮಾಡ್ತಿದೀಯ ಚಂದ್ರೂ....? ಹೆಚ್ಚಿನ ಸಂಬಳದ ಅಗತ್ಯ ನಮಗಿಲ್ಲ... ನಮಗೆ ಬೇಕಾದಷ್ಟಿದೆ... ಹತ್ತಿರದ ಊರ್ನಲ್ಲೇ ಕೆಲಸ ಅಂತಂದ್ರೆ ನಮಗೂ ಸಮಾಧಾನ.... ಅಲ್ಲಿ ಯಾವುದಕ್ಕೂ ತೊಂದರೆ ಇಲ್ಲ... ನಾನು ಕೇಳಿದೀನಿ..."

"ಅಲ್ಲಿ ನಿಮ್ಮ ಪರಿಚಯದವರು ಯಾರಾದ್ರೂ ಇದಾರಾ?"

"ಹಿಂದೆ ಒಬ್ಬ ಇದ್ದ... ಈಗ ಅವನಿಲ್ಲ... ಅವನದ್ದೇ ದೊಡ್ಡಮನೆ ಇದೆ.... ಅದನ್ನು ಭಾಗ ಮಾಡಿದಾರಂತೆ.... ಬಿಡು. ಆಮೇಲೆ ನಿನಗೆ ಪರಿಚಯ ಆಗೇ ಆಗ್ತಾದೆ. ಚಿಕ್ಕ ಊರು ಅದು... ಬಾ... ಈ ಸಂತಸದ ಸುದ್ದಿಯನ್ನು ಅಮ್ಮನಿಗೆ ತಿಳಿಸೂವಂತೆ..."

"ನೀವೇ ಹೇಳ್ಬಿಡಿ. ನಂಗೆ ಮುಜುಗರ ಆಗುತ್ತೆ..."

"ಇದರಲ್ಲಿ ಮುಜುಗರ ಎಂಥದು ? ಅವಳಿಗೂ ಸಂತೋಷವಾಗುತ್ತೆ..."

"ಅವರು ಏನಾದ್ರೂ ಕೊಂಕು ಮಾತುಗಳನ್ನಾಡಿದರೆ ನಂಗೆ ಬೇಸರ ಆಗುತ್ತೆ"

"ಅದು ಅವಳ ಸಹಜ ಗುಣ.... ಆ ಗುಣ ಬದಲಾಗೋದೂ ಇಲ್ಲ... ಆದರೆ ನಿನ್ನ ಕರ್ತವ್ಯವನ್ನು ನೀನು ಮಾಡು... ಅವಳು ಏನಾದ್ರೂ ಆಡಲಿ.... ನಂಗೆ ಅಭ್ಯಾಸವಾಗಿದೆ. ಕ್ರಮೇಣ ನಿಂಗೂ ಅಭ್ಯಾಸ ಆಗುತ್ತೆ..."

"ಏನಪ್ಪೂ, ನೀವು ಕಟ್ಕೊಂಡ ತಪ್ಪಿಗೆ, ನಾನು ಸೇರ್ಕೊಂಡ ತಪ್ಪಿಗೆ, ಇದನ್ನೆಲ್ಲ ಅನುಭವಿಸ್ಬೇಕಾ ಎಂದು ಕೇಳುವ ಮನಸ್ಸಾದರೂ ತಡೆದುಕೊಂಡ. ನಾನಾದರೂ, ಇಲ್ಲಿ ಬೆಳೆಯಲಿಲ್ಲ... ಇವರಾದರೋ, ಇಪ್ಪತ್ನಾಲ್ಕೂ ಗಂಟೆ ಈಕೆಯ ಜತೇಲಿ ಮದುವೆ ಆದಾಗ್ನಿಂದ ಇದಾರೆ.... ಇವರಿಗೆ ಸಹನೆ ಜಾಸ್ತಿ... ನನಗೆ ಈ ಸಹನೆ ಇಲ್ಲ ಅಷ್ಟೇ... ಒಂದಲ್ಲ ಒಂದು ದಿನ ನಾನು ಈ ಪರಿಸರದಿಂದ ಓಡಿ ಹೋಗುವವನೇ ಖಂಡಿತಾ, ಇಲ್ಲಿ ಅಂಟಿಕೊಂಡಿರುವುದಿಲ್ಲ " ಅಂತಂದುಕೊಂಡ.

"ಏನು ಯೋಚಿಸ್ತಿದೀಯ ಚಂದ್ರೂ..."

" ಇನ್ನೂ ಸಧ್ಯಕ್ಕೆ ಯೋಚಿಸಿಲ್ಲ. ಆದರೆ ಒಂದ್ಮಾತು, ಈ ವಿಷಯದಲ್ಲಿ ನನಗೆ ಸ್ವಾತಂತ್ರ್ಯ ಬೇಕು... ನನಗೆ ಸರಿ ಅನ್ನಿಸಿದವಳನ್ನೇ ನಾನು ಮದುವೆಯಾಗೋದು..."

"ಸರಿ... ನಿನ್ನ ಒಪ್ಪಿಗೆ ಮುಖ್ಯ... ನಿನಗೆ ಸರಿ ಹೊಂದುವಂತಹವಳನ್ನೇ ಹುಡುಕಿದ್ರಾಯ್ತು..."

"ಹಾಗಲ್ಲಪ್ಪಾ... ನಾನೇ ಇಚ್ಛೆಪಟ್ಟವಳನ್ನು ನೀವುಗಳು ಒಪ್ಕೋಬೇಕು ಎಂದು ಹೇಳಬೇಕೆಂದುಕೊಂಡರೂ ಇದು ಸಮಯ ಅಲ್ಲ ಅಂತಂದುಕೊಂಡು ಸುಮ್ಮನಾದ... ಇಬ್ಬರೂ ಒಳಗೆ ಬಂದರು.

"ಲಕ್ಷ್ಮೀ ಒಂದು ಹರ್ಷದ ಸಂಗತಿ.... ಚಂದ್ರೂಗೆ ಕೆಲಸ ಸಿಕ್ಕಿದೆ." ಲಕ್ಷ್ಮಿ ಕತ್ತೆತ್ತಿದಳು... ಆದರೆ ಮುಖದಲ್ಲಿ ಸಂತಸವನ್ನು ಹೊರಗೆಡವಲಿಲ್ಲ...

"ಸಂಬಳ ಎಷ್ಟು?.... ಜೀವನಕ್ಕೆ ಸಾಕಾಗುವಷ್ಟು ಕೊಡ್ತಾರಾ?"

"ಪ್ರಾರಂಭದಲ್ಲಿ ಕಡಿಮೆ ಕೊಟ್ಟರೂ, ಆಮೇಲೆ ಭಡ್ತಿ ಸಿಗುತ್ತಲ್ಲ, ಅರ್ಹತೆ, ಅನುಭವದ ಮೇಲೆ ಸಂಬಳ ಜಾಸ್ತಿ ಮಾಡ್ತಾರೆ."

"ಇವನಿಗೆ ಯಾವ ಅನುಭವ ಇದೆ ?.... ಅರ್ಹತೆಯೂ ಅಷ್ಟಷ್ಟರಲ್ಲೇ..." ರಾಗ ಎಳೆದಳು.

"ಬರೀ ಕೈಗಿಂತ ಹಿತ್ತಾಳೆ ಕಡಗ ವಾಸಿ" ಅನ್ನೋ ಹಾಗೇ... ಸುಮ್ಮನೇ ಕೂತು ಕಾಲ ಕಳೆಯುವ ಬದಲು ಹೋಗಿ ಬರಲಿ"ಗೋಪಾಲ ಬೇಸರಗೊಂಡು, ಚಂದ್ರು ಕಡೆ ತಿರುಗಿದ. ಚಂದ್ರು ಅಲ್ಲಿ ನಿಲ್ಲದೆ ಹೊರಕ್ಕೆ ನಡೆದಿದ್ದ.

"ನಂಗೆ ಇಲ್ಲಿ ಹತ್ತಿರದ ಒಂದು ಸಣ್ಣ ಊರಿನಲ್ಲಿ ಕೆಲಸ ಸಿಕ್ಕಿದೆ. ಮುಂದಿನವಾರ ಹೋಗಿ ಸೇರ್ಕೊಳ್ತಿದೀನಿ..."ಪಂಕಜಳಿಗೆ ಹೇಳಿದ.

"ಹೌದಾ?ಒಳ್ಳೇದಾಯ್ತು. ಮನೇಲೆ ಕಾಲ ಕಳೆಯೋಕೆ ಬೇಜಾರಾಗ್ತಿತ್ತು ಅಲ್ವಾ?.... ಇಲ್ಲಿಂದ ಹೋಗಿ ಬರುಕ್ಕೆ ಸ್ವಲ್ಪ ದೂರ ಆಗುತ್ತೆ ಅಲ್ವಾ?"

"ಬರೀ ಕೈಗಿಂತ ಹಿತ್ತಾಳೆ ಕಡಗ ಮೇಲು" ಅಂತ ತಿಳಿದವರು ಹೇಳ್ತಾರೆ."ಉದ್ಯೋಗಂ ಪುರುಷ ಲಕ್ಷಣಂ"| ತ ಕೂಡಾ ಮಾತಿದೆ. ನೋಡ್ತೀನಿ... ಅನುಕೂಲ ಹೇಗಿದೆ ಅಂತ... ಅಲ್ಲೇ ಒಂದು ರೂಮು ಮಾಡಿಕೊಂಡಿರು ವಿಚಾರ ಕೂಡಾ ಇದೆ."

"ಅಲ್ಲೇ ಇರ್ತೀರಾ" ಇದ್ದಕ್ಕಿದಂತೆ ಅವಳ ದನಿಯಲ್ಲಿ ಮಂಕುತನವಿರಬಹುದು ಅಂತನ್ನಿಸಿತ್ತು ಅವನಿಗೆ, ಅವಳನ್ನೇ ದಿಟ್ಟಿಸಿದ. ದಿನಾ ಓಡಾಡೋದು ಕಷ್ಟ ಆಗುತ್ತೆ ನಿಜ.... ಆದರೂ

"ನಾನು ಕಷ್ಟಪಡ್ತೀನಿ ಅಂತ ಒಬ್ಬರಿಗಾದ್ರೂ ಅನ್ನಿಸ್ತಲ್ಲಾ..."ಓರೆ ನೋಟವನ್ನು ಬೀರಿದ...

"ತಿರುಗಾಡೋದು, ಹೊರಗೆ ಕೆಲಸ ಮಾಡೋದು, ಆ ಕಷ್ಟಗಳನ್ನೇಲ್ಲಾ ನಾನೂ ಅನುಭವಿಸ್ತಿದೀನಲ್ಲ...

"ಹೌದು, ನಿಮ್ಮನ್ನು ನೋಡಿದರೆ ಒಂಥರಾ ಅನ್ನಿಸುತ್ತೆ... ನಾನೊಂದು ಮಾತು ಕೇಳ್ಲಾ? ನೀವು ತಪ್ಪು ತಿಳ್ಕೋಬಾರ್ದು..."

"ಕೆಲ್ಸ ಬಿಡಿ ಅಂತ ಹೇಳ್ಬೇಡಿ... ಬೇರೆಯವರಿಗೆ ಹೊರೆ ಆಗಿರುಕ್ಕೆ ನಂಗಿಷ್ಟವಿಲ್ಲ."

"ನೀವು.... ನೀವೂ... ಮತ್ತೆ ಯಾಕೆ ಮದ್ವೆ ಆಗ್ಬಾರ್ದು?...." ಸ್ವಲ್ಪ ಅನುಮಾನಿಸುತ್ತಾ ಕೇಳಿದ.... ಅವಳು ಆ ಪ್ರಯತ್ನವನ್ನು ನಿರೀಕ್ಷಿಸಿರಲಿಲ್ಲ. ಆದರೂ ನುಡಿದಳು.

"ಅದು ನನ್ನ ಸ್ವಂತ ವಿಷಯ... ಕೇಳುವ ಹಕ್ಕು ನಿಮಗಿಲ್ಲ..."

"ಕ್ಷಮಿಸಿ.... ನಾನು ನಿಮಗೆ ನೋಯಿಸ್ಬೇಕು ಅಂತ ಕೇಳಲಿಲ್ಲ. ಒಂದು ವೇಳೆ

ಮತ್ತೆ ಮದುವೆ ಸುಯೋಗ ಸಿಕ್ಕಿದರೆ...."

"ಒಂದು ಬಾರಿಯ ಸುಯೋಗ ಏನು ಅಂತ ಗೊತ್ತಾಗಿದೆ ನಂಗೆ... ಮತ್ತೆ ಮತ್ತೆ ಆ ಸುಯೋಗವನ್ನು ಹುಡುಕಿಕೊಂಡು ಹೋಗುವ ಆಸೆ ನಂಗಿಲ್ಲ..."

"ಒಂದು ವೇಳೆ ನಿಮ್ಮನ್ನು ತಾನಾಗಿಯೇ ಒಪ್ಪಿ, ಮದುವೆಯಾಗುವ ಆಸೆಯನ್ನು ತಿಳಿಸುವ ವರ ಸಿಕ್ಕಿದರೆ...."

"ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ.... ದಯವಿಟ್ಟು ಇಂಥ ಆಸೆಗಳನ್ನು ಹೊತ್ತಿಸಬೇಡಿ... ನಾನು ಈಗ ಹಾಯಾಗಿದ್ದೀನಿ. ಇದಿಷ್ಟೇ ನನ್ನ ಪಾಲಿಗೆ ಬಂದದ್ದು ಅಂತ ಅಂದ್ಕೊಂಡು ನೆಮ್ಮದಿಯಿಂದ ಇದೀನಿ.... ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ. ಇಂಥಾ ಪ್ರಶ್ನೆಗಳನ್ನು ಮತ್ತೆ ಮತ್ತೆ ಕೇಳಬೇಡಿ. ನಂಗೆ ಇಷ್ಟವಾಗುಲ್ಲ..."

"ನನ್ನ ಪ್ರಶ್ನೆಗೆ ಉತ್ತರ ಸಿಗೋವರ್ಗೂ ನಾನು ಕೇಳ್ತಾನೇ ಇರ್ತೀನಿ..."

"ನೀವ್ಯಾರ್ರೀ ಕೇಳೋಕೆ... ಇವು ನನ್ನ ಸ್ವಂತ ವಿಚಾರಗಳು. ನಿಮಗೆ ಹೇಳಬೇಕು ಅಂತ ಏನಿಲ್ಲ... ನೀವು ಹೋಗಬಹುದು..."ಸಿಡಾರನೆ ನುಡಿದಳು.

"ನಾನು ನಿಮ್ಮ ಹಿತೈಷಿ.... ಕೇಳಿದ್ದರಲ್ಲಿ ತಪ್ಪು ಏನಿಲ್ಲ... ಕೇಳುವ ಹಕ್ಕು ನನಗಿದೆ."

"ಇಲ್ಲ... ನಿಮಗೆ ಯಾವ ಹಕ್ಕೂ ಇಲ್ಲ... ನೀವು ನನಗೆ ಏನೂ ಅಲ್ಲ... ನಿಮ್ಮಿಂದ ನನಗೆ ಏನೂ ಆಗಬೇಕಾಗಿಲ್ಲ... ಈ ಮನೆಯ ಮಾಲೀಕರ ಮಗ ಅಂತ ಗೌರವ ಕೊಟ್ಟೆ.... ಅದನ್ನು ದುರುಪಯೋಗಪಡಿಸಿಕೊಳ್ತಿದೀರಿ...."

"ನಾನು ಇಷ್ಟು ಮಾತಾಡಿದ್ರೂ ನನ್ನ ಮನಸ್ಸಲ್ಲಿ ಏನಿದೆ ಅಂತ ನಿಮಗೆ ಅರ್ಥ ಆಗಲಿಲ್ವಾ ಟೀಚರ್?" ಅವಳು ತಲೆ ತಗ್ಗಿಸಿದ್ದಳು. ಅವಳಿಗೆ ಅರ್ಥ ಆಗದೇ ಏನಿಲ್ಲ ಅಂತ ಅವನಿಗೆ ತಿಳಿಯಿತು. ಈಗ ನೇರವಾಗಿ ಮಾತಾಡಿದ. ನಾನು ನಿಮ್ಮನ್ನು ಇಷ್ಟಪಟ್ಟಿದ್ದೀನಿ... ನಿಮ್ಮನ್ನು ಮದುವೆಯಾಗ್ತೀನಿ... ದಯವಿಟ್ಟು ಇಲ್ಲ ಅಂತ ಹೇಳ್ಬೇಡಿ..." ಅವಳು ಹೆಬ್ಬೆರಳಿನಿಂದ ನೆಲವನ್ನು ಉಜ್ಜತೊಡಗಿದಳು."ನಾನು ನಿಮ್ಮ ಉತ್ತರಕ್ಕೆ ಕಾಯ್ತೀನಿ ಟೀಚರ್... ನಾನು ನಿಮಗೆ ಸೂಕ್ತ ಅಂತ ಅನ್ನಿಸದೇ ಇರಬಹುದು..."

ಅವಳು ಕತ್ತೆತ್ತಿದಳು ಅವಳ ಕಣ್ಣುಗಳು ತುಂಬಿ ಬಂದಿದ್ದವು.. "ಬೇಡಾ ಚಂದ್ರು... ಈ ಆಸೆ ಇಟ್ಕೋಬೇಡಿ... ನನ್ನ ಬಗ್ಗೆ ಅನುಕಂಪ, ಕನಿಕರವನ್ನು ತೋರಿಸಿದರೆ ಅದು ನನಗೆ ಇಷ್ಟವಾಗುಲ್ಲ."

"ಇದು ಅನುಕಂಪ ಅಲ್ಲ. ಅನುರಾಗ.... ನಾನು ನಿಮ್ಮನ್ನು ಪ್ರೀತಿಸ್ತಿದೀನಿ... ಇದುವರೆಗೆ ಹೇಳಿರಲಿಲ್ಲ ಅಷ್ಟೇ... ಈಗ ಸ್ವಂತ ಕೆಲಸ ಇದೆ. ಸಂಪಾದನೆ ಇದೆ. ನಿಮ್ಮನ್ನು ಸುಖವಾಗಿಟ್ಟುಕೊಳ್ಳಬಲ್ಲೇ ಎಂಬ ನಂಬಿಕೆ ನನಗಿದೆ...."

"ನನ್ನಂಥಾ ನಿರ್ಭಾಗ್ಯೇನ ಪ್ರೀತಿ ಯಾಕೆ ಮಾಡ್ತೀರಿ ಚಂದ್ರೂ.... ನಿಮಗೆ ಏನು

ಕಡಿಮೆ? .... ರೂಪ ಯೌವನ ಶ್ರೀಮಂತಿಕೆ ಎಲ್ಲಾ ಇದೆ... ಬೇರೆ ಸರಿಯಾಗಿರೋ ಹುಡ್ಗೀನ ನೋಡಿ ಮದುವೆಯಾಗಿ... ನನ್ನಿಂದ ನಿಮಗೆ ಸುಖ ಸಿಗುವುದಿಲ್ಲ..

"ನಾನೇನೂ ಅಂಥಾ ರೂಪಸ್ಥನಲ್ಲ... ನನಗೆ ಗೊತ್ತು. ಯೌವನ, ಅದು ಅಶಾಶ್ವತ ಅಂತಾ ಕೂಡಾ ಗೊತ್ತು... ಇನ್ನು ಈ ಶ್ರೀಮಂತಿಕೆ ನನ್ನದಲ್ಲ. ನನಗೆ ಬೇಕಾಗಿಲ್ಲ... ನೀವು ನನಗೆ ಸಂಗಾತಿಯಾಗಿದ್ದರೆ, ಅದೇ ಶ್ರೀಮಂತಿಕೆ..."

"ಈ ದೊಡ್ಡ ದೊಡ್ಡ ಮಾತುಗಳು ಗಂಭೀರವಾದ ಚರ್ಚೆಗೆ ತುಂಬಾ ಚೆನ್ನಾಗಿ ರುತ್ತೆ... ನಾನು ಮರುಮದುವೆಯಾಗುವುದಿಲ್ಲವೆಂದು ನಿರ್ಧರಿಸಿದ್ದೀನಿ... ನೀವೂ ನಿಮ್ಮ ನಿರ್ಧಾರವನ್ನು ಬದಲಾಯಿಸಿಕೊಳ್ಳಿ... ಇಲ್ಲದಿದ್ದರೆ, ನಿಮ್ಮ ಮನೆಯವರಿಗೆ ನಿರಾಸೆ ಆಗುತ್ತದೆ ಅಂತ ಗೊತ್ತು ಅಲ್ವಾ ?..."

"ಅವರಿಗೆ ನಿರಾಸೆ ಆಗುತ್ತೆ ಅಂತ, ನನ್ನ ಆಸೆಯನ್ನು ತ್ಯಾಗಮಾಡುವಷ್ಟು ದೊಡ್ಡ ವ್ಯಕ್ತಿ ನಾನಲ್ಲ... ಹೋಗಲಿ ಬಿಡಿ. ನನ್ನ ಸ್ನೇಹಕ್ಕೆ ನೀವು ಬೆಲೆ ಕೊಡುವುದಾದರೆ, ನನ್ನ ಪ್ರೀತಿಯನ್ನು ನಿರಾಕರಿಸಬೇಡಿ... ನಿಮ್ಮ ಒಪ್ಪಿಗೆಗಾಗಿ ನಾನು ಕಾಯುತ್ತಿರುತ್ತೇನೆ.... ನನ್ನ ಆಸೆಯನ್ನು ತಿಳಿಸಿದೀನಿ. ನಿಮ್ಮ ನಿರ್ಧಾರ ಆದಷ್ಟು ಬೇಗ ದೊರಕಲಿ ಅಂತ... ಆಶಿಸ್ತೀನಿ. ನಾನು ಹೊರಡ್ತೀನಿ... ನಿಮ್ಮ ಸಮಯವನ್ನು ತೆಗೆದುಕೊಂಡಿದೀನಿ... ಬೇಜಾರು ಮಾಡ್ಕೋಬೇಡಿ..."

"ಬೇಜಾರೇನಿಲ್ಲ. ಆದರೆ ಪ್ರಸ್ತಾಪವನ್ನು ನಾನು ನಿರೀಕ್ಷಿಸಿರಲಿಲ್ಲ. ಆದ್ದರಿಂದ ಕಸಿವಿಸಿಯಾಗಿದೆ. ಕಾಫಿ ಕುಡಿತೀರಾ ?.... ತಿಂಡಿ ಮಾಡಿಕೊಡ್ಲಾ?"

"ತಿಂಡಿ ಬೇಡ... ಕಾಫಿ ಕೊಡಿ..." ಅವಳು ಅಡಿಗೆ ಮನೆಗೆ ಎದ್ದು ಹೋದಳು... ಇವನೂ ಅವಳ ಹಿಂದೆಯೇ ಎದ್ದು ಹೋಗಿ ಅಡಿಗೆ ಮನೆಯ ಬಾಗಿಲಲ್ಲಿ ನಿಂತ.

"ನಿಮಗೆ ಅಡಿಗೆ ಕೆಲಸ ಬರುತ್ತಾ?" ತಿರುಗಿ ನೋಡಿ ಪ್ರಶ್ನಿಸಿದಳು.

"ಇಲ್ಲ ಕಲೀಲಿಲ್ಲ... ಅವಶ್ಯಕತೆ ಬೀಳಲಿಲ್ಲ... ಈಗ ರೂಮಿನಲ್ಲಿ ಬ್ರಹ್ಮಚಾರಿ ಯಾಗಿ ಇರುವಾಗ ಕಲಿತ್ಕೊಳ್ತೀನಿ. ಅದ್ಯಾವ ಮಹಾ ವಿದ್ಯೆ ?" ನಕ್ಕ. ಅವಳೂ ತನ್ನ ನಗೆಯನ್ನು ಸೇರಿಸಿದಳು.

"ಅಡಿಗೆ ಕಲಿಯೋದಾಗ್ಲಿ ಮಾಡೋದಾಗ್ಲಿ ಸುಲಭ ಅಲ್ಲ ಚಂದ್ರೂ ..."

"ಅದಕ್ಕೇ ಆದಷ್ಟು ಬೇಗ ಮದುವೆಯಾಗುವ ತೀರ್ಮಾನವನ್ನು ತಗೊಂಡಿದೀನಿ... ನಮ್ಮ ತಂದೆ ಹೇಳ್ತಾನೇ ಇರ್ತಾರೆ... ನಿಮ್ಮಿಂದ ಒಪ್ಪಿಗೆ ಸಿಕ್ಕ ತಕ್ಷಣ ನಮ್ಮಿಬ್ಬರ ಮದುವೆ..."

"ಅಂದರೇ.... ನಿಮ್ಮ ತಂದೆಗೆ ಗೊತ್ತಾ ? ಹೇಳ್ಬಿಟ್ಟಿದೀರಾ?" ಗಾಬರಿಯಿಂದ ಪ್ರಶ್ನಿಸಿದಳು.

"ಹೇಳಿಲ್ಲ... ಆದಷ್ಟು ಬೇಗ ಹೇಳ್ತೀನಿ... ನನಗೆ ಯಾವ ಅಂಜಿಕೆಯೂ ಇಲ್ಲ

... ನೀವ್ಯಾಕೆ ಗಾಬರಿಯಾಗ್ತೀರೋ...?"

"ಗಾಬರಿಯಾಗ್ದೇ ಇರುತ್ತಾ ಚಂದ್ರೂ? ಹಿರಿಯೋರ ಸಮ್ಮತಿ ಅಷ್ಟು ಸುಲಭವಾಗಿ ಸಿಗುಲ್ಲ... ಬೇಕಾದಷ್ಟು ಆತಂಕಗಳಿವೆ..." ಕಾಫಿಯನ್ನು ತಂದಿಟ್ಟು ಹೇಳಿದಳು.

"ಯಾವ ಅಡ್ಡಿ ಆತಂಕಕ್ಕೂ ನಾನು ಹಿಂದೆ ಸರಿಯೋಲ್ಲ. ನೀವು ಒಪ್ಪಿಗೆ ಕೊಡಿ... ಮುಂದಿನದನ್ನು ನನಗೆ ಬಿಡಿ...." ಎನ್ನುತ್ತಾ ಅವಳ ಕೈ ಹಿಡಿದ. ಅವಳು ನಿಧಾನವಾಗಿ ಬಿಡಿಸಿಕೊಂಡಳು.

"ನನಗೆ ಸ್ವಲ್ಪ ಸಮಯ ಕೊಡಿ ಚಂದ್ರೂ.... ದಿಢೀರನೇ ನಿರ್ಧರಿಸಲು ಆಗುವುದಿಲ್ಲ...."

"ಸರಿ... ಒಂದು ವಾರ ಅವಧಿ ಕೊಡ್ತೀನಿ.. ಅಷ್ಟರಲ್ಲಿ ನನಗೆ ನಿಮ್ಮ ಸಕಾರಾತ್ಮಕ ಉತ್ತರ ಸಿಗಬೇಕು... ಆಯ್ತಾ?.... ನಿಧಾನವಾಗಿ ಕಾಫಿಯನ್ನು ಹೀರಿದ... ಅವಳೂ ಮಾತನಾಡದೇ ಕಾಫಿಯನ್ನು ಕುಡಿದಳು. ಅವನು ಎದ್ದು ಹೊರಟು ನಿಂತಾಗ ಮೌನವನ್ನು ಮುರಿದಳು...

"ನನ್ನ ನಿರ್ಧಾರವನ್ನು ತಿಳಿಸುವವರೆಗೂ, ದಯವಿಟ್ಟು ನೀವು ನನ್ನನ್ನು ಯಾವುದೇ ಕಾರಣಕ್ಕೂ ಭೇಟಿಯಾಗಬೇಡಿ.... ಇದು ನನ್ನ ಕೋರಿಕೆ..."

"ಯಾಕೆ ? ಅದರಲ್ಲಿ ತೊಂದರೆ ಏನು?"

"ತೊಂದರೆ ಇದೆ. ಯಾರಿಗೂ ಅನುಮಾನ ಬರಬಾರದು... ಅಲ್ಲದೇ ನೀವು ನಿಜವಾಗಿಯೂ ನನ್ನನ್ನು ಪ್ರೀತಿಸ್ತೀರಾ ಅಂತ ಪರೀಕ್ಷಿಸಬೇಕಾಗಿದೆ..."

"ಅಗ್ನಿ ಪರೀಕ್ಷೆ ಅನ್ನಿ... ಆದರೆ ಇದ್ಯಾವ ನ್ಯಾಯ?..."

"ನ್ಯಾಯವಾಗಿಯೇ ಇದೆ. ನನ್ನ ನಿಮ್ಮ ಸ್ನೇಹ ಕೇವಲ ಕೆಲವೇ ತಿಂಗಳುಗಳದ್ದು ನನಗೂ ನಿಮ್ಮ ಮೇಲೆ ನಂಬಿಕೆ ಬರಬೇಕು ಚಂದ್ರೂ...."

"ನನ್ನ ಪ್ರೀತಿ ಟೊಳ್ಳು ಇರಬಹುದು ಅಂತ ಅನುಮಾನಾನಾ?.... ಎಷ್ಟು ಬಲವಾದದ್ದು ಅಂತ ಸಾಬೀತು ಮಾಡ್ತೀನಿ... ನಿಮ್ಮ ಈ ಕರಾರಿಗೆ ನನ್ನ ಸಮ್ಮತಿ ಇದೆ... ಒಂದು ವಾರದವರೆಗೆ ನಾನು ನಿಮ್ಮ ಕಡೆ ತಿರುಗಿ ಸಹ ನೋಡುವುದಿಲ್ಲ." ಎಂದು ಹೇಳಿ, ಸರ್ರನೆ ಬಾಗಿಲಿನಿಂದಾಚೆ ನಡೆದೇ ಬಿಟ್ಟ. ಅವಳಿಗೆ ವ್ಯಥೆಯಾಗಿತ್ತು... ಕರೆದು ನಿಲ್ಲಿಸುವ ಮನಸ್ಸಾದರೂ ತಡೆದು ಕೊಂಡಳು. ಹೋಗಲಿ.... ಈ ನೆವದಲ್ಲಿ ನನ್ನನ್ನು ಮರೆತರೂ ಮರೆಯಬಹುದು. ನನಗೂ ಸಲೀಸಾಗುತ್ತದೆ. ಆದರೆ.... ನಾನಾಗಿಯೇ ನಾನು ನನಗೆ ಬರುವ ಸದವಕಾಶವನ್ನು ಕಳೆದು ಕೊಳ್ಳುತ್ತಿದ್ದೇನೆಯೇ ಅಂತಂದುಕೊಂಡಾಗ ಮನಸ್ಸು ತಳಮಳಗೊಂಡಿತು... ಹಾಗೆಯೇ ಬಾಗಿಲಿನ ಚೌಕಟ್ಟಿಗೆ ಒರಗಿ ನಿಂತು ತನಗೆ ಬೆನ್ನು ಮಾಡಿ ಹೋದವನ ದಿಕ್ಕನ್ನೇ ದಿಟ್ಟಿಸ ತೊಡಗಿದಳು.

o o o

ಬಾಗಿಲು ಬಡಿದ ಸದ್ದು ಕೇಳಿ ಮಂಗಳ ಅಡಿಗೆ ಮನೆಯಿಂದ ಆಚೆ ಕಡೆಗೆ ಬಂದಳು. ತಾಯಿ ಮಲಗಿದ್ದಳು. ಅವಳ ಮಗ್ಗುಲಲ್ಲಿ ಬಾಲು ಮಲಗಿದ್ದ. ತಂದೆ ಆಫೀಸಿಗೆ ಹೋಗಿದ್ದರು... ತಮ್ಮ ತಂಗಿಯರು ಸ್ಕೂಲಿನಿಂದ ಬರುವ ಸಮಯವಿನ್ನು ಆಗಿರಲಿಲ್ಲ. ಯಾರೋ ಬಾಗಿಲನ್ನು ಮತ್ತೆ ಬಡಿದ ಸದ್ದು ಕೇಳಿಸಿತು..." ಬಂದೇ...." ಎನ್ನುತ್ತಾ ಬಂದು ಬಾಗಿಲನ್ನು ತೆರೆದಳು... ಎದುರಿಗೆ ಭಾವೀಪತಿ ಚಂದ್ರ ನಿಂತಿದ್ದ... ಅವಳಿಗೆ ನಂಬಲಾಗಿರ ಲಿಲ್ಲ... ಪಿಳಿ ಪಿಳಿ ಅವನನ್ನೇ ನೋಡಿ, ಎರಡು ಹೆಜ್ಜೆ ಹಿಂದೆ ಸರಿದಳು. ಕೆದರಿದ ತಲೆ ಗೂದಲು, ಮಾಸಿ ಹೋದ ಬಣ್ಣದ ವಾಯಿಲ್ ಸೀರೆ.... ಪೌಡರ್ ಹಚ್ಚದ ಮುಖ... ಅವನ ಹುಬ್ಬುಗಳು ಗಂಟಿಕ್ಕಿದವು... ಅವನ ಮುಖದ ಚಹರೆ ಬದಲಾದುದನ್ನು ಗಮನಿಸಿ ಅವಳೂ ಮುಜುಗರಗೊಂಡಳು... ಸಂಕೋಚ ದಿಂದ ಸೀರೆಯ ಸೆರಗನ್ನು ಸರಿಪಡಿಸಿಕೊಂಡು, ಬೆರಳುಗಳಿಂದ ಮುಂಗೂದಲನ್ನು ಸರಿಪಡಿಸಿಕೊಂಡು ಮಂದಹಾಸವನ್ನು ಬೀರುವ ಪ್ರಯತ್ನ ಮಾಡಿದಳು..."ಮನೇಲಿ ಯಾರೂ ಇಲ್ವಾ? ಒಳಕ್ಕೆ ಕರೆಯುಲ್ವಾ?" ಅಸಹನೆಯಿಂದ ಕೇಳಿದ.

"ಬನ್ನಿ... ಅಮ್ಮ ಇದಾರೆ... ಮಲಗಿದಾರೆ..." ಅವನು ಒಳ ಬಂದು ಸುತ್ತಲೂ ಕಣ್ಣು ಹಾಯಿಸಿ, ಅಲ್ಲಿದ್ದ ಮರದ ಕುರ್ಚಿಯ ಮೇಲೆ ಕುಳಿತ." ಊಟ ಮಾಡ್ತೀರಾ? ಕೈಕಾಲು ತೊಳ್ಕೊಂಡು ಬನ್ನಿ..." ಕೀಚಲು ದನಿಯಲ್ಲಿ ಹೇಳಿದಳು...

"ನನ್ನ ಊಟ ಆಗಿದೆ... ಕಾಫಿ ಕೊಡು ಸಾಕು... ನಾನು ನಿನ್ನ ಹತ್ರ ಮಾತಾಡ್ಬೇಕು.. ಅದಕ್ಕೆ ಬಂದೆ..."

"ನಾನು ಕಾಫಿ ತರ್ತೀನಿ ಎನ್ನುತ್ತಾ ಅವಳು ಅಡಿಗೆ ಮನೆಗೆ ಹೋಗಿದ್ದಳು. ಅವನು ಕೈ ಕಾಲು ತೊಳೆಯಲೆಂದು ಬಚ್ಚಲು ಮನೆಗೆ ಬಂದ... ಅವನು ಹೊರಬರುವುದನ್ನೇ ಕಾದಿದ್ದ ಅವಳು, ಒರೆಸಿಕೊಳ್ಳಲು ಟವೆಲ್ಲನ್ನು ಕೊಟ್ಟಳು... ಅವನು ಮುಖವನ್ನು ಒರೆಸಿಕೊಳ್ಳುತ್ತಾ ಅವಳನ್ನೇ ದಿಟ್ಟಿಸಿದ.

"ನಿಂಗ್ಯಾಕೆ ಇಷ್ಟು ಉದಾಸೀನ? ನನ್ನ ಪತ್ರಗಳಿಗೆ ಉತ್ತರ ಯಾಕೆ ಬರೆಯಲಿಲ್ಲ...?" ನಾನು ಏನೂಂತ ಅಂದ್ಕೋ ಬೇಕು? ಏನಾಗಿದೆ ನಿಂಗೆ?"

"ನಂಗೆ ಪುರಸೊತ್ತು ಆಗಲಿಲ್ಲ... ಅಮ್ಮ ಮಲಗಿಬಿಟ್ಟಿದ್ದಾಳೆ..."

"ಇನ್ನೂ ಹುಶಾರಿಲ್ವಾ ಅವರಿಗೆ?.... ಯಾವಾಗ ಸರಿ ಹೋಗ್ತಾರಂತೆ..."

"ಇನ್ನೂ ಸರಿಯಾಗಿ ನಡೆಯೋಕೆ ಆಗುಲ್ಲ... ಕಾಫಿ ಬಿಸಿಯಾಗಿರಬಹುದು ನೋಡ್ತೀನಿ." ಅವಳು ಅಡಿಗೆ ಮನೆಗೆ ಬಂದಳು. ಅವನು ಅವಳ ಹಿಂದೆಯೇ ಬಂದ.. ಮನೆಯ ಒಳಗೆಲ್ಲಾ ಕಣ್ಣು ಹಾಯಿಸಿದ.

"ಮನೆ ಚಿಕ್ಕದಲ್ವಾ? ಎಷ್ಟು ಬಾಡಿಗೆ?"

"ಬಾಡಿಗೆ ಗೊತ್ತಿಲ್ಲ... ನಮ್ಮ ಅವಸರಕ್ಕೆ ಸಿಕ್ಕಿದ ಮನೆ... ಮದುವೆ ಹೊತ್ತಿಗೆ

ಬೇರೆ ಮನೆ ಮಾಡ್ತಾರೆ...." ಕಾಫಿಯ ಬಟ್ಟಲನ್ನು ಅವನ ಕೈಗಿತ್ತಳು...

"ಯಾರ ಮದುವೆ?" ಗಂಭೀರವಾಗಿ ಕೇಳಿದ. ವ್ಯಂಗ್ಯವೂ ಅಡಗಿತ್ತು.

"ಯಾಕೆ ? ನಿಮಗೆ ಗೊತ್ತಿಲ್ವಾ?" ನಾಚಿಕೆಯಿಂದ ಕೇಳಿದಳು. ಅವಳ ಮುಖ ಕೆಂಪಾಗಿತ್ತು. ಅವನು ಬೇಗ ಬೇಗ ಕಾಫಿಯನ್ನು ಕುಡಿದು ಮುಗಿಸಿದ. ಅವಳ ಬಾಗಿದ್ದ ಮುಖವನ್ನು ಎತ್ತಿದ...

"ನಾನ್ಯಾಕೆ ಬಂದಿದೀನಿ ಗೊತ್ತಾ?.....

"ಇಲ್ಲ.... ಗೊತ್ತಿಲ್ಲ.... ಬಹುಶಃ ಅಣ್ಣನ ಹತ್ತಿರ ಮದುವೆಯ ಮಾತನ್ನು ಆಡಲು ಬಂದಿರಬೇಕು..."

"ಅವರ ಹತ್ರ ಏನ್ಮಾತು?.... ನಿಂಗೋಸ್ಕರ ಬಂದಿದೀನಿ... ಒಂದು ವಿಷಯ ಇತ್ಯರ್ಥ ಆಗಬೇಕು...." ಕೋಪದಿಂದ ಹೇಳಿದ.

"ಯಾಕೆ ಅಷ್ಟು ಬೇಸರ ಮಾಡ್ಕೊಳ್ತೀರಿ?.... ಅಮ್ಮನಿಗೆ ಪೂರ್ಣವಾಗಿ ಗುಣವಾಗ್ತಿದ್ದ ಹಾಗೇ...

"ಅಲ್ಲಿಯವರೆಗೆ ನಾನು ಕಾಯುಕ್ಕೆ ಆಗುಲ್ಲ ಮಂಗಳಾ.... ನಂಗೆ ನೀನು ಬೇಕು... ನೀನು ಯಾವಾಗ ನನ್ನ ಬಳಿಗೆ ಬರ್ತೀಯೋ ಅಂತ ಕಾದೂ ಕಾದೂ ಈಗ ನಾನೇ ನಿನ್ನ ಬಳಿಗೆ ಬಂದಿದೀನಿ... ಇವತ್ತೇ ನಾನು ನಿನ್ನನ್ನು ಕರ್ಕೊಂಡು ಹೋಗ್ತೀನಿ.. ನನ್ನ ಜತೇಲಿ ನೀನು ಬರ್ಬೇಕು.."

"ಎಲ್ಲಿಗೆ?...." ಭಯದಿಂದ ಕೇಳಿದಳು...

"ಎಲ್ಲಿ ಏನು ಅಂತ ಕೇಳ್ಬೇಡ.... ಬೇಗ ಸಿದ್ಧಳಾಗು..."

"ಮಂಗಳಾ, ಯಾರು ಬಂದಿದಾರ್ರೇ... ಯಾರ್ಹತ್ರ ಮಾತಾಡ್ತಿದೀಯೆ?" ತಾಯಿ ಮಲಗಿದ್ದಲ್ಲಿಂದಲೇ ಕೇಳಿದಾಗ ಅವಳು ಬೆಚ್ಚಿಬಿದ್ದು ಹಿಂದೆ ಸರಿದಳು. ಅವನು ಅವಳ ಕೆನ್ನೆಯ ಮೇಲೆ ಬೆರಳಾಡಿಸಿ, ಅಲ್ಲಿಂದ ಸರಿದು ಹಾಲಿಗೆ ಬಂದಿದ್ದ. ಮಂಗಳ ರೂಮಿಗೆ ಬಂದಳು... ತಾಯಿ ಎದ್ದು ಕುಳಿತಿದ್ದಳು. ಹತ್ತಿರಕ್ಕೆ ಹೋಗಿ, ಚಂದ್ರ ಬಂದಿರುವ ವಿಷಯವನ್ನು ತಿಳಿಸಿದಳು. "ಹೌದೇನು?" ಎನ್ನುತ್ತಾ, ಕಷ್ಟಪಟ್ಟು ಎದ್ದುನಿಂತು ಕೋಲನ್ನೂರಿಕೊಂಡು, ಮಂಗಳೆಯ ಕೈ ಹಿಡಿದು ರೂಮಿನಿಂದ ಆಚೆ ಬಂದಳು. ಜಾನಕಿಯನ್ನು ಕಂಡು ಅವನ ಮುಖ ಬಿಗುವಾಯಿತು.

"ಚೆನ್ನಾಗಿದೀರಾ? ಮನೇಲೆಲ್ಲಾ ಹೇಗಿದಾರೆ...? ಬರುವ ವಿಷಯ ಗೊತ್ತಿದಿದ್ರೆ, ಇವರು ರಜ ಹಾಕಿರ್ತಿದ್ರು... " ಎಂದಳು.

"ಪರವಾಗಿಲ್ಲ ಬಿಡಿ... ನಾನು ಇವಳಿಗೆ ಬರೆದಿದ್ದೆ... ಇವಳು ನಿಮಗೆ ಹೇಳಿಲ್ಲ ಅಂತ ಕಾಣುತ್ತೆ..." ಮಂಗಳೆಯ ಕಡೆ ನೋಡಿದ... ಅವಳ ಮುಖ ಕಪ್ಪಾಗಿತ್ತು.. "ನಾವಿಬ್ರೂ ಸಿನಿಮಾಕ್ಕೆ ಹೋಗಿ ಬರ್ತೀವಿ. ಟಿಕೆಟ್ಟು ತಗೊಂಡಿದೀನಿ..." ತಾಯಿ ಮಗಳು

ಮುಖ ಮುಖ ನೋಡಿಕೊಂಡರು.

"ನೀವು ಬರೋ ವಿಷಯ ಗೊತ್ತಿರ್ಲಿಲ್ಲ... ಮನೇಲಿ ಬೇರೆ ಯಾರೂ ಇಲ್ಲ... ಅಮ್ಮಂಗೆ ಕಷ್ಟವಾಗುತ್ತೆ.." ಮಂಗಳ ನಿರಾಕರಿಸಿದಳು.

"ಹೋಗ್ಬಾ ಮಂಗಳಾ... ಪಾಪ ಅಲ್ಲಿಂದ ಬಂದಿದಾರೆ. ನಾನು ನಿಮ್ಮಣ್ಣಂಗೆ ಹೇಳ್ತೀನಿ. ಸೀತಂಗೋ, ಮಾರ್ತಾಂಡಂಗೋ ಹೇಳಿದ್ರೆ, ಇಲ್ಲಿ ನನ್ನ ಜತೆಗೆ ಇರ್ತಾರೆ... ನೀನು ಸಿದ್ಧ ಮಾಡ್ಕೊಂಡು ಹೊರಡು... ತಡ ಮಾಡ್ಬೇಡ..." ತಾಯಿ ಅಪ್ಪಣೆ ಕೊಟ್ಟಳು. ಮಂಗಳ ಮನಸ್ಸಿಲ್ಲದ ಮನಸ್ಸಿನಲ್ಲಿ ಸಿದ್ಧಳಾದಳು. ತೆಳುವಾಗಿ ಪೌಡರನ್ನು ಲೇಪಿಸಿಕೊಂಡು, ಹಣೆಗೆ ಸಣ್ಣದಾಗಿ ಕುಂಕುಮವನ್ನಿಟ್ಟಳು. ತಲೆಗೂದಲನ್ನು ಒಪ್ಪವಾಗಿ ಬಾಚಿ ಅಳ್ಳಕವಾಗಿ ಜಡೆಯನ್ನು ಹೆಣೆದುಕೊಂಡು ಹೇರ್ ಪಿನ್ನುಗಳನ್ನು ಸಿಕ್ಕಿಸಿಕೊಂಡಳು. ತೆಳ್ಳನೆಯ ಬಳಕುವ ದೇಹಕ್ಕೆ ಒಪ್ಪುವ ಫುಲ್‌ವಾಯಿಲ್ ಸೀರೆಯನ್ನುಟ್ಟು, ತುಂಬು ತೋಳಿನ ರವಿಕೆಯನ್ನು ಧರಿಸಿ ಹೊರಬಂದಳು. ಅವಳನ್ನೇ ಮೇಲಿನಿಂದ ಕೆಳಗೆ ನೋಡಿದ ಚಂದ್ರ. ಅವನ ಕಣ್ಣುಗಳಲ್ಲಿ ತುಂಬಿದ್ದ ಬಯಕೆಯನ್ನು ಅವಳು ಗಮನಿಸಿದಳು. ಮೈ ಕಂಪಿಸಿತು.. ಹೋಗುವುದೋ ಬೇಡವೋ ಎಂದು ಅನುಮಾನಿಸುತ್ತಿದ್ದವಳ್ನು ಅವನು ಎಚ್ಚರಿಸಿದ.

"ಮಂಗಳಾ ಹೊರಡೋಣ್ವಾ?...." ಅವನು ಚಪ್ಪಲಿ ಮೆಟ್ಟಿ, ಮುಂಬಾಗಿಲಿನಲ್ಲಿ ನಿಂತ. ಇವಳು ಅಮ್ಮನಿಗೆ ಹೇಳಿ ಚಪ್ಪಲಿಯನ್ನು ಧರಿಸಿ ಇವನ ಹಿಂದೆ ನಡೆದಳು.

ಬಾಲ್ಕನಿಯ ಸೀಟುಗಳನ್ನು ಖರೀದಿಸಿದ್ದ, ಮೇಲಿನ ಸಾಲಿನಲ್ಲಿ ಕಡೆಯ ಎರಡು ಸೀಟುಗಳನ್ನು ಆರಿಸಿ, ಅವಳನ್ನು ಮೊದಲು ಕೂರಿಸಿ, ಪಕ್ಕದ ಸೀಟಿನಲ್ಲಿ ತಾನು ಕುಳಿತ. ಇವಳು ಮುಜುಗರದಿಂದ ಸೂತ್ತಲೂ ನೋಡಿದಳು. ಪರಿಚಯದವರ್‍ಯಾರಾದರೂ ನೋಡಿದರೇ ಎನ್ನುವ ಆತಂಕವೂ ಇತ್ತು. ಒಂದೊಂದಾಗಿ ದೀಪಗಳು ಆರಿದವು. ಹೆಚ್ಚು ಜನ ಪ್ರೇಕ್ಷಕರು ಇರಲೇ ಇಲ್ಲ. ಬಾಲ್ಕನಿ ಖಾಲಿ ಖಾಲಿ ಎನಿಸುತ್ತಿತ್ತು. ಥರದೆಯ ಮೇಲೆ ಚಿತ್ರಗಳು ಮೂಡಲಾರಂಭಿಸಿದವು. ಇವಳ ಗಮನ ಅಲ್ಲಿತ್ತು. ಅವನ ಗಮನ ಇವಳ ಮೇಲಿತ್ತು... ಮೊದಲಿಗೆ ಅವಳ ಭುಜದ ಮೇಲೆ ಕೈ ಹಾಕಿದ. ಅವಳ ಭುಜಕ್ಕೆ ತನ್ನ ತಲೆಯನ್ನು ಒರಗಿಸಿದ. ಇವಳು ಮುಲುಕಾಡಿದಳು... ಸಿನಿಮಾ ನೋಡುವ ಆಸಕ್ತಿ ಹಾರಿ ಹೋಗಿತ್ತು. ಅವನಿಂದ ಸರಿದು ಕುಳಿತಳು... ಅವನು ಅವಳನ್ನು ತನ್ನೆಡೆಗೆ ಎಳೆದುಕೊಂಡು ಪಿಸು ದನಿಯಲ್ಲಿ ರೇಗಿದ. "ಯಾಕೆ ಹೀಗಾಡ್ತೀಯ... ನಾನು ನಿನ್ನನ್ನು ಮದುವೆಯಾಗೋನು... ಸುಮ್ನೇ ಕೂತ್ಕೋ..."

"ಇದೆಲ್ಲಾ ನಂಗೆ ಸರಿ ಹೋಗುಲ್ಲ.."

"ಸರಿ ಹೋಗುಲ್ಲ ಅಂತಂದ್ರೇ...? ಸರಿ ಹೋಗಿಸ್ಕೋಬೇಕು. ನಾನು ನಿನ್ನ ಗಂಡನಾಗುವವನು... ವಯಸ್ಸಿಗೆ ಬಂದಿದೀಯ. ಇದೆಲ್ಲ ಏನು ಅಂತ ನಿಂಗೆ

ಅರ್ಥವಾಗುಲ್ವಾ?...." ಅವಳ ಕೆನ್ನೆಗೆ ತನ್ನ ಕೆನ್ನೆಯನ್ನು ತಗುಲಿಸಿದ.

"ಮದುವೆಗೆ ಮೊದಲು ಇದೆಲ್ಲಾ ಏನು ಚೆನ್ನ?" ತೊದಲಿದಳು.

"ಮದುವೆ ಮುಂದಕ್ಕೆ ಹಾಕ್ತಿದೀಯ... ನಿನ್ನಿಂದ ಎಷ್ಟು ದಿನ ಅಂತ ದೂರ ಇರೋದು... ಮನೇಲಿ ಒಬ್ಬಳೇ ಸಿಗುಲ್ಲಅಂತ ಇಲ್ಲಿಗೆ ಕರ್ಕೊಂಡು ಬಂದೆ.... ಇಲ್ಲೇನು ನಿನ್ನ ಮೊಂಡಾಟ.... ನಾನೇನು ನಿನ್ನನ್ನ ತಿಂದು ಹಾಕಿ ಬಿಡುಲ್ಲ...."

"ನಾನು ಸಿನಿಮಾನ ನೋಡ್ಬೇಕು..."

"ಏನಿದೆ ಸಿನಿಮಾದಲ್ಲಿ ? ಮದುವೆಯಾದ್ಮೇಲೆ ಎಷ್ಟು ಬೇಕೋ ಅಷ್ಟು ಸಿನಿಮಾಕ್ಕೆ ಕರ್ಕೊಂಡು ಹೋಗ್ತೀನಿ... ಈಗ ಸುಮ್ಮನಿರು..."

"ನಂಗೆ ಭಯ ಆಗುತ್ತೆ.. ಯಾರಾದ್ರೂ ನೋಡಿದ್ರೆ?...."

"ಯಾರೂ ನೋಡುಲ್ಲ... ನೋಡಿದ್ರೂ ಯಾರು ನಿಮ್ಮಪ್ಪಂಗೆ ಹೇಳುಲ್ಲ... ಹೇಳಿದ್ರೂ ನಂಗೆ ಭಯ ಇಲ್ಲ... ಮಂಗಳಾ... ನಿನ್ನ ಸನಿಹ ನನ್ನಲ್ಲಿ ಹುಚ್ಚು ಎಬ್ಬಿಸುತ್ತೆ. ಆದಷ್ಟು ಬೇಗ ಮದುವೆಯಾಗಿ ಬಿಡೋಣ... ನಂಗೆ ನೀನು ಬೇಕು. ನಿಂಗೆ ಅಂತ ಆಸೆ ಆಗುಲ್ವಾ?.... ನನ್ನ ಕಾಗದಗಳಿಗೆ ಯಾಕೆ ಉತ್ತರ ಬರೀಲಿಲ್ಲ?...."

"ನಂಗೆ ಓದುಕ್ಕೆ ಪುರುಸೊತ್ತೇ ಆಗ್ಲಿಲ್ಲ..."

ಅವನು ಸರ್ರನೆ ಅವಳ ಭುಜದ ಮೇಲಿಂದ ಕೈ ತೆಗೆದ. "ನಿಂಗೆ ನನ್ನ ಬಗ್ಗೆ ಅಷ್ಟು ಉದಾಸೀನಾನಾ?.... ನಾನು ನಿನಗೋಸ್ಕರ ಹಂಬಲಿಸಿ ಪತ್ರ ಬರೆಯೋದು... ನಿಂಗೆ ಓದುಕ್ಕೆ ಮನಸ್ಸಿಲ್ಲ.... ಅಲ್ವಾ?...."

"ಕೋಪಿಸ್ಕೋ ಬೇಡಿ.. ಮೆಲ್ಲಗೆ ಮಾತಾಡಿ.... ಅಣ್ಣನ ಹತ್ರ ಮಾತಾಡಿ..."

"ನಿಮ್ಮಪ್ಪನ ಹತ್ರ ಏನು ಮಾತಾಡಿ ಏನು ಪ್ರಯೋಜನ? ನಿನಗೆ ರಸಿಕತನವೇ ಗೊತ್ತಿಲ್ಲ. ಪ್ರೀತಿಯ ಧಾರೆಯನ್ನೇ ಹರಿಸಿ ಪತ್ರ ಬರೆದಿದ್ದೆ... ಓದಿದ್ದರೆ ನಿಂಗೂ ಅರ್ಥ ಆಗ್ತಿತ್ತು.. ಇನ್ನು ನಾನು ನಿನಗೆ ಪತ್ರಗಳನ್ನೇ ಬರೆಯೋಲ್ಲ... ನಿಮ್ಮ ಅಮ್ಮನ ಸೇವೆ ಮಾಡ್ಕೊಂಡು ಇಲ್ಲೇ ಬಿದ್ದಿರು."

"ಯಾಕೆ ಹೀಗೆಲ್ಲಾ ಮಾತಾಡ್ತೀರಿ? ನನ್ನ ಕಷ್ಟ ನಿಮಗೆ ಹೇಗೆ ತಿಳಿಯುತ್ತೇ ? ನಾನೇನು ಬೇಕೂಂತ ಮದುವೇನ ಮುಂದಕ್ಕೆ ಹಾಕಿದ್ನಾ?.... ಅಮ್ಮಂಗೆ ಕಾಲಿನ ಮೂಳೆ ಮುರಿದಿದೆ. ಮಲಗಿದ್ದಾಳೆ... ಸಧ್ಯದಲ್ಲೇ ಅಕ್ಕ ಬಾಣಂತನಕ್ಕೆ ಬರ್ತಾಳೆ. ಅವಳ ಬಾಣಂತನ ಮುಗೀತಾ ಇದ್ದ ಹಾಗೇ ನಮ್ಮ ಮದುವೆ..."

"ಸರಿ ಹೋಯ್ತು... ನಾನು ಅದುವರೆಗೂ ಕಾಯ್ಬೇಕಾ? ನನಗೆ ಬುದ್ಧಿ ಇಲ್ಲ... ನಡೀ... ಎದ್ದು ಹೋಗೋಣ..." ಅವನು ಎದ್ದ... ಅವನು ಕೋಪಗೊಂಡಿದ್ದ.

"ಪೂರ್ತಿ ಸಿನಿಮಾ ನೋಡಿ ಹೋಗೋಣ. ದುಡ್ಡು ಕೊಟ್ಟು ಟಿಕೆಟ್ ತಗೊಂಡಿದೀವಲ್ಲ... ಕೂತ್ಕೊಳ್ಳಿ... ಇನ್ನೂ ಇಂಟರ್‌ವೆಲ್ ಕೂಡಾ ಬಂದಿಲ್ಲ..."

"ನನಗೆ ನೋಡುವ ಮನಸ್ಸಿಲ್ಲ. ನಿನ್ನ ಜೊತೆ ಸಮಯ ಕಳೆಯೋಣ ಅಂತ ಇಲ್ಲಿಗೆ ಕರ್ಕೊಂಡು ಬಂದೆ... ನೀನು ಬೇಕಾದ್ರೆ ನೋಡ್ಕೋ ನಾನು ಹೊರಗೆ ಹೋಗ್ತೀನಿ ಅವನು ತಿರುಗಿದಾಗ, ಅವಳು ಅವನ ಷರಟನ್ನು ಹಿಡಿದು ನಿಲ್ಲಿಸಿದಳು.

"ಬಿಡು..." ಅವನು ಎತ್ತರದ ದನಿಯಲ್ಲಿಹೇಳಿದಾಗ ನಾಲ್ಕೈದು ಸಾಲು ಮುಂದಿನ ಸೀಟಿನಲ್ಲಿ ಕುಳಿತಿದ್ದವರು ತಿರುಗಿ ನೋಡಿದಳು.

"ಎದ್ದು ಹೋಗ್ರೀ... ಅದೇನು ಗುಸು ಗುಸು ಅಂತ ಮಾತಾಡ್ತಾನೇ ಇದೀರಿ... ಸಿನಿಮಾ ನೋಡೋಕೆ ಬಂದಿದೀರೋ, ಸರಸ ಆಡೋಕೆ ಬಂದಿದೀರೋ....."

ಚಂದ್ರು ಸರಸರನೆ ಅಲ್ಲಿಂದ ಹೊರ ನಡೆದಿದ್ದ. ಇವಳಿಗೆ ಅಳು ಬರುವಂತಾಗಿತ್ತು. ಸಿನಿಮಾ ನೋಡಲಾಗಿರಲಿಲ್ಲ. ಅವನ ವರ್ತನೆ ಬೇಸರವನ್ನುಂಟು ಮಾಡಿತ್ತು. ಮಾತುಗಳು ಆಂತಕವನ್ನುಂಟು ಮಾಡಿದ್ದವು. ಕೆಳಗಿನ ಸಾಲಿಲ್ಲಿ ಕುಳಿತಿದ್ದವರು ಗದರಿದ್ದಾರೆ... ಇನ್ನು ಅಲ್ಲಿ ಕುಳಿತಿರುವುದು ಸರಿ ಇಲ್ಲ ಅಂತ ಎನಿಸಿತ್ತು. ಕತ್ತಲೆಯಲ್ಲಿ ತಡವರಿಸುತ್ತಾ ಬಾಗಿಲ ಬಳಿಗೆ ಬಂದು ಪರದೆಯನ್ನು ಸರಿಸಿದಳು. ಹೊರಗೆ ಇನ್ನೂ ಬೆಳಕಿತ್ತು... ಹೊರಗೆ ಹೋಗಲೋ ಬೇಡವೋ ಅಂತ ಅನುಮಾನಿಸಿದಳು. ಇವನು ಎದ್ದು ಹೋಗಿದ್ದಾನೆ.... ತಾನು ಸಿನಿಮಾ ನೋಡುತ್ತಾ ಕುಳಿತರೆ ಅವನ ಕೋಪ ಮತ್ತೂ ಹೆಚ್ಚಾಗಬಹುದು. ಹೊರಗೆಲ್ಲಾದರೂ ನಿಂತಿರುತ್ತಾನೆ, ಪುಸಲಾಯಿಸಿ ಮತ್ತೆ ಒಳಕ್ಕೆ ಕರೆದುಕೊಂಡು ಬರಬಹುದು ಎಂದುಕೊಂಡು ಹೊರಗೆ ಬಂದಳು. ಇವಳು ಎದ್ದು ಬರುವಳೆಂದು ನಿರೀಕ್ಷಿಸಿದ್ದ ಚಂದ್ರು ಇವಳನ್ನು ಸಮೀಪಿಸಿದ. ಇವಳು ಬೆಚ್ಚಿದಳು. "ಯಾಕೆ ಎದ್ದು ಬಂದುಬಿಟ್ಟೆ? ಭಯ ಆಯ್ತಾ?.... ಬೇರೆ ಯಾರಾದ್ರೂ ಬಂದು ನಿನ್ನ ಪಕ್ಕ ಕುಳಿತ್ಕೊಂಡ್ರಾ ?..." ಕೇಳಿದ.

"ನಂಗೆ ಸಿನಿಮಾ ನೋಡ್ಬೇಕು ಅಂತ ಆಸೆ ಇತ್ತು... ಬರ್ತೀರಾ ಒಳಗೆ ಹೋಗೋಣ..." ಆಸೆಯಿಂದ ಕೇಳಿದಳು.

" ಈ ಸಿನಿಮಾನ ಎರಡೆರಡು ಸಾರಿ ನೋಡಿದೀನಿ. ನಾನೇ ಕತೆ ಹೇಳ್ತೀನಿ... ನಿನ್ನನ್ನು ಕರ್ಕೊಂಡು ಬಂದದ್ದೇ ತಪ್ಪಾಯ್ತು... ನಡೀ ನಿನ್ನನ್ನ ಮನೆಗೆ ತಲುಪಿಸಿ, ನಾನು ಇವತ್ತೇ ಊರಿಗೆ ವಾಪಸ್ಸು ಹೊರಟು ಹೋಗ್ತೀನಿ..." ಅವನು ಮುಂದೆ ಮುಂದೆ ನಡೆದು ಮೆಟ್ಟಿಲುಗಳನ್ನಿಳಿದ. ವಿಧಿ ಇಲ್ಲದೇ ಅವಳೂ ಕೆಳಗಿಳಿದಳು. ಅವನ ಮೇಲೆ ಬೇಸರ ಉಂಟಾಗಿತ್ತು. ಮನೆಯ ದಾರಿಯನ್ನು ಹಿಡಿಯುವ ಬದಲು ಸಮೀಪದಲ್ಲಿದ್ದ ಒಂದು ಲಾಡ್ಜ್‌ಗೆ ಕರೆದುಕೊಂಡು ಬಂದ. "ಏನಾದ್ರೂ ತಿಂಡಿ ತಗೋತೀಯಾ?...." ಮೃದುವಾಗಿ ಕೇಳಿದ. ಬೇಡ ಎನ್ನುವಂತೆ ತಲೆಯಾಡಿಸಿದಳು. "ಸರಿ ನಿನ್ನ ಹಣೇಬರಹ.... ಇಲ್ಲಿಯ ರೂಂ ಒಂದರಲ್ಲಿ ಇಳಿದುಕೊಂಡಿದ್ದೀನಿ... ನಿನಗೋಸ್ಕರ ಏನೇನೋ ತಂದಿದ್ದೆ... ಕೊಡ್ತೀನಿ...ಬಾ...." ಎಂದ.

ಅವನ ಹಿಂದೆ ರೂಮಿಗೆ ಬಂದಳು. ಅವನನ್ನು ಏನಾದ್ರೂ ಕೇಳುವ ಮನಸ್ಸೂ ಇರಲಿಲ್ಲ. ಬಾಗಿಲ ಹೊರಗೇ ನಿಂತಿದ್ದವಳನ್ನು ಒಳಕ್ಕೆ ಎಳೆದ... ಅಲ್ಲೇ ನಿಂತಿದ್ರೆ ನೋಡಿದವರು ಏನಂದ್ಕೊಳ್ತಾರೆ... ಕೂತ್ಕೋ..." ಎಂದ. ಅಲ್ಲಿದ್ದ ಮಂಚದ ಮೇಲೆ ಕುಳಿತಳು. ಅವನೂ ಅವಳ ಮಗ್ಗುಲಲ್ಲಿ ಕುಳಿತು, ತಾನು ಅವಳಿಗೆಂದು ತಂದಿದ್ದ ಸೀರೆಗಳನ್ನು, ನಕಲಿ ಸರಗಳನ್ನೂ ಚಪ್ಪಲಿಯನ್ನೂ ತೋರಿಸಿದ."ಇವೆಲ್ಲಾ ನಿಂಗೆ ಇಷ್ಟ ಆಯ್ತಾ ನೋಡು... ಚಪ್ಪಲಿ ಹಿಡಿಸುತ್ತಾ ಹಾಕ್ಕೊಂಡು ನೋಡು..."

"ನನ್ನ ಹತ್ತಿರ ಇತ್ತಲ್ಲಾ... ಇದನ್ನೆಲ್ಲಾ ಯಾಕೆ ತಂದ್ರಿ?"

"ನನ್ನ ಹೆಂಡತಿಯಾಗೋಳಿಗೆ ತರಬೇಕು, ಕೊಡಬೇಕು ಅಂತ ಅನ್ನಿಸ್ತು. ಯಾಕೆ ನಿನಗೆ ಇಷ್ಟವಾಗಲಿಲ್ವಾ?.... ಬೇಕಾದ್ರೆ ಬೇರೆ ಕೊಡಿಸ್ತೀನಿ..."

"ಏನೂ ಬೇಡ... ಈಗ ಮನೆಗೆ ಹೋಗೋಣ..."

"ಮನೆ.. ಮನೆ.. ಅಲ್ಲಿ ನಮ್ಮ ಪಾಡಿಗೆ ನಾವು ಕುಳಿತು ಎರಡು ಮಾತನಾಡೋಕೂ ಆಸ್ಪದವಿಲ್ಲ... ನಾನು ನಿನಗೋಸ್ಕರಾವೇ ಎರಡು ದಿನ ರಜ ಹಾಕಿ ಬಂದಿದೀನಿ.... ಸುಮ್ಮನೆ ನಾನು ಹೇಳಿದ ಹಾಗೆ ಕೇಳು..." ಅವನು ಅವಳನ್ನು ಸಮೀಪಿಸಿ, ಅವಳ ಮೈಗೆ ತನ್ನ ಮೈಯನ್ನು ಒತ್ತಿದ... ಅವಳು ಸರ್ರನೆ ಎದ್ದು ನಿಂತು, ಬಾಗಿಲ ಬಳಿಗೆ ಸರಿದಳು. ಅವನು ಹಿಂದಿನಿಂದ ಬಂದು ಅವಳನ್ನು ತಬ್ಬಿಕೊಂಡ. ಮೈಯ ಶಕ್ತಿಯನ್ನೆಲ್ಲಾ ಬಿಟ್ಟು ಅವನಿಂದ, ಅಪ್ಪುಗೆಯನ್ನು ಬಿಡಿಸಿಕೊಂಡು, ಅವನನ್ನು ದೂರ ತಳ್ಳಿದಳು.

"ನನ್ನ ತಂಟೆಗೆ ಬರ್ಬೇಡಿ... ಈಗ ಮನೆಗೆ ಹೋಗೋಣ..." ದೈನ್ಯದಿಂದ ಹೇಳಿದಳು.

"ಹೋಗೋಣ... ಕರ್ಕೊಂಡು ಹೋಗ್ತೀನಿ... ಒಂದೇ ಒಂದು ಸಾರಿ ನಾನು ಹೇಳಿದ ಹಾಗೆ ಕೇಳಿಬಿಡು..." ಮತ್ತೆ ಬಳಿ ಸಾರಿದ.

"ಬೇಡ... ದಯವಿಟ್ಟು ನನ್ನನ್ನು ಕೆಡಿಸ್ಬೇಡಿ.. ಬಿಟ್ಬಿಡೀ..."

"ನಾನು ನಿನ್ನ ಗಂಡನಾಗೋನು... ಕೆಡಿಸುಲ್ಲ... ಪ್ರೀತಿ ಮಾಡ್ತೀನಿ..."

"ಮದುವೆ ಆಗೋವರ್ಗೂ ಇದೆಲ್ಲಾ ಬೇಡ... ಇದು ಸರಿ ಅಲ್ಲ..."

"ಸರಿ ಯಾವ್ದು, ತಪ್ಪು ಯಾವ್ದು ಅಂತ ನಂಗೆ ಹೇಳಿಕೊಡ್ಬೇಡ. ನಿಂಗೆ ನನ್ನ ಮೇಲೆ ಮನಸ್ಸಿಲ್ಲ. ಬೇರೆ ಯಾವೋನ್ನ ಸ್ನೇಹ ಇದೆ ಹೇಳು... ನನ್ನ ಪತ್ರಗಳಿಗೆ ಉತ್ತರ ಬರೆಯಲಿಲ್ಲ... ನನ್ನ ಸಂಗ ನಿನಗೆ ಬೇಕಿಲ್ಲ... ಯಾರು ಅವನು ?... ನನಗಿಂತ ಚೆನ್ನಾಗಿದಾನಾ? ನನಗಿಂತ ಶ್ರೀಮಂತನಾ?"

"ಹೀಗೆಲ್ಲಾ ಮಾತಾಡ್ಬೇಡಿ... ನಂಗೆ ಅಸಹ್ಯ ಆಗುತ್ತೆ..."

"ಓಹೋ... ಅಸಹ್ಯ ಆಗಿ ಹೋದ್ನಾ.. ನಾನು? ನನ್ನನ್ನೇ ಮದುವೆಯಾಗ್ಬೇಕು... ನನ್ನ ಜೊತೆಯೇ ಮಲಗ್ಬೇಕು ಹಾಗೆ ಮಾಡ್ತೀನಿ... ಸುಮ್ಮನಿದ್ದರೆ, ನಿನಗೆ ಕೊಬ್ಬು...."

"ಇಲ್ಲ, ನಾನು ಯಾರನ್ನೂ ಪ್ರೀತಿಸ್ತಿಲ್ಲ... ಆದರೆ ಮದುವೆ ಆಗೋವರ್ಗೂ ನನಗೆ ಏನೂ ಮಾಡ್ಬೇಡಿ" ಕೈ ಮುಗಿದು ಕೇಳಿಕೊಂಡಳು.

"ಇಲ್ಲ... ಇವತ್ತು ನಿನ್ನನ್ನು ಬಿಡುಲ್ಲ... ನಿನಗೋಸ್ಕರ ಬಂದಿದೀನಿ... ನಿನ್ನನ್ನು ಅನುಭವಿಸಿಯೇ ತೀರ್ತೀನಿ." ಎನ್ನುತ್ತಾ ಅವಳನ್ನು ದರದರನೆ ಎಳೆದು ಮಂಚದ ಮೇಲೆ ಕೆಡವಿದ. ಅವಳು ಜೋರಾಗಿ ಕಿರುಚಿಕೊಂಡಳು. ದೇವರನ್ನು ನೆನೆದಳು. ಅಷ್ಟರಲ್ಲಿ ರೂಮಿನ ಬಾಗಿಲನ್ನು ಯಾರೋ ಬಡಿದ ಸದ್ದಾಯಿತು. "ಕಿರುಚ್ಬೇಡ..." ಎಂದು ಬಾಯ ಮೇಲೆ ಬೆರಳಿಟ್ಟು ಎಚ್ಚರಿಕೆ ನೀಡಿ, ಬಾಗಿಲನ್ನು ತೆರೆದ.... ಎದುರಿಗೆ ಹೋಟೆಲ್ಲಿನ ಸಿಬ್ಬಂದಿಯವ ನೊಬ್ಬ ನಿಂತಿದ್ದ..."ಏನು ? ಏನ್ಬೇಕು..." ಗದರಿಸಿ ಕೇಳಿದ...

"ನಿಮ್ಮ ಬಾತ್‌ರೂಂನಿಂದ ನೀರು ಸುರಿದು ಹೋಗ್ತಿದೆ. ರಿಪೇರಿ ಮಾಡ್ಬೇಕು..."

"ಆಮೇಲೆ ಬಾ... ಈಗ ನನಗೆ ತೊಂದರೆ ಕೊಡ್ಬೇಡ..."

"ಐದು ನಿಮಿಷದ ಕೆಲಸ ಸಾರ್.... ಮಾಡದಿದ್ರೆ ಮ್ಯಾನೇಜರ್ ಬೈತಾರೆ... ಎನ್ನುತ್ತಾ ಮಂಚದ ಮೇಲೆ ಕುಳಿತಿದ್ದ ಮಂಗಳನ ಕಡೆ ನೋಡಿದ. ಅವಳು ಕಸಿವಿಸಿಯಿಂದ ಮುಖ ತಗ್ಗಿಸಿದಳು. ಚಂದ್ರನ ಮುಖ ಕೆಟ್ಟಿತ್ತು... ಬೆವರನ್ನು ಒರೆಸಿಕೊಂಡ.

"ಸರಿ... ಅದೇನು ನೋಡ್ತೀಯೋ... ನೋಡಿ, ಬೇಗ ಹೋಗು" ಎಂದು ಒದರಿ, ಅವನು ಬಾಗಿಲಿಗೆ ಅಡ್ಡವಾಗಿ ನಿಂತ... ಅವನು ಬಚ್ಚಲ ಮನೆಯ ಬಾಗಿಲನ್ನು ತೆಗೆಯುತ್ತಿದ್ದಂತೆ ಗಬ್ಬು ವಾಸನೆ ಮೂಗಿಗೆ ಬಡಿಯಿತು.

"ಏನ್ಸಾರ್ ಇಷ್ಟು ಗಲೀಜಾಗಿದೆ..." ಅವನು ಅಲ್ಲಿಂದಲೇ ಕೂಗಿದ. ಇವನು ಕೇಳಿಸದವನಂತೆ ನಿಂತ. ಮಂಗಳ ಮೂಗನ್ನು ಮುಚ್ಚಿಕೊಂಡು ಹೊರಕ್ಕೆ ಬಂದು ನಿಂತಳು...

"ನೀನ್ಯಾಕೆ ಹೊರಕ್ಕೆ ಬಂದೆ ?.... ನಡೀ ಒಳಕ್ಕೆ." ಗದರಿದ.

"ಒಳಗೆ ಕೆಟ್ಟ ವಾಸನೆ ತುಂಬಿಕೊಂಡಿದೆ. ವಾಕರಿಕೆ ಬರ್ತಿದೆ... ಅಲ್ಲಿರುಕ್ಕೆ ಆಗುಲ್ಲ. .. ನಾನು ಇಲ್ಲಿ ಕೂತಿರ್ತೀನಿ." ಎನ್ನುತ್ತಾ ಅಲ್ಲಿ ಕಾರಿಡಾರಿನ ಮೊಟುಗೋಡೆಯ ಮೇಲೆ ಕುಳಿತಳು. ಆಗಾಗ್ಗೆ ಚಂದ್ರನ ಕಡೆ ನೋಡುತ್ತಿದ್ದಳು. ರಿಪೇರಿಯವನು ಎಷ್ಟು ಹೊತ್ತಾದರೂ ಹೊರಗೆ ಬರದಿದ್ದಾಗ ಚಂದ್ರು ಒಳಗೆ ನಡೆದ.

ಆ ಸಮಯಕ್ಕೆ ಕಾಯುತ್ತಿದ್ದ ಮಂಗಳ ಎದ್ದು, ವೇಗವಾಗಿ ನಡೆದು ಹೋಟೆಲ್ಲಿನಿಂದ ಆಚೆಗೆ ಬಂದಳು. ಚಂದ್ರ ತಿರುಗಿ ಬಂದು ನೋಡುವಷ್ಟರಲ್ಲಿ ಅವಳು ಕಣ್ಮರೆಯಾಗಿದ್ದಳು. ಹೋಟೆಲ್ಲಿನ ಮುಂಬಾಗಿಲ ಕಡೆಗೆ ಓಡಿ ಹೋಗಿ ಅವಳನ್ನು ನಿಲ್ಲಿಸಬೇಕೆಂದುಕೊಂಡವನು, ಏನನ್ನೋ ಯೋಚಿಸಿ ಸುಮ್ಮನೇ ನಿಂತು ಕೈ ಕೈ ಹೊಸಕಿಕೊಂಡ. ಹಲ್ಲು ಹಲ್ಲು ಕಡಿದ. ರಿಪೇರಿಯವನಿಗೆ ಹಿಡಿ ಶಾಪ ಹಾಕಿದ... ರಿಪೇರಿಯವನು, ಕೆಲಸ ಮುಗಿಸಿ ಹೊರಬರುವಷ್ಟರಲ್ಲಿ ಅರ್ಧಗಂಟೆ ಹಿಡಿಸಿತ್ತು... ಅವನನ್ನು ಕಳಿಸಿ,

ಅವನ ಹಿಂದೆ ರೂಮಿಗೆ ಬಂದಳು. ಅವನನ್ನು ಏನಾದ್ರೂ ಕೇಳುವ ಮನಸ್ಸೂ ಇರಲಿಲ್ಲ. ಬಾಗಿಲ ಹೊರಗೇ ನಿಂತಿದ್ದವಳನ್ನು ಒಳಕ್ಕೆ ಎಳೆದ... ಅಲ್ಲೇ ನಿಂತಿದ್ರೆ ನೋಡಿದವರು ಏನಂದ್ಕೊಳ್ತಾರೆ... ಕೂತ್ಕೋ..." ಎಂದ. ಅಲ್ಲಿದ್ದ ಮಂಚದ ಮೇಲೆ ಕುಳಿತಳು. ಅವನೂ ಅವಳ ಮಗ್ಗುಲಲ್ಲಿ ಕುಳಿತು, ತಾನು ಅವಳಿಗೆಂದು ತಂದಿದ್ದ ಸೀರೆಗಳನ್ನು, ನಕಲಿ ಸರಗಳನ್ನೂ ಚಪ್ಪಲಿಯನ್ನೂ ತೋರಿಸಿದ."ಇವೆಲ್ಲಾ ನಿಂಗೆ ಇಷ್ಟ ಆಯ್ತಾ ನೋಡು... ಚಪ್ಪಲಿ ಹಿಡಿಸುತ್ತಾ ಹಾಕ್ಕೊಂಡು ನೋಡು..."

"ನನ್ನ ಹತ್ತಿರ ಇತ್ತಲ್ಲಾ... ಇದನ್ನೆಲ್ಲಾ ಯಾಕೆ ತಂದ್ರಿ?"

"ನನ್ನ ಹೆಂಡತಿಯಾಗೋಳಿಗೆ ತರಬೇಕು, ಕೊಡಬೇಕು ಅಂತ ಅನ್ನಿಸ್ತು. ಯಾಕೆ ನಿನಗೆ ಇಷ್ಟವಾಗಲಿಲ್ವಾ?.... ಬೇಕಾದ್ರೆ ಬೇರೆ ಕೊಡಿಸ್ತೀನಿ..."

"ಏನೂ ಬೇಡ... ಈಗ ಮನೆಗೆ ಹೋಗೋಣ..."

"ಮನೆ.. ಮನೆ.. ಅಲ್ಲಿ ನಮ್ಮ ಪಾಡಿಗೆ ನಾವು ಕುಳಿತು ಎರಡು ಮಾತನಾಡೋಕೂ ಆಸ್ಪದವಿಲ್ಲ... ನಾನು ನಿನಗೋಸ್ಕರಾವೇ ಎರಡು ದಿನ ರಜ ಹಾಕಿ ಬಂದಿದೀನಿ.... ಸುಮ್ಮನೆ ನಾನು ಹೇಳಿದ ಹಾಗೆ ಕೇಳು..." ಅವನು ಅವಳನ್ನು ಸಮೀಪಿಸಿ, ಅವಳ ಮೈಗೆ ತನ್ನ ಮೈಯನ್ನು ಒತ್ತಿದ... ಅವಳು ಸರ್‍ರನೆ ಎದ್ದು ನಿಂತು, ಬಾಗಿಲ ಬಳಿಗೆ ಸರಿದಳು. ಅವನು ಹಿಂದಿನಿಂದ ಬಂದು ಅವಳನ್ನು ತಬ್ಬಿಕೊಂಡ. ಮೈಯ ಶಕ್ತಿಯನ್ನೆಲ್ಲಾ ಬಿಟ್ಟು ಅವನಿಂದ, ಅಪ್ಪುಗೆಯನ್ನು ಬಿಡಿಸಿಕೊಂಡು, ಅವನನ್ನು ದೂರ ತಳ್ಳಿದಳು.

"ನನ್ನ ತಂಟೆಗೆ ಬರ್ಬೇಡಿ... ಈಗ ಮನೆಗೆ ಹೋಗೋಣ..." ದೈನ್ಯದಿಂದ ಹೇಳಿದಳು.

"ಹೋಗೋಣ... ಕರ್ಕೊಂಡು ಹೋಗ್ತೀನಿ... ಒಂದೇ ಒಂದು ಸಾರಿ ನಾನು ಹೇಳಿದ ಹಾಗೆ ಕೇಳಿಬಿಡು..." ಮತ್ತೆ ಬಳಿ ಸಾರಿದ.

"ಬೇಡ... ದಯವಿಟ್ಟು ನನ್ನನ್ನು ಕೆಡಿಸ್ಬೇಡಿ.. ಬಿಟ್ಬಿಡೀ..."

"ನಾನು ನಿನ್ನ ಗಂಡನಾಗೋನು... ಕೆಡಿಸುಲ್ಲ... ಪ್ರೀತಿ ಮಾಡ್ತೀನಿ..."

"ಮದುವೆ ಆಗೋವರ್ಗೂ ಇದೆಲ್ಲಾ ಬೇಡ... ಇದು ಸರಿ ಅಲ್ಲ..."

"ಸರಿ ಯಾವ್ದು, ತಪ್ಪು ಯಾವ್ದು ಅಂತ ನಂಗೆ ಹೇಳಿಕೊಡ್ಬೇಡ. ನಿಂಗೆ ನನ್ನ ಮೇಲೆ ಮನಸ್ಸಿಲ್ಲ. ಬೇರೆ ಯಾವೋನ್ನ ಸ್ನೇಹ ಇದೆ ಹೇಳು... ನನ್ನ ಪತ್ರಗಳಿಗೆ ಉತ್ತರ ಬರೆಯಲಿಲ್ಲ... ನನ್ನ ಸಂಗ ನಿನಗೆ ಬೇಕಿಲ್ಲ... ಯಾರು ಅವನು ?... ನನಗಿಂತ ಚೆನ್ನಾಗಿದಾನಾ? ನನಗಿಂತ ಶ್ರೀಮಂತನಾ?"

"ಹೀಗೆಲ್ಲಾ ಮಾತಾಡ್ಬೇಡಿ... ನಂಗೆ ಅಸಹ್ಯ ಆಗುತ್ತೆ..."

"ಓಹೋ... ಅಸಹ್ಯ ಆಗಿ ಹೋದ್ನಾ.. ನಾನು? ನನ್ನನ್ನೇ ಮದುವೆಯಾಗ್ಬೇಕು... ನನ್ನ ಜೊತೆಯೇ ಮಲಗ್ಬೇಕು ಹಾಗೆ ಮಾಡ್ತೀನಿ... ಸುಮ್ಮನಿದ್ದರೆ, ನಿನಗೆ ಕೊಬ್ಬು...."

"ಇಲ್ಲ, ನಾನು ಯಾರನ್ನೂ ಪ್ರೀತಿಸ್ತಿಲ್ಲ... ಆದರೆ ಮದುವೆ ಆಗೋವರ್ಗೂ ನನಗೆ ಏನೂ ಮಾಡ್ಬೇಡಿ" ಕೈ ಮುಗಿದು ಕೇಳಿಕೊಂಡಳು.

"ಇಲ್ಲ... ಇವತ್ತು ನಿನ್ನನ್ನು ಬಿಡುಲ್ಲ... ನಿನಗೋಸ್ಕರ ಬಂದಿದೀನಿ... ನಿನ್ನನ್ನು ಅನುಭವಿಸಿಯೇ ತೀರ್ತೀನಿ." ಎನ್ನುತ್ತಾ ಅವಳನ್ನು ದರದರನೆ ಎಳೆದು ಮಂಚದ ಮೇಲೆ ಕೆಡವಿದ. ಅವಳು ಜೋರಾಗಿ ಕಿರುಚಿಕೊಂಡಳು. ದೇವರನ್ನು ನೆನೆದಳು. ಅಷ್ಟರಲ್ಲಿ ರೂಮಿನ ಬಾಗಿಲನ್ನು ಯಾರೋ ಬಡಿದ ಸದ್ದಾಯಿತು. "ಕಿರುಚ್ಬೇಡ..." ಎಂದು ಬಾಯ ಮೇಲೆ ಬೆರಳಿಟ್ಟು ಎಚ್ಚರಿಕೆ ನೀಡಿ, ಬಾಗಿಲನ್ನು ತೆರೆದ.... ಎದುರಿಗೆ ಹೋಟೆಲ್ಲಿನ ಸಿಬ್ಬಂದಿಯವ ನೊಬ್ಬ ನಿಂತಿದ್ದ..."ಏನು ? ಏನ್ಬೇಕು..." ಗದರಿಸಿ ಕೇಳಿದ...

"ನಿಮ್ಮ ಬಾತ್‌ರೂಂನಿಂದ ನೀರು ಸುರಿದು ಹೋಗ್ತಿದೆ. ರಿಪೇರಿ ಮಾಡ್ಬೇಕು..."

"ಆಮೇಲೆ ಬಾ... ಈಗ ನನಗೆ ತೊಂದರೆ ಕೊಡ್ಬೇಡ..."

"ಐದು ನಿಮಿಷದ ಕೆಲಸ ಸಾರ್.... ಮಾಡದಿದ್ರೆ ಮ್ಯಾನೇಜರ್ ಬೈತಾರೆ... ಎನ್ನತ್ತಾ ಮಂಚದ ಮೇಲೆ ಕುಳಿತಿದ್ದ ಮಂಗಳನ ಕಡೆ ನೋಡಿದ. ಅವಳು ಕಸಿವಿಸಿಯಿಂದ ಮುಖ ತಗ್ಗಿಸಿದಳು. ಚಂದ್ರನ ಮುಖ ಕೆಟ್ಟಿತ್ತು... ಬೆವರನ್ನು ಒರೆಸಿಕೊಂಡ.

"ಸರಿ... ಅದೇನು ನೋಡ್ತೀಯೋ... ನೋಡಿ, ಬೇಗ ಹೋಗು" ಎಂದು ಒದರಿ, ಅವನು ಬಾಗಿಲಿಗೆ ಅಡ್ಡವಾಗಿ ನಿಂತ... ಅವನು ಬಚ್ಚಲ ಮನೆಯ ಬಾಗಿಲನ್ನು ತೆಗೆಯುತ್ತಿದ್ದಂತೆ ಗಬ್ಬು ವಾಸನೆ ಮೂಗಿಗೆ ಬಡಿಯಿತು.

"ಏನ್ಸಾರ್ ಇಷ್ಟು ಗಲೀಜಾಗಿದೆ..." ಅವನು ಅಲ್ಲಿಂದಲೇ ಕೂಗಿದ. ಇವನು ಕೇಳಿಸದವನಂತೆ ನಿಂತ. ಮಂಗಳ ಮೂಗನ್ನು ಮುಚ್ಚಿಕೊಂಡು ಹೊರಕ್ಕೆ ಬಂದು ನಿಂತಳು...

"ನೀನ್ಯಾಕೆ ಹೊರಕ್ಕೆ ಬಂದೆ ?.... ನಡೀ ಒಳಕ್ಕೆ." ಗದರಿದ.

"ಒಳಗೆ ಕೆಟ್ಟ ವಾಸನೆ ತುಂಬಿಕೊಂಡಿದೆ. ವಾಕರಿಕೆ ಬರ್ತಿದೆ... ಅಲ್ಲಿರುಕ್ಕೆ ಆಗುಲ್ಲ. .. ನಾನು ಇಲ್ಲಿ ಕೂತಿರ್ತೀನಿ." ಎನ್ನುತ್ತಾ ಅಲ್ಲಿ ಕಾರಿಡಾರಿನ ಮೋಟುಗೋಡೆಯ ಮೇಲೆ ಕುಳಿತಳು. ಆಗಾಗ್ಗೆ ಚಂದ್ರನ ಕಡೆ ನೋಡುತ್ತಿದ್ದಳು. ರಿಪೇರಿಯವನು ಎಷ್ಟು ಹೊತ್ತಾದರೂ ಹೊರಗೆ ಬರದಿದ್ದಾಗ ಚಂದ್ರು ಒಳಗೆ ನಡೆದ.

ಆ ಸಮಯಕ್ಕೆ ಕಾಯುತ್ತಿದ್ದ ಮಂಗಳ ಎದ್ದು, ವೇಗವಾಗಿ ನಡೆದು ಹೋಟೆಲ್ಲಿನಿಂದ ಆಚೆಗೆ ಬಂದಳು. ಚಂದ್ರ ತಿರುಗಿ ಬಂದು ನೋಡುವಷ್ಟರಲ್ಲಿ ಅವಳು ಕಣ್ಮರೆಯಾಗಿದ್ದಳು. ಹೋಟೆಲ್ಲಿನ ಮುಂಬಾಗಿಲ ಕಡೆಗೆ ಓಡಿ ಹೋಗಿ ಅವಳನ್ನು ನಿಲ್ಲಿಸಬೇಕೆಂದುಕೊಂಡವನು, ಏನನ್ನೋ ಯೋಚಿಸಿ ಸುಮ್ಮನೇ ನಿಂತು ಕೈ ಕೈ ಹೊಸಕಿಕೊಂಡ. ಹಲ್ಲು ಹಲ್ಲು ಕಡಿದ. ರಿಪೇರಿಯವನಿಗೆ ಹಿಡಿ ಶಾಪ ಹಾಕಿದ... ರಿಪೇರಿಯವನು, ಕೆಲಸ ಮುಗಿಸಿ ಹೊರಬರುವಷ್ಟರಲ್ಲಿ ಅರ್ಧಗಂಟೆ ಹಿಡಿಸಿತ್ತು... ಅವನನ್ನು ಕಳಿಸಿ,

ಮಂಚದ ಮೇಲೆ ಉರುಳಿಕೊಂಡ. ಎಂಥಾ ಅವಕಾಶ ತಪ್ಪಿಹೋಯಿತು?.... ಸಹಕರಿಸುವಂತೆ ಅವಳನ್ನು ಒಪ್ಪಿಸುತ್ತಿದ್ದೆ. ಒಪ್ಪದಿದ್ದರೆ, ಹೆದರಿಸಿ ಬೆದರಿಸಿ, ಬಲವಂತ ಮಾಡುತ್ತಿದ್ದೆ... ಆಗ ಅವಳೂ ತಾನೇ ಏನು ಮಾಡುಕ್ಕೆ ಆಗುತ್ತಿತ್ತು... ಈ ಕಾರಣದಿಂದ ನಮ್ಮಿಬ್ಬರ ಮದುವೆ ಬೇಗ ನಡೆದು ಹೋಗುತ್ತಿತ್ತು... ಈಗ ಇವಳು ಮನೆಗೆ ಹೋಗಿ ಏನು ಹೇಳುತ್ತಾಳೋ... ತನ್ನ ಮೇಲೆ ಅಪವಾದ ಹೊರಿಸಿದರೆ?... ತಾನು ಹೋಗಿ ಅವಳನ್ನು ಕ್ಷಮೆ ಯಾಚಿಸಿದರೇ.. ಛೆ... ನಾನೇನು ಅಂಥಾ ತಪ್ಪನ್ನು ಮಾಡಿದ್ದೇನೆ...? ಹೇಗೂ ನಮ್ಮಿಬ್ಬರ ಮದುವೆ ಗೊತ್ತಾಗಿದೆ... ಇವಳು ಯಾರಿಗೂ ಹೇಳಿಕೊಳ್ಳು ವಂತಿಲ್ಲ... ಹೇಳಿದರೂ ಯಾರೂ ನಂಬುವುದಿಲ್ಲ... ಇವಳು ನನ್ನ ಆಸೆಗೆ ಸ್ಪಂದಿಸಲಿಲ್ಲ. ಇವಳಿಗೆ ಬುದ್ಧಿ ಕಲಿಸಲೇ ಬೇಕು... ತಾನು ಮಾಡಿದ್ದು ಸರಿ ಅಲ್ಲ ಅಂತ ಇವಳಿಗೆ ಅನ್ನಿಸಬೇಕು... ನನ್ನ ಕೈಕಾಲು ಹಿಡಿದು ನನ್ನನ್ನು ಬೇಡಿಕೊಳ್ಳಬೇಕು. ಹಾಗೆ ಮಾಡ್ತೀನಿ..." ಅಂತಂದುಕೊಂಡು ಎದ್ದ... ಅವಳಿಗೆಂದು ತಂದಿದ್ದ ಸೀರೆ, ಇತ್ಯಾದಿ ಗಳನ್ನು ತೆಗೆದಿಟ್ಟುಕೊಂಡ... ಅವಳು ಹಾಕಿಕೊಂಡಿದ್ದ ಚಪ್ಪಲಿಗಳು ಸಹ ಅಲ್ಲೇ ಬಿದ್ದಿದ್ದವು. ಅದನ್ನು ಒಂದು ದಿನಪತ್ರಿಕೆಯಲ್ಲಿ ಸುತ್ತಿಕೊಂಡು, ಎಲ್ಲವನ್ನು ಎತ್ತಿ ಕೊಂಡು, ರೂಮಿಗೆ ಬೀಗವನ್ನು ಹಾಕಿ ಮಂಗಳನ ಮನೆಯತ್ತ ನಡೆದ.

ಅನುಮಾನಿಸುತ್ತಲೇ ಮನೆಯ ಒಳಗೆ ಬಂದವನನ್ನು ರಾಮರಾಯರು ಆತ್ಮೀಯ ವಾಗಿ ಸ್ವಾಗತಿಸಿದರು... ಸ್ವಲ್ಪ ಸಮಾಧಾನವೆನ್ನಿಸಿತ್ತು. ಕುಳಿತ. ಸ್ಕೂಲಿನಿಂದ ಬಂದಿದ್ದ ಮಕ್ಕಳುಗಳು ಅವನನ್ನು ಸುತ್ತುವರೆದರು. ಅವನು ತನ್ನ ಕೈಯಲ್ಲಿದ ಚೀಲಗಳನ್ನು ಗೋಡೆಗೆ ಒರಗಿಸಿ ಇಟ್ಟ. ಉಭಯ ಕುಶಲೋಪರಿ ಜರುಗಿತು. ಮಂಗಳ ಮನೆಗೆ ಬಂದಿದಾಳೋ ಇಲ್ಲವೋ ಎಂದು ಕೇಳಲು ಹಿಂಜರಿದ. ಅವಳು ಒಳಗಿನಿಂದ ಬಿಸಿ ಬಿಸಿ ಕಾಫಿಯನ್ನು ತಂದಿತ್ತಾಗ ಕೆಂಗಣ್ಣುಗಳಿಂದ ಅವಳನ್ನು ನೋಡಿದ. ಅವಳು ನಕ್ಕಂತೆ ಅನ್ನಿಸಿತ್ತು....

"ತಗೊಳ್ಳಿ... ಕಾಫಿ ಕುಡೀರಿ... ಮಂಗಳಾ ತಿನ್ನೊಕ್ಕೆ ಏನಾದ್ರೂ ಇದ್ದರೆ ಕೊಡು..." ತಂದೆ ಹೇಳಿದಾಗ ಮಂಗಳ ಒಳಕ್ಕೆ ಹೋಗಿದ್ದಳು. ಎಂದೋ ಮಾಡಿದ್ದ ಕೋಡುಬಳೆಗಳು ಇದ್ದವು. ತಟ್ಟೆಯಲ್ಲಿ ಹಾಕಿಕೊಂಡು ತಂದಿತ್ತಳು... ಗಟಗಟನೆ ಕಾಫಿಯನ್ನು ಕುಡಿದು ಎದ್ದ.

"ಯಾವುದೋ ಆಫೀಸ್ ಕೆಲಸದ ಮೇಲೆ ಬಂದಿದ್ದೆ... ಹೊರಡ್ತೀನಿ..."

"ನನ್ನ ಕಾಗ್ದ ಬಂತಾ?... ಆಗಾಗ್ಗೆ ಬರ್ತಾ ಇರಿ..." ರಾಮರಾಯರು ವಿಶ್ವಾಸ ದಿಂದ ಹೇಳಿದಾಗ ಮನದಲ್ಲೇ ನಕ್ಕೊಂಡ. ಮಾತನಾಡದೇ ಹೊರನಡೆದ. ಹಿಂತಿರುಗಿ ನೋಡಲಿಲ್ಲ. ಮಂಗಳಾ ಹೊರಕ್ಕೆ ಬಂದಿರಲಿಲ್ಲ.

ಎರಡು ದಿನಗಳ ನಂತರ ಬಂದ ವಾರ್ತೆ ಸಿಡಿಲಿನಂತೆ ಎರಗಿತ್ತು. ಚಂದ್ರ ಪ್ರಯಾಣಿಸು

ತ್ತಿದ್ದ ಬಸ್ಸು, ವೇಗವಾಗಿ, ಎದುರಿನಿಂದ ಬರುತ್ತಿದ್ದ ಲಾರಿಯೊಂದಕ್ಕೆ ಡಿಕ್ಕಿ ಹೊಡೆದಿತ್ತು... ಅಸುನೀಗಿದ ಕೆಲವು ಪ್ರಯಾಣಿಕರಲ್ಲಿ ಚಂದ್ರನೂ ಒಬ್ಬನಾಗಿದ್ದ... ರಾಮರಾಯರು ವಿಷಯ ತಿಳಿದು ಕುಸಿದು ಕುಳಿತರು. ಮಂಗಳ ಯಾವ ಬಾವನೆಯನ್ನು ಪ್ರಕಟಗೊಳಿಸ ಲಿಲ್ಲ... ಮನದಲ್ಲೇ ದೇವರನ್ನು ವಂದಿಸಿದಳು.

ಆ ದಿನ ಧುಮುಗುಟ್ಟುತ್ತಿದ್ದ ಮುಖದೊಡನೆ ಮನೆಗೆ ವಾಪಸ್ಸಾಗಿದ್ದ ಮಗಳನ್ನು ಕಂಡು, ಜಾನಕಿ ಅಧೀರಳಾಗಿದ್ದಳು. ಏನೋ ನಡೆಯಬಾರದ್ದು ನಡೆದಿದೆ ಎಂದು ಊಹಿಸಿ, ಅವಳ ಹೃದಯ ನಡುಗಿತ್ತು. ಆದರೆ ಮಗಳನ್ನು ಕೇಳಲು ಹೆದರಿದಳು... ಕಾಲಿನಲ್ಲಿ ಚಪ್ಪಲಿಯೂ ಇರಲಿಲ್ಲ... ಒಬ್ಬಳೇ ಬಂದಿದ್ದಾಳೆ... ಅದನ್ನು ಕೇಳುವ ಧೈರ್ಯವೂ ಬರಲಿಲ್ಲ... ಮಗಳ ಮೌನ ಏನೋ ಅಮಂಗಳ ನಡೆದಿದೆ ಎಂದು ಸೂಚಿಸಿತ್ತು. .. ಆದಷ್ಟು ಬೇಗ ಇವರಿಬ್ಬರ ಮದುವೆಯನ್ನು ನಡೆಸಿಬಿಡಬೇಕು. ಇಲ್ಲದಿದ್ದರೆ, ಮಾನಹೋಗುವ ಪರಿಸ್ಥಿತಿ ಒದಗಬಹುದು ಅಂತಂದುಕೊಂಡಿದ್ದಳು.

ಅವಳು ಹಿಂತಿರುಗಿದ ಸ್ವಲ್ಪ ಹೊತ್ತಿನ ನಂತರ, ಏನೂ ನಡೆದೇ ಇಲ್ಲವೇನೋ ಎಂಬಂತೆ, ಅವನು ಮತ್ತೆ ಬಂದಿದ್ದಾಗ ಸ್ವಲ್ಪ ಮಟ್ಟಿಗೆ ಸಲೀಸಾಗಿತ್ತು. ತಪ್ಪು ತಮ್ಮದೇ "ಲಗ್ನಪತ್ರಿಕೆ' ನಡೆದ ಮೇಲೆ ಮದುವೆಯನ್ನು ಮುಂದೂಡಬಾರದು. ಗಂಡಸಿನ ಮನಸ್ಸು... ಅತ್ತಿತ್ತ ಹರಿಯುವುದು ಸಹಜ... ಆದರೂ, ಸಿನಿಮಾಕ್ಕೆ ಅವನ ಜೊತೆ ಕಳಿಸಲು ತಾನು ಒಪ್ಪಿಗೆ ಕೊಡಬಾರದಾಗಿತ್ತೆನಿಸಿತ್ತು... ಗಂಡನಿಂದ ಆ ವಿಷಯವನ್ನು ಮರೆಮಾಚಿದಳು.... ಮಂಗಳ ತಾನಾಗಿಯೇ ಏನನ್ನು ಹೇಳದಿದ್ದಾಗ ಸುಮ್ಮನಾಗಿದ್ದಳು. ಮನೆ ತುಂಬಾ ಚಿಕ್ಕಮಕ್ಕಳು ಅವರ ಎದುರಿಗೆ ಕೇಳುವುದು ಹೇಗೆ ?.... ಏನಾದರೂ ಅವಳು ಹೇಳಿಬಿಟ್ಟರೇ... ಎಂದುಕೊಂಡು, ತನ್ನ ಅಸಹಾಯಕತೆಯನ್ನು ಹಳಿದುಕೊಳುತ್ತಾ ಸುಮ್ಮನಾಗಿದ್ದಳು...

ಈಗ ?.... ಈ ವಾರ್ತೆ ಕೇಳಿ ಅವಳ ಕೈ ಕಾಲುಗಳ ಶಕ್ತಿಯೇ ಕಳೆದು ಹೋಯಿ ತೆಂದು ಅನ್ನಿಸಿತ್ತು.... ಮಗಳ ಭವಿಷ್ಯ ಮುಂದೇನು?.... ಗೊತ್ತಾಗಿದ್ದ ಮದುವೆಗೆ ಮೊದಲೇ ಎಷ್ಟೋ ಅನಾಹುತಗಳು ಜರುಗಿವೆ.... ಮಗಳ ಮನಸ್ಸಿಗೆ ಎಂಥಾ ಆಘಾತವಾಗಿರಬಹುದು... ಯಾಕೆ ಹೀಗಾಯಿತು?... ಮಗಳನ್ನು ಕೇಳಲಾರಳು... ಏನನ್ನೂ ಹೇಳಲಾರಳು ಮೌನವಾಗಿ ರೋಧಿಸಿದಳು. ಮಂಗಳಂಗೆ ತಾಯಿಯ ಚಡಪಡಿಕೆ ಅರ್ಥವಾಗಿತ್ತು... ತಾನೇ ತಾಯಿಗೆ ಸಮಾಧಾನವನ್ನು ಹೇಳಬೇಕೆಂದುಕೊಂಡಳು. ಆದರೆ ಮಾತನ್ನು ಹೇಗೆ ಪ್ರಾರಂಭ ಮಾಡುವುದೆಂದು ಗೊತ್ತಾಗಲಿಲ್ಲ. ಎರಡು ದಿನಗಳು ಹಾಗೇ ಕಳೆದವು. ತಡೆ ತಡೆದು ಮಗಳನ್ನು ಕೇಳಿದಳು.

"ಯಾಕೆ ಹೀಗೆ ಮೌನವಾಗಿದೀಯೆ? ಅಳು ಬಂದರೆ ಅತ್ತುಬಿಡು. ಎದೆ ಹಗುರ ಆಗುತ್ತೆ.... ನಿನ್ನನ್ನ ನೋಡಿದರೆ ನಂಗೆ ಸಂಕಟ ಆಗುತ್ತೆ..." ಅಳುವ ದನಿ ಮಾಡಿದಳು.

"ನಾನ್ಯಾಕಮ್ಮ ಅಳಲಿ ? ನಂಗೆ ಏನೂ ಅನ್ನಿಸ್ತಿಲ್ಲ...ನೀನೂ ಅಳ್ಬೇಡ."

"ಏನೇ ಹಾಗಂದ್ರೆ ?.... ನಿಮ್ಮಿಬ್ಬರ ಮದುವೆ ಗೊತ್ತಾಗಿತ್ತಲ್ಲೇ..."

"ಮದುವೆ ನಡೀಲಿಲ್ವಲ್ಲಾ.. ಒಳ್ಳೇದೇ ಆಯ್ತು ಅಂತ ಅಂದ್ಕೋ..."

"ಗೊತ್ತಾದ ಮದುವೆಗೆ ಹೀಗೆ ಅಡ್ಡಿ ಬಂದರೆ... ನಿನ್ನ ಕಾಲ್ಗುಣ ಚೆನ್ನಾಗಿಲ್ಲ ಅನ್ನೋ ಅಪವಾದ ಬರುತ್ತೆ ಕಣೇ... ಮುಂದೆ ನಿನ್ನ ಗತಿ?"

"ಹೇಗೋ ಆಗುತ್ತೆ ಬಿಡಮ್ಮ... ನೀನ್ಯಾಕೆ ಚಿಂತೆ ಮಾಡ್ತೀಯ?..."

"ಹಾಗಂದ್ರೆ ಹೇಗೆ ? ನೀನು ಹೀಗೆ ನಿರಾತಂಕವಾಗಿರೋದನ್ನ ನೋಡಿದ್ರೆ ಭಯ ಆಗುತ್ತೆ ಕಣೆ... ಅವತ್ತು ನಿಮ್ಮಿಬ್ಬರ ನಡುವೆ ಏನಾದ್ರೂ ಮಾತುಕತೆ ನಡೀತಾ ?.... ನೀನ್ಯಾಕೋ ಮಂಕಾಗಿದ್ದೆ....

"ಏನಿಲ್ಲವಲ್ಲ..." ತಡವರಿಸಿದಳು.

"ಏನೋ ಮುಚ್ಚಿಡ್ತಾ ಇದೀಯ... ಅವರು ಏನು ಕೇಳಿದ್ರು? ನೀನು ಏನು ಹೇಳ್ದೆ... ಅವರಿಗೆ ಬೇಸರ ಆಗಿರಬಹುದು... ಬೇಗನೇ ಮನೆಗೆ ವಾಪಸ್ಸು ಬಂದು ಬಿಟ್ಟೆ... ಚಪ್ಪಲಿ ಕೂಡಾ ಬಿಟ್ಟು ಬಂದಿದ್ದೆ." ಅವಳ ಮುಖದ ಬಣ್ಣ ಬದಲಾಗಿತ್ತು. ಹೇಳಲೋ ಬೇಡವೋ ಎಂಬಂತೆ ಒಂದು ಗಳಿಗೆ ಅನುಮಾನಿಸಿದಳು. ನಡೆದುದನ್ನು ಹೇಳಿದರೆ, ತಾಯಿ ನಂಬಲಾರಳು ಎಂದುಕೊಂಡು ಸುಳ್ಳನ್ನು ಪೋಣಿಸಿದಳು.

"ಸಿನಿಮಾ ಚೆನ್ನಾಗಿಲ್ಲ... ಅಂಗಡಿಗೆ ಹೋಗೋಣ ಅಂತ ಅರ್ಧದಲ್ಲೇ ಎಬ್ಬಿಸಿ ಕೊಂಡು ಹೊರಬಂದರು. ನನಗೆ ಸಿನಿಮಾ ನೋಡುವ ಆಸೆ ಇತ್ತು... ನನಗೂ ಸಿಟ್ಟು ಬಂತು... ಸಿಟ್ಟಿನಲ್ಲಿ ಮೆಟ್ಟಿಲು ಇಳಿಯುವಾಗ ಚಪ್ಪಲಿ ಕಿತ್ತು ಹೋಯಿತು. ಅಲ್ಲೇ ಬಿಸ್ಹಾಕಿದೆ... ಸಮಾಧಾನ ಹೇಳುಕ್ಕೆ ಬಂದರು. ನಾನು ಉತ್ತರಿಸದೇ ಹಾಗೇ ಬಂದು ಬಿಟ್ಟೆ... ಹಾಗಾದ್ರೆ ಸಿಟ್ಟು ಮಾಡ್ಕೊಳ್ಳೋಕೂ ನನಗೆ ಹಕ್ಕಿಲ್ವಾ?"...

"ಅವರು ನಿನ್ನನ್ನು ಮದುವೆಯಾಗೋರು ಅನ್ನೋ ಪರಿಜ್ಞಾನವಾದ್ರೂ ಬೇಡ್ವಾ ನಿಂಗೆ? .... ಮದುವೆಗೆ ಮೊದಲೇ ನಿನ್ನ ಸಿಟ್ಟು ಕೋಪಾನ ತೋರಿಸ್ಕೋಬೇಕಾಗಿತ್ತಾ ಏನಂದು ಕೊಂಡಿರ್ತಾರೋ ಏನೋ...?'

"ಏನಾದ್ರೂ ಅಂದುಕೊಂಡಿರಲಿ. ಮುಗೀತಲ್ಲ ಅವರ ಕತೆ. ಇನ್ನು ನನಗೆ ಏನಾಗ ಬೇಕಾಗಿದೆ?..."

"ಮಂಗಳಾ! ಎಂಥಾ ಅನಾಹುತ ನಡೆದಿದೆ ಅಂತ ನಿಂಗೇನಾದ್ರೂ ಅರಿವಿದೆ ಯಾ?.... ನಿನ್ನ ಜೀವನವೇ ಹಾಳಾಯಿತಲ್ಲೇ..." ತಾಯಿ ಅತ್ತಳು

"ಎಂಥಾ ಅನಾಹುತ ನಡೆಯೋದ್ರಲ್ಲಿತ್ತು ಅಂತ ನಿಂಗೆ ಗೊತ್ತಿಲ್ಲ. ಅದು ತಪ್ಪಿತು... ಮಾನವೇ ಕಳೆದುಹೋಗ್ತಿತ್ತಲ್ಲ... ದೇವರ ರೂಪದಲ್ಲಿ ಆ ರಿಪೇರಿಯವನು ಬಂದು ಕಾಪಾಡಿದ." ಎಂದು ಹೇಳಬೇಕೆಂದುಕೊಂಡರೂ... ಸುಮ್ಮನಾಗಿಬಿಟ್ಟಳು.

ನಿಟ್ಟುಸಿರು ನಿರಾಳವಾಗಿ ಹೊರಬಂತು.

○ ○ ○

ಚಂದ್ರು ಕೆಲಸಕ್ಕೆ ಹೋಗಿ ಸೇರಿಕೊಂಡಿದ್ದ... ನಿತ್ಯವೂ ಎರಡು ಹೊತ್ತೂ ಬಸ್ಸಿಗೆ ಕಾದು ಓಡಾಡುವುದು ಕಷ್ಟ ಎಂದು ಅನ್ನಿಸತೊಡಗಿತ್ತು. ತಂದೆಗೆ ಹೇಳಿ, ಒಂದು ರೂಮನ್ನು ಗೊತ್ತು ಮಾಡಿಕೊಂಡ... ವಾರಕ್ಕೊಂದು ದಿನ ಮಾತ್ರ ಬಂದು ಹೋಗುತ್ತಿದ್ದ... ಅವನಿಗೆ ಮತ್ತೆ ಪಂಕಜಳನ್ನು ಭೇಟಿ ಮಾಡಲು ಆಗಿರಲಿಲ್ಲ.

ಸ್ಕೂಲಿನ ವಾರ್ಷಿಕ ಪರೀಕ್ಷೆ ಮುಗಿದು ಬೇಸಗೆ ರಜ ಪ್ರಾರಂಭವಾಗಿತ್ತು. ಊರಿಗೆ ಹೊರಡುವ ಮುನ್ನ ಪಂಕಜ, ಲಕ್ಷ್ಮಿದೇವಮ್ಮನಿಗೆ ಹೇಳಿ ಹೋಗಲೆಂದು ಬಂದಿದ್ದಳು. ಬೀಗದ ಕೈಯನ್ನು ಕೊಟ್ಟು ನುಡಿದಳು. "ನಾನು ನಮ್ಮೂರ್ನಲ್ಲೇ ಕೆಲಸವನ್ನು ಹುಡುಕಿ ಕೊಳ್ತೀನಿ... ನಮ್ಮ ತಂದೆ ತಾಯಿ ಅಲ್ಲಿಗೆ ಬಂದು ಬಿಡು ಅಂತ ಒತ್ತಾಯ ಮಾಡ್ತಿದಾರೆ" ಎಂದಿದ್ದಳು.

"ಅದು ಸಹಜವೇ... ಇಲ್ಲಿ ಒಬ್ಬಳೇ ಇರೋಕೆ ಆಗುವಲ್ಲವಲ್ಲ..." ಗೋಪಾಲ ಎಂದಿದ್ದ...

"ಸರಿ... ಮನೇನ ಖಾಲಿ ಮಾಡೋದು ಅಂತ ತೀರ್ಮಾನ ಮಾಡಿದೀಯಾ? ಲಕ್ಷ್ಮಿದೇವಮ್ಮ ಕೇಳಿದಳು..."

"ಹೂಂ.... ಅಲ್ಲಿ ಕೆಲಸ ಸಿಕ್ಕಿದ ಕೂಡ್ಲೇ, ಇಲ್ಲಿಯ ಕೆಲಸಕ್ಕೆ ರಾಜೀನಾಮೆ ಕೊಡ್ತೀನಿ... ಅಲ್ಲಿಯವರೆಗೂ... ಇರ್ತೀನಿ..."

"ನೀನು ಇರಲಿ ಇಲ್ಲದಿರಲಿ, ಖಾಲಿ ಮಾಡುವವರೆಗೂ ಬಾಡಿಗೆ ಕೊಡಬೇಕಾಗುತ್ತದೆ..."ಲಕ್ಷ್ಮಿದೇವಮ್ಮ ತಾಕೀತು ಮಾಡಿದಳು..

"ಆಯ್ತು ಕೊಡ್ತೀನಿ..."ಅವಳು ಹೇಳಿದಾಗ ಗೋಪಾಲನಿಗೆ ಕೆಡುಕೆನ್ನಿಸಿತ್ತು... ಬಾಡಿಗೆ ಹಣಕ್ಕಾಗಿ ಇವಳ್ಯಾಕೆ ಹೀಗೆ ಬಾಯಿ ಬಾಯಿ ಬಿಡ್ತಾಳೆ. ಈಗ ಚಂದ್ರೂಗೂ ಕೆಲಸ ಸಿಕ್ಕಿದೆ... ನಮಗೆ ಏನು ಬಡತನ ? ಅಂತಂದುಕೊಂಡರೂ ಹೇಳಲಾಗಿರಲಿಲ್ಲ... ಲಕ್ಷ್ಮಿದೇವಮ್ಮ ಒಳಕ್ಕೆ ಎದ್ದು ಹೋಗಿದ್ದಳು... ಅವಳು ಕಾಫಿ ತರುವಳೆಂದುಕೊಂಡ." ಕೂತ್ಕೊಳ್ಳಿ ಟೀಚರ್.... ಕಾಫಿ ಕುಡಿಯೋರಂತೆ..." ಲಕ್ಷ್ಮಿದೇವಮ್ಮ ಎಷ್ಟೇ ಹೊತ್ತಾದರೂ ಆಚೆಗೆ ಬರಲಿಲ್ಲ.

"ನಾನು ಬರ್ತೀನಿ ಸಾರ್..." ಎಂದು ಅವಳು ಹೊರಟಾಗ, ಲಕ್ಷ್ಮೀ ಎಂದು ಕರೆಯುತ್ತಾ ಒಳಗೆ ಬಂದ...

"ನೀನು ಕಾಫಿ ಮಾಡ್ತಿದೀಯ ಅಂತ ಅಂದ್ಕೊಂಡೆ. ಟೀಚರ್ ಹೊರಡ್ತಾರಂತೆ."

"ವಠಾರದೋರ್ಗೆಲ್ಲಾ ಕಾಫೀ ಹಾಲು ಅಂತ ಕೊಡೋಕೆ ಆಗುತ್ತಾ? ಹೋಗ್ಲೀಬಿಡಿ... ಕುಂಕುಮ ಕೊಡ್ತೀನಿ ಅಂತ ಕೂಡಾ ಹೇಳುಕ್ಕಾಗುಲ್ಲ... ಹೋಗ್ತಾಳೆ

ಬಿಡಿ." ಅವಳು ಒಳಗಿನಿಂದ ಹೇಳಿದ್ದು ಪಂಕಜಂಗೆ ಕೇಳಿಸಿತ್ತು... ಮುಖ ಕಂದಿತ್ತು

"ಮೆಲ್ಲಗೆ ಮಾತಾಡು ಕೇಳಿಸೀತು... ಆ ಸೌಭಾಗ್ಯ ಆಕೆಗೆ ಇಲ್ಲದಿದ್ದರೆ ಅದು ಅವರ ತಪ್ಪಾ?..."

"ನಾನೇನು ಹೇಳಬಾರದ್ದನ್ನು ಹೇಳಿದೆ. ಇದ್ದದ್ದನ್ನು ಹೇಳಿದೆ. ಅದೂ ಅವಳಿಗೂ ಗೊತ್ತು" ಎನ್ನುತ್ತಾ ಹೊರಬಂದಳು. ಪಂಕಜ ಹೊರಟು ಹೋಗಿದ್ದಳು. ಗೋಪಾಲ ಹೆಂಡತಿಯ ಕಡೆ ಕೆಟ್ಟದಾಗಿ ನೋಡಿದ. ಅದನ್ನು ಅವಳು ಗಮನಿಸಲಿಲ್ಲ. ಪಂಕಜ ಅಲ್ಲಿಂದ ರಾಮರಾಯರ ಮನೆಗೆ ಬಂದಳು...

"ಬಹುಶಃ ರಜ ಮುಗಿಯುವವರಿಗೂ ನಾನು ಅಲ್ಲೇ ಇರ್ತೀನಿ... ನಮ್ಮ ಮನೆಯ ಕಡೆ ಸ್ವಲ್ಪ ಗಮನ ಇರಲಿ. ಅಲ್ಲಿ ಬೆಲೆ ಬಾಳುವ ವಸ್ತುಗಳು ಏನೂ ಇಲ್ಲ ಆದರೂ, ಯಾರೋ ಬಂದು ಸೇರಿಕೊಂಡು ವಾಸ ಮಾಡತೊಡಗಿದರೆ ಅಂತ ಭಯ ಆಗುತ್ತೆ... ದಿಬ್ಬದ ಮನೇಲಿ ಹಾಗೇ ಆಯ್ತಲ್ಲ ನೋಡಿ..."

"ಹೌದು ಹತ್ತಿರದಲ್ಲೇ ಇದ್ದರೂ ನಮಗೆ ಏನೂ ಗೊತ್ತಾಗ್ಲಿಲ್ಲ ನೋಡಿ... ಮನೆ ಮಾಲೀಕರ ಹೆಂಡತಿ, ಅಂಥಾ ಚಾಣಾಕ್ಷ ಹೆಂಗಸು... ಅವರಿಗೆ ತಿಳಿಯದಂತೆ ಬಂದು ಸೇರಿಕೊಂಡಿದ್ದರು ಅಂತದ್ಮೇಲೆ ಗಟ್ಟಿಗರೆ ಸರಿ..." ಜಾನಕಿ ನಕ್ಕಳು...

"ಅಂದ್ಹಾಗೇ, ನಿಮ್ಮ ಹಿರೀ ಮಗಳು ಯಾವಾಗ ಬರ್ತಾರೆ?.... ಮಂಗಳನ ಮದುವೆಗೆ ದಿನ ಗೊತ್ತಾಯ್ತು?"

"ಇಲ್ಲಮ್ಮ ಮದುವೆ ನಿಂತು ಹೋಯ್ತು... ನಿಮಗೆ ವಿಷಯ ಗೊತ್ತಿಲ್ವಾ... ಗೊತ್ತಾದ ಹುಡುಗ ಅಪಘಾತದಲ್ಲಿ..." ಜಾನಕಿ ಕೆಳದನಿಯಲ್ಲಿ ನುಡಿದಳು.

"ಹೌದಾ? ನಂಗೆ ಗೊತ್ತಾಗಲಿಲ್ಲ. ಕೇಳ್ಬಿಟ್ಟೆ...." ತಪ್ಪು ತಿಳ್ಕೋಬೇಡಿ.

"ಪರವಾಗಿಲ್ಲ ಬಿಡಿ... ನೀವು ಮನೇಲಿ ಇರೋದೇ ಕಮ್ಮಿ ನಿಮಗೆ ಹೇಗೆ ತಿಳಿಯುತ್ತೆ ? ಇನ್ನೊಂದು ವಿಷಯ ಗೊತ್ತಾ ?... ತುಂಗಾಬಾಯಿಯ ಸೊಸೆ, ರಾಧಾ ಬಾಯಿಗೆ ಏನೋ ಖಾಯಿಲೆ ಅಂತೆ... ಕೇಳಿ ಬೇಜಾರಾಯ್ತು... ಭಗವಂತ ಯಾಕೆ ಹೀಗೆ ಆಟ ಆಡಿಸ್ತಾನೋ...." ಪಂಕಜಳ ಮುಖದಲ್ಲಿ ವ್ಯಥೆಯ ಗೆರೆಗಳು ಮೂಡಿದವು. ತಾನು ಅನುಭವಿಸಿದ ದಿನಗಳು ನೆನಪಾದವು.... ಅಲ್ಲಿ ಕುಳಿತಿರಲು ಮನಸ್ಸಾಗಲಿಲ್ಲ. ಎದ್ದಳು. "ಯಾಕೆ ಎದ್ಬಿಟ್ರಿ?... ಕಾಫಿ ಕುಡಿಯೋರಂತೆ... ಮಂಗಳಾ... ಮಂಗಳಾ..." ಕರೆದಳು.

"ಪರವಾಗಿಲ್ಲ ಬಿಡಿ. ಬಂದಾಗ್ಲೆಲ್ಲಾ ಕಾಫಿ ಕೊಡ್ತೀರಿ..." ಅಷ್ಟರಲ್ಲಿ ಮಂಗಳ ಹೊರಕ್ಕೆ ಬಂದಿದ್ದಳು.

"ಓ ನೀವಾ ಟೀಚರ್... ನಂಗೆ ಗೊತ್ತಾಗ್ಲೇ ಇಲ್ಲ. ಪಾತ್ರೆಗಳನ್ನು ತೊಳೆದು ಇಡ್ತಿದ್ದೆ..."

"ನಾನು ನಾಳೆ ಊರಿಗೆ ಹೋಗ್ತಿದೀನಿ... ಹೇಳಿ ಹೋಗೋಣ ಅಂತ ಬಂದೆ. ಯಾರೂ ಕಾಣ್ತಿಲ್ಲ. ನಿಮ್ಮ ತಮ್ಮ ತಂಗೀರೆಲ್ಲಾ ಎಲ್ಲಿ?'

"ಬಾಲೂನ ಕರ್ಕೊಂಡು ಹತ್ತಿರದ ಪಾರ್ಕಿಗೆ ಹೋಗಿದಾರೆ... ಕತ್ತಲಾಗ್ತಾ ಬಂತಲ್ಲ. ಇನ್ನೇನು ಬರಬಹುದು... ನಿಮಗೆ ಎಷ್ಟು ದಿನದ ರಜ ?'

"ಅಲ್ಲೇ ಕೆಲ್ಸಾನ ಹುಡುಕೋಣ ಅಂತ...ಇದೀನಿ. ಸಿಕ್ಕಿದ್ರೆ ಅಲ್ಲೇ ಇದ್ಬಿಡ್ತೀನಿ..."

"ಹೌದಾ? ಈಗ ಹೇಳ್ತೀದೀರಲ್ಲ ಟೀಚರ್... ನಿಮಗೆ ಬೇರೆ ಕೆಲಸ ಸಿಕ್ಕರೆ ನನಗೆ ನಿಮ್ಮ ಈ ಕೆಲಸ ಸಿಗುತ್ತಾ?.... ಅರ್ಜಿ ಹಾಕ್ಲಾ? ನೀವು ಒಂದ್ಮಾತನ್ನು ನಿಮ್ಮ ಹೆಡ್ ಮಾಸ್ಟರಿಗೆ ಹೇಳುಕ್ಕೆ ಆಗುತ್ತಾ?....." ಆಸೆಯಿಂದ ಕೇಳಿದಳು.

"ಅರ್ಜಿ ಯಾರು ಬೇಕಾದ್ರೂ ಹಾಕಬಹುದು. ಕೆಲಸ ಖಾಲಿ ಇದ್ದರೆ ಕೊಡ್ತಾರೆ... ಆದರೆ ನಿಮಗೆ ಎರಡೆರಡು ಕಡೆ ಕಷ್ಟ ಆಗುಲ್ವಾ ಮಂಗಳಾ..."

"ಅದನ್ನೇ ನಾನೂ ಹೇಳ್ತೀನಿ... ನಾನು ಇನ್ನೂ ಪೂರ್ತಿ ಸುಧಾರಿಸಿಕೊಂಡಿಲ್ಲ ಸರೋಜ ಬಂದಮೇಲೆ ಮನೆ ಕೆಲಸ ಹೆಚ್ಚಾಗುತ್ತೆ. ಇವಳಿಗೆ ಹೇಳಿದ್ರೆ ಅರ್ಥಾನೇ ಆಗುಲ್ಲ. ನೀವಾದ್ರೂ ಹೇಳಿ ಟೀಚರ್" ಜಾನಕಿ ಎಂದಳು.

"ಹೌದು ಮಂಗಳಾ... ನಿಮ್ಮ ತಾಯಿ ಹೇಳೋದು ಸರಿಯಾಗಿದೆ. ಅಲ್ಲದೇ ನಿಮಗೆ ಕೆಲಸದ ಅಗತ್ಯ ಏನಿದೆ ಹೇಳಿ. ಮದುವೆ ಆಗೋವರ್ಗೆ ಆರಾಮವಾಗಿರಿ..." ಮಂಗಳಾ ಉತ್ತರಿಸದೇ ಒಳಗೆ ನಡೆದಳು. ಮೂವರಿಗೂ ಕಾಫಿಯನ್ನು ಬೆರೆಸಿ, ಬಟ್ಟಲುಗಳಿಗೆ ಹಾಕಿ ತಂದಿತ್ತಳು.

"ನೀವು ಕಾಫೀನ ತುಂಬಾ ಚೆನ್ನಾಗಿ ಮಾಡ್ತೀರಿ ಮಂಗಳಾ... ನನಗೆ ಮನೆ ಕೆಲಸದಲ್ಲಿ ಏನೂ ಗೊತ್ತಿಲ್ಲ. ಆಸಕ್ತಿಯೂ ಇಲ್ಲ... ಅಂಥಾದ್ರಲ್ಲಿ ನಾನು ಮಾಡುವ ಕಾಫಿಯನ್ನೇ ಕೆಲವರು ಚೆನ್ನಾಗಿದೆ ಅಂತ ಹೊಗಳ್ತಾರೆ..." ಚಂದ್ರು ನೆನಪಿಗೆ ಬಂದಿದ್ದ... ಮುಖದಲ್ಲಿ ಮಂದಹಾಸ ಮಿನುಗಿತ್ತು...

"ಕಾಫಿಪುಡಿ, ಹಾಲು ಚೆನ್ನಾಗಿಲ್ಲದಿದ್ರೂ ಪರವಾಗಿಲ್ಲ. ಸಕ್ಕರೆ ಸ್ವಲ್ಪ ಮುಂದಾಗಿದ್ರೆ ಕಾಫಿ ದಿವಿನಾಗಿರುತ್ತೆ. ಆದರೆ ಬಿಸಿಯಾಗಿರಬೇಕು." ಜಾನಕಿ ನಗುತ್ತಾ ನುಡಿದಾಗ, ಪಂಕಜ ನಗುವನ್ನು ಸೇರಿಸಿದಳು.

"ನಾನು, ಸ್ವಲ್ಪ ಅಂಗಡಿ ಕಡೆ ಹೋಗ್ಬೇಕಾಗಿತ್ತು. ಒಬ್ಬಳಿಗೆ ಹೋಗುಕ್ಕೆ ಬೇಜಾರು. ನೀವು ಬರ್ತೀರಾ ಮಂಗಳಾ..."

"ಹೋಗ್ಬಾ ಮಂಗಳಾ... ನಿನಗೂ ಮನೇಲೇ ಇದ್ದೂ ಇದ್ದೂ ಬೇಜಾರಾಗಿರುತ್ತೆ. ತಾಯಿ ಅಪ್ಪಣೆ ಕೊಟ್ಟಳು. ಮಂಗಳಾ, ಕಾಫಿಯ ಖಾಲಿ ಬಟ್ಟಲುಗಳನ್ನೆತ್ತಿಕೊಂಡು ಒಳಗಿಟ್ಟಳು. ಕೆಲವೇ ನಿಮಿಷಗಳಲ್ಲಿ ಸಿದ್ಧಳಾಗಿ ಹೊರಬಂದಳು. ಅಷ್ಟರಲ್ಲಿ ಹೊರಗೆ ಹೋಗಿದ್ದ ಮಕ್ಕಳ ದಂಡು ಹಿಂದಿರುಗಿತ್ತು... ಟೀಚರ್... ಟೀಚರ್ ಎಂದುಕೊಂಡು

ಅಲ್ಲಲ್ಲೇ ನಿಂತರು. ಪಂಕಜಳ ದೃಷ್ಟಿ ಬಾಲು ಮೇಲೆ ಹರಿಯಿತು... ಮುದ್ದು ಗೋಪಾಲ ಕೃಷ್ಣನೇ... ಇಂಥಾ ಒಂದು ಕಂದ ತನಗೆ ಇದ್ದಿದ್ದರೇ... ತಾನು ತನ್ನ ಅತ್ತೆಯ ಮನೆಯಲ್ಲೇ ಇರಬಹುದಾಗಿತ್ತು... ಅಲ್ಲಿ ಇರಲು ಯಾವ ಗುರಿಯೂ ಇಲ್ಲದೇ ತವರಿಗೆ ಹಿಂತಿರುಗಿದ್ದಳು. ತಾಯಿಯ ಮನೆಯಲ್ಲಿಯೂ ತಾನು ಏಕಾಂಗಿಯೇ... ಸ್ಕೂಲಿನಲ್ಲಿ ಕಲಿಯಲು ಬರುವ ಮಕ್ಕಳನ್ನು ನೋಡಿಕೊಂಡು, ತನ್ನ ವ್ಯಥೆಯನ್ನು ಮರೆಯುತ್ತಿದ್ದಳು... ಆದರೂ ಮನೆಯಲ್ಲಿ ತಾನು ಏಕಾಂಗಿ... ಒಮ್ಮೊಮ್ಮೆ ಸಂಗಾತಿಯ ಆಸೆ ಹುಟ್ಟುತ್ತಿತ್ತು... ಆದರೆ ಅದನ್ನು ಅಲ್ಲಿಯೇ ದಬ್ಬಿ ಬಿಡುತ್ತಿದ್ದಳು.... ಆದರೆ ಈಚೆಗೆ ಚಂದ್ರುವಿನ ಸ್ನೇಹ ಆದ ಮೇಲೆ, ಅವನು ತನ್ನನ್ನು ಮದುವೆ ಆಸೆಯನ್ನು ವ್ಯಕ್ತಪಡಿಸಿದ ಮೇಲೆ, ಒಮ್ಮೊಮ್ಮೆ ತಾನೇಕೆ ಮರುಮದುವೆ ಆಗಬಾರದು ಎಂದು ತನಗೆ ತಾನೇ ಹೇಳಿಕೊಳ್ಳುತ್ತಿದ್ದಳು... ಆದರೆ ಈ ವಿಷಯವನ್ನು ಕುರಿತು, ಸಲಹೆಯನ್ನು ಕೇಳಲು ತನಗೆ ಯಾರೂ ಆಪ್ತರಿಲ್ಲ... ಅಂತ ಅಂದುಕೊಳ್ಳುವಾಗ ಬೇಸರವಾಗುತ್ತಿತ್ತು. ಮಂಗಳಂಗಾದರೂ, ಈ ಬಗ್ಗೆ ತಿಳಿಸಬೇಕು... ತನ್ನ ಸಮಾನ ವಯಸ್ಕಳು ಅಂತ ಭಾವಿಸಿದ್ದಳು. .. ಆದರೆ... ಮಂಗಳ ? ಈಗ ಅವಳೂ ದುಃಖಿಯೇ... ಆದರೆ ನನ್ನ ಸ್ಥಿತಿಗಿಂತ ಉತ್ತಮ.... ಬೇರೆ ವರ ಸಿಗಬಹುದು... ಮದುವೆಯಾಗಿ, ಮಕ್ಕಳಾಗಬಹುದು...

"ಏನು ಯೋಚಿಸ್ತಿದೀರಿ ಟೀಚರ್... ಬೇಗ ಹೋಗಿ ಬೇಗ ಬಂದು ಬಿಡೋಣ... ಅನ್ನಕ್ಕೆ ಇಡ್ಬೇಕು." ಮಂಗಳಾ ಪಂಕಜಳನ್ನು ಎಚ್ಚರಿಸಿದಳು. ಇಬ್ಬರೂ ಅಲ್ಲಿಂದ ಹೊರಟರು. ಮಾತನಾಡುತ್ತಾ ಸಾಗಿದರು.

"ಇವತ್ತು ನಮ್ಮ ಮನೆಗೆ ಮಲಕ್ಕೋಳ್ಳೋಕೆ ನೀವು ಬರ್ತೀರಾ ಮಂಗಳಾ... ನಾನು ನಿಮ್ಮ ಹತ್ರ ಸ್ವಲ್ಪ ಮಾತಾಡ್ಬೇಕು."

"ಏನು ವಿಷಯ ? ಅಮ್ಮ ನನ್ನ ಮದುವೆ ವಿಷಯ ಹೇಳಿದ್ಲಾ?"

"ಅದಲ್ಲ ಮಂಗಳ... ನನ್ನ ಮದುವೆ ವಿಷಯ... ನಾನು ದ್ವಂದ್ವದಲ್ಲಿದೀನಿ... ಹೇಳಿಕೊಳ್ಳೋಕೆ ನನ್ನವರು ಅಂತ ಇರೋರು ನೀವೊಬ್ಬರೇ..."

"ಸರಿ ಬರ್ತೀನಿ" ಪಂಕಜ ಊರಿಗೆ ತೆಗೆದುಕೊಂಡು ಹೋಗಬೇಕಾದ ಕೆಲವು ವಸ್ತುಗಳನ್ನು ಕೊಂಡಳು. ಮಂಗಳ ತರಕಾರಿಗಳನ್ನು ಕೊಂಡಳು. "ಇವತ್ತು ನೀವು ನಮ್ಮ ಮನೇಲೇ ಊಟ ಮಾಡ್ಬೇಕು... ನಿಮಗೆ ಏನು ಇಷ್ಟ ಅಂತ ಹೇಳಿ ಅದನ್ನೇ ಮಾಡ್ತೀನಿ..."

"ನಿಮಗೆಲ್ಲ ಏನು ಇಷ್ಟವೋ ಅದನ್ನೇ ಮಾಡಿ. ನನಗೆ ಏನು ಇಷ್ಟ ಅನ್ನೋದೇ ನನಗೆ ಮರೆತು ಹೋಗಿದೆ." ನಗುತ್ತಾ ನುಡಿದಳು. ಇಬ್ಬರೂ ಬೇಗ ಬೇಗ ನಡೆದು ಮನೆಯ ಬಳಿಗೆ ಬಂದರು. ದೊಡ್ಡ ಗೇಟಿನ ಬಳಿ ನಿಂತಿದ್ದ ಚಂದ್ರುವನ್ನು ಕಂಡು, ಇಬ್ಬರ ವೇಗದ ಗತಿ ನಿಧಾನವಾಯಿತು. "ಆ ಕಡೆಯ ಗೇಟಿನಿಂದ ಹೋಗೋಣ

ಮಂಗಳಾ...

"ಬೇಡ ಟೀಚರ್... ಆ ಕಡೆ ರಸ್ತೆ ದೀಪ ಇಲ್ಲ. ಕತ್ತಲೆ ಕತ್ತಲೆ ಈ ಕಡೆ ದೀಪದ ಬೆಳಕಿದೆ." ಎನ್ನುತ್ತಾ ಮುಂದೆ ನಡೆದಳು. ಚಂದ್ರು ನಿಂತೇ ಇದ್ದ. ನೋಡಿದರೂ ನೋಡದವರಂತೆ ಹೋಗಲು ಸಾಧ್ಯವಿರಲಿಲ್ಲ....

"ಈಗ ಬರ್ತಾ ಇದೀರಾ?.. ನಿಮ್ಮ ತಂದೆ ಕಾಯ್ತಾ ಇದ್ದಾರೆ.. ಬೇಗ ಹೋಗಿ..." ಮಂಗಳನ ಕಡೆ ತಿರುಗಿ ಹೇಳಿದ. "ಟೀಚರ್... ಒಂದ್ನಿಮಿಷ ನಿಂತ್ಕೊಳ್ಳಿ" ಅವಳನ್ನು ನಿಲ್ಲಿಸಿಕೊಂಡ. ಮಂಗಳ ಹೊರಟು ಹೋಗಿದ್ದಳು... ಏನು ನಿರ್ಧಾರ ತಗೊಂಡ್ರಿ?.... ನಾಳೆ ಊರಿಗೆ ಹೋಗ್ತಿದೀರಂತೆ..."

"ಹೂಂ... ರಜ ಇದೆ.... ಇಲ್ಲಿ ಒಬ್ಬಳೇ ಇದ್ದು ಏನ್ಮಾಡ್ಲೀ?"

"ಅಲ್ಲಿಯ ಅಡ್ರೆಸ್ ಕೊಡಿ... ಅಲ್ಲಿಗೆ ಬಂದಾಗ ನಿಮ್ಮ ಮನೆಗೇ ಬಂದು ನಿಮ್ಮ ಮನೆಯವರ ಹತ್ರ ಮಾತಾಡ್ತೀನಿ..."

"ಬೇಡ... ಬೇಡ... ಸಧ್ಯದಲ್ಲೇ ನಾನು ನಿಮ್ಮ ಮನೆಯ ಅಡ್ರೆಸ್‌ಗೆ ಪತ್ರ ಬರೆದು ನನ್ನ ನಿರ್ಧಾರವನ್ನು ತಿಳಿಸ್ತೀನಿ.... ನಿಮ್ಮ ಅಡ್ರೆಸ್ ಕೊಡಿ..."

"ಸರಿ... ನಿಮ್ಮಿಷ್ಟ.... ತಗೊಳ್ಳಿ" ಎನ್ನುತ್ತಾ ತನ್ನ ವಿಳಾಸವನ್ನು ಬರೆದು ಕೊಟ್ಟ. "ನನಗೆ ನಿರಾಸೆ ಮಾಡ್ಬೇಡಿ. ಪಂಕಜ... ಹಗಲು ನಿಮ್ಮ ನೆನಪಿನಲ್ಲಿ ಕಾಲ ಕಳಿತೀನಿ... ರಾತ್ರಿ ನಿಮ್ಮದೇ ಕನಸನ್ನು ಕಾಣ್ತೇನಿ... ನೀವು ಹೀಗೆ ಸತಾಯಿಸಬಾರದು."

"ಇದು ನಿಮ್ಮ ಆರೋಗ್ಯಕ್ಕೆ ಒಳ್ಳೇದಲ್ಲ... ನಾಳೆ ಬೆಳಿಗ್ಗೆ ಹತ್ತು ಗಂಟೆಯ ಬಸ್ಸಿಗೆ ಹೊರಡ್ತೀನಿ. ಬಸ್‌ಸ್ಟ್ಯಾಂಡ್‌ಗೆ ಬನ್ನಿ... ಅಲ್ಲಿ ಮಾತಾಡೋಣ..." ಎನ್ನುತ್ತಾ ಅಲ್ಲಿ ನಿಲ್ಲದೇ ಹೊರಟೇ ಬಿಟ್ಟಳು. ಅವನು ಅವಳ ಬೆನ್ನನ್ನೇ ನೋಡಿದ.

ಅಡ್ಡ ಗೋಡೆಯ ಮೇಲೆ ದೀಪವಿಟ್ಟಂತೆ ಮಾತಾಡಿ ಹೋದಳಲ್ಲ, ಇದರಿಂದ ಅವಳ ನಿರ್ಧಾರ ಏನೂಂತ ತಿಳಿಯಲೇ ಇಲ್ಲ. ಈಗಲೇ ಅವಳ ಮನೆಗೆ ಹೋಗಿ ಕೇಳಿದರೆ ಅಂತಂದುಕೊಂಡು ಅದೇ ದಾರಿಯಲ್ಲಿ ನಡೆದ... ಆದರೆ ಅವಳು ರಾಮರಾಯರ ಮನೆಯ ಕಡೆ ತಿರುಗಿದ್ದನ್ನು ಕಂಡು ಹಾಗೇ ಹಿಂತಿರುಗಿದ.

○ ○ ○

"ನನ್ನ ಮದುವೆ ನಡೆದಾಗಲೇ ನನ್ನ ಗಂಡನ ಆರೋಗ್ಯ ಚೆನ್ನಾಗಿರಲಿಲ್ಲ, ಅಂತ ನಮಗ್ಯಾರಿಗೂ ತಿಳಿಯಲೇ ಇಲ್ಲ. ಮೋಸ ಆಗಿ ಹೋಯ್ತು ಮಂಗಳಾ... ಅವರಿಗೆ ಕುಡಿತದ ಚಟವಿತ್ತು. ಕುಡಿದು ಬರುತ್ತಿದ್ದರು. ಅಷ್ಟು ಹೊತ್ತಿಗಾಗಲೇ ಅವರ ಲಿವರ್ ಹಾಳಾಗಿತ್ತು... ಕಲವು ತಿಂಗಳು ಅವರ ಸಹವಾಸವನ್ನು ತಡೆದುಕೊಂಡಿದ್ದೆ... ಒಂದು ರಾತ್ರಿ ಮನೆಗೆ ಬರಲೇ ಇಲ್ಲ... ಕುಡಿದ ಅಮಲಿನಲ್ಲಿ ಬಿದ್ದವರನ್ನು ಆಸ್ಪತ್ರೆಗೆ ಸೇರಿಸಿದ್ದರು. ಆಗಲೇ ಎಲ್ಲಾ ಮುಗಿದು ಹೋಯಿತು..." ಪಂಕಜ ಅಳುತ್ತಿರಲಿಲ್ಲ,

ಯಾರೋ ಬೇರೆಯವರ ವಿಷಯವನ್ನು ಹೇಳುವಂತೆ ಹೇಳಿ ಮುಗಿಸಿದಳು. ಆಗ ನನಗೆ ಕೇವಲ ಹತ್ತೊಂಬತ್ತು ವರ್ಷಗಳು. ಪಿ.ಯು.ಸಿ. ಪಾಸಾಗಿತ್ತು. ಆಮೇಲೆ ಡಿಗ್ರಿ ಮಾಡಿಕೊಂಡು, ಕೆಲಸಕ್ಕೆ ಸೇರಿಕೊಂಡೆ. ಯಾಕೋ ಅದೇ ಊರಿನಲ್ಲಿರುವುದು ಬೇಸರ ಅಂತ ಅನ್ನಿಸಿತು. ಅದಕ್ಕೇ ಅಲ್ಲಿಯ ಕೆಲಸವನ್ನು ಬಿಟ್ಟು ಬಂದು ಇಲ್ಲಿ ಕೆಲಸಕ್ಕೆ ಸೇರಿಕೊಂಡೆ.... ಇದುವರೆಗೂ ನನ್ನ ಅಪ್ಪ ಜತೆಯಲ್ಲಿದ್ದರು. ಈಗ ಒಂಟಿಯಾಗಿದ್ದೀನಿ. ... ನನ್ನಿಂದ ಎಲ್ಲರಿಗೂ ತೊಂದರೆ ಅದಕ್ಕೇ ಅಲ್ಲೇ ಇದ್ದು ಬಿಡೋಣ ಅಂತ ತೀರ್ಮಾನಿಸಿದೀನಿ."

"ನೀವೂ ಹೊರಟು ಹೋದ್ರೆ ನನಗೆ ಸ್ನೇಹಿತೆಯರು ಯಾರೂ ಇಲ್ಲ.... ದಿಬ್ಬದ ಮನೆ ಖಾಲಿ ಇದೆ. ಎದುರು ಮನೆಯ ಸೀತಾ ಮಾತ್ರ ಆಗ ಈಗ ಮಾತನಾಡಿಸ್ತಾಳೆ... ಲಕ್ಷ್ಮಿದೇವಮ್ಮನ ಹತ್ರ ಮಾತನಾಡುಕ್ಕೆ ನಾವೇ ಹೆದರಬೇಕು... ಅವರ ಮನೆಯಲ್ಲಿ ಇರೋರು ಇಬ್ಬರೇ.... ಆತನೂ ಅವರು ಹೇಳಿದ ಹಾಗೆ ಕೇಳಿ ಬಿಡ್ತಾರೆ. ಸದ್ದು ಗದ್ದಲವೇ ಇಲ್ಲ.. ಈ ವಠಾರದಲ್ಲಿ ಅಲ್ಪ ಸ್ವಲ್ಪ ಗಲಾಟೆ ಅಂತಂದ್ರೆ ನಮ್ಮ ಮನೆಯಲ್ಲಿ. .. ಸೀತನ ಮನೆಯಲ್ಲಿ ಇನ್ನು ಸ್ವಲ್ಪ ಹೆಚ್ಚು.... ಆದರೆ ನನ್ನ ಓರಗೆಯವರು ಯಾರೂ ಇಲ್ಲ..."

"ನಿಮ್ಮ ಅಕ್ಕ ಬಂದ ಮೇಲೆ, ನಿಮಗೆ ಸಮಯವೇ ಸಿಗುವುದಿಲ್ಲ. ನಾನು ಕಾಗದ ಬರಿತೀನಿ... ನೀವು ನನ್ನ ಪತ್ರಕ್ಕೆ ಉತ್ತರ ಬರೀತೀರಿ ತಾನೆ..."

"ಮನೆ ಕೆಲಸದಲ್ಲಿ ಯಾವುದಕ್ಕೂ ಪುರುಸೋತ್ತೇ ಆಗುವುದಿಲ್ಲ... ಒಂದೊಂದು ಸಾರಿ, ಬೇರೆ ಯಾವುದಾದ್ರೂ ಊರಿಗೆ ಹೊರಟು ಹೋಗೋಣ ಅಂತ ಅನ್ನಿಸುತ್ತೆ... ಅದಕ್ಕೇ ಕೆಲಸದ ಬಗ್ಗೆ ವಿಚಾರಿಸಿದ್ದು, ಅದಾದರೂ ಇದ್ದರೇ.... "

"ಕೆಲಸಕ್ಕೆ ಸೇರ್ಕೊಂಡ್ರೆ ಆ ಜೀವನವೇ ಬೇರೆ ಆಗಿ ಹೋಗುತ್ತೆ ನಿಮಗೆ ಇನ್ನು ಚಿಕ್ಕ ವಯಸ್ಸು. ಮದುವೆ ಆಗಿ, ಸಂಸಾರ ಮಾಡುಕ್ಕೆ ಪ್ರಾರಂಭ ಮಾಡಿದರೆ, ಅದೇ ಸರಿ ಹೋಗುತ್ತೆ... ಏನಂತೀರಿ..."

"ಮದುವೆ ಅಂದ್ರೇ ಯಾಕೋ ಭಯ ಆಗುತ್ತೆ ಟೀಚರ್... ನಾನೊಂದು ವಿಷಯ ಕೇಳ್ಲಾ!.... ಗಂಡಸರು ಯಾಕೆ ಕೆಟ್ಟವರಾಗಿರ್ತಾರೆ ?"

"ಎಲ್ಲರೂ ಕೆಟ್ಟವರಾಗಿರುಲ್ಲ ಮಂಗಳಾ...."

"ಹೆಂಡತಿಯರ ಬಗ್ಗೆ ಅವರಿಗೆ ಯಾವ ಒಳ್ಳೆಯ ಭಾವನೆಯೂ ಇರುಲ್ಲವೇನೋ ಅಂತ ನಂಗೆ ಅನ್ನಿಸುತ್ತೆ..."

"ಹಾಗೆ ಹೇಗೆ ಹೇಳ್ತೀರಿ?... ಯಾವ ಪುಸ್ತಕದಲ್ಲಿ ಹೀಗೆ ಓದಿದ್ರಿ?" ಕಿರು ನಗೆ ನಕ್ಕಳು.

"ನೀವು ಏನೇ ಹೇಳಿ ಗಂಡಸರು ಸ್ವಾರ್ಥಿಗಳು... ನಿಮಗೇ ಅನುಭವ ಆಗಿದೆಯಲ್ಲ

ಟೀಚರ್... ಅವರ ಸ್ವಾರ್ಥತನದಿಂದ ನಿಮ್ಮ ಜೀವನ ಹಾಳಾಯ್ತಲ್ಲ."

"ಎಲ್ಲರಿಗೂ ಹಾಗೆ ಯಾಕೆ ಆಗುತ್ತೆ ? ಏನೋ ನನ್ನ ಗ್ರಹಚಾರ ಚೆನ್ನಾಗಿರ್ಲಿಲ್ಲ... ನನ್ನ ಗಂಡ ಕೆಟ್ಟವನೇ... ಈ ರೂಪದಲ್ಲಿ ಅವನಿಂದ ನನಗೆ ಬಿಡುಗಡೆ ಸಿಕ್ಕಿತು... ಆದರೂ ಈ ಏಕಾಂಗಿ ಜೀವನವನ್ನು ನಾನು ಬಯಸಿರಲಿಲ್ಲ..."

"ಅಂದರೇ... ಅವರು ಬದುಕಿದಿದ್ದರೇ.... ನೀವು ಸುಖವಾಗಿರ್ತಿದ್ರಾ?"...

"ಆದರೆ ಈ ವಿಧವೆಯ ಪಟ್ಟ ಇರುತ್ತಿರಲಿಲ್ಲ...ಕಡೇ ಪಕ್ಷ ಒಂದು ಮಗುವಾದ್ರೂ ಇದ್ದಿದ್ದರೇ...." ಪಂಕಜ ಅತ್ತಾಗ ಮಂಗಳ ಸಮಾಧಾನ ಮಾಡಿದಳು.

"ಅಳ್ಬೇಡಿ ಟೀಚರ್.... ದೇವರು ಕಷ್ಟಗಳನ್ನು ಕೊಡುವುದು ಹೆಂಗಸರಿಗೇ ಯಾಕೆಂದರೆ ಅವರಿಗೆ ಸಹಿಸುವ ಶಕ್ತಿ ಹೆಚ್ಚು ಇರುತ್ತಂತೆ... ನಾನ ಮದುವೆಯಾಗದೇ ಹಾಗೇ ಇದ್ದು ಬಿಡೋಣ ಅಂತ ಅಂದ್ಕೊಂಡಿದೀನಿ..."

"ಇದನ್ನು ಮೂರ್ಖತನ ಅಂತಾರೆ... ನೀವ್ಯಾಕೆ ಹಾಗೇ ಇರ್ಬೇಕು... ನಿಮ್ಮ ತಂದೆ ತಾಯಿಗೆ ಸಂಕಟ ಆಗುವುದಿಲ್ವಾ.... ಅಲ್ಲದೇ... ನೀವೇನು ನನ್ನ ಹಾಗಲ್ಲವಲ್ಲ... ಒಂದು ವೇಳೆ ಮದುವೆ ನಡೆದು ಹೋದ ಮೇಲೆ ಹೀಗಾಗಿ ಹೋಗಿದ್ದರೆ ಏನ್ಮಾಡ್ತಿದ್ರೀ... ಮದುವೆ ನಿಶ್ಚಯವಾಗಿತ್ತು ಅಷ್ಟೇ.... ಅವರು ನಿಮ್ಮ ಪತಿ ಆಗಿರಲಿಲ್ಲ... ಇದನ್ನೆಲ್ಲ ಮನಸ್ಸಿಂದ ತೆಗೆದು ಹಾಕಿ... ಅವರ ನೆನೆಪಿನಲ್ಲೇ ಜೀವನವೆಲ್ಲಾ ಇರುಕ್ಕಾಗುತ್ತಾ?..."

"ಹಾಗಲ್ಲ ಟೀಚರ್... ಅವರನ್ನು ನೆನಪಿಸಿಕೊಳ್ಳುವಂಥ ಯಾವ ಒಳ್ಳೆಯ ಭಾವನೆಯೂ ಅವರ ಬಗ್ಗೆ ನನಗಿಲ್ಲ. ಅವರು ಒಳ್ಳೆಯವರಾಗಿರಲಿಲ್ಲ."

"ಅಂದರೇ... ಅವರಿಗೂ ಕುಡಿತದ ಅಭ್ಯಾಸವಿತ್ತಾ?...."

"ಅದೇನೋ ಗೊತ್ತಿಲ್ಲ... ಆದರೆ ಅವರ ವರ್ತನೆ ಸರಿ ಇರಲಿಲ್ಲ... ನಾನು ಅವರನ್ನು ಮದುವೆಯಾಗಲಿರುವವಳೂ ಅನ್ನೋದನ್ನೂ ಮರೆತು...ಛೀ..." ಮುಖ ತಿರುಗಿಸಿದಳು.

"ಬೈಯುತ್ತಿದ್ರಾ?.... ಎಂದಾದ್ರೂ ಹೊಡೆದಿದ್ರಾ..."

"ಇಲ್ಲ... ಹೋಗ್ಲಿ ಬಿಡಿ... ಇದುವರೆಗೂ ಈ ವಿಷಯವನ್ನು ನಾನು ಯಾರೊಂದಿಗೂ ಹೇಳಿರಲಿಲ್ಲ. ನಿಮಗೇ ಮೊದಲು...

"ಅಂದರೇ... ನಿಮ್ಮೊಡನೆ ... ದೇಹ ಸಂಬಂಧ?... ಅಂಥಾ ನೀಚ ಮನುಷ್ಯನಾ? ನಿಮ್ಮ ತಾಯಿಗೆ ಹೇಳಬೇಕಾಗಿತ್ತು..."

"ನಮ್ಮಿಬ್ಬರ ಮದುವೆ ಗೊತ್ತಾಗಿತ್ತು. ಅದೇ ಧೈರ್ಯ ಅವನಿಗೆ... ಸಧ್ಯ ದೇವರ ದಯೆ ತಪ್ಪಿಸಿಕೊಂಡು ಬಚಾವಾದೆ.... ಇಲ್ಲದಿದ್ದರೆ ಜೀವನ ಪರ್ಯಂತ ಪಾಪಪ್ರಜ್ಞೆಯಿಂದ ನರಳಬೇಕಾಗಿತ್ತು..."

"ಮನುಷ್ಯನಿಗೆ ಸಂಯಮ ಬೇಡ್ವಾ?... ಹೆಂಗಸ್ರು ಅಂದ್ರೆ ಅಷ್ಟೂ ಗೌರವ

ಬೇಡ್ವಾ?.... ನಾನೇನಾದ್ರೂ ಆಗಿದ್ದಿದ್ರೆ ಈ ಮದುವೆ ಬೇಡ ಅಂತ ಹೇಳುತ್ತಿದ್ದೆ..."

"ನಾನೂ ಹಾಗೇ ಹೇಳಿ ಬಿಡೋಣ ಅಂತ ಅಂದ್ಕೊಂಡಿದ್ದೆ... ಆದರೆ ಅಷ್ಟರಲ್ಲೇ ಈ ದುರ್ಘಟನೆ ನಡೆದು ಹೋಯ್ತು... ಆ ಬಗ್ಗೆ ಯಾರಿಗೆ ಹೇಳಿದ್ರೂ ನಂಬ್ತಿರಲಿಲ್ಲ... ಆದರೆ ಅದ್ಯಾಕೋ ಈ ದಿನ ನಿಮಗೆ ಹೇಳ್ಬೇಕು ಅಂತ ಅನ್ನಿಸ್ತು..."

"ಒಳ್ಳೇದಾಯ್ತು... ಯಾವ ಪಾಪದ ಕೆಲಸವೂ ನಿಮ್ಮಿಂದ ಆಗಿಲ್ಲ. ನೀವು ನಿಶ್ಚಿಂತೆಯಿಂದಿರಿ... ಆದರೆ ಒಂದು ಸಲಹೆ... ಯಾವುದೇ ಕಾರಣಕ್ಕೂ ನೀವು ಮದುವೆಯಾಗಲಿರುವವನಿಗೆ ಈ ವಿಷಯವನ್ನು ಹೇಳ್ಬೇಡಿ... ಯಾವ ಗಂಡಸೂ ನಂಬುವುದಿಲ್ಲ..."

"ಅದಕ್ಕೇ ನನಗೆ ಮದುವೆಯಾಗುವ ಆಸೆಯೇ ಹೊರಟು ಹೋಗಿದೆ.... "

"ನಿಮ್ಮನ್ನು ಅರ್ಥ ಮಾಡಿಕೊಳ್ಳುವ ಉತ್ತಮ ಸಂಗಾತಿ ನಿಮಗೆ ಸಿಗಲಿ ಅಂತ ಹಾರೈಸ್ತೀನಿ... ಆದರೆ ಮದುವೆಯೇ ಬೇಡ ಅನ್ನುವ ನಿರ್ಧಾರ ಮಾತ್ರ ಬೇಡ... ಈಗ ನಿದ್ದೆ ಮಾಡಲು ಪ್ರಯತ್ನಿಸಿ. ಮಾತು ಸಾಕು... ಈಗಾಗ್ಲೇ ಹೊತ್ತಾಗಿದೆ..."ಎಂದು ಹೇಳಿ ಮಗ್ಗುಲು ಬದಲಾಯಿಸಿ ಮಲಗಿದಳು. ಆದರೆ ಅವಳಿಗೇ ನಿದ್ದೆ ಹತ್ತಲಿಲ್ಲ. ಅವಳ ಚಿತ್ತ ಚಿಟ್ಟೆಯಂತೆ, ಚಂದ್ರುವಿನ ಬಳಿಗೆ ಹಾರಿ ಹೋಗಿತ್ತು... ಬೆಳಿಗ್ಗೆ ಚಂದ್ರು ಬಸ್‌ಸ್ಟ್ಯಾಂಡ್‌ಗೆ ಬಂದಾಗ ಅವನೊಡನೆ ಏನು ಮಾತಾಡಬೇಕು ಎಂದುಕೊಳ್ಳುತ್ತಾ ನಿದ್ರಿಸಲು ಪ್ರಯತ್ನಿಸಿದಳು.

ಮಂಗಳಂಗೆ ಹೊಸ ಜಾಗವಾದುದರಿಂದ ನಿದ್ದೆ ಹತ್ತಿರಲಿಲ್ಲ. ಬಾಲು ನಿದ್ರಿಸಿದನೋ ಇಲ್ಲವೋ, ತನ್ನನ್ನು ಕಾಣದೇ ಅಳುತ್ತಿರುವನೋ ಏನೋ... ತನ್ನ ಅಳಲನ್ನು ಹೇಳಿಕೊಳ್ಳಲು ಇಲ್ಲಿಗೆ ಬಂದಂತಾಯಿತು... ಇವಳು ಯಾರಿಗೂ ಹೇಳದೇ ಇದ್ದರೆ ಸಾಕು... ನಡೆಯಬಾರದ್ದು ನಡೆದಿದೆ ಎನ್ನುವಂತೆ ಅಪಪ್ರಚಾರ ನಡೆದರೆ, ಅಪ್ಪ ಅಮ್ಮನಿಗೆ ಅವಮಾನವಾಗುವುದಿಲ್ಲವೆ? ತಾನು ಯಾಕಾದರೂ ಹೇಳಿದೆನೋ... ಯಾರಿಗೂ ಹೇಳಬೇಡಿ ಎಂದು ಹೇಳಬೇಕೆಂದುಕೊಂಡು 'ಟೀಚರ್' ಎಂದು ಕರೆದಳು. ಆದರೆ ಪಂಕಜ ಉತ್ತರಿಸಲಿಲ್ಲ.

ಅಲಾರಾಂ ಹೊಡೆಯುತ್ತಿದ್ದಂತೇ ಎಚ್ಚರಗೊಂಡ ಪಂಕಜ ಎದ್ದು ತನ್ನ ಹಾಸಿಗೆಯನ್ನು ಸುತ್ತಿಟ್ಟಳು. ಅವಳು ಮುಖ ತೊಳೆದು ಬಂದು ಕಾಫಿಯನ್ನು ಬೆರೆಸುವಷ್ಟರಲ್ಲಿ ಮಂಗಳ ಎದ್ದಿದ್ದಳು. ಅವಳಿಗೂ ಕಾಫಿ ಕೊಟ್ಟು ತಾನು ಕುಡಿದಳು. "ನೀವೇನೂ ಆತಂಕ ಪಟ್ಕೋಬೇಡಿ ಮಂಗಳಾ... ನಾನು ನೆನ್ನೆ ನಡೆದ ಮಾತುಕತೆಯನ್ನು ಯಾರಿಗೂ ಹೇಳುವುದಿಲ್ಲ. ನಿಶ್ಚಿಂತೆಯಿಂದಿರಿ." ಎಂದಳು. ಮಂಗಳಾ ನೆಮ್ಮದಿಯಿಂದ ಮಂದಹಾಸ ಬೀರಿದಳು.

ಬಸ್‌ಸ್ಟ್ಯಾಂಡ್‌ನಲ್ಲಿ ಪಂಕಜಳಿಗಾಗಿ ಕಾಯುತ್ತಾ ನಿಂತಿದ್ದ ಚಂದ್ರೂ, ಜಟಕಾ

ಗಾಡಿಯಿಂದ ಅವಳು ಇಳಿದೊಡನೆ ಅವಳ ಬಳಿಗೆ ಸಾರಿದ. "ಓ... ಆಗ್ಲೇ ಬಂದು ಬಿಟ್ಟಿದೀರಾ?" ನಗುತ್ತಾ ಪ್ರಶ್ನಿಸಿದಳು. ಜಟಕಾ ಓಡಿಸುವವನಿಗೆ ಬಾಡಿಗೆ ಯನ್ನಿತ್ತು, ಕಿಟ್‌ಬ್ಯಾಗ್‌ನ್ನೆತ್ತಿಕೊಂಡಳು. ಅವನು ತನ್ನ ಕೈಗೆ ತೆಗೆದುಕೊಂಡ.

"ನಾನು ತರ್ತೀನಿ... ನಾನು ಬೇಗನೆಯೇ ಬಂದೆ... ತಡ ಆಯ್ತು ಅಲ್ವಾ?"

"ಹೂಂ. ರಾತ್ರಿ ನಿದ್ದೆ ಬಂದಿದ್ದು ತಡವಾಯ್ತು... ಬೆಳಿಗ್ಗೆ ಎದ್ದದ್ದೂ ತಡವೇ..."

"ಟೀಚರ್ ಹಾಗೆ ಮಾಡುಲ್ವಲ್ಲಾ" ನಗೆಯಾಡಿದ.

"ಟೀಚರ್ರೂ ಮನುಷ್ಯರೇ ರೀ... ಅಲ್ಲದೇ ರಜ ಇತ್ತಲ್ಲ. ರಾತ್ರಿ ನಾನೂ ಮಂಗಳಾ ತುಂಬಾ ಹೊತ್ತು ಮಾತನ್ನಾಡುತ್ತಿದ್ದೆವು."

"ಓ.... ನೆನ್ನೆ ಅವರು ಬಂದಿದ್ರಾ... ನನ್ನನ್ನು ಕರೆದಿದ್ರೆ...?"

"ಕರೀದೇ ಬರುವ ಅತಿಥಿ ನೀವು... ಕರೆದರೆ ನಮ್ಮ ಮನೇಲೇ ಇದ್ದು ಬಿಡ್ತೀರಿ ಅನ್ನೋ ಭಯ ನಂಗೆ..."

"ಅಂದರೇ... ನನ್ನ ಬಗ್ಗೆ ಏನು ತೀರ್ಮಾನ ತಗೊಂಡ್ರಿ?"

"ನಾನು ನಿಮಗೋಸ್ಕರ ಒಬ್ಬ ಒಳ್ಳೆಯ ಹುಡುಗಿಯನ್ನು ಆರಿಸಿದೀನಿ... ನೀವು ಒಪ್ಕೋಬೇಕು." ಯಾರದು ಎಂದು ಅವನು ಕೇಳಲಿಲ್ಲ. ಅವಳೇ ಮುಂದುವರೆದಳು.

"ಮಂಗಳಾ.... ಅವಳ ಬಗ್ಗೆ ಅಯ್ಯೋ ಅನ್ನಿಸುತ್ತೆ... ಅವಳ ಮದುವೆ ನಿಂತು ಹೋಯ್ತು. ಯಾಕೆ ಗೊತ್ತಾ?.. ಅವಳನ್ನು ಮದುವೆಯಾಗಲಿದ್ದವನು ಆಕ್ಸಿಡೆಂಟ್ ನಲ್ಲಿ ತೀರಿಹೋದ್ನಂತೆ... ಅವಳಿಗೆ ಭಾರಿ ಆಘಾತವಾಗಿದೆ."

"ಹೌದಾ? ನಂಗೆ ಗೊತ್ತಿರ್ಲಿಲ್ಲ... ಕಾಲ ಎಲ್ಲವನ್ನು ಮರೆಸುತ್ತೆ. ಕ್ರಮೇಣ ಸರಿಹೋಗ್ತಾರೆ... ಅವರ ಮನೆಯವರು ಅವರ ಜತೆಗಿದ್ದಾರೆ."

"ನೀವ್ಯಾಕೆ ಅವರನ್ನು ಮದವೆಯಾಗಬಾರ್ದು?"... ಕಿಟ್‌ಬ್ಯಾಗ್‌ನ್ನು ನೆಲದ ಮೇಲಿಟ್ಟು ಅವಳಕಡೆ ತಿರುಗಿದ... ರೋಷದಿಂದ ನುಡಿದ...

"ಇದನ್ನು ಕೇಳುಕ್ಕೆ ನಾನು ಇಲ್ಲೀವರೆಗೆ ಬರಲಿಲ್ಲ... ನನಗೆ ನಿಮ್ಮ ನಿರ್ಧಾರ ಬೇಕು... ಬೇರೆಯವರ ವಿಷಯ ಬೇಕಿಲ್ಲ."

"ಮೆಲ್ಲಗೆ ಮಾತಾಡಿ, ಎಲ್ಲರೂ ನಮ್ಮ ಕಡೇನೇ ನೋಡ್ತಿದಾರೆ... ನನಗಿಂತ ಅವಳು, ನಿಮಗೆ ಒಳ್ಳೆಯ ಸಂಗಾತಿಯಾಗ್ತಾಳೆ... ನಿಮ್ಮ ತಾಯಿಗೆ ಮೆಚ್ಚಿನ ಸೊಸೆ ಯಾಗ್ತಾಳೆ..."

"ಅವರ ಮೆಚ್ಚುಗೆಯ ಸೊಸೆ ನನ್ನ ಸಂಗಾತಿ ಆಗಬೇಕಾಗಿಲ್ಲ... ನೀವು ಒಪ್ಪಿಗೆ ಕೊಟ್ಟರೆ ಸರಿ... ಇಲ್ಲದಿದ್ದರೆ ನಾನು ಆಜನ್ಮ ಬ್ರಹ್ಮಚಾರಿಯಾಗಿದ್ದು ಬಿಡ್ತೀನಿ."

"ಅದು ನಿಮ್ಮ ನಿರ್ಧಾರ... ಇದಕ್ಕೆ ನಾನು ಏನು ಹೇಳಲಿ?...."

"ನಿಮ್ಮ ಮನಸ್ಸಲ್ಲಿ ಬೇರೆ ಯಾರಾದ್ರೂ ಇದಾರಾ ? ನಿಮ್ಮ ಸಹೋದ್ಯೋಗಿ

ಯಾರಾದ್ರೂ... ಅಕ್ಕಪಕ್ಕದ ನೆಯವರು...

"ಯಾರೂ ಇಲ್ಲ. ಯಾರ ಬಗ್ಗೆಯೂ ನಾನು ಚಿಂತಿಸುವುದಿಲ್ಲ... "

"ನಿಜ ಹೇಳಿ, ಕೆಲವು ದಿನಗಳಿಂದ ನನ್ನ ಬಗ್ಗೆಯೂ ನೀವು ಯೋಚಿಸಿಲ್ವಾ?..."

"ನೀವು ನನ್ನ ತಲೆ ಕೆಡಿಸಿ ಬಿಟ್ಟಿದೀರಿ... ನಿಮಗೆ ಆ ಹಕ್ಕು ಇಲ್ಲ."

"ನೀವೂ ಅಷ್ಟೇ.... ನನ್ನ ಮನಸ್ಸನ್ನು ಆಕ್ರಮಿಸಿಕೊಂಡು ಬಿಟ್ಟೇದಿರಿ... ನಿಮಗೂ ಆ ಅಧಿಕಾರ ಇರಲಿಲ್ಲ..."

"ಅದಕ್ಕೆ ನಾನು ಹೊಣೆ ಅಲ್ಲ..."

"ಎಲ್ಲಾ ಹೊಣೆಯನ್ನು ನಾನು ಹೊರಲು ಸಿದ್ಧನಾಗಿದೀನಿ... ನೀವು ಯಾಕೆ ಹೀಗೆ ಸತಾಯಿಸ್ತೀರೋ ನಂಗೆ ಅರ್ಥ ಆಗ್ತಿಲ್ಲ."

"ಸರಿ... ಬಸ್ಸು ಬಂತು. ಹೊರಡ್ತೀನಿ... ಊರಿಂದ ಬಂದ್ಮೇಲೆ ಮಾತಾಡ್ತೀನಿ."

"ನಾನೂ ನಿಮ್ಮ ಜತೇಲಿ ಬರ್ತೀನಿ... ನಿಮ್ಮೊಬ್ಬರನ್ನೇ ಕಳಿಸುವ ಮನಸ್ಸಿಲ್ಲ." ಅವನೂ ಬಸ್ಸನ್ನು ಹತ್ತಲು ಹೊರಟ.

"ಹುಡುಗಾಟ ಆಡ್ಬೇಡಿ... ನನ್ನ ಪಾಡಿಗೆ ನನಗೆ ಇರಲು ಬಿಡಿ... ಯೋಚಿಸಲು ಸಮಯ ಕೊಡಿ... ಹೀಗೆ ಬಲವಂತ ಮಾಡ್ಬೇಡಿ..."

"ಸರಿ... ನನ್ನಿಂದ ದೂರ ಇದ್ದರೆ, ನನ್ನ ನೆನಪು ಬರಬಹುದು. ನಿರ್ಧರಿಸಲು ಆಗಬಹುದು ಅನ್ನುವ ವಿಶ್ವಾಸದಿಂದ ಕಳಿಸಿಕೊಡ್ತಿದೀನಿ. ಇಲ್ಲದಿದ್ದರೆ ನಿಮ್ಮ ಮನೆಯ ಮುಂದೆ ಧರಣಿ ಕೂತ್ಕೋ ಬಲ್ಲೆ... ಆ ಧೈರ್ಯ ನನಗಿದೆ."

"ನಿಮ್ಮನ್ನ ಹುಚ್ಚ ಅಂತಾರೆ." ಎಂದು ಹೇಳಿ ನಕ್ಕು ಬಸ್ಸನ್ನು ಹತ್ತಿ, ಕಿಟಕಿಯ ಪಕ್ಕದ ಸೀಟನ್ನು ಹಿಡಿದು ಕುಳಿತಳು... ಅವನೂ ಬಂದು ನಿಂತ..

"ನನಗೆ ನಿರಾಸೆ ಮಾಡ್ಬೇಡಿ ಪಂಕಜಾ... ನಾನು ನಿಜವಾಗಿಯೂ ಹುಚ್ಚನಾಗಿ ಬಿಡ್ತೀನಿ..."ಅವಳು ಸುಮ್ಮನೇ ನಕ್ಕಳು... ಮಾತಾಡಲಿಲ್ಲ... ಬಸ್ಸು ಚಲಿಸಿತ್ತು... ಇವನು ಕೈ ಬೀಸಿದ...

ο ο ο

ಅಲ್ಲಿ ಇಲ್ಲಿ ತಿರುಗಾಡಿ ವಾಪಸ್ಸು ಮನೆಗೆ ಬರುವಷ್ಟರಲ್ಲಿ ಸಾಕಷ್ಟು ಹೊತ್ತಾಗಿತ್ತು. ಲಕ್ಷ್ಮೀದೇವಮ್ಮ ಇವನನ್ನು ಕಂಡೊಡನೆ ಸಿಡುಕಿದಳು. "ಎಲ್ಲಿ ಹೊರಟು ಹೋಗಿದ್ದೆ ಇಷ್ಟೊತ್ತು ?ನಿಂಗೇನು ಯಾರೂ ಹೇಳೋರೂ ಕೇಳೋರು ಇಲ್ವಾ?"

ಇವನಿಗೂ ರೇಗಿತ್ತು. ಹುಬ್ಬುಗಂಟಿಕ್ಕಿದ."ಏನಾಯ್ತು ಈಗ ? ಅಪ್ಪಂಗೆ ಹೇಳ್ಬಿಟ್ಟೇ ಹೋಗಿದ್ದೆ. ಈಗ ನೀವು ಕೇಳ್ತಿದೀರಲ್ಲ."

"ಮಾತಿಗೆ ಎದುರು ಮಾತು ಮಾತ್ರ ಆಡ್ತೀ... ಬೇಗ ಬರೋದಲ್ವಾ?... "ಬಾಡಿಗೆಗೆ ಮನೆ ನೋಡೋಕೆ ಅಂತ ಬಂದಿದ್ರು... ಇವರು ಅವರೊಂದಿಗೆ

ಹೋಗಿದಾರೆ... ನೀನೂ ಹೋಗು... ಹಾಗೇ ಟೀಚರ್ ಮನೇನೂ ತೋರಿಸುಕ್ಕೆ ಹೇಳು... ಅವಳು ವಾಪಸ್ಸು ಬರೋದು ಅನುಮಾನ."

ಇವನು ಹುಬ್ಬೇರಿಸಿದ. "ಹಾಗಂತ ಯಾರು ಹೇಳಿದ್ರು ? ಮನೆ ಸಾಮಾನೆಲ್ಲಾ ಹಾಗ್ಹಾಗೇ ಇದೆ... ಅವರು ಹೇಳೋವರ್ಗೂ ಹಾಗೇ ಇರಲಿ..."

"ಏನೂ ಮಹಾ ಬೆಲೆ ಬಾಳೋ ಸಾಮಾನುಗಳು ಇರೋದು... ಏನಾಗುಲ್ಲ... ಹೋಗು."

ಇವನಿಗೆ ಆಕೆಯ ಮಾತಿನ ಧೋರಣೆ ಹಿಡಿಸಲಿಲ್ಲ... ಆದರೂ ವ್ಯತಿರಿಕ್ತವಾಗಿ ಮಾತಾಡುವಂತಿಲ್ಲ, ಸಿಡುಕು ಮುಖ ಮಾಡಿಕೊಂಡು ಹೊರಬಂದ. ಬಂದಿದ್ದವರು, ದಿಬ್ಬದ ಮನೆಯ ಹತ್ತಿರ ಇದ್ದರು. ಇವನು ಅವರುಗಳನ್ನು ಸೇರಿಕೊಂಡ. ಗೋಪಾಲ ನೆಂದ. "ಇವರಿಗೆ ಈ ಮನೆ ಹಿಡಿಸಿದೆ. ಆದರೂ, ಟೀಚರ್ ಇರೋ ಮನೇನೂ ಒಂದು ಸಾರಿ ನೋಡಿರಲಿ... ರಾಮರಾಯರ ಮನೇಲಿ ಬೀಗದ ಕೈ ಇದೆ. ಹೋಗಿ ಇಸ್ಕೊಂಡು ಬಾ..."

"ಖಾಲಿ ಮಾಡ್ತೀವಿ ಅಂತ ಅವರು ಇನ್ನೂ ಹೇಳಿಲ್ವಲ್ಲಪ್ಪಾ..."

"ಸುಮ್ನೆ ನೋಡಿರಲಿ... ಖಾಲಿ ಆದರೆ, ಇವರ ಕಡೆಯವರಿಗೆ ಹೇಳ್ತಾರೆ... ಈಗ ಹೇಗೂ ಟೀಚರ್ ಇಲ್ಲವಲ್ಲ." ಚಂದ್ರು ಅಸಮಾಧಾನಾದಿಂದ ರಾಮರಾಯರ ಮನೆಯ ಕಡೆಗೆ ಬಂದ. ಶಂಕರನನ್ನು ಕಂಡ.

"ಶಂಕರಾ, ಟೀಚರ್ ಮನೆಯ ಬೀಗದ ಕೈ ನಿಮ್ಮ ಮನೇಲಿದೆಯಂತೆ... ನಿಮ್ಮಕ್ಕನನ್ನು ಕೇಳಿ ಇಸ್ಕೊಂಡು ಬಾ." ಶಂಕರ ಒಳಗೆ ಓಡಿದ. ಅವನ ಜೊತೆಗೆ ಮಂಗಳಾನೂ ಬಂದಿದ್ದಳು...

"ಬೀಗದ ಕೈ ಯಾಕೆ ? ಮನೆ ಕ್ಲೀನ್ ಮಾಡಿಸ್ಬೇಕಾ?"

"ನೀವೂ ಪ್ರಶ್ನೆ ಕೇಳ್ತೀರಾ? ಯಾರೋ ನೋಡುಕ್ಕೆ ಬಂದಿದಾರೆ. ತೋರಿಸ್ಬೇಕು ಯಾವ ಸಾಮಾನೂ ಕಳುವಾಗುಲ್ಲ ಹಾಗಂತ ಮಾತು ಕೊಡ್ತೀನಿ. ಬೀಗದ ಕೈಯನ್ನು ನಾನೇ ಖುದ್ದಾಗಿ ವಾಪಸ್ಸು ತಂದುಕೊಡ್ತೀನಿ... ಆ ಮೇಲೆ ನೀವೂ ಪರೀಕ್ಷೆ ಮಾಡ ಬಹುದು. ಅನುಮಾನ ಇದ್ದರೆ..." ಅಸಹನೆಯಿಂದ ಮಾತುಗಳು ಉರುಳಿದವು.

"ಹಾಗಲ್ಲ"... ಅವನ ಮಾತಿನಿಂದ ಕಸಿವಿಸಿಗೊಂಡಿದ್ದಳು. ಶಂಕರ ಬೀಗದ ಕೈಯನ್ನು ಕೊಟ್ಟ...

"ಬೇಕಾದ್ರೆ ನೀನೂ ಬಾರೋ..."ಚಂದ್ರು ವ್ಯಂಗ್ಯವಾಗಿ ಕರೆದ. ಶಂಕರ ನಾಚಿ ಅಕ್ಕನ ಕಡೆ ನೋಡಿದ. ಅವಳು ಹೋಗಬೇಡ ಎನ್ನುವಂತೆ ಸಂಜ್ಞೆ ಮಾಡಿದಳು. ಚಂದ್ರು ತಿರುಗಿ ನೋಡದೇ ಹೊರಟು ಹೋಗಿದ್ದ. ಸ್ವಲ್ಪ ಹೊತ್ತಿನ ನಂತರ ವಾಪಸ್ಸು ಬಂದಿದ್ದ. ಮಂಗಳನ್ನ ಕರೆಸಿ ಅವಳ ಕೈಗೆ ಬೀಗದಕೈಯನ್ನು ಕೊಟ್ಟಿದ್ದ.

"ಯಾರು ಬಂದು ಕೇಳಿದ್ರೂ ಕೊಡ್ಬೇಡಿ... ಅವರು ಇಲ್ಲದೇ ಇದ್ದಾಗ ಬೀಗ ತೆಗೆದು, ಮನೆ ತೋರಿಸುವುದು ಸರಿ ಅಲ್ಲ ಅಲ್ವಾ?"

"ನಿಮ್ಮ ತಂದೆ ಬಂದು ಕೇಳಿದರೆ ?" ಸವಾಲೆಸೆದಳು.

"ಅವರಿಗೆ ನಾನು ಹೇಳ್ತೀನಿ. ಅವರಿಗೆ ಅರ್ಥವಾಗುತ್ತೆ."ಅನುಮಾನಿಸುತ್ತಾ ಅಲ್ಲಿಯೇ ನಿಂತ. 'ಸರಿ" ಎಂದು ತಲೆಯಾಡಿಸಿ ತಿರುಗಿದವಳನ್ನು ನಿಲ್ಲಿಸಿದ. "ಒಂದ್ನಿಮಿಷ ನಾನು ನಿಮ್ಮ ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು..." ಅತ್ತಿತ್ತ ನೋಡಿ ಹೇಳಿದ.

"ನನ್ನ ಹತ್ರಾನ? ಏನು ವಿಷಯ ಒಳಗೆ ಬನ್ನಿ." ಸಂದೇಹದಿಂದ ಕರೆದಳು.

"ಎಲ್ಲರೆದುರಿಗೆ ಮಾತನಾಡುವುದಕ್ಕೆ ಆಗುಲ್ಲ... ಒಬ್ಬರೇ ಸಿಕ್ತೀರಾ?"

"ಯಾಕೆ ? ಹಾಗಲ್ಲ ಕರೀಬೇಡಿ... ಯಾರಾದ್ರೂ ಕೇಳಿಸ್ಕೊಂಡ್ರೆ ಏನಂತಾರೆ ?" ಹೀಗೆ ನಿಂತು ಮಾತಾಡಿದ್ರೇ ಅಪಾರ್ಥ ಕಲ್ಪಿಸ್ತಾರೆ... ಹೇಳೋದಾದ್ರೆ ಇಲ್ಲೇ ಹೇಳಿ..." ಒರಟಾಗಿ ನುಡಿದಳು.

"ಹೋಗ್ಲಿ ಬಿಡಿ.. ನೀವು ತಪ್ಪು ತಿಳ್ಕೊಂಡ್ರಿ... ಟೀಚರ್ ವಿಷಯಾನ ಕೇಳ್ಬೇಕಾಗಿತ್ತು... ಅವರ ಅಡ್ರೆಸ್ ಇದ್ದರೆ ಕೊಡ್ತೀರಾ?"....

"ಇದೆ... ಆದರೆ, ಅವರನ್ನು ಕೇಳದೇ ಹೇಗೆ ಕೊಡೋದು...?"

"ಸರಿ ಕೇಳ್ಬಿಟ್ಟೇ ಕೊಡಿ ಪರವಾಗಿಲ್ಲ. ನಾನು ಮುಂದಿನವಾರ ಮೈಸೂರಿಗೆ ಹೋಗ್ಬೇಕು ಅಂತ ಇದೀನಿ.... ಅಡ್ರೆಸ್ ಇದ್ದರೆ ಹೋಗಿ ನೋಡ್ತಿದ್ದೆ ಅಷ್ಟೇ.... ನಂಗೇನೂ ನಷ್ಟವಿಲ್ಲ ಬಿಡಿ... ಮತ್ತೆ ಅವರು ಇಲ್ಲಿಗೆ ಬರುಲ್ಲವಂತೆ... ಹಾಗಂತ ನಿಮಗೂ ಹೇಳಿದ್ರಾ...?"

"ಬಂದರೂ ಬರಬಹುದು. ಬರದೇನೂ ಇರಬಹುದು. ಯಾವುದಕ್ಕೂ ಕಾಗದ ಬರೀತಾರೆ... ಕಾಗದ ಬಂದರೆ ತಿಳಿಸ್ತೀನಿ..."

"ನಾನೇ ಈ ಊರಲಿಲ್ಲ.... ಮನೆ ಖಾಲಿ ಮಾಡೋದಾದ್ರೆ, ಅವನನ್ನೇ ಕೇಳೋಣ ಅಂತ... ಪರವಾಗಿಲ್ಲ ಬಿಡಿ... ಮೈಸೂರು ನನಗೆ ಪರಿಚಯದ ಊರು. ಪತ್ತೆ ಹಚ್ಚೋದೇನೂ ಕಷ್ಟವಲ್ಲ." ನಗುತ್ತಾ ನುಡಿದು ಅಲ್ಲಿಂದ ಸರಿದ... ಅವಳು ಒಳಕ್ಕೆ ಬಂದು ಬೀಗದ ಕೈಯನ್ನು ಗೋಡೆಯ ಮೇಲಿದ್ದ ಮೊಳೆಗೆ ಸಿಕ್ಕಿಸಿದಳು.

"ಒಳಗೆ ಬನ್ನಿ ಅಂತ ಕರೀಬಾರ್ದಾಗಿತ್ತಾ? ಅದೆಷ್ಟು ಹೊತ್ತು ಬಾಗಿಲ್ನಲ್ಲಿ ನಿಂತು ಮಾತಾಡೋದು ? ಅದೂ ಗಂಡು ಹುಡುಗನ ಜತೇಲಿ?" ತಾಯಿ ರೇಗಿದಳು.

"ಟೀಚರ್ ಬರ್ತಾರೋ ಇಲ್ಲವೋ ಅಂತ ಕೇಳ್ತಿದ್ರು... ಒಳಗೆ ಬನ್ನಿ ಅಂತ ಅಂದೆ... ಬರದಿದ್ರೆ ನಾನೇನ್ಮಾಡ್ಲೀ... ನೀನೇ ಎದ್ದು ಬೀಗದ ಕೈಯನ್ನು ಕೊಡ್ಬೇಕಾಗಿತ್ತು.. ನನಗೇ ಎಲ್ಲಾ ಜವಾಬ್ದಾರಿ. ನಮ್ಮ ಮನೆಯ ಕೆಲಸವೇ ಬೇಕಾದಷ್ಟಿದೆ. ಈ ಪಂಕಜಾ ಟೀಚರ್ ಕೆಲಸ ಬೇರೆ... ಯಾರೇ ಕೇಳಿದ್ರೂ ಬೀಗದ ಕೈಯನ್ನು

ಕೊಡ್ಬಾರ್ದಂತೆ... ಹಾಗಂತ ಹೇಳಿದ್ರು..."

"ನೀನ್ಯಾಕೆ ಸಿಡುಕ್ತೀಯೊ?... ಬಾಗಿಲ ಎದುರಿಗೆ ಕಾಣುವ ಹಾಗೆ ತಗುಲಿ ಹಾಕಲೇ ಬೇಡ. ಅಡಿಗೆ ಮನೇಲಿ ಎಲ್ಲಾದ್ರೂ ಇಡು... ಯಾರಿಗೂ ಕಾಣದ ಹಾಗೆ... ಅದ್ಸರಿ ಕೆಲಸಕ್ಕೆ ಸೇರಿಕೊಂಡಿದಾನೆ ಅಂತ ಕಾಣುತ್ತೆ. ಈ ನಡುವೆ ಕಂಡಿರಲ್ಲೇ ಇಲ್ಲ..."

"ಇರಬಹುದು... ನಾನು ಕೇಳಲಿಲ್ಲ... ನಂಗ್ಯಾಕೆ?"

"ಅದೂ ಸರಿಯೇ.... ಇನ್ನಾದ್ರೂ ಮದುವೆ ಆಗ್ತಾನೋ ಹೇಗೋ... ಲಕ್ಷ್ಮಿದೇವಮ್ಮನ ಜತೇಲಿ ಏಗೋ ಅಂಥ ಹುಡುಗಿ ಆಗ್ಬೇಕು... ಏನು ಕೆಲಸ, ಸಂಬಳ ಎಷ್ಟು... ಅವನ ವಯಸ್ಸೆಷ್ಟು ಅಂತ ಆತನ್ನ ಕೇಳ್ಬೇಕು."

"ಅದನ್ನು ಕಟ್ಕೊಂಡು ನಮಗೇನಾಗಬೇಕಾಗಿದೆ ? ನೀನೊಬ್ಳು..." ಎಂದು ತಾಯಿಯನ್ನು ಮೂದಲಿಸಿ, ಬೀಗದ ಕೈಯನ್ನು ಅಡಿಗೆ ಮನೆಗೆ ತೆಗೆದುಕೊಂಡು ಹೋಗಿ, ಬಡುವಿನ ಮೂಲೆಯಲ್ಲಿಟ್ಟಳು... ಸಧ್ಯ ಅಪ್ಪ ಮನೇಲಿರ್ಲಿಲ್ಲ... ಇದ್ದಿದ್ದರೆ ಅವರೂ ಒಂದಿಷ್ಟು ಬುದ್ಧಿವಾದ ಹೇಳಿರುತಿದ್ರು... ಆದರೆ ನನ್ನ ಮದುವೆ ನಿಂತು ಹೋದಾಗ್ನಿಂದ ಅಪ್ಪ ಮಂಕಾಗಿದಾರೆ... ಅಮ್ಮ ಯಾಕೆ ಚಂದ್ರುವಿನ ವಿವರಗಳನ್ನು ಕೇಳಿದಳು? ಎದೆಯ ಮೂಲೆಯಲ್ಲಿ ಸಣ್ಣ ಆಸೆ ಇರಬಹುದೆ ? ಆದರೆ... ನನಗೀಗಲೇ ಮದುವೆ ವಿಷಯ ವನ್ನು ಕುರಿತು ಯೋಚಿಸುವ ಮನಸ್ಸು ಇಲ್ಲ... ಆ ಆಸೆ ಅವನಲ್ಲೂ ಇರಬಹುದೇ ? ಅದನ್ನೇ ಮಾತಾಡಬೇಕು ಅಂತಂದನೆ ?|.. ಹಾಗೇನಾದ್ರೂ ಅವನು ಆಸೆ ಇಟ್ಟುಕೊಂಡಿದ್ದರೆ, ಬಿಲ್‌ಕುಲ್ ಆಗುಲ್ಲ ಅಂತ ಹೇಳಿಬಿಡಬೇಕು... ಇವನ ಈ ಸಮಸ್ತ ಆಸ್ತಿಯೂ ಬೇಡ... ಲಕ್ಷ್ಮಿದೇವಮ್ಮನ ಸೊಸೆಯಾಗುವುದೂ ಬೇಡ... ಅವನು ಮತ್ತೆಂದಾದ್ರೂ ಈ ವಿಷಯವನ್ನು ಪ್ರಸ್ತಾಪಿಸಿದರೆ, ಮುಖಕ್ಕೇ ಹೇಳಿಬಿಡ್ತೀನಿ ಎಂದುಕೊಂಡು, ಕೈ ಎತ್ತಿದಳು. ಕಟ್ಟೆಯ ಮೇಲಿದ್ದ ಪಾತ್ರೆಗೆ ಕೈ ತಗುಲಿ, ಕೆಳಕ್ಕೆ ಠಳ್ ಎಂದು ಬಿದ್ದಿತು.

"ಪಾತ್ರೆಗಳೆಲ್ಲ ತೆಗ್ಗಿ ನುಗ್ಗೇಕಾಯಿ ಅಂತಾಯ್ತು... ಅದೇನು ಕೋಪವೋ... ಈಚೀಚೆಗೆ."

ಮನೆ ಕೆಲಸದಲ್ಲಿ ಧ್ಯಾನವೇ ಇಲ್ಲ.... ಸಹನೆ ಇಲ್ಲ. "ತಾಯಿ ಗೊಣಗಿದ್ದು ಇವಳಿಗೆ ಕೇಳಿಸಲಿಲ್ಲ. "ಪಾತ್ರೆಯನ್ನು ಎತ್ತಿಟ್ಟು ಕೆಲಸದಲ್ಲಿ ಮುಂದುವರೆದಳು ಆದರೂ ಮನಸ್ಸು ಗೊಂದಲಿದ ಗೂಡಾಗಿತ್ತು. ...ಅವನು ಚಂದ್ರಶೇಖರ ... ಇವನು ಚಂದ್ರ ಮೌಳಿ ... ಅವನ ಬಗ್ಗೆ ತನಗೆ ಪ್ರೀತಿ ಇರಲಿಲ್ಲ... ಕಡೆಯಲ್ಲಿ ತಿರಸ್ಕಾರಕ್ಕೆ ಒಳಗಾಗಿದ್ದ... ಇವನ ಬಗ್ಗೆ ತನಗೆ ಯಾವ ಭಾವನೆಯೂ ಇಲ್ಲ. ಯಾವ ಭಾವನೆಯನ್ನು ಬೆಳೆಯಗೊಡಬಾರದು. .... ಶ್ರೀಮಂತರ ಮನೆಯಲ್ಲಿ ಬೆಳೆದವನು... ಸ್ವಲ್ಪ ತರಲೆ ಅಂತ ಅನ್ನುತ್ತೆ . ಜಂಭವೂ ಇರಬಹುದು.... ಜಿಪುಣನೂ ಇರಬಹುದು... ನನ್ನ ಬಗ್ಗೆ ಏನಾದರೂ ಭಾವನೆಗಳನ್ನಿಟ್ಟು ಕೊಂಡಿರಬಹುದೆ. ಸ್ವಲ್ಪ ಸ್ನೇಹ ಇದೆ... ಅದನ್ನೇ

ಮುಂದಾಗಿಟ್ಟುಕೊಂಡು ಸಲುಗೆ ತೋರಲು ಬಂದಿದಾನೆ.... ಲಕ್ಷ್ಮಿ ದೇವಮ್ಮ ಕರೆದೂ ಕರೆದೂ ಕೆಲಸ ಮಾಡಿಸ್ಕೊಂಡಿದಾರೆ... ಅದನ್ನು ಕಂಡಿದಾನೆ. ... ಬೇಯಿಸಿ ಹಾಕಿ, ಮನೆ ಕೆಲಸ ಮಾಡುವ ಹೆಂಡತಿ ಯೊಬ್ಬಳು ಬೇಕಾಗಿದೆ ಅಂತ ಕಾಣುತ್ತೇ.... ಇನ್ನು ಯಾವ ಗಂಡಸಿನ ಮಾತಿನ ಮೋಡಿಗೆ ಮರುಳಾಗುವುದಿಲ್ಲ. ಒಂದು ಸಾರಿಯ ಆ ಕಹಿ ನೆನಪೇ ಸಾಕು..... ಮನಸ್ಸು ಆದಿನ ನಡೆದ ಘಟನೆಯನ್ನು ಮೆಲುಕು ಹಾಕಿತು...... ಅವನಿಗ್ಯಾಕೆ ಅಂಥ ಕೆಟ್ಟ ಆಲೋಚನೆ ಬಂತು ?ನಾನು ಒಪ್ಪಿಕೊಂಡಿದ್ದರೆ.... ಏನೇನೆಲ್ಲವೂ ನಡೆದು ಹೋಗುತ್ತಿತ್ತು. ..ಅವನು ಇನ್ನು ಎರಡು ದಿನಗಳು ಇದೇ ಊರಿನಲ್ಲಿರುತ್ತಿದ್ದ.. ಮತ್ತೆ ಮತ್ತೆ ಕರೆದೊಯ್ಯುತ್ತಿದ್ದ... ಆದರೆ... ಈ ಬಸ್ಸಿನ ಅಪಘಾತದಿಂದ ಅವನು ಪಾರಾಗುತ್ತಿದ್ದ.... ಬದುಕಿರುತ್ತಿದ್ದ.... ಅವಳ ಎದೆಯ ಬಡಿತ ತೀವ್ರವಾಯಿತು.... ಹಾಗಾದರೆ, ಅವನ ಅಂತ್ಯಕ್ಕೆ ತಾನು ಕಾರಣವೇ?.. ಅವನ ಆಸೆಗೆ ತಾನು ಸಹಕರಿಸದೇ ಇದ್ದುದು ತಪ್ಪಾಯಿತೇ...ಇದುವರೆಗೂ ಅನ್ನಿಸದೇ ಇದ್ದುದು ಈಗ್ಯಾಕೆ ಹೀಗೆ ಅನ್ನಿಸ ತೊಡಗಿದೆ. ತಾನು ಅವನಿಂದ ಬಚಾವಾದೆ ಅಂತ ಭಾವಿಸಿದೆ. ಇಲ್ಲ ಭೂತನಂತೆ ಅವನು ನನ್ನನ್ನು ಈ ರೀತಿಯಲ್ಲಿ ಕಾಡ ತೊಡಗಿದರೇ....? ಯಾಕೋ ಏನೋ ಅಳು ಬರುವಂತಾಗಿತ್ತು. ಇಷ್ಟು ದಿನಗಳ ನಂತರ ಕಣ್ಣೀರು ಹರಿದಿತ್ತು.... ಈ ಕಣ್ಣೀರು ಯಾತಕ್ಕಾಗಿ ಎಂದು ಅವಳಿಗೇ ತಿಳಿಯದಾಗಿತ್ತು....

○ ○ ○

ತುಮಕೂರಿಗೆ ಹೋಗಿದ್ದ ಅಪ್ಪ ಹಿಂತಿರುಗಿದ್ದರು. ಸರೋಜಳನ್ನು ತಮ್ಮೊಂದಿಗೆ ಕರೆತಂದಿದ್ದರು. ಹಾಗೇ ನಾಲ್ಕಾರು ಗಂಡುಗಳನ್ನು ವಿಚಾರಿಸಿ, ಜಾತಕಗಳನ್ನು ಕೊಟ್ಟು ಬಂದಿದ್ದರು. "ಸರೋಜನ ಮಾವನೇ ಜಾತಕ ನೋಡ್ತಾರೆ. ಮಂಗಳನ ಜಾತಕಾನೂ ತೋರಿಸ್ದೆ.... ಕುಜ ದೋಷ ಇದೆ. ಅದಕ್ಕೆ ಹೀಗಾಯ್ತು. ಆಗೋದೆಲ್ಲಾ ಒಳ್ಳೆದಕ್ಕೇ ... ಒಳ್ಳೆ ಹುಡುಗನನ್ನೇ ಮದುವೆಯಾಗ್ತಾಳೆ ಚಿಂತೆ ಮಾಡ್ಬೇಡಿ" ಅಂದ್ರು ಇವಳ ಹಣೇಲಿ ಏನು ಬರೆದಿದ್ಯೋ... ಇನ್ನೇರಡು ವರ್ಷ ಕಳೆದ್ರೆ ವನಜಳೂ ಮದುವೆಗೆ ನೆರೆದು ನಿಲ್ತಾಳೆ. ತಂದೆ ತಾಯಿಯೊಡನೆ ಹೇಳಿದ್ದು ಮಂಗಳಂಗೆ ಕೇಳಿಸಿತ್ತು. ಸರೋಜನ ಕಡೆ ನೋಡಿದಳು.

"ಇದರಲ್ಲಿ ನನ್ನ ತಪ್ಪೇನಿದೆ ಹೇಳು ?" ಅಕ್ಕನೊಡನೆ ಅಳುತ್ತಾ ಹೇಳಿದಳು.

"ಯಾಕೆ ಅಳ್ತೀಯ? ಸಧ್ಯ ಮೊದಲೇ ಹೀಗಾದದ್ದು ಒಂಥರಕ್ಕೆ ಸರಿ ಹೋಯ್ತು ಅಲ್ವಾ? ... ಆಮೇಲೆ ಹೀಗಾಗಿದ್ರೆ ಏನ್ಗತಿ ಆಗ್ತಿತ್ತು ಅಂತ ಯೋಚಿಸು..."

"ಅವತ್ತು.... ಅವರು ನನ್ನನ್ನು ಬಯಸಿದರು. ಒಪ್ಕೊಂಡಿದ್ದಿದ್ರೆ ಇನ್ನು ಎರಡು ದಿನ ಇದೇ ಊರ್ನಲ್ಲಿರ್ತಿದ್ರು.... ಕೋಪಿಸ್ಕೊಂಡು ಹೊರಟುಹೋದ್ರು.... ಅವರು ತಂದು ಕೊಟ್ಟ ಸೀರೆಗಳನ್ನು ಚಪ್ಪಲಿಗಳನ್ನು ನೋಡಿದಾಗಲೆಲ್ಲಾ, ಇದಕ್ಕೆಲ್ಲಾ ನಾನೇ

ಕಾರಣನೇನೋ ಅಂತ ಅನ್ನುತ್ತೆ..."ಸರೋಜ ಭೀತಿಯಿಂದ ಕಣ್ಣರಳಿಸಿದಳು.

"ಈ ವಿಷಯಾನ ಅಮ್ಮಂಗೆ ಹೇಳಿದ್ಯಾ..? ಇಲ್ಲ ಎನ್ನುವಂತೆ ತಲೆಯಾಡಿಸಿದಳು. "ಒಳ್ಳೇದಾಯ್ತು. ಯಾರ್ಗೂ ಹೇಳ್ಬೇಡ. ಅಮ್ಮ ಒಂದೊಂದ್ಸಾರಿ ಏನೇನೋ ಆಡಿ ಬಿಡ್ತಾಳೆ. ನೀನು ಮಾಡಿದ್ದು ಖಂಡಿತಾ ಸರಿಯಾಗಿದೆ... ಒಂದು ವೇಳೆ ಆ ಅಪಚಾರವೂ ಜರುಗಿ, ಈ ಅನಾಹುತವೂ ನಡೆದು ಹೋಗಿದ್ದರೆ ಏನ್ಮಾಡ್ತಿದ್ದೆ.... ಸಧ್ಯ ಕಳಂಕ ತಪ್ಪಿ ತಲ್ಲ. ಅದಕ್ಕೆ ಸಮಾಧಾನ ಮಾಡ್ಕೋ..."

"ಅದಕ್ಕೇ ನಂಗೆ ಮದುವೆ ಅಂದ್ರೇನೇ ಭಯ ಆಗುತ್ತೆ. ಎಲ್ಲಾ ಗಂಡಸರೂ ಹೀಗೇನೇನೋ ಅಂತ ದಿಗಿಲಾಗುತ್ತೆ."

"ಎಲ್ರೂ ಹಾಗಿರುಲ್ಲ... ಲಗ್ನಪತ್ರಿಕೆ ಆದ್ಮೇಲೆ ಬೇಗ ಮದುವೆ ಆಗಿಬಿಡ್ಬೇಕು..."

"ಅಮ್ಮಂಗೆ ಸೊಂಟ ಮುರಿದದ್ದಕ್ಕೆ ಅಲ್ವಾ ಹೀಗಾದದ್ದು... ಅಮ್ಮನ ಸೇವೆ ಮಾಡಿದೀನಿ. ಮನೆ ಕೆಲಸ ಮಾಡಿದೀನಿ... ತಮ್ಮ ತಂಗೀರನ್ನ ನೋಡ್ಕೊಂಡಿದೀನಿ... ನನಗೇ ಹೀಗಾಗ್ಬೇಕಾ ?.... ನನ್ನ ಮನಸ್ಸಿನ ಕೋಲಾಹಲ ಯಾರಿಗೂ ಅರ್ಥವಾಗುಲ್ಲ... ಈ ಕುಜದೋಷ ಅಂದ್ರೇನು... ನನಗೆ ಭಯ ಆಗುತ್ತೆ ಸರೋಜ...."

"ನನಗೂ ಸರಿಯಾಗಿ ಗೊತ್ತಿಲ್ಲ.... ನಮ್ಮ ಮಾವನನ್ನೇ ಕೇಳಿದ್ರೆ ಪರಿಹಾರ ಹೇಳ್ತಾರೆ... ಏನೋ ಒಂದು ಪರಿಹಾರ ಇದ್ದೇ ಇರುತ್ತೆ ಅಲ್ವಾ?....

ಅಷ್ಟರಲ್ಲಿ ಅಂಚೆಯವನು ಬಂದು, 'ಪೋಸ್ಟ್' ಎಂದು ಹೇಳಿದ್ದು ಕೇಳಿ ಇಬ್ಬರೂ ಮಾತನ್ನು ನಿಲ್ಲಿಸಿದರು. ಮಂಗಳ ಬಂದು, ಜಗುಲಿಯ ಮೇಲೆ ಬಿದ್ದಿದ್ದ ಪತ್ರಗಳನ್ನು ಎತ್ತಿಕೊಂಡಳು. ಒಂದು ಸರೋಜನಿಗೆ ಬಂದದ್ದು... ಭಾವ ಬರೆದದ್ದು. ಇನ್ನೊಂದು ಇವಳಿಗೇ, ಪಂಕಜ ಬರೆದದ್ದು... "ನೀನು ಬಂದು ನಾಲ್ಕು ದಿನ ಆಗಿಲ್ಲ. ಭಾವನ ಕಾಗದ ಬಂದಿದೆ... ತಗೋ " ಎನ್ನುತ್ತಾ ಕೊಟ್ಟಳು.

"ಅದು ಯಾರದ್ದೇ.... ಈಗ ನಿನಗೆ ಪತ್ರ ಬರೆಯೋರು ಯಾರಿದ್ದಾರೆ?" ಸರೋಜ ಅನುಮಾನದಿಂದ ಪ್ರಶ್ನಿಸಿದಳು.

"ಪಂಕಜಾ ಟೀಚರ್‌ದು... ಇಲ್ಲೇ ಎದುರು ಗಡೆ ಮನೇಲಿ ವಾಸವಾಗಿದ್ರಲ್ಲ ರಜದ ಮೇಲೆ ಊರಿಗೆ ಹೋಗಿದ್ದಾರೆ. ಅಲ್ಲಿಂದ ಬರೆದಿದ್ದಾರೆ..."

"ಅಂತೂ, ನಿನಗೊಬ್ಬರು ಪತ್ರ ಬರೆಯುವ ಸ್ನೇಹಿತೆ ಸಿಕ್ಕಿದ್ರು ಅನ್ನು... ಚಂದ್ರು ಬರೆಯುತ್ತಿದ್ದ ಪತ್ರಗಳನ್ನೆಲ್ಲ ಏನು ಮಾಡ್ದೆ ? ಹರಿದು ಒಲೆಗೆ ಹಾಕು."

"ಎಷ್ಟನ್ನೋ ನಾನು ಓದಲೇ ಇಲ್ಲ... ಓದುಕ್ಕೆ ಬಿಡುವಾಗ್ತಿರ್ಲಿಲ್ಲ. ಉತ್ತರ ಬರೆ ಯೋಕೆ ಆಗ್ತಿರ್ಲಿಲ್ಲ. ಅವರಿಗೆ ಅದೇ ಕೋಪ ಇತ್ತು... ನಾನೇನ್ಮಾಡ್ಲೀ...?"

"ಈಗ ಯಾರೂ ಏನು ಮಾಡುಕ್ಕೆ ಆಗುಲ್ಲ..." ಎನ್ನುತ್ತಾ ತನ್ನ ಗಂಡ ಬರೆದ ಪತ್ರವನ್ನು ಓದತೊಡಗಿದಳು. ಮಂಗಳಾ, ಪಂಕಜನ ಪತ್ರವನ್ನೆತ್ತಿಕೊಂಡು ಜಗುಲಿಯ

ತುದಿಯಲ್ಲಿ ಕುಳಿತಳು.

"ಸೋದರಿ ಮಂಗಳನಿಗೆ, ಟೀಚರ್‌ನ ಪ್ರೀತಿಗಳು... ಇಲ್ಲಿ ಎಲ್ಲರೂ ಕ್ಷೇಮ. ಅಲ್ಲಿಯೂ ಎಲ್ಲರೂ ಕ್ಷೇಮವೆಂದು ಭಾವಿಸಿದ್ದೇನೆ. ಇಷ್ಟು ಹೊತ್ತಿಗೆ ನಿಮ್ಮ ಅಕ್ಕನೂ ಬಂದಿರಬಹುದು.... ಮಾತುಕತೆಯಲ್ಲಿ ಸಮಯ ಕಳೆಯುವುದು ಕಷ್ಟ ಎನಿಸಲಾರದು... ನನಗೆ ನಿಮ್ಮೆಲ್ಲರ ನೆನಪು ತುಂಬಾ ಬರುತ್ತದೆ. ಇಲ್ಲಿಯ ಕೆಲವು ಸ್ಕೂಲುಗಳಿಗೆ ಅರ್ಜಿ ಕೊಟ್ಟಿದ್ದೇನೆ... ಅಲ್ಲಿ ವಠಾರದಲ್ಲಿ ಎಲ್ಲರೂ ಹೇಗಿದ್ದಾರೆ?....

ಆ ರಾತ್ರಿ ನಾವಿಬ್ಬರೂ, ಬಹಳ ಹೊತ್ತಿನವರೆಗೂ ಮಾತನಾಡಿದೆವು. ಆದರೂ, ನಾನು ನಿಮ್ಮನ್ನು ಒಂದು ವಿಷಯವನ್ನು ಕೇಳಲಾಗಲಿಲ್ಲ. ಈಗ ಬರೆಯುತ್ತಿದ್ದೇನೆ. ಚಂದ್ರು ತುಂಬಾ ಒಳ್ಳೆಯ ಹುಡುಗ. ಅವನನ್ನು ಮದುವೆಯಾಗುವಿರಾ ? ಅವನಿಗೆ ನಿಮ್ಮಂಥ ಸಂಗಾತಿಯ ಅಗತ್ಯವಿದೆ..." ಮಂಗಳ ತಬ್ಬಿಬ್ಬುಗೊಂಡಳು. ಮತ್ತೆ ಮತ್ತೆ ಆ ಸಾಲುಗಳನ್ನು ಓದಿದಳು. ಇದ್ಯಾಕೆ ಹೀಗೆ ಬರೆದಿದ್ದಾರೆ ?.... ಚಂದ್ರೂ ಪಂಕಜ ನೊಡನೆ ನನ್ನ ಬಗ್ಗೆ ಮಾತನಾಡಿ, ನನಗೆ ತಿಳಿಸುವಂತೆ ಹೇಳಿರಬಹುದೇ ? ಇದನ್ನು ಹೇಳಲೆಂದೇ ಚಂದ್ರು, ತನ್ನೊಡನೆ ಮಾತನಾಡಬೇಕೆಂದನೆ ?... ಛೀ.... ನಾಚಿಕೆ ಇಲ್ಲ ದವನು... ಮೊದಲಿಗೆ ಟೀಚರ್ ಹತ್ತಿರ ನನ್ನ ಪ್ರಸ್ತಾಪ ಮಾಡಿ.... ಆಮೇಲೆ ನನ್ನನ್ನು ಕೇಳಬೇಕೆಂದುಕೊಂಡಿದ್ದಾನೆ... ನನಗೆ ಈ ಅನುಮಾನ ಬರಲೇ ಇಲ್ಲ... ಸುಳಿವು ಸಿಕ್ಕಿದ್ದರೆ... ಆಗಲೇ ಸರಿಯಾದ ಉತ್ತರ ಕೊಟ್ಟು ಬಿಡುತ್ತಿದ್ದೆ... ನನಗೆ ತಿಳಿಯದಂತೆ ನನ್ನ ಬಗ್ಗೆ ಪ್ರಸ್ತಾಪ ಮಾಡಲು ಇವನಿಗೆ ಯಾವ ಹಕ್ಕಿದೆ ?.... ಈ ಟೀಚರ್‌ಗೆ ಎಷ್ಟು ಧೈರ್ಯ ? ನನಗೆ ತಿಳಿಸಿದಾರಲ್ಲ..." ಅವಳಿಗೆ ಕಾಗದವನ್ನೂ ಪೂರಾ ಓದುವುದಾಗಲಿಲ್ಲ.

ಸರೋಜ ತನಗೆ ಬಂದ ಕಾಗದವನ್ನು ಓದಿ ಮುಗಿಸಿ ಮಡಿಸಿಟ್ಟು ಇತ್ತ ತಿರುಗಿದಳು. ಕೈಯಲ್ಲಿ ಪತ್ರವನ್ನು ಹಿಡಿದು, ಓದದೇ ಏನನ್ನೋ ಯೋಚಿಸುತ್ತಿರುವ ತಂಗಿಯನ್ನು ಎಚ್ಚರಿಸಿದಳು. "ಮಂಗಳಾ.... ನಿನ್ನ ಸ್ನೇಹಿತೆ ಏನು ಬರೆದಿದಾರೆಯೇ?... ಯೋಚಿಸ್ತಾ ಕೂತು ಬಿಟ್ಟೇ..?... ಮುಖ ಕೆಟ್ಟು ಹೋಗಿದೆ."

"ಏನೂ ಇಲ್ಲ. ಅವರು ಅಲ್ಲಿಯೇ ಕೆಲಸಕ್ಕೆ ಪ್ರಯತ್ನ ಮಾಡ್ತಿದಾರಂತೆ... ಇಲ್ಲಿಗ ವಾಪಸ್ಸು ಬರೋದೇ ಇಲ್ವೇನೋ ಅಂತ ಯೋಚಿಸ್ತಿದ್ದೆ...'

"ಬರದೇ ಇದ್ರೆ ಬೇಜಾರೇ.... ಸಧ್ಯಕ್ಕೆ ನಾನು ಇರೋವರ್ರೂ ನಿಂಗೆ ಕೈ ತುಂಬಾ ಕೆಲಸ ಬಿಡುವೇ ಇರುಲ್ಲ.... ಈ ಬದಿಯ ಮನೆಗೆ ಯಾರೋ ಬರ್ತಿದಾರೆ ಅಂತ ಅಮ್ಮ ಹೇಳಿದ್ಲು... ಯಾವಾಗ ಬರ್ತಾರೋ..."

"ಏನೋ ನಂಗೊತ್ತಿಲ್ಲ..." ಎಂದು ಹೇಳಿ ಎದ್ದು ಒಳಕ್ಕೆ ನಡೆದಳು... ನನಗೆ ಚಂದ್ರನ ಕಾಟ... ಕುಜನ ದೋಷ... ಈ ಬಾರಿ, ಅವನು ಊರಿಗೆ ಬಂದಾಗ ಮಾತಾಡಿ ನಾನು ಮುಖದ ನೀರನ್ನು ಇಳಿಸದೇ ಬಿಡುವುದಿಲ್ಲ... ಏನು ತಿಳ್ಕೊಂಡಿದಾನೆ....?

ನನ್ನ ಹಿಂದೆ ಎಲ್ಲರೂ ಪಿತೂರಿ ನಡೆಸ್ತಿದಾರೆ.... ತಾನು ಬಿಲ್‌ಕುಲ್ ಒಪ್ಪಬಾರದು... ಈ ವಠಾರವನ್ನೇ ಬಿಟ್ಟು ಹೋಗಿ ಬಿಡಬೇಕು.... ಟೀಚರ್‌ಗೆ ನಾನು ಮಾರುತ್ತರ ಬರೆಯುವುದೇ ಇಲ್ಲ. ನನಗೆ ಬೇಸರವಾಗಿದೆ ಅಂತ ಅವರಿಗೆ ತಿಳಿಯಲಿ.... ನಾನೇನು ಕೇಳಿಕೊಂಡಿದ್ನಾ ನಂಗೆ ಮದುವೆ ಗೊತ್ತು ಮಾಡಿ ಅಂತ.... ಹೀಗೆ ತನ್ನಲ್ಲೇ ಮಾತಾಡಿ ಕೊಳ್ಳುತ್ತಾ ಕೆಲಸವನ್ನು ಮುಂದುವರೆಸಿದಳು.

ಂ ಂ ಂ

"ದಿಬ್ಬದ ಮೇಲಿರುವ ಮನೆಗೆ ಬಾಡಿಗೆಗೆ ಯಾರೋ ಬಂದಿದಾರೆ.... ಅಂತ ಕಾಣ್ಸುತ್ತೆ, ಮನೇನ ಕ್ಲೀನ್ ಮಾಡಿಸುತ್ತಿರುವ ಹಾಗಿದೆ." ಜಾನಕಿ ಎಂದಳು.

"ಗೋಪಾಲಯ್ಯನೇ ಮಾಡ್ತೀದಾರೆ.... ದುಡ್ಡು ಕೊಟ್ಟು, ಆಳುಗಳೊಂದಿಗೆ ಕೆಲಸ ಮಾಡಿಸುವ ಪೈಕಿಯವರಲ್ಲ."ರಾಮರಾಯ ನಗುತ್ತಾ ನುಡಿದ.

"ಹಣಕ್ಕೇನು ಕೊರತೆ ?....ಇಷ್ಟು ಅನುಕೂಲವಾಗಿದಾರೆ. ನಾಲ್ಕೈದು ಮನೆಯ ಬಾಡಿಗೆ ಹಣ ಬರುತ್ತೆ... ಅದೇನು ಲೆಖ್ಖಾಚಾರವೋ.....? "

"ಎಲ್ಲಾ ಆಕೆಯ ಕಾರುಬಾರು ಆಸ್ತಿಯೆಲ್ಲಾ ಆಕೆಯ ತಂದೆಯದಂತೆ ಆಕೆ ಹೇಳಿದಂತೆ ಆತ ಕೇಳ್ತಾನೆ... ಈಗ ಮಗನೂ ಕೆಲಸದಲ್ಲಿದಾನೆ... ಇರೋನು ಒಬ್ಬ ಕಾಸಿಗೆ ಕಾಸು ಕೂಡಿಟ್ಟು ಏನು ಮಾಡ್ತಾರೋ.... ನೋಡಿದರೆ ಶ್ರೀಮಂತರ ನಡೆವಳಿಕೆಯೇ ಇಲ್ಲ. ಅಷ್ಟೊಂದು ಹೂವು ಬಿಡುತ್ತೆ. ಯಾರೂ ಕೊಯ್ಯುವ ಹಾಗಿಲ್ಲ.. ಸೀಬೆ, ಮಾವು ಬಿಡುತ್ತೆ. ಮಕ್ಕಳು ಆ ಕಡೆ ಕಣ್ಣು ಹಾಯಿಸುವಂತಿಲ್ಲ. ಎಲ್ಲವನನ್ನು ಆಕೆ ಮಾರ್‍ತಾಳೋ ಏನೋ ಸರ್ಪಗಾವಲಿನ ಥರ ಓಡಾಡ್ತಾತಾಳೆ."

"ನಮಗ್ಯಾಕೆ ಬಿಡಮ್ಮ?... ಅದು ಅವರ ಸ್ವತ್ತು... ಅವರು ಏನು ಬೇಕಾದ್ರೂ ಮಡ್ಕೊಳ್ಳಲಿ "ಸರೋಜ ನುಡಿದಳು.

"ನಾನೇನು ನಂಗೆ ಬೇಕು ಅಂತಂದ್ನೆ !ಸುಮ್ನೆ ಹೇಳ್ದೆ... ಒಂದು ಕರಿ ಬೇವಿನ ಎಸಳು ಕೊಯ್ಯ ಬೇಕಾದ್ರೂ ಆಕೇನ ಕೇಳ್ಬೇಕು."

"ಮನೆ ಚಿಕ್ಕದು... ಆದಷ್ಟು ಬೇಗ ಬೇರೆ ಮನೆ ನೋಡ್ತೀನಿ ಅಂತ ಅಣ್ಣ ಹೇಳಿದ್ರು."

"ಬಾಡಿಗೆ ಹೆಚ್ಚು ಕೊಡಬೇಕಾಗುತ್ತಲ್ಲೇ... ದುಡಿಯೋರು ನಿಮ್ಮಪ್ಪ ಒಬ್ರು ಮದುವೆ ಸಮಯಕ್ಕೆ ಬರೋರು ಹೋಗೋರು ಇರ್ತಾರೆ... ದೊಡ್ಡ ಮನೆ ಬೇಕು ಅಂತ ಅನಿಸಿದ್ದುಂಟು... ಆದರೆ ... ಮದುವೆ ಯಾವಾಗ ನಿಶ್ಚಯವಾಗುತ್ತೋ..?"

"ಪದೇ ಪದೇ ಅದನ್ನೇ ಆಡ್ತೀಯಲ್ಲ.... ನಾನೇನು ಕೈ ಕಟ್ಟಿ ಕೂತಿಲ್ಲ. ನಾಲ್ಕಾರು ಗಂಡುಗಳನ್ನು ವಿಚಾರಿಸಿದೀನಿ. ಮದುವೇನ ಮುಂದಕ್ಕೆ ಹಾಕಿದ್ದು ನಿನ್ನ ಕಾರಣದಿಂದಲೇ ಮದುವೆ ಆಗಿದ್ದಿದ್ರೆ ಈ ಅನಾಹುತ ನಡೆಯುತ್ತಿರಲಿಲ್ಲ.

"ಎಲ್ಲದಕ್ಕೂ ನನ್ನನ್ನು ದೂಷಿಸ್ಬೇಡಿ.... ನಾನೇನೂ ಬೇಕೂಂತ ಸೊಂಟ ಮುರಿದ್ಕೊಂಡು ಸೇವೆ ಮಾಡಿಸ್ಕೋತಿದೀನಾ ?.." ಜಾನಕಿ ಮುಖ ಊದಿಸಿದಳು.

"ಹೋಗ್ಲೀ ನೀವಿಬ್ರೂ ಯಾಕೆ ವಾದ ಮಾಡ್ತೀರಿ... ಮಂಗಳಂಗೆ ಏನನ್ನಿಸ ಬಹುದು?... ಮಕ್ಕಳೆಲ್ಲಾ ಏನೆಂದು ಕೊಳ್ಳಬಹುದು ?"ಸರೋಜ ಮಧ್ಯೆ ನುಡಿದಳು.

"ಇವಳಿಗೆ ಮಾಡುಕ್ಕೆ ಬೇರೆ ಕೆಲಸ ಇಲ್ಲ. ಬಾಯಿ ಮಾಡ್ತಾಳೆ... ಇವಳಿಗೆ ದೊಡ್ಡ ಮನೆ, ದೊಡ್ಡಸ್ಥಿಕೆ ಎಲ್ಲಾ ಬೇಕು. ಇವರ ಅಪ್ಪ ಮದುವೇಲಿ ನನಗೆ ಒಂದು ಕಿಲುಬು ಕಾಸು ಸಹ ಕೊಡ್ಲಿಲ್ಲ... ನಂದೇ ಇದೆಲ್ಲಾ...."

"ಅಣ್ಣಾ, ವರದಕ್ಷಿಣೆ ಬೇಕಾಗಿತ್ತಾ ನಿಮಗೆ ಯಾಕೆ ಕೇಳ್ಲಿಲ್ಲ !" ನಗೆಯಾಡಿದಳು.

"ನಂಗೇನು ಗೊತ್ತಿತ್ತು ಹೀಗೆ ಸಂಸಾರ ಬೆಳೆಯುತ್ತೇ ಅಂತ. ನನ್ನ ಪಾಡಿಗೆ ನಾನು ಸುಮ್ಮ ನಿದ್ರೂ ಇವಳು ಬಿಡುಲ್ಲ...ನೋಡು."

"ಮೊಮ್ಮಗು ಹುಟ್ಟುವ ಸಮಯ ಬಂದಿದೆ. ಇನ್ನೂ ನನ್ನನ್ನೇ ಅನ್ತಾ ಇರಿ ನಿಮ್ಮ ಮನೆಗೆ ಬಂದು ಸೇರಿದ್ಮೇಲೆ, ನಾನು ಬಿಟ್ಟಿ ಎಷ್ಟು ದುಡಿದಿದೀನಿ ಗೊತ್ತಾ....?"

"ಹೂಂ ಕಣಮ್ಮ ಎಲ್ಲಾ ಗೊತ್ತು.... ಹೊರಗೆ ಯಾರೋ ಕರೀತಿದಾರೆ. ಹೋಗಿ ನೋಡಿ ಅಣ್ಣಾ ...."ರಾಮರಾಯ ಹೊರಗೆ ಬಂದ ಗೋಪಾಲಯ್ಯ ಜಗುಲಿಯ ಮೇಲೆ ಕುಳಿತು ಶಲ್ಯದಿಂದ ಗಾಳಿಯನ್ನು ಬೀಸಿಕೊಳ್ತಿದ್ದ.

"ಒಂದ್ಲೋಟ ತಣ್ಣೀರು ಬೇಕಾಗಿತ್ತು... ಬಾಯಾರಿಕೆ ಆಗ್ತಿದೆ...."

"ಮಂಗಳಾ ಮಾವಂಗೆ ನೀರು ತಂದ್ಕೊಡು... ಅಲ್ಲಾ ಗೋಪಾಲ ರಾಯರೇ ನೀವೇ ಯಾಕೆ ಒದ್ದಾಡ್ತೀರಿ ! ಯಾರೂ ಕೆಲ್ಸದವರು ಸಿಗಲಿಲ್ವೇ..."

"ಸಿಕ್ಕಾ ಬಟ್ಟೆ ಕೂಲಿ ಕೇಳ್ತಾರೆ... ಚಂದ್ರೂ ನಾನು ಇಬ್ಬರೂ ಸೇರಿ ಮಾಡ್ತಿದೀವಿ. ಅವನಿಗೂ ನೀರು ಬೇಕು... ಒಂದು ಚೊಂಬಿನಲ್ಲಿ ತುಂಬಿಸಿ ಕೊಡಮ್ಮ..." ಅಲ್ಲಿಗೆ ಬಂದ ಮಂಗಳಂಗೆ ಹೇಳಿದ...

"ಶರಬತ್ತು ಕುಡೀತೀರೇನು?... ನಿಂಬೆ ಹಣ್ಣಿದ್ದರೆ ಪಾನಕ ಮಾಡಿ ಕೊಡು ಮಂಗಳಾ..."

"ಪಾಪ ಹುಡ್ಗಿಗ್ಯಾಕೆ ಸುಮ್ನೆ ತೊಂದ್ರೆ ಕೊಡ್ತೀರಾ... ಬರೀ ನೀರು ಸಾಕು... ಸಕ್ಕರೆ ಬೆಲೆಯೂ ಗಗನಕ್ಕೆ ಏರಿದೆ..."

"ಯಾವ ಬೆಲೆ ಏರಿದ್ರೂ ... ನಾವು ಕೊಳ್ಳೋದನ್ನ ನಿಲ್ಲಿಸೋದಿಲ್ಲ ... ಎರಡು ಗ್ಲಾಸು ಶರಬತ್ತಿಗೆ ಇನ್ನೆಷ್ಟು ಸಕ್ಕರೆ ಖರ್ಚಾದೀತು... ಇರಲಿ ಮಾಡ್ಕೊಂಡು ಬಾ....

"ನೀವು ಇಷ್ಟು ಹೇಳಿದ್ಮೇಲೆ ನಾನ್ಯಾಕೆ ಬೇಡ ಅನ್ನಲಿ... ನಿನ್ನ ಹೊಟ್ಟೆ ತಣ್ಣಗಿರಲಿ.... ಮನೆ ಗಿಡದಲ್ಲಿ ನಿಂಬೆ ಹಣ್ಣು ಇರಬಹುದು. ಚಂದ್ರೂಗೆ ಹೇಳಿದ್ರೆ ಕೊಯ್ದು ಕೊಡ್ತಾನೆ... ಚಂದ್ರೂ ಚಂದ್ರೂ.. ಅಲ್ಲಿಂದಲೇ ದನಿ ಏರಿಸಿ ಕೂಗಿದ.

"ಏನಪ್ಪಾ... ಎನ್ನುತ್ತಾ ಚಂದ್ರು ಬಂದ ನೀರು ಕುಡಿಯೋಣ ಅಂತ ಇಲ್ಲಿ ಕೂತೆ... ಶರಬತ್ತು ಮಾಡ್ತೀನಿ ಅಂತ ಅಂತು ಈ ಹುಡ್ಗೀ... ಎರಡು ನಿಂಬೆ ಹಣ್ಣನ್ನು ಕೊಯ್ದು ತಂದು ಕೊಡು...."

'ಗಿಡದಲ್ಲಿ ಹಣ್ಣು ಎಲ್ಲಿದೆ ಅಪ್ಪಾ... ಬೆಳಿಗ್ಗೆ ಎಲ್ಲಾ ಕೊಯ್ದು ಕೊಟ್ಟೆ. ಅಂಗಡಿಯಿಂದ ತಂದು ಕೋಡ್ತೀನಿ.

"ಏನೂ ಬೇಡ. ಮನೇಲಿ ಹಣ್ಣಿದೆ. ನಿನ್ನೇ ಮಾರ್ಕೆಟ್ಟಿಗೆ ಹೋಗಿದ್ದಾಗ ತಂದಿದ್ದೆ... ಮಂಗಳಾ ... ಪಾನಕಾ ಮಾಡಿದ್ದಾಯ್ತಾ..?...ನಾನು ಹೋಗಿ ನೋಡ್ತೀನಿ...."ರಾಮರಾಯ ಒಳಗೆ ಹೋಗಿದ್ದಾಗ ಚಂದ್ರು ರೇಗಿದ.

"ಏನಪ್ಪಾ ನೀವೂನೂ... ಸುಮ್ನೆ ಇವರುಗಳಿಗ್ಯಾಕೆ ತೊಂದ್ರೆ ಕೊಡ್ತೀರಿ. ನನಗೆ ಹೇಳಿದ್ದರೆ ಮನೆಯಿಂದ ನೀರು ತಂದ್ಕೊಡ್ತಿದ್ದೆ."

"ಇದನ್ನೆಲ್ಲ ತೊಂದರೆ ಅಂತ ಇವರುಗಳು ಅಂದ್ಕೊಳ್ಳೋದೇ ಇಲ್ಲ ಎಂಥಾ ಒಳ್ಳೇ ಜನ ಸಿಕ್ಕಿದಾರೆ ನೋಡು..... ಮಂಗಳ ಕಾಫಿ ಕೂಡಾ ಚೆನ್ನಾಗಿ ಮಾಡ್ತಾಳೆ ಎಷ್ಟೋ ಸಾರಿ ಕುಡ್ದಿದೀನಿ...."

"ಒಳಗೆ ಬನ್ನಿ ಗೋಪಾಲಯ್ಯ ... ನೀನೂ ಒಳಕ್ಕೆ ಬಾ ಇಲ್ಲಿ ಜಗುಲಿ ಮೇಲೆ ಯಾಕೆ?" ಇಬ್ಬರೂ ಅನುಮಾನಿಸುತ್ತಾ ಒಳಗೆ ಬಂದು ಕುಳಿತರು ಮಂಗಳ ಪಾನಕವನ್ನು ತಂದಿತ್ತಳು. ರಾಮರಾಯರು ಇಬ್ಬರಿಗೂ ಕೊಟ್ಟರು. " ಏನು ಬಿಸಿಲು ಏನು ಶೆಕೆ ? ಎರಡು ಮಳೆ ಬಿದ್ದರೆ. ತಣ್ಣಗಾಗುತ್ತೆ..."

"ಎಷ್ಟೇ ಬಿಸಿಲಿರಲಿ ಶೆಕೆ ಇರಲಿ... ನಮ್ಮ ವಠಾರದಲ್ಲಿ ತಂಪಾಗಿಯೇ ಇರುತ್ತೆ. ಯಾಕ್ಹೇಳಿ.... ಸುತ್ತಲೂ ಮರಗಳಿವೆ. ತಂಗಾಳಿ ಬೀಸ್ತಾನೇ ಇರುತ್ತೆ. "

"ಹೌದು ನೀವು ಪುಣ್ಯವಂತರು... ಗಾಳಿ ನೆರಳಿಗೆ ಕೊರತೆ ಇಲ್ಲ... ಇನ್ನೊಂದು ಸ್ವಲ್ಪ ಹಾಕಿಸ್ಕೊಳ್ಳಿ. ಗೋಪಾಲಯ್ಯ ಮತ್ತಷ್ಟು ಹಾಕಿಸಿಕೊಂಡ. ಚಂದ್ರು ಬೇಡ ಎಂದು ಕೈ ಅಡ್ಡ ಹಿಡಿದ."

"ಬರ್ತೀವಮ್ಮ ಮಂಗಳಾ.... ದೇವರು ನಿನ್ನನ್ನು ತಣ್ಣಗಿಟ್ಟರಲಿ... ಎಲ್ಲಿ ನಿಮ್ಮ ಮನೆ ಬಾಲ ಗೋಪಾಲ... ಕಾಣ್ತಾನೇ ಇಲ್ಲ."

"ಇಲ್ಲೇ ಎಲ್ಲೋ ಎಲ್ರೂ ಆಟ ಆಡ್ತಿರ್ತಾರೆ ... ಒಳಗೆ ಸುಮ್ಮನೇ ಧಾಂದಲೆ ಎಬ್ಬಿಸ್ತಾರೆ..." ಚಂದ್ರು ಮಂಗಳನ ಕಡೆ ನೋಡಿದ ಅವಳು ಸಪ್ಪಗಿದ್ದಳು. ಆದರೆ ಎಲ್ಲರ ಎದುರಿಗೆ ಅವಳನ್ನು ಮಾತನಾಡಿಸಲು ಕಷ್ಟವೆನಿಸಿತು. ಉಪಾಯವನ್ನು ಹುಡುಕಿದ.

"ಟೀಚರ್ ಮನೆಯ ಬೀಗದ ಕೈಯನ್ನು ಕೊಡಿ... ಅಲ್ಲೂ ಕ್ಲೀನ್ ಮಾಡಿ ಬಿಡ್ತೀವಿ. ಇವತ್ತು ಬಿಡುವಾಗಿದೆ..." ಅವಳ ಕಡೆ ತಿರುಗಿ ಹೇಳಿದ.

"ಮಂಗಳಾ ಅವರ ಮನೆಯ ಬೀಗದ ಕೈಯನ್ನು ಎಲ್ಲಿಟ್ಟಿದೀಯಾ!...."

ರಾಮರಾಯ ಅತೀತ್ತ ಹುಡುಕುವಾಗ ಚಂದ್ರು ಎದ್ದ.

"ಪರವಾಗಿಲ್ಲ...ನಿಧಾನವಾಗಿ ಕೊಡಿ... ಅಪ್ಪಾ ನೀವು ಮನೆಗೆ ಹೋಗಿ ನಾನು ಆ ಮನೆಗೆ ಬೀಗ ಹಾಕ್ಬಿಟ್ಟು ಬರ್ತೀನಿ. ಆಮೇಲೆ ಊಟ ಮಾಡೋಣ. "

"ಸರಿ ಹಾಗೇ ಮಾಡೋಣ... ಸಕ್ಕರೆ ಪಾನಕದ ಪ್ರಭಾವ. ತೂಕಡಿಕೆ ಬರ್ತಾ ಇದೆ.... ಎಲ್ಲಾ ಬಾಗಿಲು ಕಿಟಕಿ ಸರಿಯಾಗಿ ಮುಚ್ಚಿ ಮುಂಬಾಗಿಲಿಗೆ ಬೀಗ ಹಾಕು... "ಮಂಗಳ ಕುಡಿದ ಲೋಟಗಳನ್ನೆತ್ತಿಕೊಂಡು ನಲ್ಲಿ ಕಟ್ಟೆಯ ಬಳಿಗೆ ನಡೆದಳು. ಚಂದ್ರು ಅವಳ ಹಿಂದೆ ಬಂದ.

"ಸ್ವಲ್ಪ ಕೈ ತೊಳ್ಕೋತೀನಿ... ಪಾನಕ ಕೈ ಮೇಲೆ ಚೆಲ್ಲಿದೆ' ಎನ್ನುತ್ತಾ ನೀರಿಗೆ ಕೈ ಹಿಡಿಯಲು ಬಗ್ಗಿದ... ಮಂಗಳಾರವರೇ, ನಾನು ನಿಮ್ಮ ಹತ್ರ ಮುಖ್ಯವಾದ ವಿಷಯ ವನ್ನು ಮಾತಾಡ್ಬೇಕು ... ಯಾವಾಗ ಸಿಗ್ತೀರಿ ? "

"ಟೀಚರ್ ಮನೆಯ ಬೀಗರ ಕೈಯನ್ನು ತಗೊಂಡು ಬರ್ತೀನಿ... ನೀವು ಅಲ್ಲೇ ಇರಿ."ಎಂದು ಹೇಳಿ, ಬಟ್ಟಲುಗಳನ್ನೆತ್ತಿಕೊಂಡು ಒಳಕ್ಕೆ ಹೋಗಿದ್ದಳು. ಚಂದ್ರು ಕೈ ಬಾಯಿ ತೊಳೆದು, ಪಂಚೆಯ ತುದಿಯಿಂದ ಒರೆಸಿಕೊಂಡು, ದಿಬ್ಬದ ಮನೆಯ ಮುಂಬಾಗಿಲಿಗೆ ಬೀಗವನ್ನು ಹಾಕಿ, ಪಂಕಜನ ಮನೆಯ ಮುಂದೆ ಬಂದು ನಿಂತು ಕಾಯ ತೊಡಗಿದ.

ಸ್ವಲ್ಪ ಹೊತ್ತಿನಲ್ಲೇ ಮಂಗಳಾ ತನ್ನಅಕ್ಕ ಸರೋಜಳೊಡನೆ ಅಲ್ಲಿಗೆ ಬಂದಳು. "ಇವಳು ನಮ್ಮ ಅಕ್ಕ ಸರೋಜ"ಮಂಗಳ ಪರಿಚಯ ಮಾಡಿಕೊಟ್ಟಳು . ಅವನ ಕೈಗೆ ಬೀಗದ ಕೀಯನ್ನು ಕೊಟ್ಟಳು ಬಾಗಿಲನ್ನು ತೆಗೆದ. "ಒಳಗೆ ಬರ್ತೀರಾ ಎಷ್ಟೋ ದಿನದಿಂದ ಕಿಟಕಿ ಬಾಗಿಲನ್ನು ತೆರೆದಿಲ್ಲ. ಘಾಟು ವಾಸನೆ "ಎಂದು ತಾನೇ ನುಡಿದ.

"ಪರವಾಗಿಲ್ಲ. ನಾನು ಇಲ್ಲೇ ಮೆಟ್ಟಿಲ ಮೇಲೆ ಕೂತಿರ್ತೀನಿ ಮಂಗಳ ನಿಮ್ಮ ಜೊತೆ ಏನೋ ಮಾತಾಡ್ಬೇಕು ಅಂತ ಅಂದ್ಲು.... ನೀವಿಬ್ರು ಮಾತಾಡಿ" ಚಂದ್ರು ಅಶ್ಚರ್ಯದಿಂದ ಹುಬ್ಬೇರಿಸಿ ಅವಳ ಕಡೆ ನೋಡಿದ. ಅವಳು ತನ್ನ ಕೈಯಲ್ಲಿ ಮಡಿಸಿಟ್ಟು ಕೊಂಡಿದ್ದ ಪತ್ರವನ್ನು ಅವನಿಗಿತ್ತಳು.

"ಇದು ಟೀಚರ್ ... ನನಗೆ ಬರೆದ ಪತ್ರ ... ಓದಿ... ಅರ್ಥ ಏನು ಅಂತ ಸ್ವಲ್ಪ ಹೇಳ್ತೀರಾ "ಮಾತು ಚೂಪಾಗಿತ್ತು.

"ನಿಮಗೆ ಬಂದ ಪತ್ರ ನಾನು ಹೇಗೆ ಓದ್ಲಿ .... ವಿಷಯ ಏನೂಂತ ಹೇಳಿ...

"ಅರ್ಥ ಆಗದೇ ಇರೋರ ಥರ ನಟನೆ ಮಾಡ್ಬೇಡಿ..."

"ನಟನೆ ಏನಿಲ್ಲ... ಅಂದರೇ ಟೀಚರ್ ಮದುವೆಗೆ ಒಪ್ಕೊಂಡಿದಾರಾ! ಅದನ್ನು ನಂಗೇ ಬರೆಯ ಬಹುದಾಗಿತ್ತಲ್ಲ. ನಿಮ್ಮ ಕೈಲಿ ಹೇಳಿರುವ ಪ್ರಮೇಯ ಏನು !"

"ಅಂದರೇ ... ತಮಾಷೆ ಮಾತ್ತಿದೀರಾ?.. ನೀವೇ ತಾನೇ ಅವರಿಗೆ ಹೇಳಿರೋದು.

.. ನನ್ನನ್ನ ಕೇಳಿ ಅಂತ ..."

"ಇಲ್ಲ ಅವರಿಗೆ ನಾನು ಏನನ್ನು ಹೇಳಿರ್ಲಿಲ್ಲ."

"ನಿಜ ಹೇಳಿ ಚಂದ್ರ ನನಗೆ ಕೆಟ್ಟ ಕೋಪ ಬರ್ತಿದೆ."

"ಕೋಪ ಯಾಕೆ ಮಂಗಳಾರವರೇ... ನಾನು ಪಂಕಜಾ ಟೀಚರ್‌ನ ಮದುವೆಯಾಗಲು ಆಸೆ ಪಟ್ಟರೆ ಅದು ತಪ್ಪಾಗುತ್ತಾ ? " ಅವಳು ಕಣ್ಣರಳಿಸಿದಳು.

"ಏನು!ನೀವು ಅವರನ್ನು ಮದುವೆ ಯಾಗೋದಕ್ಕೆ ಸಿದ್ಧವಾಗಿದೀರಾ ?'

"ಹೂಂ ಅವರಿಗೇ ನೇರವಾಗಿ ಕೇಳಿದ್ನಲ್ಲ... ಒಪ್ಪಿಗೆ ಕೊಟ್ಟಿದಾರೆ ತಾನೇ....?

"ಇಲ್ಲ.... ಹಾಗಂತ ಬರೆದಿಲ್ಲ."ಅವಳು ಕೆಳದನಿಯಲ್ಲಿ ನುಡಿದಳು. "ನಂಗೊತ್ತಿತ್ತು. ಊರಿಗೆ ಹೋಗಿ ಹೀಗೇ ನಿರ್ಧಾರ ತಗೋತಾರೆ ಅಂತ ನನ್ನಿಂದ ದೂರ ಹೋಗೋಕೆ ನೋಡಿದಾರೆ. ನನಗೆ ಅವರ ವಿಳಾಸವನ್ನು ಕೊಡಿ. ನಾನು ಇವತ್ತೇ ಅಲ್ಲಿಗೆ ಹೋಗಿ ಮಾತಾಡ್ತೀನಿ."

"ಇದರಲ್ಲಿ ವಿಳಾಸ ಇದೆ ತಗೋಳ್ಳಿ ... ನನಗೆ ನಿಮ್ಮಿಬ್ಬರ ಮಧ್ಯೆ ಈ ವಿಚಾರ ಇದೆ ಅಂತ ಗೊತ್ತಿರ್ಲಿಲ್ಲ. ಈ ಕಾಗದದಲ್ಲಿ ಬರೆದಿರೋದೇ ಬೇರೆ ...."

"ಸರಿಯಾಗಿ ಹೇಳಿ ಏನು ಬರೆದಿದೆ ಅಂತ "

"ಪರವಾಗಿಲ್ಲ ನನಗೆ ಈಗ ನಿರಾಳವಾಯ್ತು ನೀವೇ ಓದ್ಕೊಳ್ಳಿ."

"ನೀವು ಏನು ಹೇಳ್ತಿದೀರೋ ನಂಗೆ ತಿಳೀತಿಲ್ಲ...."

"ನೀವು ಈ ಪತ್ರವನ್ನು ಓದಿ, ನಿಮಗೇ ಅರ್ಥವಾಗುತ್ತೆ. ಹಾಗೇ ಟೀಚರ್‌ಗೆ ನೀನೇ ಉತ್ತರ ಬರೀರಿ" ಅವನು ಅವಳು ಕೊಟ್ಟ ಕಾಗದವನ್ನು ಕೈಗೆತ್ತಿಕೊಂಡು ಓದಿದ ಮುಖದಲ್ಲಿ ವಿಚಿತ್ರ ನಗೆ ಮೂಡಿತು.

"ಓ .. ಇದಾ ನಿಮ್ಮ ಕೋಪಕ್ಕೆ ಕಾರಣ... ಅವರು ಹೀಗೆ ಬರೆಯ ಬಾರದಾಗಿತ್ತು. ಅವರು ತಪ್ಪು ಮಾಡಿದಾರೆ. ಅವರು ಹೇಳಿದ್ನನ್ನೆಲ್ಲಾ ನಾನು ಒಪ್ಕೊಂಡು ಬಿಡ್ತೀನಿ ಅಂತ ಅವರು ತಿಳ್ಕೊಂಡಿದ್ದರೆ, ಅದಕ್ಕೆ ನಾನು ಹೊಣೆಗಾರನಲ್ಲ. ನನ್ನ ಮನಸ್ನಲ್ಲಿ ಅಂಥ ಭಾವನೆಗಳೇ ಇಲ್ಲ....

"ಮತ್ತೇ ?ಅವತ್ತು ನನ್ನ ಹತ್ರ ಏನೋ ಮಾತಾಡ್ಬೇಕು ಅಂತ ಅಂದ್ರಿ..."

"ಅದು ನಂಗೆ ಪಂಕಜಾ ಟೀಚರ್‌ಗೆ ಸಂಬಂಧಿಸಿದ ವಿಷಯ ನಾನು ಅವರನ್ನು ಮದುವೆಯಾಗ್ಬೇಕು ಅಂತ ಇದೀನಿ ಅನ್ನೋ ವಿಚಾರಾನ ನಿಮಗೆ ತಿಳಿಸ ಬೇಕಾಗಿತ್ತು. ಹಾಗೇ ಅವರ ವಿಳಾಸ ನನಗೆ ಬೇಕಾಗಿತ್ತು. ಅವರು ಕೊಡದೇ ಹೋಗಿದಾರೆ. "

"ನೀವು ನಿಜ ಹೇಳ್ತೀದೀರಿ ಅಂತ ಅಂದ್ಕೊಂಡಿದೀನಿ. ನೀವಿಬ್ರೂ ಸೇರಿ ಏನಾದ್ರೂ ನಾಟಕ ಆಡ್ತಾ ಇದ್ರೆ....."

"ನಾಟಕ ಆಡ್ತಿರೋರು ನೀವು... ತುಂಬಾ ಹೊತ್ತು ನಿದ್ದೆ ಬರೋತನಕ ಅವರ

ಹತ್ರ ಮಾತಾಡ್ತಿದ್ರಿ ಅಂತ ಅವರು ಹೇಳಿದ್ರು.... ನನ್ನ ವಿಷಯ ಬರಲೇ ಇಲ್ವಾ? ... ಅವರಿಗೆ ನಾನು ಇಷ್ಟ ಇಲ್ಲ ಅಂತ ನಿಮಗೆ ಹೇಳಿರಬಹುದು ಅಲ್ವಾ ?"

"ಇಲ್ಲ ಹಾಗೇನೂ ಹೇಳಲಿಲ್ಲ. ನಿಮ್ಮ ವಿಷಯವೇ ಬರ್ಲಿಲ್ಲ. ನೀವು ನನಗೆ ಇಷ್ಟ ಇಲ್ಲ ಅಂತ ಅವರಿಗೆ ಪತ್ರ ಬರೆದು ಬಿಡ್ತೀನಿ. ನಂಗೆ ಬೇರೆ ಏನೂ ವಿಷಯ ಗೊತ್ತೇ ಇಲ್ಲ ಅಂತ ಸುಮ್ಮನಿದ್ದು ಬಿಡ್ತೀನಿ.

"ಶಂಕರ ಇಲ್ಲೇ ಬರ್ತಿದಾನೆ ಮಾತು ಮುಗಿದಿದ್ರೆ ಹೊರಡು." ಸರೋಜ ಎಚ್ಚರಿಸಿದಳು.

"ಸಾರಿ ಇನ್ನು ನೀವುಂಟು ನಿಮ್ಮ ಪಂಕಜಾ ಟೀಚರ್ ಉಂಟು... ಕೆಲಸ ಮುಗಿದ್ಮೇಲೆ ಬೀಗ ಹಾಕೀ ಬೀಗದ ಕೈಯನ್ನು ನಿಮ್ಮ ಹತ್ತಿರವೇ ಇಟ್ಕೊಳ್ಳಿ. "ಎಂದು ಹೇಳಿ ಮಂಗಳ ಅಕ್ಕನೊಡನೆ ಹೊರಟಳು. ಚಂದ್ರು ಮುಗುಳ್ನಕ್ಕ ಸರೋಜಳ ಭಾರವಾದ ಹೆಜ್ಜೆಯನ್ನು, ಮಂಗಳಾಳ ತೂಗಾಡುವ ಜಡೆಯನ್ನು ನೋಡಿದ. ಪಂಕಜಳ ನಿಲುವು ಅವನ ಮನದ ಪಟಲದ ಮುಂದೆ ಬಂದು ನಿಂತಿತು.

"ಯಾಕೆ ಟೀಚರ್ ಹೀಗೆ ಸತಾಯಿಸ್ತೀರಿ? ನಾನು ಬಿಡ್ತೀನಿ ಅಂತ ಅಂದು ಕೊಂಡ್ರಾ?" ಮನೆಯ ಸಾಮಾನುಗಳನ್ನು ಒಮ್ಮೆ ಅವಲೋಕಿಸಿ, ಮತ್ತೆ ಮುಂಬಾಗಿಲಿಗೆ ಬೀಗ ಹಾಕಿ ಬೀಗದ ಕೈಯನ್ನು ತನ್ನ ಬಳಿಯೇ ಇಟ್ಟುಕೊಂಡ.

೦ ೦ ೦

"ಅಪ್ಪಾ ನಾನೊಂದು ತೀರ್ಮಾನಕ್ಕೆ ಬಂದಿದೀನಿ." ಊಟದ ನಂತರ ಕೈ ತೊಳೆಯುವಾಗ ಹೇಳಿದ. ಗೋಪಾಲ ಅವನ ಮುಖವನ್ನೇ ನೋಡಿದ. ಇವನು ಮುಂದುವರೆಸಿದ. ನಾನು ಅಲ್ಲೇ ಕೆಲಸ ಹುಡುಕ್ಕೋತೀನಿ.... ನಂಗೆ ಅದೇ ಊರು ಸರಿ.. ನಾನು ಇವತ್ತು ರಾತ್ರಿ ಮೈಸೂರಿಗೆ ಹೊರಟಿದೀನಿ. ನಾಳೆ ಒಂದು ಇಂಟರ್ ವ್ಯೂ ಇದೆ.

"ಇಂಟರ್‌ವ್ಯೂನ ? ಈಗ ಹೇಳ್ತಾ ಇದೇಯಲ್ಲೋ ಚಂದ್ರು... ಮತ್ತೆ ಈ ಕೆಲಸಕ್ಕೆ ಯಾಕೆ ಸೇರ್ಕೊಂಡೆ ?"

"ಈ ಕೆಲಸ ಕಷ್ಟ ಅಂತ ಅನ್ನಿಸ್ತಿದೆ... ಅಲ್ಲದೇ ನಾನು ಒಂದು ಮುಖ್ಯವಾದ ವಿಷಯವನ್ನ ಹೇಳಲೇ ಬೇಕು... ನಾನು ಒಬ್ಬರನ್ನು ಪ್ರೀತಿಸ್ತಿದೀನಿ. ಅವರು ಮೈಸೂರ್ನಲ್ಲೇ ಇದಾರೆ...."

"ಯಾರದು ?| ಇದುವರೆಗೂ ಯಾಕೆ ಹೇಳಿರ್ಲಿಲ್ಲ....?"

"ಹೇಳುವ ಕಾಲ ಈಗ ಬಂದಿದೆ. "

"ನಾನು ನಿನಗೆ ಮಂಗಳನ್ನ ವಿಚಾರಿಸೋಣ ಅಂತ ಇದ್ನಲ್ಲೋ ... ಆ ಹುಡುಗಿಯ ಮದುವೆ ನಿಂತು ಹೋಗಿದೆ... ಪಾಪ ಒಳ್ಳೆ ಹುಡುಗಿ. ನಿನಗೆ ತಕ್ಕ ಹೆಂಡತಿ ಆಗ್ತಾಳೆ

ಅಂತ ಅಂದ್ಕೊಂಡಿದ್ದೆ.. ಆದರೆ..

"ಅಮ್ಮ ಒಪ್ಪಿಗೆ ಕೊಡ್ತಿದ್ದರೇನಪ್ಪಾ... ಅವರಿಗೆ ನನ್ನ ಮದುವೆಯ ಬಗ್ಗೆ ಯಾವ ಆಸಕ್ತಿಯೂ ಇಲ್ಲ ನಂಗೊತ್ತು."

"ಹಾಗೇನಿಲ್ಲ.... ನೀನು ಅವಳನ್ನು ತಪ್ಪು ತಿಳ್ಕೊಂಡಿದೀಯ..."

"ಇಲ್ಲ, ನೀವು ಒಪ್ಪ ಹಾಕ್ಕೋತಿದೀರಿ ಅಷ್ಟೇ. ಅಮ್ಮಂಗೆ ಯಾವ ಹುಡುಗಿಯೂ ಒಪ್ಪಿಗೆ ಆಗುವುದಿಲ್ಲ. ಅದಕ್ಕೆ ನಾನೇ ನೋಡ್ಕೊಂಡಿದೀನಿ. ಅಲ್ಲದೇ ಇದು ನನ್ನ ಜೀವನ."

"ನಮ್ಮ ಪಾತ್ರ ಏನೂ ಇಲ್ಲ ಅಂತೀಯ ಹಾಗಾದ್ರೆ..."

"ನಾನು ನಿಮ್ಮನ್ನು ಗೌರವಿಸ್ತೀನಿ ಅಪ್ಪಾ... ಅಮ್ಮನ ಮೇಲೆ ನನಗೆ ದ್ವೇಷವೂ ಇಲ್ಲ. ಆದರೆ ಬಾಂಧವ್ಯ ಮಾತ್ರ ಬೆಳೆಯಲೇ ಇಲ್ಲ. ನಾನು ಇಲ್ಲಿ ನಿಮ್ಮೊಂದಿಗೆ ಇದ್ದರೂ , ನಾನು ಒಂಟಿ ಅನ್ನುವ ಭಾವ ಕಡಿಮೆ ಆಗಿಲ್ಲ."

"ಹಾಗಂತ ನೀನೇ ತೀರ್ಮಾನ ತಗೊಂಡು ಬಿಟ್ಟಾ! ಹೋಗ್ಲಿ ಈಗ್ಲಾದ್ರೂ ಹೇಳು ಹುಡುಗಿ ಯಾರು ಅಂತ... ನನಗೂ ತಿಳಿದುಕೊಳ್ಳುವ ಆಸೆ ಇದೆ." ಬೇಸರವನ್ನು ಅದುಮಿಟ್ಟು ಕೇಳಿದ.

"ಪಂಕಜಾ ಟೀಚರ್... ದನದ ಕೊಟ್ಟಿಗೆಯಂಥ ಮನೆಯಲ್ಲಿ ಬಾಡಿಗೆಗೆ ಇದ್ದಾರಲ್ಲ ಅವರು...." ಒತ್ತಿ ಪೇಳಿದ.

"ಏನು? ಟೀಚರ್ರಾ ....? ನಿಂಗೆ ಅವರ ವಿಷಯ ಗೊತ್ತು ತಾನೆ?"

"ಹೂಂ ಗೊತ್ತು. ಅದರಲ್ಲಿ ಅವರ ತಪ್ಪೇನಿದೆ. ನಾನು ಅವರಿಗೆ ಬಾಳು ಕೊಡ್ತಿನಿ."

"ನಿಮ್ಮಮ್ಮಂಗೆ ಈ ಸಂಬಂಧ ಖಂಡಿತಾ ಒಪ್ಪಿಗೆ ಆಗುಲ್ಲ.... ಮಂಗಳನ್ನ ನೀನು ಒಪ್ಪಿಕೊಂಡ್ರೆ ನಾನು ಅವಳನ್ನು ಒಪ್ಪುಸ್ತೀವಿ."

"ಬೇಡ ಬಿಡೀಪ್ಪಾ.... ನಿಮಗೆ ಯಾಕೆ ಈ ಕಷ್ಟವೆಲ್ಲಾ ... ನಾನು ಯಾವುದೇ ಕಾರಣಕ್ಕೂ ನನ್ನ ತೀರ್ಮಾನವನ್ನು ಬದಲಾಯಿಸುವುದಿಲ್ಲ..."

"ನಿನ್ನ ಈ ತೀರ್ಮಾನ ಎಲ್ಲೆಲ್ಲಿಗೆ ಹೋಗಿ ಮುಟ್ಟುತ್ತೊ...? ಚಂದ್ರು ದುಡುಕ ಬೇಡ ನಿಧಾನವಾಗಿ ಕೂತು ಯೋಚಿಸು...."

"ಇನ್ನೇನಾಗ ಬಹುದು?... ನನಗೆ ಈ ಆಸ್ತಿಯಲ್ಲಿ ಯಾವ ಹಕ್ಕೂ ಇರುವುದಿಲ್ಲ ಅಷ್ಟೇ ತಾನೇ? ಪರವಾಗಿಲ್ಲ. ಹೇಗೂ ರಕ್ತ ಸಂಬಂಧವಿಲ್ಲ... ಅವರಿಗೆ ಯಾವ ನೋವು ಆಗುವುದಿಲ್ಲ. ನನಗೆ ಬಿಡುಗಡೆ ಕೊಟ್ಟು ಬಿಡಿ. ನನಗೆ ಯಾವ ಬಂಧನವೂ ಬೇಡ."

"ಯಾಕೋ ಹೀಗೆಲ್ಲಾ ಮಾತಾಡ್ತೀಯ?" ಗೋಪಾಲ ಗದ್ಗದಿತನಾದ.

"ಕ್ಷಮಿಸಿ ಅಪ್ಪಾ... ನನ್ನ ಮಾತಿನಿಂದ ನಿಮಗೆ ಬೇಸರ ಆಗಿದೆ. ಆದರೆ... ನಾನೇನು ತಪ್ಪು ಮಾಡಿದೀನಿ.... ನನಗೆ ಸ್ವಾತಂತ್ರ್ಯ ಬೇಡ್ವಾ! ಮೊದಲಿನಿಂದ ನನಗೆ ಅತಂತ್ರ

ಗತಿಯೋ... ಹಾಗೇ ಮುಂದುವರೆಯ ಬೇಕಾ ? "

"ಮುಂದೆ ಎಲ್ಲವೂ ನಿನ್ನದೇ ಆಗುತ್ತದೆ. ಆಗ ನಿನಗೆ ಹೇಗೆ ಬೇಕೋ ಹಾಗೆ ಇರಬಹುದು!"

"ಯಾವಾಗ? ಆ ನಿರೀಕ್ಷಣೆ ನನಗಿಲ್ಲ. ನೀವೇ ಹೇಳಿ ಅಪ್ಪಾ... ನೀವು ಒಂಥರಾ ಬಂಧನದಲ್ಲೇ ಇದ್ದೀರಲ್ಲ.... ಎಂದೂ ನಿಮಗೆ ಸ್ವಾತಂತ್ರ್ಯ ಬೇಕು ಅಂತ ಅನ್ನಿಸ್ಲಿಲ್ವಾ?.... ನಿಮ್ಮತನಕ್ಕೆ ಬೆಲೆ ಇಲ್ಲ ಅಂತ ಬೇಸರ ಆಗಿಲ್ವಾ?..."

"ನನ್ನ ವಿಷಯ ಈಗ್ಯಾಕೆ ಚಂದ್ರು? ನನಗೆ ಈಗ ಏನೂ ಅನ್ನಿಸೋದೇ ಇಲ್ಲ."

"ನಾನೂ ಹೀಗೇ ನಿರಾಸಕ್ತಿಯಿಂದ ಇರಬೇಕೇನಪ್ಪಾ...?|ಗೋಪಾಲಯ್ಯ ನಿರುತ್ತರನಾದ. ಸ್ವಲ್ಪ ಹೊತ್ತಿನ ನಂತರ ಅವನು ಪ್ರಯಾಣಕ್ಕೆ ಸಿದ್ಧನಾದಾಗ , ಲಕ್ಷ್ಮೀದೇವಮ್ಮ ಏನನ್ನು ಕೇಳಲಿಲ್ಲ. ಗೋಪಾಲಯ್ಯನೇ ಹೆಂಡತಿಗೆ ಹೇಳಿದ.

" ಚಂದ್ರೂ, ಯಾವುದೋ ಇಂಟರ್‌ವ್ಯೂ ಕೊಡೋಕೆ ಮೈಸೂರಿಗೆ ಹೋಗ್ತಿದಾನೆ..."

"ಸರಿ... ಸಂಬಳ ಎಷ್ಟು ಕೊಡ್ತಾರಂತೆ ...?"

"ನಿನಗೆ ಯಾವಾಗ್లೂ ಸಂಬಳದ್ದೇ ಚಿಂತೆ... ಅವನ ಖರ್ಚಿಗೆ, ಅವನ ಹೆಂಡತಿ ಮಕ್ಕಳಿಗಾಗುವಷ್ಟು ಕೊಡ್ತಾರೆ...."

"ಅವನ್ನೇನು ಸಂಬಳನ ನಂಗೇ ಕೊಡು ಅಂತ ಕೇಳಿದ್ನೇ ... ಎಷ್ಟೇ ಬಂದರೂ, ಅವನಿಗೇ ಅವನ ಸಂಸಾರಕ್ಕೆ ಅಂತ ನಂಗೂ ಗೊತ್ತು..."

"ನಾನು ಬರ್ತೀನಿ...." ಎಂದು ಇಬ್ಬರಿಗೂ ಅನ್ವಯಿಸುವಂತೆ ಹೇಳಿದ. "ದೇವರಿಗೆ ನಮ್ಮಸ್ಕಾರ ಮಾಡಿ ಹೊರಟು. ಎಲ್ಲಾ ಒಳ್ಳೆದಾಗ್ಲೀ. " ಗೋಪಾಲಯ್ಯ ಹರಸಿದ. ಚಂದ್ರೂ ದೇವರಿಗೆ ನಮಸ್ಕರಿಸಿ, ನಂತರ ಇವರಿಬ್ಬರಿರಗೂ ನಮ್ಮಸ್ಕರಿಸಿದ.

"ನಾನು ಬಸ್‌ಗೆ ಹತ್ತಿಸಿ ಬರ್ತೀನಿ 'ಗೋಪಾಲಯ್ಯ ಚಂದ್ರುವಿನೊಡನೆ ಹೊರಟ.'ಇಂಟರ್‌ವ್ಯೂ ಹೇಗಾಯ್ತು ಅಂತ ಕಾಗ್ದ ಬರೆದು ತಿಳಿಸಪ್ಪಾ... ಖರ್ಚಿಗೆ ಹಣ ಏನಾದ್ರೂ ಬೇಕಾದ್ರೆ ನನ್ನನ್ನ ಕೇಳು. ಸಂಕೋಚ ಪಟ್ಕೋಬೇಡ. "

"ಅಮ್ಮ ಲೆಖ್ಖ ಕೇಳಿದ್ರೆ ಏನು ಹೇಳ್ತೀರಿ ? "

"ನನ್ನ ಹಣಕ್ಕೆ ಲೆಖ್ಖ ಯಾಕೆ ಕೊಡಬೇಕು..?..."ಪೆಚ್ಚಾಗಿ ನಕ್ಕ. ಅಷ್ಟರಲ್ಲಿ ಬಸ್ಸು ಬಂದಿತು. ಚಂದ್ರು ಬಸ್ಸನೇರಿದ. ಗೋಪಾಲಯ್ಯ ಕೈಯಾಡಿಸಿದ. ಚಂದ್ರುಗೆ ಆತನ ಬಗ್ಗೆ ಮರುಕ ಹುಟ್ಟಿತು. ತಾನು ಸಂಸಾರ ಹೂಡಿದ ಮೇಲೆ, ಇವರನ್ನು ತನ್ನ ಬಳಿ ಕರೆತಂದು ಇಟ್ಕೋಬೇಕು ಅಂತಂದುಕೊಂಡ ಬಸ್ಸು ಚಲಿಸಿತ್ತು.

○ ○ ○

ಅಕ್ಕಾ, ವೈನೀನ ದವಾಖಾನೆಗೆ ಸೇರಿಸಿದಾರಂತ ನಂಗ ಅಳೂ ಬರೂಕೆ ಹತ್ತೈತಿ"

ಸೀತಾ ಸೊರ ಸೊರ ಅಂತ ಅತ್ತಾ. ಮಂಗಳನಿಗೆ ಕೆಡುಕೆನ್ನಿಸಿತ್ತು...

"ನಿಂಗ್ಯಾರು ಹೇಳಿದ್ರು.... ಯಾವೂರ ಆಸ್ಪತ್ರೆ?"

"ಅವ್ವ, ಕಕ್ಕಿ ಮಾತಾಡ್ಕೊಂತಿದ್ರು... ವೈನಿಗೆ ದೊಡ್ಡ ಖಾಯಿಲೆ ಅಂತೆ.... ಅಪ್ಪ ನೋಡ್ಕೊಂಡು ಬರಾಕೆ ಹೋಗ್ಯಾರ.... ದತ್ತಣ್ಣನೂ ಬಂದಾನಂತ...

"ನೀನು ಅಳ್ಬೇಡ ಎಲ್ಲಾ ಸರಿ ಹೋಗುತ್ತೆ..."

"ಇಲ್ಲೇ ಮುಂದಿನ ಬೀದಿಯಾಗ, ಒಬ್ಬರ ಮನ್ಯಾಗ ಭಜನೆ ಮಾಡ್ತಾರಂತ... ಹರಿಕಥೆ ಮಾಡ್ತಾರಂತ.... ಅವರ ಮನ್ಯಾಗ ಪಾಂಡುರಂಗನ ಪಟ ಇಟ್ಟಾರಂತ... ಪಟದಾಗ್ನಿಂದ ವಿಭೂತಿ ಪ್ರಸಾದ ಬೀಳ್ತದಂತ... ನೋಡಿ ಬರೋಣು ಬನ್ರೀ ಅಕ್ಕಾ..."

"ನಿಂಗ್ಯಾರು ಹೇಳಿದ್ರು?"

"ನನ್ನ ಕೂಡೆ ಶಾಲಿಗೆ ಬರೋ ಗೆಳತೀರೆಲ್ಲಾ ಹೇಳ್ಯಾರ... ನಂಗೂ ಹೋಗ್ಬೇಕು, ನೋಡ್ಬೇಕು ಅಂತ ಆಸಿ ಆಗ್ಯೆತಿ.... ವಿಭೂತಿ ಪ್ರಸಾದಾನ ತಗೊಂಡು ಬರೋಣು...."

"ಸೀತಾ, ನಾನು ನನ್ನ ತಂದೇನ ಕೇಳ್ಬೇಕು... ಅವರು ಹೂಂ ಅನ್ನದೇ ನಾವು ಎಲ್ಲಿಗೂ ಹೋಗುವಂತಿಲ್ಲ. ನೀನು ನಿನ್ನ ಸ್ನೇಹಿತೆಯರ ಜತೇಲಿ ಹೋಗ್ಬಾ.... ಆಮೇಲೆ ಬಂದು, ಭಜನೆ ಹೇಗಿತ್ತು ? ಎಷ್ಟು ಜನ ಬಂದಿದ್ರು ಅಂತ ಹೇಳು..."

" ಅಕ್ಕಾ ಒಂದು ವಿಷಯ ಕೇಳ್ಲಾ....? ನೀವು ಸುಳ್ಳು ಹೇಳ್ಬಾರ್ದು..."

"ನಾನು ಸುಮ್ಸುಮನೆ ಸುಳ್ಳು ಹೇಳುಲ್ಲ, ಕೇಳು...."

"ನಿಮ್ಮ ಲಗ್ನ ನಿಂತು ಹೋಯ್ತಂತೆ.... ಹಂಗಾರ ನೀವು ಮತ್ತೆ ಲಗ್ನ ಆಗೂದೇ ಇಲ್ಲೇನು?" ಮಂಗಳನಿಗೆ ರೇಗಿತು. ಆದರೂ ಉತ್ತರ ಕೊಡಬೇಕಾಗಿತ್ತು.

"ಲಗ್ನ ನಿಂತು ಹೋದದ್ದು ನಿಜ... ಆದ್ರೆ ಮತ್ತೆ ಮದುವೆ ಆಗ್ತೀನೋ ಇಲ್ವೋ.... ನಂಗೆ ಗೊತ್ತಿಲ್ಲ.... ಮತ್ತೆಂದೂ ಇಂಥಾ ಪ್ರಶ್ನೆಗಳನ್ನು ಕೇಳ್ಬೇಡ."

"ಇಲ್ರೀ ಅಕ್ಕಾ ಮತ್ತೆಂದೂ ಕೇಳೂದಿಲ್ಲ... ಆದರೆ, ಲಗ್ನ ಮಾಡ್ಕೊಂಡು ಗಂಡನ ಮನಿಗೆ ಹೊರಟು ಹೋಗ್ತೀರಲ್ಲ ಅಂತ ಚಿಂತಿ ಆಗಿತ್ತು. ಈಗ ನೋಡ್ರಿ.... ಸುಧಾ ಹೋಗೇ ಹೋದ್ಲು ಇತ್ತ ಮುಖ ಹಾಕಿಲ್ಲ. ಪತ್ರ ಹಾಕಿಲ್ಲ... ಆಕಿಗೆ ತಂಗಿ ಮೇಲೆ ಪ್ರೀತೀನೇ ಇಲ್ಲ... ನೀವೂ ಹೋಗಿದ್ಬಿದ್ರ ನನ್ನನ್ನ ಮರತೇ ಬಿಡ್ತಿದ್ರೀ ಅಲ್ವಾ?...." ಸೀತಾಳ ಕಣ್ಣುಗಳಲ್ಲಿ ನೀರು ಜಿನುಗಿತ್ತು.

"ಇಲ್ಲ... ಸೀತಾ.... ನಾನು ನಿನ್ನನ್ನು ಖಂಡಿತಾ ಮರೆಯುಲ್ಲ. ಎಲ್ಲೇ ಇದ್ರೂ ಹೇಗೆ ಇದ್ರೂ, ನೀನೇ ನನ್ನ ಮೊದಲ ಸ್ನೇಹಿತೆ.... ನೀನಾಗಿಯೇ ಬಂದು ನೀನು ನನ್ನ ಸ್ನೇಹ ಮಾಡ್ಕೊಂಡಿದ್ದೆ.... ನೆನೆಪಿದೆಯಾ ?...." ಸೀತ ಹೌದೆನ್ನುವಂತೆ ತಲೆ ಆಡಿಸಿದಳು. ಸೀತಾ ಹೊರಟು ಹೋಗಿದ್ದಳು. ರಾಧಾ ಮುಗ್ಧೆ. ಮೂಕ ಪಶುವಿನಂತೆ ಮನೆಕೆಲಸದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿರುತ್ತಿದ್ದಳು.... ಯಾರೊಂದಿಗೂ

ಮಾತಿಲ್ಲ, ಹರಟೆ ಇಲ್ಲ, ಜಗಳ ಇಲ್ಲ... ಇಬ್ಬಿಬ್ಬರು ಅತ್ತೆಯರ ಮೂದಲಿಕೆಯ ಮಾತುಗಳನ್ನು ಕೇಳಿಕೊಂಡು, ಯಾರಿಗೂ ಕಾಣದಂತೆ ಅತ್ತೂ ಕಣ್ಣೀರು ಒರೆಸಿಕೊಳ್ಳು ತ್ತಿದ್ದಳು. ಪ್ರೀತಿಸುವ ಗಂಡ ಹತ್ತಿರದಲ್ಲಿಲ್ಲ. ಅವನ ಬರವಿಗಾಗಿ ಕಾದಿರುತ್ತಿದ್ದಳು. ಅವನು ಬಂದಾಗಲೂ, ಅವನೊಡನೆ ಸ್ವತಂತ್ರವಾಗಿ ಮುಕ್ತವಾಗಿ ಮಾತಾಡುವಂತಿಲ್ಲ... ಓಡಾಡುವಂತಿಲ್ಲ.... ಅತ್ತೆಯ ಮನೆ ಎಂದರೆ ಹೀಗೇನೇ.... ಮನೆ ತುಂಬಾ ಜನ, ಕೈ ತುಂಬಾ ಕೆಲಸ... ನನ್ನ ತನವಿಲ್ಲ. ಸ್ವತಂತ್ರವಿಲ್ಲ.... ಇಂಥಾ ಜೀವನಕ್ಕಿಂತ ಪಂಕಜ ಟೀಚರ್‌ನ ಜೀವನ ಉತ್ತಮವಿರಬಹುದು.... ಆದರೆ.... ಆ ಜೀವನದಲ್ಲಿ ಸೊಗಸಿಲ್ಲ, ಸೌಂದರ್ಯವಿಲ್ಲ.... ಅವರಿವರ ಮಾತಿಗೆ ಅಂಜಿ.... ಹಿಂದೆ ಹಿಂದೆಯೇ ಇರಬೇಕಾದ ಪರಿಸ್ಥಿತಿ. ... ಜೊತೆಗೆ ಅವರಿವರ ಅನೇಕ ಬಗೆಯ ನೋಟ.... ಇಂಥಾ ಒಂದು ನೋಟ ವನ್ನು ಚಂದ್ರು ಇವಳ ಮೇಲೆ ಹರಿಸಿದ್ದಾನಲ್ಲವೆ ?.... ಅದು ಸ್ನೇಹವೆ? ಪ್ರೀತಿಯೇ ಅನುಕಂಪವೇ?.... ಅಥವಾ ಆದರ್ಶವೇ.... ಏನೇ ಇರಲಿ... ಚಂದ್ರು ಒಳ್ಳೆಯ ವನೇ... ಅವನ ಒಳ್ಳೆಯ ತನ ಪಂಕಜನಿಗೆ ಹಿಡಿಸಿದೆ. ಅದಕ್ಕೇ ತನ್ನನ್ನು ಮದುವೆಯಾಗುವಂತೆ ಕೇಳಿರಬಹುದು...

ಅವನು ಈ ಸಮಸ್ತ ಆಸ್ತಿಗೆಲ್ಲ ಮುಂದೆ ಒಡೆಯನಾಗುವವನು... ಆದರೆ ಅವನಿಗೆ ಈ ಆಸ್ತಿಯ ಮೇಲೆ ಆಸೆ ಇದ್ದಂತಿಲ್ಲ.... ಒಂದು ವೇಳೆ ನಾನು ಮದುವೆಗೆ ಒಪ್ಪಿ ಕೊಂಡರೆ, ನಾನು ಈ ವಠಾರದ ಮಾಲೀಕಳಾಗಬಹುದು.... ಆದರೆ ಲಕ್ಷ್ಮಿ ದೇವಮ್ಮನ ಮನಸ್ಸಿನಲ್ಲಿ ಏನಿದೆಯೋ ? ಆಕೆ ಯಾರನ್ನೂ ಸ್ನೇಹದಿಂದ ಪ್ರೀತಿಯಿಂದ ಮಾತನಾಡಿ ಸಿದ್ದೇ ಇಲ್ಲ.... ನಾನು ಇಂತಹವಳ ಸೊಸೆಯಾಗುವುದು, ನನಗೆ ಇಷ್ಟವಿಲ್ಲ. .. ಆಕೆ ಸೊಸೆಯನ್ನು ಸುಖವಾಗಿರಲು ಬಿಡುವುದು ಸಾಧ್ಯವಿಲ್ಲ.

"ಏನೇ, ಏನೋ ಯೋಚಿಸ್ತಾ ನಿಂತೇ ಬಿಟ್ಟಿದೀಯ.... ಅಮ್ಮ ಕರೆದಿದ್ದು ಕೇಳಿಸ್ಲಿಲ್ವಾ?' ಸರೋಜ ಹಿಂದೆ ಬಂದು ಕರೆದಳು.

"ಸೀತಾ ಬಂದಿದ್ಲು... ಮಾತಾಡ್ತಾ ಇದ್ದೆ. ಅವಳ ಅತ್ತಿಗೆಗೆ ಇನ್ನು ಚಿಕ್ಕ ವಯಸ್ಸು... ಆಸ್ಪತ್ರೆಗೆ ಸೇರಿಸಿದಾರಂತೆ.. ಬೇಸರ ಆಯ್ತು..."

"ಹೆರಿಗೆಗೆ ಅಂತ ಸೇರಿಸಿದಾರಾ?...."

"ಇಲ್ಲ, ಆಕೆ ಬಸಿರಿ ಆಗಿರ್ಲಿಲ್ಲ... ಏನೋ ಸರಿಯಾಗಿ ಗೊತ್ತಿಲ್ಲ. ಹೋಗ್ಲಿ ಬಿಡು... ನಿಂಗ್ಯಾಕೆ ಆ ಸುದ್ದಿ ಎಲ್ಲಾ... ಇವತ್ತು ಏನು ತಿಂಡಿ ಮಾಡ್ಲೀ? ನಿಂಗೆ ಏನಿಷ್ಟ?"

"ಸುಲಭವಾಗಿ ಏನಾದ್ರೂ ಮಾಡು ಪರವಾಗಿಲ್ಲ... ಇಲ್ದಿದ್ರೆ ಹುರಿದ ಕಡ್ಲೆ ಕಾಯಿ ಬೀಜ, ಬೆಲ್ಲ ಆದ್ರೂ ಆಗುತ್ತೆ. ಅದೂ ಒಂದು ಥರಾ ಚೆನ್ನಾಗಿರುತ್ತೆ..."

"ಅದು ಅಣ್ಣ ಕಂಡು ಹಿಡಿದಿರುವ ಹೊಸರುಚಿ.... ದಿನಾ, ಕಡ್ಲೆಕಾಯಿ ಮಾರು

ವವನು ಒಂದು ಸೇರು ಸುರಿದು ಹೋಗ್ತಾನೆ... ಅವನಿಗೆ ವ್ಯಾಪಾರ ಆಯ್ತು... ಸ್ಕೂಲಿ ನಿಂದ ಬಂದವರಿಗೆ ತಿಂಡಿ.... ಹಾಗೇ ಬ್ರೆಡ್ ಮಾರೋನು ಒಬ್ಬ ದಿನ ಬಿಟ್ಟು ದಿನ ಬರ್ತಾನೆ... ಅವನ್ಹತ್ರ ಬಾಲುಗೆ ಅಂತ, ಕಡ್ಡಿ ಓಂ ಬಿಸ್ಕತ್ತು ತಗೋತಾಳೆ ಅಮ್ಮ... ಒಂಥರಾ ಗರಿ ಗರಿಯಾಗಿ ಚೆನ್ನಾಗಿರುತ್ತೆ... ನೀನೂ ತಿಂತೀಯ..."

"ಅದು ಚಿಕ್ಕ ಮಕ್ಕಳ ತಿಂಡಿ.... ಚಕ್ಕುಲಿ ಹಿಟ್ಟು ಇದೆಯಾ ? ಇಬ್ಬರೂ ಸೇರಿ ಮಾಡೋಣ್ವಾ?" ಸರೋಜ ಉತ್ಸಾಹ ತೋರಿದಳು.

"ಚಕ್ಕುಲಿ ಹಿಟ್ಟು ಮುಗಿದು ಎಂದೋ ಕಾಲ ಆಯ್ತು... ಅಣ್ಣಂಗೆ ಹೇಳಿದ್ರೆ ಭಟ್ಟಿಯಿಂದ ಅವಲಕ್ಕಿ ಪುರಿ ತರ್ತಾರೆ... ಒಂದಿಷ್ಟು ಉಂಡೆ ಕಟ್ಕೋಣ... ಇನ್ನೊಂದಿಷ್ಟು ಖಾರದವಲಕ್ಕಿ ಮಾಡೋಣ... ಚೆನ್ನಾಗಿರುತ್ತೆ..."

"ಸರಿ, ಬೆಳಿಗ್ಗೆ ಮಾಡಿದ್ದ ರೊಟ್ಟಿ ಇದ್ದರೆ ಚಟ್ನಿ ಹಾಕಿಕೊಡು. ಯಾಕೋ ಹೊಟ್ಟೆ ಹಸೀತಿದೆ."

"ಹೂಂ... ಬಿಸಿ ಮಾಡಿ ಕೊಡ್ತೀನಿ" ಎಂದಳು. ಇಬ್ಬರೂ ಒಳಗೆ ಬಂದರು.

○ ○ ○

ವಠಾರದ ಉಳಿದ ಎರಡೂ ಮನೆಗಳಿಗೆ ಬಾಡಿಗೆದಾರರು ಗೊತ್ತಾಗಿದ್ದರು. ಗೋಪಾಲಯ್ಯ ತಾನೇ ಮನೆಯನ್ನು ಚೊಕ್ಕಟ ಮಾಡಿದ. ದಿಬ್ಬದ ಮನೆಗೆ ಬಂದಿದ್ದವರದ್ದು ಚಿಕ್ಕ ಸಂಸಾರ. ಗಂಡ ಹೆಂಡತಿ ಎರಡು ಚಿಕ್ಕ ಮಕ್ಕಳು. ಮನೆಯ ಮುಖ್ಯಸ್ಥ, ಕಾಲೇಜೊಂದರಲ್ಲಿ ಅಕೌಂಟೆಂಟ್ ಆಗಿದ್ದ... ಇನ್ನೊಂದು ಮನೆಗೆ ವಾಸಕ್ಕೆ ಬಂದವರದ್ದು ದೊಡ್ಡ ಸಂಸಾರ. ಮನೆಯ ಹಿರಿಯಾಕೆಗೆ ಮೂರು ಜನ ಗಂಡು ಮಕ್ಕಳು. ಮೂರು ಜನಕ್ಕೂ ಮದುವೆ ಆಗಿತ್ತು... ಹಿರಿಯ ಮಗನಿಗೆ ಎರಡು ಮಕ್ಕಳು, ಎರಡನೆಯ ವನಿಗೆ ಒಂದು ಮಗು. ಈಗ ಅವನ ಪತ್ನಿ ಮತ್ತೆ ಗರ್ಭಿಣಿ. ಮೂರನೆಯವನಿಗೆ ಮದುವೆಯಾಗಿ ವರ್ಷವಾಗಿತ್ತು. ಆದರೆ ಮಗುವಾಗಿರ ಲಿಲ್ಲ. ಮದುವೆಯಾಗಿ ಗಂಡನ ಮನೆಯಲ್ಲಿದ್ದ ಹೆಣ್ಣು ಮಕ್ಕಳು, ಆಗಾಗ್ಗೆ ಗಂಡ ಮಕ್ಕಳೊಂದಿಗೆ ಬರುತ್ತಿದ್ದುದೂ ಉಂಟು. ಒಟ್ಟಿನಲ್ಲಿ ಸದಾ ಗಿಜಿಗಿಜಿ. ಬರೋರು ಹೋಗೋರು ಇರುತ್ತಿದ್ದರು.

"ಸರೋಜಂಗೆ, ಮನೆ ಮಟ್ಟಿಗೆ ಬಳೆ ತೊಡಿಸುವ ಶಾಸ್ತ್ರ ಮಾಡೋಣ... ಚೊಚ್ಚಿಲು ಬಸಿರಿ.... ನೊಂದ್ಕೋತಾಳೆ. ಹೊಟ್ಟೇಲಿರೋ ಮಗುಗೆ ಬೇಸರ ಆಗುತ್ತೆ..." ನುಡಿದ ಜಾನಕಿಯನ್ನೇ ಗಂಡ ದೀರ್ಘವಾಗಿ ನೋಡಿದ.

"ಅದ್ಸರಿ... ಸಹಾಯ ಮಾಡೋರ್‍ಯಾರು?... ಆರತಿ ಎಂದ ಮೇಲೆ ಉಂಡೆ ಚಕ್ಕುಲಿ, ಹುರುಕಲು ಎಲ್ಲಾ ಮಾಡಬೇಕಲ್ವಾ?..

'ಜೋಷಿ ಹೆಂಡತೀನ ಕೇಳಿ ನೋಡ್ತೀನಿ... ಇಬ್ಬಿಬ್ಬರು ಇದಾರೆ... ಅಲ್ಪ ಸ್ವಲ್ಪ ಸಹಾಯ ಮಾಡೇ ಮಾಡ್ತಾರೆ..."

"ಕೇಳಪ್ಪಾ... ಅದು ನಿಮ ನಿಮಗೆ ಸಂಬಂಧಿಸಿದ ವಿಷಯ"

"ಯಾಕೆ? ಧ್ವನಿ ಗುರ್ ಅಂತಿದೆ. ಖರ್ಚಾಗುತ್ತೆ ಅಂತಲಾ?"

" ಖರ್ಚಿನ ಮಾತನ್ನು ಎಲ್ಲಿ ಹೇಳ್ದೆ ಜೋಷಿ ಮನೆಯವರ ರೀತಿ ನೀತಿ ರುಚಿ ಶುಚಿ ಎಲ್ಲಾ ಬೇರೆ ಥರ.... ನಿಂಗೆ ಸರಿ ಹೋಗುತ್ತಾ ?"

"ಸರಿ ಹೋಗಿಸ್ಕೊಳ್ತಿನಿ ಸಮಯ ಸಂದರ್ಭದಲ್ಲಿ, ನಾನೇ ಸರಿ ಎಂಬ ಅಹಂಕಾರ ದಿಂದ ಮೆರೆಯೋ ಆಸೆ ನನಗಿಲ್ಲ."

"ಸರಿ ಸರಿ ಪಟ್ಟಿ ಸಿದ್ಧ ಮಾಡಿಕೊಡು. ಹಾಗೇ ಸೀರೆ ರವಿಕೆ ಏನಾದ್ರೂ ತರಬೇಕಾಗಿದ್ರೆ ಹೇಳ್ಬಿಡು ತರ್ತೀನಿ."

"ಏನೂ ಬೇಡ .... ನನ್ನ ಹತ್ರ ನಾನು ಉಡದೇ ಇರುವ ಸೀರೆ ಒಂದಿದೆ. ಅದನ್ನೇ ಸರೋಜನಿಗೆ ಕೊಟ್ಟರಾಯ್ತು... ರವಿಕೆ ಬಟ್ಟೆಯೂ ಬೇಡ 'ತಂದೆ ಎದ್ದು ಹೋದ ಮೇಲೆ ಸರೋಜ ಒಳಗೆ ಬಂದಳು.

"ನಂಗೆ ಆರತಿ ಗೀರತಿ ಏನೂ ಬೇಡ. ಇಲ್ಲಿಗೆ ಬರುವ ಮೊದಲು ಅತ್ತೆ ಮನೆಯಲ್ಲಿ ಎಲ್ಲಾ ಮಾಡಿದ್ದಾಗಿದೆ.... ನಿನ್ಕೈಲಿ ಆಗುಲ್ಲ ಯಾರು ಮಾಡೋರು "

"ಹೇಗೋ ಆಗುತ್ತೆ. ಸರೋಜ... ಮನೆ ಮಟ್ಟಿಗೆ ಮಾಡ್ಲೇ ಬೇಕು... ನಿಂಗೆ ಅದೆಲ್ಲ ಅರ್ಥವಾಗುಲ್ಲ. ಈ ವಠಾರದ ನಾಲ್ಕು ಜನ ಹೆಂಗಸರು ಬಂದು ಸಂಭ್ರಮದಿಂದ ಹರಸಿದರೆ, ಎಲ್ಲಾ ಸುಗಮವಾಗುತ್ತೆ. ಗಂಡು ಮಗುವೇ ಆಗುತ್ತೆ ನೋಡ್ತಿರು."

"ಹೆಣ್ಣು ಮಗು ಹುಟ್ಟಿದರೂ ನಾನು ಬೇಜಾರು ಮಾಡ್ಕೊಳ್ಳಲ್ಲ...'ತಾಯಿಯ ಕಡೆ ಕಳ್ಳ ನೋಟ ಬೀರಿದಳು. ... ತಾಯಿ, ಹೆಣ್ಣು ಮಕ್ಕಳನ್ನು ಆಗಾಗ್ಗೆ ಜರಿದು ಅಂದಿದ್ದನ್ನು ಅವಳು ಮರೆತಿರಲಿಲ್ಲ... ಜಾನಕಿ ಸುಮ್ಮನಾದಳು.

೦ ೦ ೦

ಜಾನಕಿ ನಿಧಾನವಾಗಿ ಕೋಲನ್ನೂರಿಕೊಂಡು ಸರೋಜಳ ಜೊತೆಯಲ್ಲಿ ಜೋಷಿಯ ಮನೆಗೆ ಬಂದಳು... ತುಂಗಾಬಾಯಿ ಹಾಗೂ ಸಕ್ಕೂಬಾಯಿ ಸೊಪ್ಪನ್ನು ಬಿಡಿಸುತ್ತಿದ್ದ ವರು, ಸರಿಯಾಗಿ ಕುಳಿತು ಇಬ್ಬರನ್ನು ಬರಮಾಡಿಕೊಂಡರು. "ಬರ್ರೀ ಬರ್ರೀ.... ಕೂಡ್ರೀ.... ಭಾಳೇ ಅಪರೂಪ ರೀ .... ಮಗಳನ್ನು ಕರ್ಕೊಂಡು ಬಂದೀರ್ರೀ ಭಾಳನೇ ಖುಷಿ ಆತ್ರೀ...." ಅವರ ಸಂಭ್ರಮಕ್ಕೆ ಜಾನಕಿ ಮಂದಹಾಸ ಬೀರಿದಳು.

"ನಿಮ್ಮಿಂದ ಒಂದು ಸಾಹಾಯ ಆಗ್ಬೇಕು ತುಂಗಮ್ಮಾ... ನನ್ನ ಮಗಳು ಬಾಣಂತನಕ್ಕೆ ಬಂದಿದ್ದಾಳೆ. ಚೊಚ್ಚಲು ಬಸಿರಿ.... ಅರೈಕೆ ಮಾಡ್ಲಿಲ್ಲ... ಬಯಕೆ ಕೇಳಲಿಲ್ಲ. ನನ್ನದೇ ಆಗಿ ಹೋಯ್ತು ಈಗ ಆರತಿ ಶಾಸ್ತ್ರ ಮಾಡೋಣ ಅಂತಾದ್ರೆ ಅದೂ ನನ್ನ ಕೈಯಲ್ಲಿ ಹರಿಯದಾಗಿದೆ. ನನ್ನ ಓರಗಿತ್ತಿ ಅವಳೇ ಬಾಣಂತಿ ... ಮನೆ

ತುಂಬಾ ಚಿಕ್ಕ ಮಕ್ಕಳು... "ಎನ್ನುತ್ತಾ ಅಲ್ಲಿದ್ದ ಖುರ್ಚಿಗಳ ಮೇಲೆ ಕುಳಿತರು.

"ನಮ್ಮಿಂದ ಏನಾಗ್ಬೇಕು ಹೇಳ್ರಲಾ... ಮಾಡಿ ಕೊಟ್ಬೇವು...

"ಒಂದಿಷ್ಟು ಚಕ್ಕುಲಿ, ಪುರಿ ಉಂಡೆ, ಹುರುಕಲು, ಮಾಡಿ ಕೊಡ್ಬೇಕಾಗಿತ್ತು ಆಗುತ್ತಾ?"

"ಓ.. ಬೇಷಾಗಿ ಮಾಡ್ಕೋಡ್ತೀವಿ, ನಿಮ್ಮ ಮಗಳು ನಮ್ಮ ಮಗಳು ಇದ್ಧಂಗ... ನೀವು ನಮ್ಮ ತಂಗಿ ಇದ್ಧಂಗ ಸಾಮಾನು ತರಿಸೀರೇನು? ಆರತಿ ಶಾಸ್ತ್ರ ಯಾವಾಗ ಮಾಡ್ಬೇಕು ಅಂತ ಮಾಡೀರಿ.'

"ಶುಕ್ರವಾರ ದಿನ ಚೆನ್ನಾಗಿದೆ... ಉಂಡೆ ಚಕ್ಕುಲಿ ತುಂಬಾ ಬೇಡ. ಹತ್ತಿಪ್ಪತ್ತು ಸಾಕು..."

"ಅದ್ಹೇಂಗ್ರೀ ಸಾಕಾಗ್ತದೆ... ವಠಾರದ ಮಂದಿ ನಾವೇ ಎಷ್ಟು ಮಂದಿ ಇದ್ವೀವಿ ಮಕ್ಕಳು ಇರೋ ಮನೆ... ಐವತ್ತು ಉಂಡಿ, ಐವತ್ತು ಚಕ್ಕಲಿ ಮಾಡಿ ಬಿಡ್ತೀವಿ. ಸಾಮಾನು ತರಿಸಿದ್ರೆ ಕೊಟ್ಬಿಡಿ. ಇಂದೇ ಪ್ರಾರಂಭ ಮಾಡೋಣ... ಜಾನಕಿ ಸಂತಸದಿಂದ ಮಗಳ ಕಡೆ ನೋಡಿದಳು. ನಿಮ್ಮ ಮಗಳು ಮಾಲಕ್ಷ್ಮಿ ಇದ್ಧಂಗ ಇದಾಳೆ.... ಮನಿಗೆ ಹೋಗಿ ಉಪ್ಪು ನೀವಾಳಿಸಿ ಬಿಡ್ರಿ.... " ಎನ್ನುತ್ತಾ ಸಕ್ಕೂ ಬಾಯಿ ಸರೋಜಳ ಕೆನ್ನೆಗಳನ್ನು ಎರಡು ಕೈಗಳಿಂದ ಸವರಿ, ತನ್ನ ಕೆನ್ನೆಗೆ ಒತ್ತಿಕೊಂಡು ನೆಟಿಗೆಯನ್ನು ಮುರಿದಳು.... ತುಂಗಾಬಾಯಿ ಇಬ್ಬರಿಗೂ ಸಕ್ಕರೆ ಬೆರೆಸಿದ ಹಾಲನ್ನು ಕುಡಿಯಲು ತಂದಿತ್ತಳು.

"ನಿಮ್ಮ ಮಗಳು, ಸೊಸೆ ಎಲ್ರೂ ಹೇಗಿದಾರೆ... ಏನಾದ್ರೂ ಹೊಸ ವಿಷಯ?.... ರಾಧಾಬಾಯಿ ಯಾವಾಗ ಬರ್ತಾಳೆ ? "

"ಗೊತ್ತಿಲ್ರೀ ... ರಾಧಾಬಾಯಿ ನಸೀಬ ಖೊಟ್ಟಿ ಅದಾವ್ರೀ... ಮಕ್ಕಳು ಆಗೂ ಸೂಚನೀ ಏನೂ ಇಲ್ರೀ... ಆಕಿ ಆರೋಗ್ಯಾನೇ ನೆಟ್ಟಗಿಲ್ರೀ... ಒಟ್ನಲ್ಲಿ ನನ ಮಗನ ಬಾಳು ಹಾಳಾತ್ರಿ... ಅವಗ ಮತ್ತೇ ಲಗ್ನ ಮಾಡೂದು ಅಂತ ಮಾಡೀನ್ರೀ...ನಮ್ಮ ತಮ್ಮನೂ ಒಪ್ಯಾನ....

"ಅಂದ್ರೇ... ನಿಮ್ಮ ಮಗ ಒಪ್ಪಿಗೆ ಕೊಟ್ಟು ಬಿಟ್ರಾ ?" ಸರೋಜ ಪ್ರಶ್ನಿಸಿದಳು.

"ಕೊಡ್ದೆ ಏನ್ಮಾಡ್ತನ್ರೀ... ಅವಗ ಹೆಣ್ಣಿನ ಸುಖ ಬೇಡಾ ಏನ್ರೀ... ಊರಿಗೆ ಬಂದಾಗೆಲ್ಲಾ ನಿರಾಸೆಯಿಂದ ವಾಪಸ್ಸು ಹೋಗ್ತಾನ್ರೀ... ಅವ ಊರಲ್ಲಿಲ್ಲ ಅಂತ ಆಕಿಯ ಕೊರಗಾಟ.... ಆಕಿ ಸರಿಯಿಲ್ಲ ಅಂತ ಇವನ ಒದ್ಯಾಟ.. ನೋಡಿ ನೋಡೀ ಬ್ಯಾಸ್ರ ಬಂದೈತ್ರೀ... ನಮಗೂ ಮೊಮ್ಮಕ್ಕಳನ್ನ ಎತ್ತಿ ಆಡಿಸ್ಬೇಕು ಅಂತ ಆಸಿ ಐತ್ರೀ.." ಸಕ್ಕೂ ಬಾಯಿ ಪಟಪಟನೆ ನುಡಿದಾಗ, ಸರೋಜ ತಾಯಿಯನ್ನು ಎಬ್ಬಿಸಿದಳು.

"ಕೂತೂ ಕೂತೂ ಸೊಂಟ ನೋಯ್ತಿದೆ. ಮನೆಗೆ ಹೋಗೋಣ. ಸ್ವಲ್ಪ ಹೊತ್ತು ಮಲಕ್ಕೋ ಬೇಕು..... "

"ನಂಗೂ ಕಾಲು ನೋಯ್ತಿದೆ. ನಾವಿನ್ನು ಬರ್ತೀವಿ ತುಂಗಮ್ಮ "

"ಒಂದ್ನಿಮಿಷ ಕುಂದರ್ರೀ ಅರಿಶಿನ ಕುಂಕುಮ ಹಚ್ತೀನಿ"ಎನ್ನುತ್ತಾ ತುಂಗಾಬಾಯಿ ಅರಿಶಿನ ಕುಂಕುಮದ ಪಂಚವಾಳವನ್ನು ತಂದಳು. ಇಬ್ಬರಿಗೂ ಕೆನ್ನೆಗಳಿಗೆ ಅರಿಶಿನ ಹಚ್ಚಿ ಹಣೆಗೆ ಕುಂಕುಮ ಇಟ್ಟು , ಎಲೆ ಅಡಿಕೆ ಹಣ್ಣನ್ನು ಇಟ್ಟು ಕೊಟ್ಟಳು. ಬರ್ತಾ ಇರವ್ವಾ... ಕೂಸೇ... ನಮಗೂ ಚಂದ ಅನ್ನಿಸ್ತದ..." ಸರೋಜನನ್ನು ಆಹ್ವಾನಿಸಿದಳು.

"ನಿಮ್ಮ ಎರಡ್ನೇ ಮಗಳ ಲಗ್ನ ನಿಂತು ಹೋಯ್ತುಂತಲ್ರೀ.. ಮತ್ತೇ ವರನ್ನ ನೋಡೀ ರೇನ್ರೀ... " ಹಿರಿಯಾಕೆ ಕೇಳಿದಳು.

"ನೋಡ್ತಾ ಇದೀವಿ... ತಕ್ಷಣಕ್ಕೆ ಎಲ್ಲಿ ಸಿಗುತ್ತೇ... ? ನಿಮ್ಮ ಎರಡನೇ ಮಗನಿಗೆ ಹೆಣ್ಣು ಗೊತ್ತಾಯ್ತೇನು?" ಜಾನಕಿ ವಿಚಾರಿಸಿದಳು.

"ಹೂಂ, ಗೊತ್ತಾಗೂ ಹಂಗದ ನಮ್ಮ ತವರು ಮನೀ ಕಡೀ ಹುಡ್ಗೀ... ಇನ್ನು ಲಗ್ನ ಪತ್ರಿಕೆ ಆಗ್ಬೇಕು. ನಮ್ಮ ರಾಧಾಬಾಯಿಗ ಆರೋಗ್ಯ ನೆಟ್ಟಗಾದ ಕೂಡ್ಲೇ ಲಗ್ನ ಇಡಿಸಿ ಬಿಡ್ತೀವಿ. ನಮ್ಮ ದತ್ತಗ ಪದೇ ಪದೇ ಸೂಟಿ ಸಿಗೂದಿಲ್ರೀ...'ಇಬ್ಬರೂ ಅಲ್ಲಿಂದ ಹೊರಟರು.

ಂ ಂ ಂ

ಸರೋಜಳ ಬಳೆ ತೋಡಿಸಿದ ಆರತಿ ಸಮಾರಂಭಕ್ಕೆ ಎಲ್ಲಾ ತಯಾರಿಯೂ ನಡೆದಿತ್ತು.... ವಠಾರದ ಹೆಂಗೆಳೆಯರನ್ನು ಆಹ್ವಾನಿಸಿದ್ದರು. ಜಾನಕಿ ತಾನೇ ಖುದ್ದಾಗಿ ಲಕ್ಷ್ಮಿ ದೇವಮ್ಮ ನನ್ನು ಆಹ್ವಾನಿಸಿದ್ದಳು. ಗೋಪಾಲಯ್ಯ ಹೆಂಡತಿಯನ್ನು ಕೇಳಿದ ಲಕ್ಷ್ಮೀ ಒಂದಿಷ್ಟು ಹಣ್ಣು ಹೂವು ಎಲೆ ಅಡಿಕೆ ತರ್ಲ್ಲಾ!.... ಹಸಿರು ರವಿಕೆ ಖಣ ಮನೇಲೇ ಇರಬಹುದು ಅಲ್ವಾ ? "

"ನಂಗೆ ಹೋಗೋಕೇ ಇಷ್ಟವಿಲ್ಲ... ಅದೆಲ್ಲಾ ಏನೂ ಬೇಡ."

"ಯಾಕೆ ಏನಾಯ್ತು!ಯಾರಾದ್ರೂ ಏನಾದ್ರೂ ಅಂದ್ರೇನು "

"ಯಾರೂ ಎದುರಿಗೆ ಏನೂ ಅನ್ನಲ್ಲ ಹೋಗ್ಲಿ ಬಿಡಿ. ನಿಮಗೆ ಅದೆಲ್ಲ ಅರ್ಥವಾಗಿಲ್ಲ...."

'ಅರ್ಥ ಆಗದೇ ಏನು? ರಾಮರಾಯರ ಪತ್ನಿ ಅಂಥೋರಲ್ಲ ಕಷ್ಟ , ಸುಖ, ದುಃಖ ದುಮ್ಮಾನ ಬಲ್ಲವರು ಅವರಿಗೇನು ಸಮಸ್ಯೆ ಇಲ್ಲವೇನು ? ಆ ಹುಡುಗಿಗೆ ಗೊತ್ತಾದ ಗಂಡು ಮದುವೆಗೆ ಮೊದಲೇ....ಹೋಗ್ಬಿಟ್ಟ ಪಾಪ."

"ಎಲ್ಲೋ ಸಿಕ್ಕಾ ಬಟ್ಟೆ ಕುಜ ದೋಷವಿರಬೇಕು.. ಶಾಂತಿ ಮಾಡಿಸಿದ್ದರೆ ಹೀಗಾಗ್ತಿರ್ಲಿಲ್ಲ..."

ಎಲ್ಲಾದಕ್ಕೂ ಶಾಂತಿ, ಅದೂ ಇದು ಅಂತ ಪರಿಹಾರವಿರುತ್ತಾ... ನೀನೇನು ವ್ರತ ಕಡೆ ಕಡಿಮೆ ಮಾಡಿದ್ಯಾ? ನನಗೆ ಎಲ್ಲಾ ನೆನಪಿನಲ್ಲಿದೆ..."

"ನೆನಪಿನಲ್ಲಿದೆ ಅಂತ, ಅವಕಾಶ ಸಿಕ್ಕಾಗೆಲ್ಲ ಹಂಗಿಸ್ಬೇಡಿ ಇನ್ನು ಮುಂದೆ ವಠಾರದ ಮನೆಗಳನ್ನ ಇಂಥಾ ಸಂಸಾರಸ್ಥರಿಗೆ ಕೊಡಲೇ ಬಾರದು. ಒಂದಲ್ಲ ಒಂದು ಸಮಾರಂಭ ಹೋಗದಿದ್ದರೆ ಆಕ್ಷೇಪಣೆ... ಹೋದರೆ ಏನೋ ಮಾತು..." ಬಿಗಿ ಮುಖ ಮಾಡಿದಳು.

"ಅದಕ್ಕೆಲ್ಲಾ ನೊಂದ್ಕೋಬೇಡ ಲಕ್ಷ್ಮಿ ನಾನೆಂದಾದ್ರೂ ಏನಾದ್ರೂ ಅಂದಿದೀನಾ?.... ಈಗ ನಮಗೆ ಮೊಮ್ಮಕ್ಕಳನ್ನು ಎತ್ತಿ ಆಡಿಸುವ ವಯಸ್ಸಾಗಿದೆ. ಚಂದ್ರು ಮದುವೆ ಬಗ್ಗೆ ಏನು ಯೋಚ್ನೆ ಮಾಡಿದೀಯ.?"

"ನನಗೆ ಯಾವುದಕ್ಕೂ ಮನಸ್ಸಿಲ್ಲ. ಅವಸರವೇನು?"

"ಈಗ ಸಮಯ ಸರಿಯಾಗಿದೆ. ಅವನು ಬೇರೆ ಊರಿನಲ್ಲಿ ಒಂಟಿಯಾಗಿದಾನೆ. ಅಡಿಗೆ ಬೇಯಿಸಿ ಹಾಕುಕ್ಕೆ ಯಾರಾದ್ರೂ ಬೇಡ್ವಾ ? "ಶ್ರೀಮಂತರ ಮನೆ ಕನ್ಯೆ ಬೇಕೋ!... ಕೆಲಸ ಕಾರ್ಯ ಬಲ್ಲ, ಬಡವರ ಮನೆ ಹುಡುಗಿ ಬೇಕೋ...?"

"ಅವನಿಗೆ ಮದುವೆ ಮಾಡಿ, ಸಂಭ್ರಮ ಪಡುವ ಆಸೆಯಾಗಲೀ, ಮನಸ್ಸಾಗಲೀ ನನಗಿಲ್ಲ... ಆಗೋ ಕಾಲಕ್ಕೆ ಆಗುತ್ತೆ...." ಉದಾಸೀನದಿಂದ ನುಡಿದಳು.

" ಯಾಕೆ ಹೀಗಂತೀಯಾ ಲಕ್ಷ್ಮೀ ನಮಗೂ ವಯಸ್ಸಾಯ್ತಲ್ವಾ...?"

"ಅವನ ಮದುವೆ ಆದರೂ , ಅವನ ಹೆಂಡತಿ ನಮ್ಮ ಸೇವೆ ಮಾಡ್ತಾ ಇಲ್ಲಿ ಇರುಲ್ಲ.. ಅವನ ಮದುವೆ, ಪ್ರಸ್ಥ... ಅವನ ಹೆಂಡತಿಯ ಬಯಕೆ, ಹೆರಿಗೆ ಇದನ್ನೆಲ್ಲ ನೋಡಬೇಕೆಂದು ಆಸೆ ನನಗೆ ಖಂಡಿತಾ ಇಲ್ಲ.. ಅವನೇ ನಮಗೆ ಮಗನಲ್ಲ, ಅವನ ಹೆಂಡತಿ ಸೊಸೆ ಹೇಗೆ ಆಗ್ತಾಳೆ?....ಮೊಮ್ಮಕ್ಕಳು ತಾತಾ, ಅಜ್ಜೀ ಅಂತ ಕರೆಯಲಿ ಅನ್ನುನ ಬಯಕೆ ನನಗೆ ಖಂಡಿತಾ ಇಲ್ಲ... ನಾನು ಹೀಗೇ ಬೆಳೆದೆ. ಹೀಗೆ ಇರ್ತೀನಿ, ಕಡೇವರೆಗೂ...."

"ಇದರಿಂದ ಏನು ಸಾಧಿಸಿದ ಹಾಗಗುತ್ತೆ ಲಕ್ಷ್ಮೀ ಅವನ ಮೇಲೆ ಯಾಕೆ ಇಂಥಾ ಉದಾಸೀನ ?ಅವನ ತಪ್ಪು ಏನಿದೆ ?"

"ಅದೆಲ್ಲ ನಂಗೆ ಗೊತ್ತಿಲ್ಲ ನನ್ನ ಹೃದಯ ದೊಡ್ಡದಲ್ಲ "

"ನೀನು ಹೀಗೆ ಆಡಿದ್ರೆ, ಅವನೇ ಅವನ ಸಂಗಾತಿಯನ್ನು ಹುಡುಕಿ ಕೊಳ್ತಾನೆ ಅಷ್ಟೇ..."

"ಧಾರಳವಾಗಿ ಹುಡುಕಿಕೊಳ್ಳಲಿ. ನನಗೆ ಯಾವ ಬೇಸರವೂ ಇಲ್ಲ..."

"ಹಾಗಾದ್ರೆ... ಈ ನಂಟು ಬೇಡವೇ ಬೇಡ. ಅವನಿಗೆ ಬಿಡುಗಡೆ ಕೊಟ್ಟು ಬಿಡೋಣ..."

"ಬಿಡುಗಡೆ ? ಯಾರಿಂದ ?"

" ನಮ್ಮಿಂದ ದತ್ತು ಸ್ವೀಕಾರ ಮಾಡಿಕೊಂಡಿದ್ದನ್ನ ರದ್ದು ಮಾಡಿ ಬಿಡೋಣ ಆಗ ಅವನು ಸ್ವತಂತ್ರನಾಗ್ತಾನೆ... ಆಗ ಯಾವ ಅಧಿಕಾರವೂ ನಮಗಿರುವುದಿಲ್ಲ.

ಅವನಿಗೆ ಯಾವ ಕರ್ತವ್ಯವೂ ಇರುವುದಿಲ್ಲ..."

" ಇದಕ್ಕೆ ಅವನು ಒಪ್ಪದಿದ್ದರೆ...? ಈ ಪಾಟಿ , ಆಸ್ತಿಯ ವ್ಯಾಮೋಹ ಅವನಿಗಿಲ್ಲದೇ ಇರುತ್ತಾ!ಇಲ್ಲದ ತರಲೆ ಕೆಲಸ ... ನಾವು ಕೆಟ್ಟವರಾಗ್ತೀವಿ ಅಷ್ಟೇ ನನ್ನನ್ನ ಕೆಣುಕುಕ್ಕೆ ಈ ಮಾತುಗಳನ್ನಾಡ್ತಿದೀರಿ... "

"ಇಲ್ಲ ಲಕ್ಷ್ಮೀ .... ಯೋಚಿಸಿಯೋ ಈ ಮಾತುಗಳನ್ನಾಡಿದೀನಿ. ಕೇವಲ ಈ "ದತ್ತು"ತಗೊಂಡಿರುವ ಕಾರಣದಿಂದ ಬಲವಂತದ ನೆಂಟಸ್ಥಿಕೆ ಮುಂದುವರೆಯುತ್ತಿದೆ. ಇದರಲ್ಲಿ ಅರ್ಥ ಇಲ್ಲ ; ಅಗತ್ಯವಿಲ್ಲ. ಅವನಿಗೆ ಹೇಗೆ ಬೇಕೂ ಹಾಗೆ ಅವನಿರಲಿ ಅವನನ್ನು ಈ ಬಂಧನದಿಂದ ಬಿಡಿಸಿ ಬಿಡೋಣ......"

"ನಿಮಗ್ಯಾಕೆ ಇಂಥಾ ಆಲೋಚನೆ ಬಂತು ? ... ನಿಮಗೂ ಬೇಸರ ವಾಗುವ ಹಾಗೆ ವರ್ತಿಸಿದಾನಾ ?" ಅನುಮಾನದಿಂದ ಕೇಳಿದಳು.

"ಇಲ್ಲ. ಅವನು , ನನಗೆ ತಿಳಿದಂತೆ ಹಾಗೆಂದೂ ವರ್ತಿಸಿಲ್ಲ ಆದರೆ ಮುಂದೆಯೂ ಹೀಗೇ ಇರ್ತಾನೆ ಅಂತ ಹೇಗೆ ಹೇಳೋದು. ಅದಕ್ಕೇ ...."

"ಇದಕ್ಕೆ ಅವನು ಒಪ್ಪದಿದ್ದರೇ... ?"

'ಅವನಿಗೂ ಅರ್ಥವಾಗುತ್ತೆ ಲಕ್ಷ್ಮಿ ಅವನು ನಮ್ಮೊಂದಿಗೆ ಬೆಳೆಯಲಿಲ್ಲ. ಬೆರೆಯಲಿಲ್ಲ... ಅವನ ಸ್ವಂತ ತಂದೆ ತಾಯಿಗಳ ಮೇಲೆ ಅವನಿಗೆ ಕೋಪ ವಿದೆ. ಆದ್ದರಿಂದ ನಮ್ಮ ಮೇಲೆ ಪ್ರೀತಿ ವಿಶ್ವಾಸ ಬರಲು ಹೇಗೆ ಸಾಧ್ಯ ?... ಅವನ ಪಾಡಿಗೆ ಅವನು ಇರಲಿ....

" ಈ ಮಾತನ್ನು ಎತ್ತಿದವರು ನೀವು ಮುಂದೆ ನನ್ನನ್ನ ದೊಷಿಸಬೇಡಿ."

"ಇಲ್ಲ ಯಾರು ನಿನ್ನನ್ನ ದೂಷಿಸುಲ್ಲ ಚಂದ್ರು ಕೂಡಾ ದೂಷಿಸಿಲಿಲ್ಲ'

"ಏನು ಬೇಕಾದ್ರೂ ಮಾಡ್ಕೊಳ್ಳಿ ನನ್ನನ್ನ ಈ ಸುದ್ದಿಗೆ ಎಳೆಯಲೇ ಬೇಡಿ ... ಆದರೆ ಈ ಆಸ್ತಿಯ ಒಂದು ತುಣುಕನ್ನು ಅವನಿಗೆ ಕೊಡುವುದಿಲ್ಲ....'

"ಆಸ್ತಿ !ಆಸ್ತಿ!!ನಿನಗೆ ಈ ಆಸ್ತಿಯದೊಂದೇ ಚಿಂತೆ. ಇದಿಲ್ಲದೇ ಇದ್ದಿದ್ದರೆ. ನಾನೂ ಸ್ವತಂತ್ರನಾಗಿ ಆರಾಮವಾಗಿರಬಹುದಾಗಿತ್ತು ಅಂತಂದುಕೊಂಡ. ಎದುರಿಗೆ ಹೇಳಲು ಬಾಯಿ ತಡೆಯಿತು. ಆದರೆ ಅವಳ ಮನಸ್ಸಿನಲ್ಲೇನಿದೆ ಅಂತ ತಿಳಿಯಿತು. ತಾನು ಯೋಚಿಸಿದ್ದು ತಪ್ಪು ಅಂತ ಅನ್ನಿಸಿದರೂ. ಇದರಿಂದ ಚಂದ್ರುವಿಗೆ ಒಳ್ಳೆಯ ದಾಗುವುದಾದರೆ ಆಗಲಿ, ಅವನು ನೆಮ್ಮದಿಯಿಂದ ಇರುವಂತಾಗಲೀ ಅಂತಂದು ಕೊಂಡ, ಅವನು ಪಂಕಜಳನ್ನು ಇಷ್ಟಪಟ್ಟಿದ್ದಾನೆ. ಅವನು ಅವಳನ್ನು ಮದುವೆ ಯಾಗುವುದು ತಪ್ಪು ಅಂತ ನನಗೆ ಅನ್ನಿಸುತ್ತಿಲ್ಲ. ಅದು ಅವನ ಆಯ್ಕೆ ... ಆದರೆ ಆ ಆಯ್ಕೆಯನ್ನು ಲಕ್ಷ್ಮಿ ಖಂಡಿತಾ ಸ್ವೀಕರಿಸುವುದಿಲ್ಲ. ಈ ಬಾಂಧವ್ಯದಿಂದ ಅವನಿಗೆ ಬಿಡುಗಡೆಯನ್ನು ಕೊಟ್ಟು ಬಿಟ್ಟರೆ ಲಕ್ಷ್ಮಿಗೆ ಅವನ ಮೇಲೆ ಯಾವ ಹಕ್ಕು ಇರುವುದಿಲ್ಲ... ಅದೇ ಸರಿ

ಲಾಯರ್‌ನ್ನು ಕಂಡು ಇದಕ್ಕೆ ವ್ಯವಸ್ಥೆಯನ್ನು ಮಾಡಬೇಕೆಂದುಕೊಂಡ ಸ್ವಲ್ಪ ಮಟ್ಟಿಗೆ ತೃಪ್ತಿ ಗೊಂಡಿದ್ದ. ತಾನು ಗಂಡನಾಗಿ ಕರ್ತವ್ಯವನ್ನು ನಿಭಾಯಿಸುವುದರಲ್ಲಿ ಯಾವ ಲೋಪವನ್ನಾ ಮಾಡಿರಲಿಲ್ಲ. ಇವಳು ಚಂದ್ರುವನ್ನು ಸ್ವಂತ ಮಗನಂತೆ ಅಂತ ಭಾವಿಸಿದ್ದರೆ , ತಾನೆಂದೂ ವಿರೋಧಿಸುತ್ತಿರಲಿಲ್ಲ.. ಆದರೆ ಮಮತೆಯ ಭಾವನೆಯೇ ಇಲ್ಲದವಳ ಮಗನಾಗಿ ಅವನು ಮುಂದುವರೆಯಲಿ ಎನ್ನುವ ಸ್ವಾರ್ಥ ನನಗಿಲ್ಲ. ಆದಷ್ಟು ಬೇಗ ಚಂದ್ರು ವಿನೊಡನೆ ಮಾತನಾಡಿ, ಅವನಿಗೆ ಅರ್ಥವಾಗುವಂತೆ ವಿವರಿಸಬೇಕು. ತನಗೆ ದ್ರೋಹ ಮಾಡಿದರು ಅಂತ ಅವನು ಭಾವಿಸಬಾರದು... ನಿಶ್ಚಿಂತನಾಗಿರಬೇಕು. ಅದೇ ನನ್ನ ಆಸೆ ... ಅವನದಲ್ಲದ ತಪ್ಪಿಗೆ , ಯಾರೋ ಮಾಡಿದ ತಪ್ಪಿಗೆ, ಅವನೇಕೆ ಶಿಕ್ಷೆಯನ್ನು ಅನುಭವಿಸಬೇಕು! "

○ ○ ○

ಚಂದ್ರು ನಿರುತ್ಸಾಹದಿಂದ ಇರುವುದನ್ನು ಗೋಪಾಲಯ್ಯ ಗಮನಿಸಿದ ಅವನಾಗಿಯೇ ಏನನ್ನು ಹೇಳಲಾರ ಎಂದು ಕೊಂಡು, ಸಮಯಕಾದು, ಕೇಳಿದ ಇಂಟರ್‌ವ್ಯು ಹೇಗಾಯ್ತೋ? ಚಂದ್ರೂ ? ಕೆಲಸ ಸಿಗುವ ಹಾಗಿದೆ ತಾನೆ ?"

ಚಂದ್ರು ಅವನ ಕಳಕಳಿಯನ್ನು ಗಮನಿಸಿದ, "ಇಲ್ಲ ಅಪ್ಪಾ... ಬಹುಶಃ ಕೆಲಸ ಸಿಗುಲ್ಲ. ತುಂಬಾ ಜನ ಅಭ್ಯರ್ಥಿಗಳಿದ್ದರು. ಹಾಗೇ , ಏನೇನೋ ಪ್ರಶ್ನೆಗಳನ್ನು ಕೇಳಿದರು. ಕೆಲವಂತೂ, ನನ್ನ ಕೆಲಸಕ್ಕೆ, ನನ್ನ ಆರ್ಹತೆಗೆ ಸಂಬಂಧಿಸಿರಲೇ ಇಲ್ಲ ..."

"ಅದು ಹಾಗೇನೇ. ಇದಲ್ಲದಿದ್ದರೆ ಇನ್ನೊಂದು. ಸಧ್ಯಕ್ಕೆ ಕೈಯಲ್ಲಿ ಕೆಲಸ, ಸಂಪಾದನೆ ಇದೆಯಲ್ಲ ಚಿಂತೆಯಾಕೆ ಮಾಡ್ತೀಯ? ನಾನು ನನ್ನ ಪರಿಚಯದ ವಕೀಲರೋಬ್ಬರನ್ನು ನೋಡುಕ್ಕೆ ಹೋಗ್ತಾ ಇದೀನಿ. ನನ್ನ ಜೊತೆಗೆ ಬರ್ತೀಯಾ ?" ಕೇಳಿದ.

"ಲಾಯರ್ ... ಯಾಕಪ್ಪಾ ... ಇನ್ನೂ ಏನಾದರೂ ಖರೀದಿಸೋದು ಇದೆಯ?"

"ಇಲ್ಲ. ನೀನು ಬಂದರೆ ನಿನಗೆ ಗೊತ್ತಾಗುತ್ತೆ..." ಚಂದ್ರು ಅಶ್ಚರ್ಯಗೊಂಡಿದ್ದ ಸ್ವಲ್ಪ ಹೊತ್ತಿನಲ್ಲೇ ಇಬ್ಬರೂ ಲಾಯರ್ ಸೀತಾರಾಮಯ್ಯನ ಮನೆಯನ್ನು ಸೇರಿದರು. ಗೋಪಾಲಯ್ಯ ಚಂದ್ರುವನ್ನು ಪರಿಚಯಿಸಿಕೊಟ್ಟ ಇವನು ನಮ್ಮ ಮಗ ಚಂದ್ರಮೌಳಿ " ಚಂದ್ರು ಕೈ ಮುಗಿದು ನಮ್ಮಸ್ಕಾರ ಎಂದ. ಇಬ್ಬರೂ ಕುಳಿತರು. ಗೋಪಾಲಯ್ಯ ಚಂದ್ರು ಕೈಯನ್ನು ಅಮುಕಿ ಮಾತಿಗೆ ಪ್ರಾರಂಭಿಸಿದ.

"ಇವನು ನಮ್ಮ ದತ್ತು ಪುತ್ರ... ಸುಮಾರು ಇಪ್ಪತ್ತು ವರ್ಷಗಳ ಹಿಂದೆ ದತ್ತು ಸ್ವೀಕಾರ ಮಾಡಿದೆವು.... ಆಗ ಇವನಿಗೆ ಏಳು ವರ್ಷಗಳಾಗಿದ್ದವು. ಹಾಗಾಗಿ ಇವನು ನಮ್ಮೊಂದಿಗೆ ಬೆಳೆಯಲಿಲ್ಲ, ಹೊಂದಿಕೊಳ್ಳಲಿಲ್ಲ. ನನ್ನ ಅಣ್ಣ ತಮ್ಮಂದಿರ ಮನೆಯಲ್ಲಿ ಅವರ ಮಕ್ಕಳಲ್ಲಿ ಒಬ್ಬನಂತೆ ಬೆಳೆದ ವಿದ್ಯಾಭ್ಯಾಸವೂ ಅಲ್ಲೇ ನಡೆಯಿತು.

"ಈಗ ಸಮಸ್ಯೆ ಏನು ?.... "ಲಾಯರ್ರು ಪ್ರಶ್ನಿಸಿದ

"ಈಗ ಈ ದತ್ತು ಸ್ವೀಕಾರವನ್ನು ರದ್ದು ಪಡಿಸಲು ಇಚ್ಛಿಸುತ್ತೇವೆ. ಚಂದ್ರು ಅಚ್ಚರಿಗೊಂಡು ಮಿಕಿ ಮಿಕಿ ನೋಡಿದ. ಲಾಯರ್ರು ಇಬ್ಬರನ್ನು ಮತ್ತೇ ಮತ್ತೇ ನೋಡಿದ. ನಿಮಗೆ ನನ್ನ ನಿರ್ಧಾರದಿಂದ ಅಚ್ಚರಿ ಮೂಡಿರಬಹುದು ನಾನು ಇವನಿಗೆ ಈ ಬಂಧನದಿಂದ ಬಿಡುಗಡೆ ಕೊಡಬೇಕೆಂದು ಕೊಂಡಿದ್ದೇವೆ...."

"ಯಾಕೆ ರಾಯರೆ ?..ಇಷ್ಟು ವರ್ಷಗಳ ನಂತರ ಹೀಗೇಕೆ ಅನ್ನಿಸಿತು ? ಅದಕ್ಕೆ ಪ್ರಬಲವಾದ ಕಾರಣ ಏನಿರಬಹುದು ? ಈ ಹುಡುಗನಿಗೆ ಏನನ್ನಿಸಬಹುದು ?... ಮತ್ತೆ ಮುಂದೆ ? ಇವನ ಭವಿಷ್ಯ ?"

"ಓದಿದ್ದಾನೆ ಕೆಲಸದಲ್ಲಿದಾನೆ... ತಾನೇ ಮೆಚ್ಚಿದ ಹುಡುಗಿಯನ್ನು ಮದುವೆಯಾಗಿ ಸುಖವಾಗಿರಲಿ ... ಈ ಬಂಧನ ಬೇಡ... ನನ್ನನ್ನ ತಪ್ಪು ತಿಳ್ಕೋಬೇಡ ಚಂದ್ರೂ ಇದು ನಿನ್ನ ಒಳಿತಿಗಾಗಿಯೇ...." ಗಂಟಲು ಕಟ್ಟಿತ್ತು.

"ಇದಕ್ಕೆ ಲಾಯರ್ರು ಕಾನೂನು ಏಕಪ್ಪಾ ! ನೀವು ಒಂದ್ಮಾತು ಹೇಳಿದ್ದರೂ, ನಾನು ಈ ನಿರ್ಧಾರಕ್ಕೆ ಒಪ್ಪಿಕೊಂಡಿರುತ್ತಿದ್ದೆ " ಅವನ ಮುಖ ಕೆಂಪಾಗಿತ್ತು.

"ಹಾಗಲ್ಲ ಚಂದ್ರೂ ಕೆಲವು ನಿಯಮಗಳಿರುತ್ತವೆ. ಅದು ಬರೀ ನನ್ನ ನಿನ್ನ ವಿಚಾರವಲ್ಲ.... ಮುಂದೆ ಸಮಸ್ಯೆಗಳು ಉದ್ಭವಿಸಬಾರದು...."

"ನಾನು ಯಾವ ಸಮಸ್ಯೆಯನ್ನು ಉದ್ಭವ ಉಂಟು ಮಾಡುಲ್ಲ. ಬರೆದು ಕೊಡ್ತೀನಿ."

"ಇದನ್ನು ನೀವು ನೀವೇ ಬಗೆ ಹರಿಸಿಕೊಳ್ಳ ಬಹುದಾಗಿತ್ತಲ್ಲ ರಾಯರೇ ಮಧ್ಯದಲ್ಲಿ ನಾನ್ಯಾಕೆ ?" ಲಾಯರ್ರು ನಗೆ ಮಿಶ್ರಿತ ಧ್ವನಿಯಲ್ಲಿ ಕೇಳಿದ.

"ಇವನು ಮದುವೆಯಾಗ ಬೇಕೆಂದಿರುವ ಹುಡುಗಿ ವಿಧವೆ... ಮದುವೆಗೆ ಮೊದಲು ಈ ವಿಷಯ ಇತ್ಯರ್ಥವಾಗಿ ಬಿಡಬೇಕು. ಅವಳ ಮನೆಯವರಿಗೂ ಈ ವಿಷಯ ತಿಳಿಯಬೇಕು. ಇಲ್ಲದಿದ್ದರೆ ಮುಂದೆ ಸಮಸ್ಯೆ ಉಂಟಾಗಬಹುದು. "ಯಾಕೆಂದರೆ ... ನನ್ನ ಹೆಂಡತಿಯ ಯಾವ ಆಸ್ತಿ ಪಾಸ್ತಿ ಇವನು ಹಕ್ಕುದಾರನಾಗುವುದು ನನಗೆ ಇಷ್ಟವಿಲ್ಲ.....'

"ಯಾಕೆ ರಾಯರೇ.... ನಿಮ್ಮ ಹೆಂಡತಿಯ ಅಭಿಪ್ರಾಯವೂ ಇಲ್ಲಿ ಮುಖ್ಯ ವಾಗುತ್ತದೆ. ಅವರಿಗೆ ನಿಮ್ಮ ಈ ನಿರ್ಧಾರ ಗೊತ್ತು ತಾನೇ ?"

"ಬಹುಶಃ ಈ ನಿರ್ಧಾರ ಅವರದೇ ಇರಬಹುದು... ಹೌದೇನಪ್ಪಾ! ?"ಚಂದ್ರು ತಟ್ಟನೇ ಕೇಳಿದ, ಗೋಪಾಲಯ್ಯ ಅಲ್ಲ ಎನ್ನುವಂತೆ ತಲೆಯಾಡಿಸಿದ.

"ನಾನು ಮನೆ ಅಳಿಯನಾಗಿ ಬಂದು ಸೇರಿಕೊಂಡೆ... ನಾನು ಹೇಗೆ ಬದುಕಿದೆ ಅನ್ನುವುದು ನನಗೆ ಗೊತ್ತು. ಸ್ವಾತಂತ್ರ್ಯವಿಲ್ಲದ ಬದುಕಿಗೆ ಅರ್ಥವಿಲ್ಲ. ಸಮಸ್ತ

ಆಸ್ತಿಯೂ ನನ್ನಾಕೆಯದು .... ಒಂದು ತರಹ ಹಂಗಿನ ಬದುಕನ್ನು ಬದುಕಿದೆ. ಈ ಹಂಗು ಚಂದ್ರೂಗೆ ಬೇಡ... ಒಂದು ವೇಳೆ ಇವನು ನನ್ನ ಸ್ವಂತ ಮಗನಾಗಿದ್ದರೂ ಇದೇ ಬುದ್ಧಿವಾದವನ್ನು ಹೇಳುತ್ತಿದ್ದೆನೋ ಏನೋ.... ಇವನು ಮುಂದೆ, ಇವನ ಪತ್ನಿಯ ಎದುರಿಗೆ ಹೀನಾಯದ ಮಾತುಗಳನ್ನು ಕೇಳುವುದು ನನಗೆ ಇಷ್ಟವಿಲ್ಲ... ಇವನ ಪಾಡಿಗೆ ಇವನು ನಿರ್ಭಯನಾಗಿ ನಿರಾತಂಕದಿಂದ ಬಾಳಲಿ ಅಂತ ನನ್ನ ಆಸೆ..." ಗೋಪಾಲಯ್ಯ ಕಣ್ಣುಗಳ ತುದಿಗಳನ್ನು ಶಲ್ಯದಿಂದ ಒರೆಸಿಕೊಂಡ.

"ಅಪ್ಪಾ ನಿಮ್ಮ ಮನಸ್ಸಲ್ಲಿ ಈ ಅನಿಸಿಕೆಗಳು ಇವೆ ಅಂತ ನನಗೆ ಗೊತ್ತಿರಲೇ ಇಲ್ಲ. ನಿಮಗೂ ಬೇಸರವೆನಿಸಿದ್ದರೆ, ನೀವು ಬಿಟ್ಟು ಹೋಗಬಹುದಾಗಿತ್ತು."

"ಹಾಗೆ ಮಾಡಿದ್ದರೆ ತಪ್ಪಾಗುತ್ತಿತ್ತು. ಚಂದ್ರೂ... ನಾನು ವಚನ ಭ್ರಷ್ಟ ನಾಗುತ್ತಿದ್ದೆ. ಅವಳು ಎಷ್ಟಾಗಲೀ ಪತ್ನೀ... ನನ್ನ ಅತ್ತೇ ಮಾವ, ಇವಳನ್ನು ನನ್ನ ಕೈಗೆ ಒಪ್ಪಿಸಿದ್ದರು. ನಾನು ಅವಳ ಆಸ್ತಿಯ ಆಸೆಗಾಗಿ ಮದುವೆಯಾಗಲಿಲ್ಲ.... ಆದರೂ ನನ್ನ ಧರ್ಮ ಇವಳೊಂದಿಗೆ ಎನ್ನುವ ಕಟ್ಟುಪಾಡಿಗೆ ನಾನು ಒಳಗಾಗಿ ಬಿಟ್ಟೆ."

"ಈಗ ನಾನು ವಚನ ಭ್ರಷ್ಟ ಎನಿಸಿಕೊಳ್ಳುವುದಿಲ್ವಾ ಅಪ್ಪಾ.... "

"ನೀನಾಗಿಯೋ ಹೋಗಿದ್ದರೆ, ವಚನ ಭ್ರಷ್ಟನಾಗುತ್ತಿದ್ದೆಯೋ ಏನೋ! ನಾವಾಗಿಯೇ ನಿನಗೆ ಬಿಡುಗಡೆ ಕೊಡುತ್ತಿದ್ದೇವೆ. ಇದರಲ್ಲಿ ನಿನ್ನ ತಪ್ಪು ಏನೂ ಇಲ್ಲ .... ನೀನು ಸುಖವಾಗಿರುವುದು ನನಗೆ ಮುಖ್ಯ....

"ಇಷ್ಟು ವರ್ಷಗಳ ನಂತರ ನಿಮಗೆ ಹೀಗೆ ಅನ್ನಿಸಿರ ಬೇಕಾದರೆ, ನಿಮ್ಮ ತುಡಿತ ಹೇಗೆ ಇದೆ ಅಂತ ಅರ್ಥವಾಗುತ್ತೆ. ನೀನೇನು ಅಂತೀರಿ ಚಂದ್ರಮೌಳಿ.?" ಲಾಯರ್‌ರು ಪ್ರಶ್ನಿಸಿದ.

"ಇದಕ್ಕೆ ನಾನೇನು ಹೇಳಲಿ ಸಾರ್... ಆದರೂ.... ನಾನು ಅಮ್ಮನ ಹತ್ತಿರ ಮಾತಾಡ್ಬೇಕು.... ಅವರಿಗೆ ನಾನು ಬೇಡವಾದರೆ.... ನನಗೆ ಈ ಬಂಧನವೂ ಬೇಡ. "ಇಬ್ಬರು ಲಾಯರ್‌ರಿಗೆ ಕೈ ಮುಗಿದು ಹೊರಬಂದರು. ಚಂದ್ರೂ ಸಿಂತ. "ಅಪ್ಪಾ.... ಇದನ್ನೆಲ್ಲ ನನಗೆ ನೇರವಾಗಿ ಹೇಳಬಹುದಾಗಿತ್ತಲ್ಲ. ನನಗೂ ಅರ್ಥವಾಗುತ್ತಿತ್ತು."

"ಬೇಸರ ಪಟ್ಕೋಬೇಡ ಚಂದ್ರೂ... ಕಾನೂನು ರೀತ್ಯಾ ಹೋದರೆ, ಯಾರೂ ಮುಂದೆ ಪ್ರಶ್ನಿಸುವುದಿಲ್ಲ... ನನಗೆ ನಿನ್ನ ಮೇಲೆ ನಂಬಿಕೆ ಇದೆ... ಆದರೆ ಮುಂದೆ ಹೇಗೆ ಅಂತ ಹೇಗೆ ಹೇಳ್ತೀಯ ? ಅದಿರಲಿ ಪಂಕಜನ್ನ ಮಾತಾಡಿಸಿದೆಯಾ?.... ಅವರ ತಂದೆ ಏನಂದ್ರು?...

"ಇಲ್ಲಪ್ಪಾ.... ನನಗೆ ಅವರ ಮನೆಗೆ ಹೋಗಲು ಬಿಡುವಾಗಲೇ ಇಲ್ಲ..."

" ಮುಂದಿನವಾರ ನಾನೂ ನಿನ್ನ ಜತೇಲಿ ಬರ್ತೀನಿ..."

"ಅಮ್ಮ ಈ ಮದುವೆಗೆ ಒಪ್ಪದಿದ್ದರೇ..."

"ಅವಳ ಒಪ್ಪಿಗೆ ಇಲ್ಲಿ ಮುಖ್ಯ ಅಲ್ಲ ಚಂದ್ರೂ.... ನಿನ್ನ ನಿರ್ಧಾರ ಮುಖ್ಯ ಲಕ್ಷ್ಮಿ ಕೆಟ್ಟವಳೆಂದು ದೂಷಿಸಲಾರೆ. ಆದರೆ ಅವಳಿಗೆ ಯಾವುದೂ ಸರಿ ಹೋಗುವುದಿಲ್ಲ ಎನ್ನುವುದು ನನಗೂ ನಿನಗೂ ತಿಳಿದಿದೆ.... ಮುಂದೆ ನಿನ್ನ ಪತ್ನಿಗೆ ಯಾವ ಹಣೇ... ಬರಹ? ಅದಕ್ಕೇ ನಾನು ಈ ತೀರ್ಮಾನ ತಗೊಂಡಿದ್ದು... ನಾನು ಮಾಡಿದ್ದು ತಪ್ಪಾ?....

"ಇಲ್ಲಪ್ಪಾ... ನೀವು ಮಾಡಿದ್ದು ಸರಿಯಾಗಿಯೇ ಇದೆ. ಈ ಮನೇಲಿ ನೀವು ನನಗೆ ತಂದೆಯ ಪ್ರೀತಿಯನ್ನು ಸ್ನೇಹವನ್ನು ತೋರಿಸಿದ್ದೀರಿ. ನೀವು ಇಲ್ಲದೇ ಇದ್ದಿದ್ದರೆ ನಾನು ಎಂದೋ ಹೊರಟು ಹೋಗಿರುತ್ತಿದ್ದೆ.... ನಿಮ್ಮನ್ನು ನೋಯಿಸುವ ಇಚ್ಛೆ ನನಗಿರಲಿಲ್ಲ." ಇಬ್ಬರೂ ಮನೆ ಸೇರಿದರು.... ಇಬ್ಬರೂ ಮೌನವಾಗಿದ್ದರೂ ಲಕ್ಷ್ಮಿ ದೇವಮ್ಮ ಏನನ್ನೂ ಕೇಳಲಿಲ್ಲ.

○ ○ ○

"ಲಕ್ಷ್ಮೀ, ನಾನು ಎರಡು ದಿನಗಳ ಮಟ್ಟಿಗೆ ಮೈಸೂರಿಗೆ ಹೋಗಿ ಬಂದುಬಿಡ್ತೀನಿ. ಚಂದ್ರು ಬಂದು ಹೋಗಿ ಮಾಡ್ತಾನೆ ಅವನಿಗೆ ಹೇಳ್ತೀನಿ..."

"ಏನೂ ಬೇಡ ನಾನೊಬ್ಬಳೇ ಇರಬಲ್ಲೆ... ರಾತ್ರಿಯ ಹೊತ್ತಿಗೆ ರಾಮರಾಯರ ಹೆಣ್ಣು ಮಕ್ಕಳು ಯಾರಾದ್ರೂ ಬಂದು ಮಲಗಲಿ. ಹೇಳ್ಬಿಟ್ಟು ಹೋಗಿ..." ರಾಮರಾಯನ ಮನೆಗೆ ಗೋಪಾಲಯ್ಯ ಬಂದ. ಮುಂಬಾಗಿಲ ಬಳಿ, ಎಳೆ ಬಿಸಿಲಿಗೆ ಮೈ ಒಡ್ಡಿ ತಲೆಗೂದಲನ್ನು ಒಣಗಿಸಿಕೊಳ್ಳುತ್ತಿದ್ದ ಸರೋಜ ಕಣ್ಣಿಗೆ ಬಿದ್ದಳು. ಅವಳನ್ನು ಕಂಡು ಮನಸ್ಸು ಆಹ್ಲಾದಗೊಂಡಿತು. ತಾಯಿಯಾಗುವ ಸೊಬಗು ! ಎಂಥಾ ಲಾವಣ್ಯ!! ಈ ಭಾಗ್ಯ ಲಕ್ಷ್ಮಿಗೆ ಇಲ್ಲವಾಯಿತು. ಹೋಗಲಿ ಅಂದರೆ, ದತ್ತು ತೆಗೆದುಕೊಂಡ ಮಗನಿಗೂ, ಕಡೇ ಪಕ್ಷ ಸಾಕು ತಾಯಿಯಾಗುವ ಆಕಾಂಕ್ಷೆ ಕೂಡ ಇರಲಿಲ್ಲ.... ಈ ತರಹದ ಸ್ವಭಾವದವಳು ಮುಂದೆ ಚಂದ್ರೂಗೆ ಹುಟ್ಟುವ ಮಕ್ಕಳನ್ನು ಆದರಿಸುವ ದೊಡ್ಡ ಗುಣ ಇರುತ್ತದೋ ಇಲ್ಲವೋ.... ಈ ವಿಷಯದಲ್ಲಿ ನಾನು ನಿರ್ಭಾಗ್ಯ ಎಂದುಕೊಂಡು ಹಾಗೇ ನಿಂತಿದ್ದ.... ಅವನು ದಿಟ್ಟಿಸಿ ನೋಡುತ್ತಿದ್ದುದನ್ನು ಕಂಡು, ಸರೋಜ ಮುಜುಗರಗೊಂಡು ಒಳಗೆ ಹೊರಟು ಹೋಗಿದ್ದಳು. ರಾಮರಾಯನೇ ಆಚೆಗೆ ಬಂದು ಪ್ರಶ್ನಿಸಿದ.

"ಏನಾದ್ರೂ ಬೇಕಾಗಿತ್ತಾ ಗೋಪಾಲಯ್ಯನೋರೆ..."

"ಎರಡು ದಿನಗಳ ಮಟ್ಟಿಗೆ, ಮೈಸೂರಿಗೆ ಹೋಗಿ ಬರ್ತೀನಿ. ರಾತ್ರಿಯ ಹೊತ್ತು ನಿಮ್ಮ ಹೆಣ್ಣು ಮಕ್ಕಳು ಯಾರಾದ್ರೂ ಹೋಗಿ ನನ್ನ ಶ್ರೀಮತಿಯ ಜತೆಗೆ ಮಲಗಲಿ..."

"ಇದಕ್ಕೆ ಅನುಮಾನ ಯಾಕೆ ರಾಯರೇ... ಮಂಗಳನನ್ನೋ ವನಜನನ್ನೋ ಕಳಿಸ್ತೀನಿ ಬಿಡಿ.... ಒಳಗೆ ಬನ್ನಿ ತಿಂಡಿ ಕಾಫಿ ತಗೊಂಡು ಹೋಗೋರಂತೆ."

"ಏನು ವಿಶೇಷ ಇವತ್ತು...? ಏನೋ ಹೊಸಾ ರೀತಿ ಅನ್ನಿಸ್ತಿದೆ." ಒಳಗೆ ಬಂದ ಗೋಪಾಲಯ್ಯ ಕೇಳಿದ.

"ಸಾಯಂಕಾಲಕ್ಕೆ ನಮ್ಮ ಹಿರೀ ಮಗಳಿಗೆ ಆರತಿ ಶಾಸ್ತ್ರ ಇಟ್ಕೊಂಡಿದಾರೆ. ಅದೇ ಸಡಗರ ಸಂಭ್ರಮ ಅಷ್ಟೇ."

"ಅಷ್ಟೇ ಅಂತೀರಲ್ಲ ರಾಯರೇ... ಅದಕ್ಕೂ ಲಭ್ಯ ಇರ್ಬೇಕು..." ಅಷ್ಟರಲ್ಲಿ ಶಂಕರ ತಿಂಡಿಯ ತಟ್ಟೆಗಳನ್ನು ತಂದಿತ್ತ... ನಿಮ್ಮ ಮಕ್ಕಳು ಭಾಳ ಸಂಭಾವಿತರು ರಾಯರೇ. ಹಾಗೇ ಚುರುಕು... ಏನೇ ಅನ್ನಿ ಮನೆ ತುಂಬಾ ಮಕ್ಕಳಿರ್ಬೇಕು. ಆಗಲೇ ಮನೆಗೆ ಕಳೆ... ನಮ್ಮ ಹುಡ್ಗೀ ಮಂಗಳಂಗೆ ವರ ಗೊತ್ತಾಯ್ತೇನು?...." ಎಂದುಕೇಳಿ ತಿಂಡಿಯ ತಟ್ಟೆಯನ್ನು ಕೈಗೆತ್ತಿಕೊಂಡ.

"ಇಲ್ಲ, ನಾನೊಂದು ಮಾತು ನಿಮ್ಮನ್ನು ಕೇಳ್ಬೇಕಾಗಿತ್ತು... ನೀವು ತಪ್ಪು ತಿಳಿದ್ಕೋಬಾರ್ದು." ಗೋಪಾಲಯ್ಯನ ಬಾಯಿಯಲ್ಲಿ ತಿಂಡಿ ತುಂಬಿಕೊಂಡಿದ್ದರಿಂದ ಆತ ಮಾತನ್ನಾಡಲಿಲ್ಲ. ಸುಮ್ಮನೇ ನೋಡಿದ. ರಾಮರಾಯನೇ ಮುಂದುವರೆಸಿದ. "ನೀವೆಲ್ಲರೂ ನಮ್ಮ ಮಂಗಳನ್ನ ನೋಡಿಯೇ ಇದೀರಿ... ನಿಮಗೆ ಒಪ್ಪಿಗೆ ಆದರೆ..." ಗೋಪಾಲಯ್ಯನ ಕೈ ಬಾಯಿ ಹಾಗೇ ನಿಂತವು.... ನಮ್ಮ ನಿಮ್ಮ ಪಂಗಡಗಳಲ್ಲಿ ಸ್ವಲ್ಪ ವ್ಯತ್ಯಾಸ ಇರಬಹುದು. ಆದರೆ ಮಂಗಳ ನಿಮ್ಮ ಮನೆಗೆ ತಕ್ಕ ಸೊಸೆಯಾಗ್ತಾಳೆ... ಆ ನಂಬಿ ಕೆ ನನಗಿದೆ. ನೀವು ಹೂಂ ಎಂದರೆ, ನಾನು ನನ್ನ ಪತ್ನಿ ನಿಮ್ಮ ಮನೆಗೆ ಬಂದು ನಿಮ್ಮ ಶ್ರೀಮತಿಯ ಹತ್ತಿರ ಮಾತಾಡ್ತೀವಿ..."

ಗೋಪಾಲಯ್ಯ ತುಂಬಿಕೊಂಡಿದ್ದನ್ನು ನುಂಗಿ, ಬಾಯನ್ನು ಖಾಲಿ ಮಾಡಿಕೊಂಡ. "ಬೇಡ ರಾಮರಾಯರೇ... ನಿಮ್ಮ ಹತ್ತಿರ ಮುಚ್ಚುಮರೆ ಯಾಕೆ ? ಚಂದ್ರು ಪಂಕಜ ಟೀಚರ್‌ನ ಮದುವೆಯಾಗಬೇಕು ಅಂತ ನಿರ್ಧರಿಸಿದ್ದಾನೆ. ಅದಕ್ಕೆ ನನ್ನ ಬೆಂಬಲವೂ ಇದೆ.... ನಿಮಗೂ ಗೊತ್ತು, ಚಂದ್ರು ನಮ್ಮ ಸ್ವಂತ ಮಗನಲ್ಲ."

"ನಿಮ್ಮ ಶ್ರೀಮತಿಯವರಿಗೆ ಒಪ್ಪಿಗೆ ಇದೆಯೇ ?"

"ಒಪ್ಪುವ ಸಂಭವ ಬಹಳ ಕಡಿಮೆ.... ನೋಡೋಣ..."

"ಈ ಕಿತ್ತಾಟ ಎಲ್ಲಾ ಯಾಕೆ ಸ್ವಾಮೀ... ಆ ಹುಡ್ಗೀನೇ ಆಗ್ಬೇಕು ಅಂತ ಯಾಕೆ ಹಠ?"

"ಹಠ ಅಲ್ಲ ; ನಿರ್ಧಾರ... ಈ ನಿರ್ಧಾರದಿಂದ ಆ ಹುಡುಗಿಗೂ ಬಾಳು ಸಿಕ್ಕಂತಾಗುತ್ತದೆ. ಚಂದ್ರುಗೆ ಅವನ ಆಸೆ ನೆರವೇರುತ್ತದೆ... ಒಂದು ಒಳ್ಳೆಯ ಕಾರ್ಯ ಮಾಡಲು ಮುಂದಾಗಿರುವಾಗ ಅಡ್ಡಿಪಡಿಸುವುದೇಕೆ?....

"ಅದೇನೋ ಸರಿ... ಆದರೂ....

"ಎಷ್ಟೇ ಅಡ್ಡಿ ಬಂದರೂ ಸರಿ... ಅವನ ನಿರ್ಧಾರ ಬದಲಾಗುವುದಿಲ್ಲ."

ಹೆಂಡತಿಗೆ ಅಂಜುವ, ಆಕೆ ಹೇಳಿದಂತೆ ಕೇಳುವ ಗೋಪಾಲಯ್ಯ ಇವನೇನಾ ಎನ್ನುವಂತೆ ಅನ್ನಿಸಿತ್ತು... ಚಂದ್ರು ನಿರ್ಧಾರ, ತಪ್ಪೋ ಸರಿಯೋ ಎಂದು ಯೋಚಿಸುವುದರಲ್ಲಿ ಅರ್ಥವಿರಲಿಲ್ಲ. ಆದರೆ ಮಂಗಳನಿಗೆ ಈ ಸಂಬಂಧ ಕೂಡಿ ಬರುವ ಅವಕಾಶ ಇಲ್ಲ. ಈ ಪಾಟಿ ಆಸ್ತಿ ಒಡೆತನ ಟೀಚರ್ ಹಣೆಯಲ್ಲಿ ಬರೆದಿದೆ.... ಹೀಗೆ ಇರಬಹುದು ಅಂತ ಅನುಮಾನ ಸುಳಿದಿದ್ದರೂ, ಈ ಮಾತನ್ನು ಖರ್ಚು ಮಾಡುವ ಗೋಜು ಇರಲಿಲ್ಲ. ಯಾವ ಹುತ್ತದಲ್ಲಿ ಯಾವ ಹಾವೋ?.. ಎಂದುಕೊಂಡರು...

ಗೋಪಾಲಯ್ಯ ಎದ್ದು ಹೊರಟು ಹೋಗಿದ್ದ... ಜಾನಕಿ ನಿಧಾನವಾಗಿ ಎದ್ದು ಬಂದಳು..."ನೋಡಿದ್ರಾ ಎಂಥಾ ಖಿಲಾಡಿ ಹೆಂಗಸು! ಎಂಥಾ ಸಿರಿವಂತನನ್ನು ತನ್ನ ಬುಟ್ಟಿಗೆ ಹಾಕ್ಕೊಂಡಳು... ಆಕೆಯ ಅದೃಷ್ಟ ಖುಲಾಯಿಸಿತು..." ವಟಗುಟ್ಟಿದಳು.

"ನೀನು ಸುಮ್ನಿರ್ತೀಯ ? ಅದೃಷ್ಟ ಖುಲಾಯಿಸಿದೆಯೋ ? ಅಪಾಯ ಕಾದಿದೆಯೋ ಯಾರಿಗೆ ಗೊತ್ತು?...."

"ಅಣ್ಣಾ... ಇದರಲ್ಲಿ ಟೀಚರ್ ತಪ್ಪು ಏನೂ ಇಲ್ಲ... ಚಂದ್ರುದೇ ನಿರ್ಧಾರ" ಸರೋಜ ಎಂದಳು.

"ನಿಂಗ್ಹೇಗೆ ಗೊತ್ತು?.... ನೀನು ಇಲ್ಲಿ ಇರಲೇ ಇಲ್ಲವಲ್ಲ."

"ಪಂಕಜ ಟೀಚರ್ ಮಂಗಳಂಗೆ ಪತ್ರ ಬರೆದಿದ್ರು. ಅದನ್ನು ನಾನೂ ಓದಿದೆ...."

"ನಮಗೊಂದು ಮಾತು ತಿಳಿಸೋದು ಅಲ್ವಾ ಸರೋಜ....? ಅಕ್ಕತಂಗೀರು ಇಬ್ರೂ ಸರಿಯಾಗಿದೀರಿ.... ಗುಟ್ಯಾಕೆ ಮಾಡ್ಬೇಕಾಗಿತ್ತು?"

"ಸುಮ್ನೆ ಎಲ್ರಿಗೂ ತಿಳಿಸಿ ಹಗರಣ ಮಾಡೋದು ಯಾಕೇಂತ ಸುಮ್ಮನಾದೆವು"

"ವಿಷಯ ಹೀಗಿದೆ ಅಂತ ಮೊದ್ಲೇ ಗೊತ್ತಾಗಿದ್ದಿದ್ರೆ.... ಮಾತಾಡ್ತಾನೆ ಇರ್ಲಿಲ್ಲ..."

"ಹೋಗ್ಲೀ ಬಿಡಿ ಅಣ್ಣಾ... ಏನಾಯ್ತು ಈಗ ?... ಯಾವ ದೊಡ್ಡ ವಿಷಯ?..

"ಚಿಕ್ಕೋರು ನಿಮಗೆ ದೊಡ್ಡ ವಿಷಯ ಅಂತ ಅನ್ನಿಸದೇ ಇರಬಹುದು. ನೋಡ್ತಿರಿ. ಏನೇನು ರಾಮಾಯಣ ಆಗುತ್ತೋ?' ಈ ಸಂಭಾಷಣೆಗಳನ್ನು ಕೇಳಿಸಿಕೊಂಡ ಮಂಗಳ ಮರೆಯಲ್ಲಿ ರೋಧಿಸಿದಳು. ಯಾವ ವ್ಯಥೆ ಎಂದು ಅವಳಿಗೇ ಅರ್ಥವಾಗಿರಲಿಲ್ಲ.

"ಉಂಡೆ ಚಕ್ಕುಲಿಗಳನ್ನು ಮಕ್ಕಳ ಕಣ್ಣಿಗೆ ಕಾಣದ ಹಾಗೆ ಎತ್ತಿಡು ಮಂಗಳಾ.... ಈಗ್ಲೇ, ಹೋಗ್ತಾ ಬರ್ತಾ ತಿಂದು ಮುಗಿಸಿ ಬಿಡುತ್ವೆ..." ಮಂಗಳಾ ಉಂಡೆ ಚಕ್ಕುಲಿಗಳನ್ನು ಎಣಿಸಿ, ಡಬ್ಬಗಳಲ್ಲಿ ಹಾಕಿಟ್ಟು ಮುಚ್ಚಿ, ಬಡುವಿನ ಮೇಲಿಟ್ಟಳು. ಬಾಲುವಿನ ಕೈಗೆ ಮುರಿದ ಚಕ್ಕುಲಿಯ ತುಂಡನ್ನು ಯಾರಿಗೆ ಕಾಣದಂತೆ ಕೊಟ್ಟಳು. ಈ ಬಾಲು ಮೇಲೆ ಲಕ್ಷ್ಮಿದೇವಮ್ಮನಿಗೆ ಅಕ್ಕರೆ! ತಾನು ಒಂದು ವೇಳೆ ಚಂದ್ರೂನ ಮದುವೆಯಾಗುವ ಪರಿಸ್ಥಿತಿ ಒದಗಿದ್ದರೆ, ಇವನನ್ನು ನನ್ನ ಜೊತೆಯಲ್ಲಿ

ಕರೆದೊಯ್ಯಬಹುದಾಗಿತ್ತು.... ತನ್ನ ಅನಿಸಿಕೆ ತನಗೇ ಅರ್ಥಹೀನವಾಗಿ ಕಂಡಿತು... ಪಂಕಜ ಚಂದ್ರು ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದಾರೆ.... ಚಂದ್ರು ಅನೇಕ ಬಾರಿ ಅವಳ ಮನೆಗೆ ಹೋಗಿದ್ದಾನೆ. ಸರಸವಾಗಿ ಮಾತನಾಡಿರಬಹುದು... ಒಬ್ಬರನ್ನೊಬ್ಬರು ಮುಟ್ಟಿರಬಹುದು... ಮುಂದೆ ಊಹಿಸಿಕೊಳ್ಳಲು ಅವಳ ಮನ ಹಿಂಜರಿಯಿತು... ಇಬ್ಬರೂ ಅಂತಹವರಲ್ಲ... ಎಲ್ಲರೂ ಕೆಟ್ಟವರಲ್ಲ... ಪಂಕಜ, ನನ್ನನ್ನು ಮದುವೆಯಾಗುವಂತೆ ಕೇಳಿದ್ದರು. ಆದರೆ ಚಂದ್ರುವಿನ ಮನಸ್ಸಿನಲ್ಲಿ ಅವರೇ ಇದ್ದಾರೆ ಅಂತ ತಿಳಿದ ಮೇಲೆ, ನಾನು ಆ ಬಗ್ಗೆ ಯೋಚಿಸುವುದು ತಪ್ಪು ಎಂದುಕೊಂಡಳು. ಆದರೂ ಏನನ್ನೋ ಕಳೆದುಕೊಂಡತೆನ್ನಿಸಿತ್ತು.

ಸಾಯಂಕಾಲದ ಸಮಾರಂಭ ಸರಳವಾಗಿ ನೆರವೇರಿತು ವಠಾರದ ಹೆಂಗಸರೆಲ್ಲ ಬಂದಿದ್ದರು ಹಾಗೂ ರಾಮರಾಯನ ತಮ್ಮ, ತಮ್ಮನ ಹೆಂಡತಿ ಮಕ್ಕಳು ಬಂದಿದ್ದರು. ಮಂಗಳ ಮೌನದಿಂದ ಇರುವುದನ್ನು ಎಲ್ಲರೂ ಗಮನಿಸಿದರು. ಅವರವರಿಗೆ ತೋಚಿದಂತೆ ಊಹಿಸಿಕೊಂಡಿದ್ದರು. ಆರತಕ್ಷತೆಯ ನಂತರ, ಬಂದವರೆಲ್ಲ, ಸರೋಜಳಿಗೆ ಉಡುಗೊರೆಯನ್ನು ಹಣ್ಣುಗಳನ್ನು ಕೊಟ್ಟು ಹಾರೈಸಿದರು. ಹಾಡು ಬಲ್ಲವರು ಹಾಡುಗಳನ್ನು ಹಾಡಿ ಸಮಾರಂಭಕ್ಕೆ ಕಳೆಯನ್ನು ಕಟ್ಟಿದರು. ಎಲ್ಲರಿಗೂ ಮಂಗಳಾ ಹಾಗೂ ವನಜ, ಅರಿಶಿನ ಕುಂಕುಮಗಳನ್ನು ಹಣ್ಣು ಎಲೆ ಅಡಿಕೆಗಳನ್ನು ಉಂಡೆ ಚಕ್ಕುಲಿಗಳನ್ನು ಕೊಟ್ಟರು. ಎಲ್ಲರೂ ಬಂದು ಹೋದ ನಂತರ, ಲಕ್ಷ್ಮಿದೇವಮ್ಮ ನಿಧಾನವಾಗಿ ಬಂದಳು. ಹೆಚ್ಚು ಮಾತಾಡದೇ, ಸರೋಜಳಿಗೆ ರವಿಕೆ ಖಣವನ್ನಿತ್ತು ಹಣ್ಣುಗಳನ್ನು ಕೊಟ್ಟು ಆಶೀರ್ವದಿಸಿದಳು. ಕುಳಿತಲ್ಲೇ, ಮನೆಯನ್ನೆಲ್ಲಾ ಒಮ್ಮೆ ವೀಕ್ಷಿಸಿದಳು. ಅಸಮಾದಾನದ ಗೆರೆಗಳು ಮೂಡಿದವು. "ಜಾನಕಮ್ಮ... ಅದೇನು ಮನೇನೆಲ್ಲಾ ಇಷ್ಟು ಗಲೀಜು ಎಬ್ಬಿಸಿಬಿಟ್ಟಿದ್ದೀರಿ... ಸ್ವಂತ ಮನೆ ಅಲ್ಲದಿದ್ದ ಮಾತ್ರಕ್ಕೆ ಹೀಗೆ ಇಟ್ಟುಕೊಳ್ಳೋದಾ?..." ಜಾನಕಿ ಪೆಚ್ಚಾದಳು ಆದರೂ ಸಾವರಿಸಿಕೊಂಡಳು.

"ನಿಮಗೇ ಗೊತ್ತು ನನ್ನ ಕೈಲಿ ಏನೂ ಸಾಗುಲ್ಲ... ಮಂಗಳಾ ಒಬ್ಬಳೇ.... ಏನೇನು ಅಂತ ಮಾಡ್ತಾಳೆ. ಸ್ಕೂಲಿಗೆ ಹೋಗೋ ಮಕ್ಕಳು. ನಾವು ಬಂದಾಗಲೂ ಹೀಗೇ ಇತ್ತು ಲಕ್ಷ್ಮಿದೇವಮ್ಮ. ಸುಣ್ಣಬಣ್ಣ ಮಾಡಿಸಿರಲಿಲ್ಲ. ಮಗಳ ಮದುವೆ ಸಮಯದಲ್ಲಿ ನಾವೇ ಮಾಡಿಸೋಣ ಅಂತ ಅಂದುಕೊಂಡಿದ್ದೆವು.... ಮದುವೆ ನಿಂತು ಹೋದ ವಿಷಯ ನಿಮಗೆ ಗೊತ್ತಿರಬಹುದು..."

"ಈಗ ಆ ಟೀಚರ್ ಮನೇನೂ ರಿಪೇರಿ ಮಾಡಿಸ್ತೀವಿ. ಹಾಗೇ ಇದಕ್ಕೂ ಸುಣ್ಣ ಬಣ್ಣ ಮಾಡಿಸ್ತೀವಿ... ನೀವು ಬಾಡಿಗೆ ಹೆಚ್ಚು ಕೊಡಬೇಕಾಗುತ್ತದೆ."

"ಮಗಳು ಬಾಣಂತನಕ್ಕೆ ಬಂದಿದಾಳೆ ಖರ್ಚು ಇರುತ್ತೆ ಲಕ್ಷ್ಮಿದೇವಮ್ಮ..."

"ಮಗಳ ಮದುವೆ ಖರ್ಚಿಗೆ ಅಂತ ಹಣ ಇಟ್ಟಿದ್ರೋ ಇಲ್ವೋ.... ಈಗ ಆ

ಹಣ ಉಳಿದಿದೆಯಲ್ಲ..." ಎಲ್ಲರಿಗೂ ಆಕೆಯ ಮಾತಿನಿಂದ ಬೆಚ್ಚಿಬೀಳುವಂತಾಗಿತ್ತು. .. ವಾದಿಸಿ ಪ್ರಯೋಜನವಿಲ್ಲವೆಂದು ಭಾವಿಸಿದರು.

"ಆಗಲಿ... ನಮ್ಮ ಯಜಮಾನರು ಬಂದ ಮೇಲೆ ಮಾತನಾಡ್ತೀನಿ." ಜಾನಕಮ್ಮ ಪೆಚ್ಚಾಗಿದ್ದಳು. ಆಕೆಗೆ ಎಲೆ ಅಡಿಕೆ ಹಾಗೂ ಉಂಡೆ ಚಕ್ಕುಲಿಗಳನ್ನು ಕೊಟ್ಟಳು. ಆಕೆ ಹೋದರೆ ಸಾಕೆಂದು ಚಡಪಡಿಸಿದಳು. ಆಕೆ ಮರೆಯಾದ ಕೂಡಲೇ ಉದ್ಗಾರವೆತ್ತಿದಳು. "ಅಬ್ಬಾ! ಎಂಥಾ ಸಣ್ಣ ಮನಸ್ಸು...? ಕೊಳೆತು ಹೋಗುವಷ್ಟು ಆಸ್ತಿಪಾಸ್ತಿ ಇದೆ ? ಧಾರಾಳ ಬುದ್ಧಿ ಇಲ್ಲ... ಈ ಬಾಡಿಗೆ ಹಣಗಳನ್ನೆಲ್ಲಾ ತಲೆ ಮೇಲೆ ಸುರ್ಕೊಬೇಕು... ಮಕ್ಕಳಿಲ್ಲ ಮರಿಯಿಲ್ಲ... ಕೃಪಣತನ ಮಾತ್ರ ಹೇಳತೀರದು..."

"ಅಮ್ಮ.... ಹೋಗ್ಲಿ ಬಿಡಮ್ಮ.... ಆಕೆಯ ಸ್ವಭಾವ ಗೊತ್ತಿದೆಯಲ್ಲ..."

"ಅಲ್ಲಾ ಸರೋಜ... ಇಂಥಾ ದಿನಗಳಲ್ಲಾದ್ರೂ ಹೀಗೆ ಮಾತಾಡಬಾರದು. ನೀನು ಬಾಣಂತನಕ್ಕೆ ಬರುವ ಹೊತ್ತಿಗೆ, ಮಂಗಳನ ಮದುವೆ ಸಮಯಕ್ಕೆ ಬೇರೆ ದೊಡ್ಡ ಮನೆಗೆ ಹೋಗೋಣ ಅಂತ ನಿಮ್ಮಪ್ಪನಿಗೆ ಹೇಳ್ತಾನೇ ಇದ್ದೆ... ನಮ್ಮನ್ನು ಗತಿಗೆಟ್ಟೋರು ಅಂತ ತಿಳಿದುಕೊಂಡಿದಾರಾ ಈಕೆ ?. ಇಂಥೋರ ಜತೇಲಿ ಆತ ಅದ್ಹೇಗೆ ಏಗ್ತಾನೋ? .... ಅದಕ್ಕೇ ಆ ಹುಡುಗ ಇಲ್ಲಿ ಇರಲೇ ಇಲ್ಲ... ಈಗ ನೋಡಿದರೆ, ತಾನೇ ಯಾರನ್ನೋ ಗೊತ್ತು ಮಾಡಿಕೊಂಡಿದ್ದಾನೆ... ಸರಿಯಾಯ್ತು ಈಕೆಗೆ...."

"ಅಮ್ಮಾ... ನಿನಗ್ಯಾಕೆ ಇಂಥಾ ರೋಷ?|.... ಮಂಗಳನ್ನ ಆಕೆ ಒಪ್ಪಿಕೊಂಡು ಮದುವೆ ಮಾಡಿಕೊಂರೇ.... ಆಕೆ ನಿನ್ನ ಬೀಗಿತ್ತಿಯಾಗಿರುತ್ತಿದ್ದಳು."

"ಮಂಗಳಂಗೆ ಮದುವೆ ಇಲ್ಲದೇ ಮನೇಲೇ ಬಿದ್ದಿದ್ದರೂ ಪರವಾಗಿಲ್ಲ, ಇಂಥಾ ಅತ್ತೆಗೆ ಸೊಸೆಯಾಗುವುದು ಬೇಡ... ಇಂಥಾ ಹೆಂಗಸನ್ನು ಎಲ್ಲೂ ಕಂಡಿರಲಿಲ್ಲ."

"ನಾನೇನು ಆಕೆಯ ಸೊಸೆಯಾಗಿ ಹೋಗೋಕ್ಕೆ ಕಾಯ್ಕೊಂಡು ಕೂತಿದ್ನಾ? ಸುಮ್ನೆ ನನ್ನ ಮದುವೆ ವಿಷಯ ಮಾತಾಡ್ಬೇಡಿ" ಮಂಗಳ ಸರ್‍ರನೆ ರೇಗಿದಳು.

"ಎಲಾ ಇವಳಿಗೇನಾಯ್ತು.. ಆಕೆಯ ಗುಣಗಾನಕ್ಕೆ ಇವಳೇಕೆ ರೇಗ್ಬೇಕು?" ಮಂಗಳ ಬಾಲುನ ಎತ್ತಿಕೊಂಡು ಹೊರಗೆ ಹೋಗಿ ನಿಂತಳು.

"ಮದುವೆ ನಿಂತು ಹೋದದ್ದು ಅವಳಿಗೆ ಬೇಸರ ಆಗಿರುಲ್ವೇನಮ್ಮಾ.... ನೀನೂ ಅಷ್ಟೇ....ಏನೇನೋ ಆಡಿ ಬಿಡ್ತೀಯ... ಅವಳ ತಪ್ಪೇನಿದೆ?"

"ತಪ್ಪು ಯಾರದ್ದೂ ಅಲ್ಲ... ನನಗೆ ಹೀಗೆ ಆಗದೇ ಇದ್ದಿದ್ದರೆ ಎಲ್ಲಾ ಸರಿಯಾಗಿರ್ತಿತ್ತು. ಈ ಮನೆ ನಮಗೆ ಆಗಿ ಬರ್ಲಿಲ್ಲ. ನಿನ್ನ ಹೆರಿಗೆ ಸುಖಮಯವಾಗಿ ಕಳೆದರೆ ಸಾಕು.... ಏನು ಬಾಯಿ ಬಿಟ್ಟುಕೊಂಡು ಎಲ್ಲಾ ಇಲ್ಲೇ ನಿಂತಿದೀರಿ.... ಹೋಗಿ.... ಎಲ್ರೂ ನಿಮ್ಮ ನಿಮ್ಮ ಪಾಡಿಗೆ ಓದ್ಕೋ ಹೋಗಿ." ಅಲ್ಲಿ ನಿಂತಿದ್ದ ಮಕ್ಕಳನ್ನು ಬೈದು ಅಟ್ಟಿದಳು. ಸರೋಜ ಎದ್ದು ಮಂಗಳ ಇದ್ದಲ್ಲಿಗೆ ಬಂದಳು. ಮಂಗಳ

ತಮ್ಮನಿಗೆ, ಆಕಾಶದಲ್ಲಿ ಮಿನುಗುತ್ತಿದ್ದ ನಕ್ಷತ್ರಗಳನ್ನು ತೋರಿಸುತ್ತಿದ್ದಳು. ಹೆಣ್ಣು ಮಕ್ಕಳ ಬಾಳು ಎಷ್ಟು ಕಷ್ಟಕರ? ತಂದೆ ತಾಯಿಗಳಿಗೆ ಬೇಡವಾದ ಹೊರೆ! ಅತ್ತೆ ಮನೆಯಲ್ಲಿ ಇನ್ನೊಂದು ಥರದ ಸೆರೆ ! ಒಟ್ಟಿನಲ್ಲಿ ಸುಖವಿಲ್ಲ ಎಂದುಕೊಂಡಳು.

○ ○ ○

ಅನಿರೀಕ್ಷಿತವಾಗಿ ಗೋಪಾಲಯ್ಯನನ್ನು ಕಂಡ ಪಂಕಜ ಅಚ್ಚರಿಗೊಂಡಳು ಅವನೊಂದಿಗೆ ಚಂದ್ರು ಕೂಡಾ ಬಂದಿರುವನೇನೋ ಎಂದುಕೊಂಡು ಅತ್ತಿತ್ತ ಕಣ್ಣು ಹಾಯಿಸಿದ್ದನ್ನು ಗೋಪಾಲಯ್ಯ ಗಮನಿಸಿದ. "ನಾನೊಬ್ಬನೇ ಬಂದಿದೀನಿ. ತಂದೆ ಇದಾರೇನು?" ಎನ್ನುತ್ತಾ ಮುಂದೆ ಬಂದ.

"ಬನ್ನಿ ಸಾರ್.... ಎಲ್ಲರೂ ಇದಾರೆ" ಎನ್ನುತ್ತಾ ಅವಳು ಒಳಕ್ಕೆ ಸ್ವಾಗತಿಸಿದಳು. ಒಳಗಿನಿಂದ ಬಂದ ತಂದೆಯನ್ನು ಅವರೊಡನೆ ಮಾತಿಗೆ ಕುಳ್ಳಿರಿಸಿ, ತಾನು ಅಡಿಗೆ ಮನೆಗೆ ಹೋಗಿ ಕಾಫಿಯನ್ನು ತಯಾರಿಸಿ, ಕಪ್‌ಗಳಿಗೆ ಹಾಕಿ ತಂದಳು. ಕಾಫಿಯನ್ನು ಕುಡಿಯುತ್ತಾ ಗೋಪಾಲಯ್ಯ ತಲೆದೂಗಿದರು....

"ಈಗಿನ ಕಾಲದ ಹುಡುಗೀರು ನೀವುಗಳು ಕಾಫೀನ ತುಂಬಾ ಚೆನ್ನಾಗಿ ಮಾಡ್ತೀರಿ. ರಾಮರಾಯರ ಮಗಳು ಮಂಗಳಾ, ಕಾಫೀನ ಮಾಡಿಕೊಟ್ಟರೆ, ಕಪ್‌ನ ಕೆಳಗೆ ಇಡೋಕೇ ಮನಸ್ಸು ಬರುಲ್ಲ ಅಂತೀನಿ... ಕಾಫಿ ತುಂಬಾ ಚೆನ್ನಾಗಿದೆಯಮ್ಮಾ" ಹೊಗಳಿದ.

"ಏನು ವಿಷಯ ಸಾರ್ ಬಂದದ್ದು ಅಲ್ಲಿ ಎಲ್ಲಾ ಸರಿಯಾಗಿದೆ ತಾನೇ?"

"ನೀವು ಇರೋ ಮನೇನ ರಿಪೇರಿ ಮಾಡಿಸ್ಬೇಕು ಅಂತ... ನೀವು ಯಾವಾಗ ಬರ್ತೀರಿ ಅಂತ ತಿಳ್ಕೊಳ್ಳೋಕೆ ಬಂದೆ."

"ನಾನು ಇಲ್ಲೇ ಕೆಲಸಕ್ಕೆ ಪ್ರಯತ್ನ ಪಡ್ತಿದೀನಿ. ಸಿಕ್ಕ ಕೂಡಲೇ ಮನೇನ ಖಾಲಿ ಮಾಡಿ ಬಿಡ್ತೀನಿ...."

"ಹೌದೇನು ? ಈಗ ಹೇಳ್ತಿದೀರಲ್ಲಮ್ಮಾ..."

"ನಿಮ್ಮ ಮಗಂಗೆ ಹೇಳಿದ್ದೆ ಅವನು ಹೇಳಲಿಲ್ವಾ ಸಾರ್?"

"ಇಲ್ಲ, ಮರೆತು ಬಿಟ್ಟ ಅಂತ ಕಾಣುತ್ತೆ, ಅವನು ಇಲ್ಲಿಗೆ ಒಂದು ಇಂಟರ್‌ವ್ಯೂಗೆ ಬಂದಿದ್ದ, ಕೆಲಸ ಸಿಕ್ಕರೂ ಸಿಗಬಹುದು" ಅವಳನ್ನೇ ದಿಟ್ಟಿಸಿದ. ಅವಳ ಮುಖದಲ್ಲಿ ಮಂದಹಾಸ ಮಿನುಗಿತು. " ಸರಿ ನಾನಿನ್ನು ಬರ್ತೀನಿ. ಯಾವುದನ್ನೂ ಬೇಗ ತಿಳಿಸಿ."ಎದ್ದ.

"ಸರಿ ಸಾರ್...." ಎನ್ನುತ್ತಾ ಅವಳೂ ಅವನೊಡನೆ ಹೊರಬಂದಳು.

"ಏನಾದ್ರೂ ಹೇಳೋದಿತ್ತಾ ?" ಬೇಕಂತ ಕೇಳಿದ...

"ಏನೂ ಇಲ್ಲ. ಊಟ ಮಾಡ್ಕೊಂಡು ಹೋಗಬಹುದಾಗಿತ್ತು..."

"ಊಟಕ್ಕೇನು? ಮಾಡೋಣಂತೆ. ನಾನು ನಿಮ್ಮ ಹತ್ರ ಸ್ವಲ್ಪ ಮುಖ್ಯವಾದ

ವಿಷಯವನ್ನು ಮಾತನಾಡಬೇಕಾಗಿತ್ತಲ್ಲಮ್ಮ... ಚಂದ್ರು ನಿಮಗೆ ಪತ್ರ ಬರೆದಿದ್ನಾ?'

"ಇಲ್ವಲ್ಲಾ ಏನು ವಿಷಯ.... ಅವನೆ ಒಬ್ಬ ಹುಡುಗಿಯನ್ನು ಗೊತ್ತು ಮಾಡ್ಕೊಂಡಿದ್ದಾನೆ... ಆ ಹುಡುಗಿ ಯಾರೂಂತ ನಿಮಗೂ ಗೊತ್ತು..."

"ಯಾರು ಸಾರ್ ? ಮಂಗಳಾನಾ?...."

"ಯಾಕಮ್ಮಾ ನಾಟಕ ಆಡ್ತೀಯಾ? ನಡೀ ನಾನು ಈಗ್ಲೇ ನಿಮ್ಮ ತಂದೆ ಹತ್ತಿರ ಮಾತಾಡ್ತೀನಿ..." ಎನ್ನುತ್ತಾ ಹಿಂದೆ ಬಂದ.

"ಬೇಡಾ ಸಾರ್... ಬೇಡಾ..."

"ಯಾಕಮ್ಮ ಬೇಡ... ಮಗಳಿಗೆ ಮದುವೆ ಆಗುತ್ತೆ ಅಂತಂದ್ರೆ ತಂದೆಗೆ ಬೇಡವಾದ ವಿಷಯಾನಾ ಇದು?"

"ಹಾಗಲ್ಲ ಸಾರ್...."

"ನನಗೇ ಎಲ್ಲವನ್ನು ಬಿಡು..." ಎನ್ನುತ್ತಾ ಮತ್ತೆ ಒಳಗೆ ಬಂದ.... ನಾನು ಒಂದು ಮುಖ್ಯವಾದ ವಿಷಯವನ್ನು ಮಾತನಾಡುಕ್ಕೇ ಅಂತಲೇ ಬಂದದ್ದು. ನಿಮ್ಮ ಹತ್ತಿರಾನೇ ಆಡಿಬಿಡ್ತೀನಿ. ಯಾಕೆಂದ್ರೆ ನೀವು ಪಂಕಜಳ ತಂದೆ.... "

"ಅವಳಿಂದ ಏನಾದ್ರೂ ತಪ್ಪಾಗಿದೆಯಾ ರಾಯರೇ...." ಆತ ಕೈಮುಗಿದರು.

"ಇಲ್ಲ... ಅವರೇಕೆ ತಪ್ಪು ಮಾಡ್ತಾರೆ?" ಬೆಪ್ಪನಂತೆ ಮುಖ ಮಾಡಿದ.

"ಮತ್ತಿನ್ನೇನು ? ಮಗಳಿಗೆ ಮದುವೆ ಮಾಡುವ ಆಲೋಚನೆಯೇ ಇದ್ದಂತಿಲ್ಲ... ಕೆಲಸಕ್ಕೆ ಕಳಿಸ್ತೀರಿ... ತಪ್ಪಲ್ವಾ?" ಆತ ಹೆಂಡತಿಯ ಮುಖವನ್ನು ನೋಡಿದ. ಪಂಕಜ ಒಳಗೆ ಹೊರಟು ಹೋಗಿದ್ದಳು.

"ಪಂಕಜಳಿಗೆ ಮದುವೆ ಆಗಿತ್ತು. ಆ ವಿಷಯ ನಿಮಗೆ ಗೊತ್ತಲ್ವಾ ರಾಯರೇ..."

"ಹೂಂ. ಗೊತ್ತು... ನಂತರದ ದುರಂತವೂ ಗೊತ್ತು. ಆದರೆ, ಹಾಗೇ ಒಂಟಿಯಾಗಿ ಇರಬೇಕು ಅಂತ ಯಾವ ಶಾಸ್ತ್ರದಲ್ಲಿಯೂ ಬರದಿಲ್ಲವಲ್ಲ..."

"ಅಂದರೇ.... ನಿಮ್ಮ ಮಾತಿನ ಅರ್ಥ...?"

"ಮತ್ತೆ ಮದುವೆ ಮಾಡಿ..."

"ತಮಾಷೆ ಮಾಡ್ತಿದೀರಾ ರಾಯರೆ ?.... ಸಮಾಜ ಇದಕ್ಕೆ ಸಮ್ಮತಿ ನೀಡುತ್ತಾ? ಮರು ಮದುವೆಯಾಗಲು ಯಾರು ಮುಂದೆ ಬರ್ತಾರೆ...?"

"ತಮಾಷೆ ಅಲ್ಲ... ನೀವು ಮದುವೆ ತಯಾರಿ ನಡೆಸಿ... ನಾನು ವರನನ್ನು ನಿಮ್ಮ ಮುಂದೆ ತಂದು ನಿಲ್ಲಿಸುತ್ತೇನೆ. ಸಮಾಜ ಖಂಡಿತಾ ಒಪ್ಪಿಕೊಳ್ಳುತ್ತೆ..."

"ಇದೆಲ್ಲಾ ಸುಲಭ ಅಲ್ಲರಾಯರೇ.... ಪಂಕಜ ಏನಾದ್ರೂ ತಪ್ಪು ಮಾಡಿದ್ರೆ ಹೇಳಿ. ನಾನು ಬುದ್ಧಿ ಕಲಿಸ್ತೀನಿ. ಆದರೆ ಹೀಗೆ ನಿಗೂಢವಾಗಿ ಮಾತಾಡ್ಬೇಡಿ...."

"ನಿಗೂಢವೂ ಇಲ್ಲ... ರಹಸ್ಯವೂ ಇಲ್ಲ. ನಾನು ಸರಿಯಾಗಿಯೇ ಮಾತಾಡ್ತಾ

ಇದೀನಿ... ನಮ್ಮ ಚಂದ್ರು ನಿಮ್ಮ ಮಗಳನ್ನು ಮದುವೆಯಾಗಲು ಸಿದ್ಧನಿದಾನೆ... ನಿಮಗೆ ಒಪ್ಪಿಗೇನಾ.... ಅಷ್ಟು ಹೇಳಿ..." ಇಬ್ಬರೂ ಮುಖ ಮುಖ ನೋಡಿಕೊಂಡು ಬಾಯಿಬಿಟ್ಟರು.

"ಚಂದ್ರು? ನಿಮ್ಮ ಮಗ?"

"ಹೌದು.... ನಮ್ಮ ಚಂದ್ರೂನೇ... ಅವನು ನಿಮ್ಮ ಮಗಳನ್ನು ಇಷ್ಟಪಟ್ಟಿದ್ದಾನೆ, ಅವನು ಒಳ್ಳೆಯ ಹುಡುಗ. ಪತ್ನಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತಾನೆ..."

'ಹಾಗಲ್ಲ... ಯಾಕೆ ಹೀಗಾಯ್ತು ಅಂತ ಯೋಚಿಸ್ತಿದ್ದೆ..."

"ಆಗಬಾರದ್ದು ಏನೂ ಆಗಿಲ್ಲ... ನೀವು ಹೆಚ್ಚು ಯೋಚಿಸ್ಬೇಡಿ... ಹೂಂ. ಅನ್ನಿ..."

"ತಕ್ಷಣಕ್ಕೆ ಹೇಗೆ ಹೂಂ ಅನ್ನುಕ್ಕೆ ಆಗುತ್ತೆ ಯೋಚಿಸ್ಬೇಡ್ವೆ..."

"ಸರಿ ನಾಳೆ ಮತ್ತೆ ಇದೇ ಸಮಯಕ್ಕೆ ಬರ್ತೀನಿ. ಇಪ್ಪತ್ನಾಲ್ಕು ಗಂಟೆಗಳ ಅವಧಿಯನ್ನು ಕೊಡ್ತೀನಿ... ಈಗ ಬರ್ತೀನಿ" ಎನ್ನುತ್ತಾ ಎದ್ದ. ಅವನತ್ತ ಹೋದ ಕೂಡಲೇ, ಮಗಳನ್ನು ಹೊರಕ್ಕೆ ತರೆದು ರೇಗಿದ.

"ಏನಿದೆಲ್ಲಾ?... ಅವನ ಸ್ನೇಹ ನಿಂಗೆ ಹೇಗಾಯ್ತು?... ಈಗ ನೋಡಿದ್ರೆ ಇಲ್ಲಿ ಬಂದು ಕೂತಿದೀಯ?"

"ಏನೂ ಆಗಿಲ್ಲಪ್ಪಾ... ಅವರೇ ಒಂದೆರಡು ಬಾರಿ, ಮನೆ ಕೆಲಸದ ಬಗ್ಗೆ ಬಂದಿದ್ದಾಗ ಪರಿಚಯ ಆಯ್ತು... ಆಮೇಲೆ ಒಂದು ದಿನ, ಮದುವೆಯಾಗುವ ಆಸೆಯನ್ನು ವ್ಯಕ್ತಪಡಿಸಿದರು. ನಾನು ಒಪ್ಪಿಕೊಂಡಿಲ್ಲ. ನನ್ನ ಮಾತಿನ ಮೇಲೆ ನಿಮಗೆ ನಂಬಿಕೆ ಇಲ್ವೇನಪ್ಪಾ?"

"ನಂಬಿಕೆ ಇದೆ ಪಂಕಜಾ... ಆದರೂ ನೀನು ಅಲ್ಲಿ ಒಂಟಿಯಾಗಿ ಇದ್ದೋಳು... ಅವನು ಮಾಲೀಕರ ಮಗ... ಜನಾಪವಾದ ಬರುತ್ತೆ..."

"ಜನಾಪವಾದಕ್ಕೆ ಹೆದರಿದರೆ, ಏನು ಬಂತು?... ಅವರಾಗಿಯೇ ಕೇಳಿಕೊಂಡು ಬಂದಿದಾರೆ... ಒಪ್ಪಿಗೆ ಕೊಡಿ.... ಇವಳ ಬಾಳೂ ನೆರವಾಗುತ್ತೆ" ತಾಯಿ ನುಡಿದಳು. ನಿನಗೆ ಒಪ್ಪಿಗೇನಾ ಪಂಕಜಾ? ನಾವು ಬಲವಂತ ಮಾಡುವುದಿಲ್ಲ" ಮಗಳನ್ನು ಕೇಳಿದಳು. ಪಂಕಜ ಉತ್ತರಿಸದೇ ಸುಮ್ಮನೇ ಮೌನವಾಗಿ ನಿಂತಳು. "ಮೌನಂ ಸಮ್ಮತಿ ಲಕ್ಷಣಂ" ಎಂದುಕೊಂಡರು. ಅಲ್ಲಿಗೆ ಒಂದು ನಿರ್ಧಾರ ಆಗಿತ್ತು.

೦ ೦ ೦

"ಲಕ್ಷ್ಮೀ, ನಾನು ಒಂದು ತೀರ್ಮಾನಕ್ಕೆ ಬಂದಿದೀನಿ... " ಹೆಂಡತಿ ಊಟಕ್ಕೆ ಕುಳಿತಿದ್ದಾಗ ಪ್ರಸ್ತಾಪವನ್ನೆತ್ತಿದ. ಏನು ಎಂಬಂತೆ ಕತ್ತೆತ್ತಿ ನೋಡಿದಳು." ಪಂಕಜಾ ಟೀಚರ್ ಬಗ್ಗೆ ನಿನಗೇನನ್ನಿಸುತ್ತೆ?"

"ಏನನ್ನಿಸುತ್ತೆ ಅಂತಂದ್ರೆ.... ಚಿಕ್ಕ ವಯಸ್ನಲ್ಲಿ ವಿಧವೆ ಆಗಿದ್ದಾಳೆ. ಟೀಚರ್ ಆಗಿದ್ದಾಳೆ... ಒಳಗಿನ ಕತೆ ಯಾರಿಗೆ ಗೊತ್ತೂ?.... ಒಬ್ಬಳೇ ಬೇರೆ ಇದಾಳೆ..."

"ಛೇ... ಹಾಗೆಲ್ಲಾ ಹುಡುಗಿಯರ ಬಗ್ಗೆ ಅನುಮಾನ ಪಡಬಾರದು... ಹುಡುಗಿಯರ ಮೇಲೆ ಅಪವಾದ ಹೊರಿಸಬಾರದು...."

"ಸರಿ ಈಗೇನು ಆ ಹುಡುಗಿಯ ಮೇಲೆ ಅಷ್ಟು ಕರುಣೆ...?"

"ಚಂದ್ರು ಅವಳನ್ನು ಮದುವೆಯಾಗಲಿ ... ಅವಳಿಗೆ ಬಾಳು ಕೊಡಲಿ ಅಂತ ನನ್ನಾಸೆ..." ತಡವರಿಸುತ್ತಾ ನುಡಿದ.

ಅವಳು ಅವಾಕ್ಕಾದಳು. "ನಿಮಗ್ಯಾಕ್ರೀ ಇಂಥಾ ಕೆಟ್ಟ ಆಸೆ? .... ಆ ವಿಧವೆ ಹುಡುಗಿ ಮತ್ತೆ ಮದುವೆ ಯಾಗೋದಾ?.... ನಿಮ್ಮ ತಲೆ ಸರಿಯಾಗಿದೆ ತಾನೆ?"

"ನಮ್ಮ ತಲೆ ಸರಿಯಾಗಿರುವಾಗಲೇ ಒಳ್ಳೆಯ ನಿರ್ಧಾರವನ್ನು ತಗೋಬೇಕು ಲಕ್ಷ್ಮೀ. ಆ ಹುಡ್ಗೀನ ಮದುವೆ ಆದ್ರೆ ಚಂದ್ರು ಖಂಡಿತಾ ಸುಖವಾಗಿರ್ತಾನೆ.

"ಅದ್ಹೇಗೆ ಹೇಳ್ತೀರಿ?... ಆ ಹುಡುಗಿಯ ಹಣೇ ಬರಹ ಚೆನ್ನಾಗಿದ್ದಿದ್ರೆ ಹೀಗಾಗ್ತಿತ್ತಾ? ..ಕಂಡೂ ಕಂಡೂ ಇಂಥಾ ಆಲೋಚನೆ ನಿಮಗೆ ಹೇಗೆ ಬಂತೋ ..?"

"ಪಾಪ... ಇದರಲ್ಲಿ ಆ ಹುಡುಗಿಯ ತಪ್ಪೇನಿದೆ? ಗಂಡನ್ನ ಕಳೆದುಕೊಂಡು, ವಿಧವೆ ಪಟ್ಟ ಇಟ್ಟುಕೊಂಡು, ಜೀವಮಾನವೆಲ್ಲಾ ಒಂಟಿಯಾಗಿ ಕಳೀಬೇಕಾ....?"

"ಒಂಟಿತನ ಕಳೆಯಲಿ ಅಂತ ಚಂದ್ರೂನೇ ಆಗ್ಬೇಕಾ? ಇವನೇನು ಒಂಟಿಯಲ್ಲ...."

"ಇಲ್ಲ ಲಕ್ಷ್ಮೀ ಇವನೂ ಒಂದು ತರಹ ಒಂಟಿಯೇ... ಹುಟ್ಟಿಸಿದ ತಂದೆ ತಾಯಿಗಳಿಂದ ದೂರನಾಗಿದ್ದುಕೊಂಡು ಬೆಳೆದ. ನಮಗೂ ಹತ್ತಿರವಾಗಲಿಲ್ಲ... ಅನಾಥನಂತೆ, ವಾರಾನ್ನದ ಹುಡುಗನಂತೆ ಎಲ್ಲಿಯೋ ಬೆಳೆದು ದೊಡ್ಡವನಾದ... ಈಗ ಅವನು ತನ್ನ ತಂದೆತಾಯಿಯರ ಬಳಿಗೆ ಹಿಂತಿರುಗಲು ಸಾಧ್ಯವಿಲ್ಲ... ನಮ್ಮೊಂದಿಗೆ ಹೊಂದಿಕೊಳ್ಳಲೂ ಆಗುತ್ತಿಲ್ಲ. ಇಂಥಾ ಸಮಯದಲ್ಲಿ ಅವನನ್ನು ಅರ್ಥ ಮಾಡಿಕೊಳ್ಳುವ ಸಂಗಾತಿಯ ಅಗತ್ಯ ಅವನಿಗಿದೆ.... ಪಂಕಜ ಅವನಿಗೆ ಸರಿಯಾದ ಹುಡುಗಿ..."

"ಅವನೇನಾದ್ರೂ ಪಂಕಜನ್ನ ಮದುವೆಯಾದ್ರೆ, ಅವನನ್ನು ಈ ಮನೆಯ ಹೊಸ್ತಿಲು ತುಳಿಯೋಕೂ ಬಿಡುಲ್ಲ."

"ನೀನು ಬೇಡ ಅಂದ್ರೆ ಅವನು ಬರುಲ್ಲ ಬಿಡು... ಎಲ್ಲರಿಗೂ ನಿಶ್ಚಿಂತೆ...."

"ಅಂದರೇ...."

"ಅವನಿಗೆ ಬಿಡುಗಡೆ ಕೊಟ್ಟು ಬಿಡೋಣ... ಅವನ ಪಾಡಿಗೆ ಅವನು ಹಾಯಾಗಿರಲಿ..."

"ಎಲ್ಲಿಗೆ ಹೋಗ್ತಾನೆ ?.... ಇವೆಲ್ಲದರ ಆಸೆ ಹೋಗುತ್ತಾ? .... "

"ಅವನಿಗೆ ಈ ಆಸೆ ಖಂಡಿತಾ ಇಲ್ಲ. ಇದ್ದರೂ ಅವನಿಗೆ ಸಿಗದಂತೆ ಮಾಡಿದರಾಯ್ತು... ದತ್ತು ಸ್ವೀಕಾರವನ್ನು ರದ್ದುಪಡಿಸಿಬಿಡೋಣ... ಅವನಿಗೆ ಯಾವ ಹಕ್ಕು ಇರುವುದಿಲ್ಲ."

"ಏನ್ರೀ... ಏನು ಹೇಳ್ತಿದೀರಿ? ಮುಂದೆ ಅವನು ಸುಮ್ಮನಿರ್ತಾನಾ? ಅವನ ಕಡೆಯ ವರು ಚುಚ್ಚಿ ಕೊಡದೇ ಇರ್ತಾರಾ?.... ಅವನ ಹೆಂಡತಿಯಾಗಿ ಬರೋಳಿಗೆ ಈ ಆಸೆ ಇರದೇ ಇರುತ್ತಾ?"

"ಇಲ್ಲ, ಒಪ್ಪಂದದ ಪತ್ರವನ್ನು ಬರೆಸಿಕೊಂಡು ಬಿಡೋಣ... ಆಮೇಲೆ ಯಾರೂ ಏನೂ ಹೇಳುಕ್ಕಾಗುಲ್ಲ... ಮಾಡುಕ್ಕಾಗುಲ್ಲ...."

"ಸುಮ್ಮನೇ ನಮಗೆ ಕೆಟ್ಟ ಹೆಸರು ಅಷ್ಟೇ..."

"ಈ ಅಪವಾದಕ್ಕೆ ಹೆದರ್ತೀಯಾ ಲಕ್ಷ್ಮೀ... ಇದೆಲ್ಲಾ ನಿನ್ನ ಆಸ್ತಿ. ನಿನಗೆ ಬೇಕಾದಂತೆ ವಿಲೇವಾರಿ ಮಾಡುವ ಸ್ವಾತಂತ್ರ್ಯ ನಿನಗಿದೆ. ನನಗೂ ಯಾವ ಅಧಿಕಾರ ಇಲ್ಲ... ಹಾಗೇ ಚಂದ್ರೂಗೂ ಯಾವ ಅಧಿಕಾರ ಬರುವುದು ಬೇಡ.... ಅವನ ಪಾಡಿಗೆ ಅವನು ಬೇರೆ ಎಲ್ಲಾದರೂ ಇದ್ದುಕೊಳ್ಳಲಿ....

"ಸರಿ... ನಿಮ್ಮಿಷ್ಟ.... ಏನು ಬೇಕಾದರೂ ಮಾಡಿಕೊಳ್ಳಿ... ಅವನೆಂದೂ ನನಗೆ ಹತ್ತಿರವಾಗಲಿಲ್ಲ... ಮುಂದೆಯೂ ಆಗುವುದಿಲ್ಲ... ಬಲವಂತದ ಮಾಘಸ್ನಾನ ಯಾರಿಗೂ ಬೇಡ... ಅವನಿಗೆ ಹೇಳಿದೀರಾ?..."

"ಹೇಳಿದರಾಯ್ತು... ಆದರೆ ನನ್ನದು ಒಂದು ಆಸೆ.... ಮೊದಲು ಅವರಿಬ್ಬರ ಮದುವೆ ನೆರವೇರಲಿ... ಆಮೇಲೆ ತಿಳಿಸ್ತೀನಿ..."

"ಬೇಡ... ಆ ಹುಡುಗಿ, ಈ ಮನೆಯ ಹೊಸ್ತಿಲನ್ನು ದಾಟಿ ಒಳಗೆ ಬರಬಾರದು... ಬೇರೆ ಎಲ್ಲಿಯಾದರೂ ಮಾಡಿಕೊಳ್ಳಲಿ... ಹೇಗಾದರೂ ಇರಲಿ... ನಾನು ಆ ಸುದ್ಧಿಗೆ ಬರುವುದಿಲ್ಲ... ತಿಳೀತಾ?"

"ಇಷ್ಟು ಕಟುಕಳಾಗಬೇಡ' ಎಂದು ಹೇಳಬೇಕೆಂದುಕೊಂಡರೂ, ಹೇಳಲಾಗಲಿಲ್ಲ. ಇವಳ ಸ್ವಭಾವ ನನಗೇನೂ ಹೊಸದಲ್ಲ... ನಾನೇ ಬೇಸತ್ತು ಇವಳಿಂದ ದೂರ ಹೋಗಿದ್ದರೂ, ನನ್ನನ್ನು ಮತ್ತೆ ಸೇರಿಸುತ್ತಿರಲಿಲ್ಲ... ಆಗ, ಕಾಲಕ್ರಮೇಣ ಇವಳು ಬದಲಾಗಬಹುದು ಎನ್ನುವ ಆಸೆಯ ಕಿರಣ ಒಂದಿತ್ತು. ಈಗ ಅದೂ ಇಲ್ಲ... ಎಷ್ಟು ಮಾತಾಡಿದರೂ ಇಷ್ಟೇ ಎಂದುಕೊಂಡ. ಯಾವ ಭಾವನೇಗೂ ಒಳಗಾಗದೇ ತನ್ನ ಪಾಡಿಗೆ ತಾನು ದೈನಂದಿನ ಕೆಲಸದಲ್ಲಿ ತೊಡಗಿದವಳನ್ನು ಕಂಡು ಅಚ್ಚರಿಗೊಂಡ. ಹೆಣ್ಣಾಗಿ ಹೀಗೆ ಇರಲು ಸಾಧ್ಯವೇ?.... ಇದಕ್ಕೆ ಕಾರಣ ? ಹುಟ್ಟೇ ? ಪರಿಸರವೇ ನಿರಾಸೆಯೇ? ಏನಿರಬಹುದು? ಒಟ್ಟಿನಲ್ಲಿ ಇವಳ ಮೂಲದಲ್ಲಿ ಏನಿದೆ ಅಂತ ಬ್ರಹ್ಮನೇ ಹೇಳಬೇಕು

ಎಂದು ತನಗೆ ತಾನೇ ಹೇಳಿಕೊಂಡ. ಅವಳು ಎದ್ದು ಹೋಗಿದ್ದಳು.

೦ ೦ ೦

ಮೈಸೂರಿನ ಆರ್ಯ ಸಮಾಜದಲ್ಲಿ ಚಂದ್ರು-ಪಂಕಜರ ಮದುವೆ ನೆರವೇರುವುದೆಂದು ತೀರ್ಮಾನವಾಗಿತ್ತು. ಕಡೆಯ ಬಾರಿಗೆ ಎಂಬಂತೆ ಚಂದ್ರು ಮನೆಗೆ ಬಂದಿದ್ದ. ಆಕೆ ಮಾತನಾಡಿಸದೇ, ತನಗೆ ಸಂಬಂಧಿಸಿದುದೇ ಅಲ್ಲ ಎಂಬಂತೆ ನಿರ್ವಿಕಾರದಿಂದ ಇದ್ದುದನ್ನು ಕಂಡು ಬೇಸರವೆನಿಸಿದರೂ, ಹೊಸತು ಎನಿಸಲಿಲ್ಲ... ಊಟ ಮಾಡುವಾಗ ಅನ್ನದ ತುತ್ತು ಗಂಟಲನ್ನು ಒತ್ತಿತ್ತು. ಇದು, ಈ ಮನೆಯಲ್ಲಿ ಮಾಡುತ್ತಿರುವ ಕೊನೆಯ ಊಟ.... ಬಡಿಸಿದ್ದನ್ನು ಚೆಲ್ಲುವ ಪರಿಪಾಠವಿಲ್ಲದ್ದರಿಂದ ಕಷ್ಟಪಟ್ಟು ಉಂಡ. ಗೋಪಾಲಯ್ಯನಿಗೆ ಅವನ ಮನಃಸ್ಥಿತಿ ಅರ್ಥವಾಗಿತ್ತು.

ಒಂದು ಚಿಕ್ಕ ಲಾರಿಯನ್ನು ಬಾಡಿಗೆಗೆ ಗೊತ್ತು ಮಾಡಿ, ಪಂಕಜಳ ಮನೆಯ ಸಾಮಾನುಗಳನ್ನು ತುಂಬಿಸಲಾಗಿತ್ತು. ಚಂದ್ರು, ಮನೆಯ ಮುಂಬಾಗಿಲಿಗೆ ಬೀಗವನ್ನು ಹಾಕಿ ರಾಮರಾಯರ ಮನೆಯ ಒಳಗೆ ಬಂದು ಎಲ್ಲರಿಗೂ ಕೈ ಮುಗಿದ. ಮೈಸೂರಿನಲ್ಲಿ ನನ್ನ ಮದುವೆ... ನೀವೆಲ್ಲರೂ ಬರಬೇಕು..." ವಿನಂತಿಸಿಕೊಂಡ. ಮಂಗಳನ ಕಡೆ ತಿರುಗಿ ವಿಶೇಷವಾಗಿ ನುಡಿದ. "ಟೀಚರ್ ನಿಮ್ಮ ಸ್ನೇಹಿತೆಯಾಗಿದ್ದರು... ಅವರು ನಿಮಗೆ ಪತ್ರ ಬರೆದಿರಬಹುದು. ಖಂಡಿತಾ ಬನ್ನಿ. ನಮ್ಮಿಬ್ಬರಿಗೂ ಸಂತೋಷವಾಗುತ್ತೆ..." ಎಂದ.

"ಸಧ್ಯಕ್ಕೆ ನಾವ್ಯಾರೂ ಬರುಕ್ಕಾಗುಲ್ಲಪ್ಪಾ.... ನೀವೇ ಇಬ್ಬರೂ ಒಮ್ಮೆ ಬಂದು ಹೋಗಿ." ಜಾನಕಿ ನುಡಿದಳು.

"ಇಲ್ಲಮ್ಮ... ಬಹುಶಃ ಮತ್ತೆ ನಾನು ಇಲ್ಲಿಗೆ ಬರುಲ್ಲ..." ದನಿಯಲ್ಲಿ ನೋವಿತ್ತು.

"ಅಂದರೇ....?"

"ಅಮ್ಮನಿಗೆ ಈ ಮದುವೆ ಒಪ್ಪಿಗೆ ಇಲ್ಲ..." ಅಷ್ಟನ್ನೇ ಹೇಳಿ ಸುಮ್ಮನಾದ. ಅವಳಿಗೂ ಕೆಡುಕೆನಿಸಿತು... ಚಂದ್ರು ಹಾಲನ್ನು ಕುಡಿದು ಹಿರಿಯರಿಗೆ ನಮಸ್ಕರಿಸಿ ಅಲ್ಲಿಂದ ನಡೆದಿದ್ದ.

೦ ೦ ೦

"ಕೇಳಿದ್ರೇನ್ರೀ ಅಕ್ಕಾರ...?" ಎಂಥಾ ಮಂದೀನೂ ಇರ್ತಾರ ಅಂತ. ಚಂದ್ರು ಹೀಂಗ ಮಾಡಬಾರದಾಗಿತ್ತ... ಬೇರೆ ಛಲೋ ಹುಡ್ಗೀರು ಸಿಗ್ತಿರ್ಲಿಲ್ಲೇನು ಅವಗೆ ? ಈಕೀನ ಆಗ್ಬೇಕಾಗಿತ್ತಾ?.... ಏನೋ ಆದರ್ಶ ಅಂತ ಅವ್ವನ ಮನಸ್ಗೆ ನೋವು ಕೊಟ್ಟಾನ. ಅವಗ ಒಳ್ಳೇದಾಗುಲ್ಲ ಬಿಡಿ... ಆಕಿ ಬಿಲ್‌ಕುಲ್ ನಮ್ಮನಿಗೆ ಬರ್ಬ್ಯಾಡಿ ಅಂತ ಹೇಳ್ಯಾಳಂತ... ಇವ ಎಲ್ಲಾ ಕಳಕೊಂಡ... ಆದರ ಋಣ ತೀರ್ತದೇನು?....

ಅನುಭವಿಸ್ತಾನ ಬಿಡಿ.... ತುಂಗಾಬಾಯಿ ಜಾನಕಮ್ಮನಿಗೆ ಹೇಳಿದಳು. ಜಾನಕಿಗೆ ಸರಿ ಎನಿಸಲಿಲ್ಲ....

"ನಮಗ್ಯಾಕೆ ಬಿಡಿ ತುಂಗಾಬಾಯಿ. ಮಾಡ್ಬೋರ ಪಾಪ ಆಡ್ಬೋರ ಬಾಯಲ್ಲಿ ಅಂತ ಮಾತಿದೆ. ಇದರಲ್ಲಿ ಆಕೆಯ ತಪ್ಪೋ... ಅವನದು ತಪ್ಪೋ.... ಶ್ರೀರಾಮನೇ ಬಲ್ಲ.

"ತಪ್ಪು ಚಂದ್ರುದೇ ಇರ್ತದ. ಅವ ಇಲ್ಲಿ ಇದ್ದದ್ದೇ ಕಡಿಮೆ. ಬಂದಾಗ ಟೀಚರಮ್ಮನ್ನ ಕಂಡ್ಯಾನ. ಹರೇದ ಹುಡುಗ... ಲಗ್ನದ ವಯಸ್ಸು ಮೀರಿತ್ತು... ಆಕಿ ಛಲೋ ಕಂಡಾಳ... ಆಕೀನೂ ಅಷ್ಟೇ... ಸೆರಗ ಬೀಸ್ಕೊಂಡು, ಚಪ್ಪಲಿ ಮೆಟ್ಕಂಡು ಟಪ್ ಟಪ್ ಅಂತ ನಡೆದು ಹೋಗ್ತಿದ್ಲು... ಇವನ ಮನಸೂ ಕುಣಿದೈತಿ... ನಮ್ಮ ಸುಧಾನ ಲಗ್ನದ ಸಮಯದಾಗ, ಅವ ಒಂದೆರಡು ಬಾರಿ ಆಕೆ ಮನಿಗೆ ಹೋಗಿದ್ದನ್ನು ನಮ್ಮ ದತ್ತ ಕಂಡಿದ್ನಂತ... ಸುದ್ಧಿ ಹೀಗದ ಅಂತ ತಿಳೀಲಿಲ್ರೀ...."

"ಏನ್ಮಾಡೋದು ತುಂಗಾಬಾಯಿ.... ಒಮ್ಮೊಮ್ಮೆ ಕರ್ಮ ಹೀಗೆ ಕಾಡುತ್ತಂತೆ. ಎಷ್ಟಾಗಲೀ ಸಾಕುಮಗ ಬೇರೆ ರಕ್ತ. ಸರಿ ಬರುತ್ತಾ?...."

"ಖರೇ ಹೇಳಿದ್ರೀ.... ನಮ್ಮ ಹೊಟ್ಯಾಗ ಹುಟ್ಟಿದ ಮಕ್ಕಳ ಹಣೀಬರಹವೇ ನಮಗೆ ತಿಳಿಯೋದಿಲ್ರೀ... ಇನ್ನು ಅವಹುಟ್ಟಿದ್ದೆಲ್ಲೋ ಬೆಳೆದದ್ದು ಎಲ್ಲೋ. ಒಟ್ನಾಗೆ ಸುಖ ಇಲ್ರೀ ಆಕಿಗೂ ತ್ರಾಸ... ಅವಗೂ ತ್ರಾಸ." ಅವರಿಬ್ಬರ ಮಾತು ನಡೆಯುತ್ತಿದ್ದಾಗ, ಹೊಸದಾಗಿ ಸಂಸಾರಕ್ಕೆ ಬಂದಿದ್ದ ಮನೆಯ ಹೆಂಗಸು ತನ್ನ ಮಕ್ಕಳೊಂದಿಗೆ ಅತ್ತ ಬಂದಳು. ಇಬ್ಬರೂ ಮಾತು ನಿಲ್ಲಿಸಿದರು. ಆಕೆ ಸುಮ್ಮನೇ ನಡೆದು ಹೋದಳು " ಆ ದಿಬ್ಬದ ಮನ್ಯಾಗ ದೆವ್ವದ ಕಾಟ ಇದ ಅಂತಾರ ಹೌದೇನ್ರೀ... ನಿಮಗೇನಾದ್ರೂ ಚೇಷ್ಟಿ ಕೇಳ್ಸಿತ್ತೇನು... ಪಾಪ ಚಿಕ್ಕ ಮಕ್ಕಳು ಅವ..." ತುಂಗಾಬಾಯಿ ಎಂದಳು.

"ದೆವ್ವದ ಕಾಟ ಇದೆಯೋ ಇಲ್ಲವೋ ನಂಗೆ ತಿಳೀದು. ಹಾವಾಡಿಗರು ಬಂದು ಸೇರ್ಕೊಂಡಿದ್ರು ಅಂತ ಓಡಿಸಿ, ಪುಣ್ಯಾಹ ಎಲ್ಲಾ ಮಾಡ್ಸಿದಾರಲ್ಲ ಇನ್ನೇನು? ದೇವರ ದಯ ಇದ್ದರೆ, ಯಾವ ದೆವ್ವಾನೂ ಏನೂ ಮಾಡುಲ್ಲ."

"ಖರೇ ಹೇಳಿದ್ರಿ... ನಮ್ಮ ರಾಧಾಬಾಯಿ ನಾಲ್ಕು ದಿನ ಅಲ್ಲಿ ರಾತ್ರಿನಾಗೆ ಮಲಗಿದ್ದಳ್ರೀ... ಆಮೇಲೇನಾತೋ... ಹೀಂಗ ಖಾಯಿಲೆ ಮಲಗ್ಯಾಳ್ರೀ.... ರಕ್ತ ಎಲ್ಲಾ ಹೀರಿಹೋಗದಂತ್ರೀ... ಏನು ಪಾಡೋ ಏನೋ..... ನಮ್ಮ ದತ್ತ ಸುಮ್ನ ರೊಕ್ಕ ಖರ್ಚು ಮಾಡ್ತಾ ಇದಾನ್ರೀ.... ಉಂಡ್ಹಂಗಲ್ಲ ; ತಿಂದ್ಹಂಗಲ್ಲ ದವಾಖಾನಿಗೆ ಸುರಿದ್ಹಂಗಾಯ್ತ್ರೀ...."

"ಇನ್ನೂ ಮೇಲು ಆಗಿಲ್ವೇನು ನಿಮ್ಮ ಸೊಸೆಗೆ...?"

"ಮೇಲಾಗೂ ಖಾಯಿಲೇನ್ರೀ ಅದು... ಯಾರ್ಗೂ ಕಾಣದ್ಹಂಗ... ಯಾರ್ಗೂ

ತಿಳೀದಂಗ... ಅದೆಂಥದೋ ಆಸ್ಪತ್ರೇಲಿ ಇಟ್ಟಾರಂತ... ಊರಾಚೆ... ನಮಗೆ ದತ್ತದೇ ಚಿಂತೆ ಆಗದೇರ‍್ರೀ... ಮನಿ ಇಂದ, ಹೊರಗೆಲ್ಲೋ ಇರ್ತಾನ. ದೇಶಕ್ಕಾಗಿ ದುಡೀತಾನ... ಬರೋದೆ ಎಷ್ಟೋ ತಿಂಗಳಿಗೊಮ್ಮೆ... ಹೆಂಡ್ತಿ ಸುಖವೇ ಇಲ್ಲದ್ಹಂಗಾತು..."

"ಇನ್ನೊಂದು ಮದುವೆ ಮಾಡಿ... ಎಷ್ಟು ದಿನಾಂತ ಕಾಯ್ತೀರಿ...?"

"ನಾವೂ ಹಂಗೇ ಯೋಚ್ನೆ ಮಾಡೀವ್ರೀ... ಆದ್ರ ಅವ ಒಪ್ತಾನೋ ಇಲ್ಲವೋ ತಿಳೀದಲ್ರೀ ಅವ ಹೇಣ್ತೇನ ಭಾಳ ಹಚ್ಕೊಂಡಾನ್ರೀ..."

"ನಿಮ್ಮ ಸೊಸೆಯಿಂದ್ಲೇ ಹೇಳ್ಸಿ.... ನಿನ್ನ ಗಂಡನಿಗೆ ಸುಖ ಬೇಕೋ ಬೇಡ್ವೋ... ಮಕ್ಕಳು ಹುಟ್ಟ ಬೇಕೋ ಬೇಡ್ವೋ ಅಂತ ಕೇಳಿ ಅವಳಿಗೂ ಅರ್ಥವಾಗಲಿ... ಇನ್ನೂ ಚಿಕ್ಕ ವಯಸ್ಸು ನಿಮ್ಮ ಮಗನಿಗೆ. "ಅಷ್ಟರಲ್ಲಿ ಸರೋಜ ಹೊರಗೆ ಬಂದು ಜಗಲಿಯ ಮೇಲೆ ನಿಂತಳು. ತುಂಗಾಬಾಯಿ ಅವಳನ್ನೇ ದಿಟ್ಟಿಸಿದಳು. ಜಾನಕಿ ಮುಜುಗರ ಗೊಂಡಳು. ಈಕೆಗೆ ಮೊಮ್ಮಕ್ಕಳಿಲ್ಲ. ಸಂಸಾರ ತಾಪತ್ರಯ. ಈ ಸರೋಜ ಯಾಕೆ ಬಂದು ಇವಳ ಎದುರಿಗೆ ನಿಂತಳೋ?.. "ಬರ್ತೀವ್ರೀ ತುಂಗಾಬಾಯಿ ... ಬಸಿರಿ ಹುಡ್ಗೀ ಹೊಟ್ಟೆ ಹಸಿದ್ಕೊಂದು ಇದಾಳೆ... ಏನಾದ್ರೂ ಕೊಡ್ಬೇಕು."

"ನಮ್ಮನಿಗೆ ಕಳಿಸ್ರಲ್ಲಾ ಗೊಜ್ಜವಲಕ್ಕಿ ಮಾಡ್ಯೇನಿ... ಕೊಡ್ತೀನಿ"

"ಪರವಾಗಿಲ್ಲ ಬಿಡಿ....

'ಹಂಗಂದ್ರೆ ಹೆಂಗಾಗ್ತದ ಜಾನಕಮ್ಮ ನಾವು ಒಂದೇ ವಠಾರದಾಗ, ಅಕ್ಕ ತಂಗಿಯರ್‍ಹಂಗ ಇರಬೇಕ್ರೀ.... ಈ ಕೀನೂ ನಮ್ಮ ಸುಧಾ ಹಂಗ... ನಾನು ಈಗ್ಲೇ ತಂದು ಕೊಡ್ತಿನ್ರೀ ' ಎನ್ನುತ್ತಾ ಅವಳ ಮನೆಯ ಕಡೆಗೆ ತಿರುಗಿದ್ದಳು. ಜಾನಕಿ ಸರೋಜಳನ್ನು ಹಗುರವಾಗಿ ಗದರುತ್ತಾ ಒಳಕ್ಕೆ ಕರೆತಂದಳು.

"ಹಾಗೆ ಅವರ ಮನೆಯವರ ಎದುರಿಗೆ ಬಂದು ನಿಂತ್ಕೋ ಬೇಡ , ನಿಂಗೆಒಂಚೂರು ಅರ್ಥವಾಗುಲ್ಲ."

"ನಮ್ಮ ಮನೆ ಮುಂದೆ ನಾನು ನಿಂತೆ. ನಾನೇನು ಅವರ ಮನೆಗೆ ಹೋಗಿದ್ನಾ?"

"ಆಕೆ ಗೊಜ್ಜವಲಕ್ಕಿ ಕೊಡ್ತಾಳಂತೆ. ತಿನ್ಬೇಡ... ಮದ್ದು ಗಿದ್ದು ಹಾಕಿದ್ರೆ...?"

'ಛೀ.. ಎಂಥಾ ಕೆಟ್ಟ ಯೋಚ್ನೆ ಮಾಡ್ತೀಯಮ್ಮಾ... ಅವರ‍್ಯಾಕೆ ಹಾಗೆ ಮಾಡ್ತಾರೆ? ಮೊನ್ನೆ ಮೊನ್ನೆ ಅವರ ಹತ್ರಾನೇ ಚಕ್ಕುಲಿ ಉಂಡೆ ಮಾಡ್ಸಿದ್ಯಲ್ಲಾ ಮರೆತು ಬಿಟ್ಯಾ ? ಅವರು ಒಳ್ಳೆ ಜನರು. ಮಾತು ಒರಟು ಇರಬಹುದು. ಹೃದಯ ಒಳ್ಳೇದು. ಸಮಯ ಅಂದ್ರೇ ಸಹಾಯ ಮಾಡೋ ಜನ .... ಅವರನ್ನ ಅನ್ಬೇಡ....'

"ಸರಿ , ಸರಿ, ನೀನೂ ತಿಳುವಳಿಕೆ ಹೇಳ್ಬೇಡ. ಮಳ್ಳಿ ಹಾಗೆ ಇದ್ದ ಆ ಟೀಚರ್... ವಠಾರದ ಮಾಲೀಕ ಮಗನನ್ನೇ ಬುಟ್ಟಿಗೆ ಹಾಕಿ ಕೊಳ್ಳಲಿಲ್ವಾ ?ಆಕೆ !ಆ ಲಕ್ಷ್ಮಿ ದೇವಮ್ಮ ನೋಡೋಕೆ ದೇವತೆ ಥರ ಇದಾಳೆ... ಹೃದಯದಲ್ಲಿ ಬರೀ ಕಪಟ.

"ಬಿಡಮ್ಮ ಇಂಥದನ್ನೆಲ್ಲ ನಂಗೆ ಹೇಳ್ಬೇಡ. ಒಳ್ಳೆಯ ಮಾತುಗಳೇನಾದ್ರೂ ಇದ್ದರೆ ಹೇಳು. ನನ್ನ ಆರೋಗ್ಯಕ್ಕೆ ಒಳ್ಳೇದು. ಅಷ್ಟರಲ್ಲಿ ತುಂಗಾಬಾಯಿ, ಒಂದು ಚಿಕ್ಕ ಪಾತ್ರೆಯ ತುಂಬಾ , ಗೊಜ್ಜವಲಕ್ಕಿಯನ್ನು ತುಂಬಿಕೊಂಡು ತಂದಳು. ಕೆಂಪಗೆ ಬಣ್ಣವಾಗಿತ್ತು. ಜಾನಕಿ ಮಗಳ ಕಡೆ ನೋಡಿದಳು.

"ಖಾರ ಇರಬಹುದು. ಶಾನೇ ಖಾರ ತಿನ್ಬೇಡ. ಒಳ್ಳೇದಲ್ಲ."

"ಇಲ್ರೀ ಖಾರ ಇಲ್ರೀ... ಬ್ಯಾಡಗೀ ಮೆಣಸಿನಕಾಯಿ ಪುಡಿ ಮಾಡಿಸೀನ್ರೀ.. ಅದ ಹಂಗಾ... ಬಣ್ಣ ರುಚಿ ಬಡಿಯೋ ಹಂಗ ಇರತದ್ರೀ.... ಖಾರ ಮಾತ್ರ ಇರೂದಿಲ್ರೀ... ಸರೋಜವ್ವಾ ನಿಂಗ ಏನ ಆಸ ಆಗ್ತದೀ ಅದನ್ನು ತಿನ್ನೂಕ್ಕೆ ಕೇಳವ್ವಾ ನಾ ಮಾಡಿ ಕೊಡ್ತೀನಿ.... ನಿಮ್ಮವ್ವಗ ಇನ್ನು ತ್ರಾಣ ಬಂದಿಲ್ಲ... ಮಂಗಳ ಇನ್ನು ಚಿಕ್ಕಾಕಿ ಇದಾಳ." ಆಕೆ ವಿಶ್ವಾಸದಿಂದ ಹೇಳಿದಾಗ, ಸರೋಜ ತಾಯಿಯ ಕಡೆ ನೋಡಿದಳು. "ನಾ ಇನ್ನು ಹೋಗ್ತೇನವ್ವಾ.... ಆರಾಮವಾಗಿ ಕುಂಡ್ರು ತಿನ್ನು..." ಎಂದು ಹೇಳಿ ತನ್ನ ಮನೆಯ ಕಡೆಗೆ ಹೊರಟು ಹೋದಳು. ಸರೋಜ, ಮೇಲೆ ಕಾಣುತ್ತಿದ್ದ ಶೇಂಗಾ ಬೀಜವನ್ನು ಹೆಕ್ಕಿ ಬಾಯಿಗೆ ಹಾಕಿಕೊಳ್ಳುತ್ತಾ ಒಳ ನಡೆದಳು. ತಾನೊಂದಿಷ್ಟನ್ನು ತಟ್ಟೆಗೆ ಹಾಕಿಕೊಂಡು ತಿಂದು ಉಳಿದುದನ್ನು ತಮ್ಮ ತಂಗಿಯರಿಗೆಂದು ತೆಗೆದಿಟ್ಟಳು.

ಂ ಂ ಂ

ಮನೆಯಿಂದ ಹೊರಡುವ ಮೊದಲು ಚಂದ್ರು ಗೋಪಾಲಯ್ಯ ಹಾಗೂ ಲಕ್ಷ್ಮಿದೇವಮ್ಮನವರ ಕಾಲುಗಳಿಗೆ ನಮಸ್ಕರಿಸಿದ. ಅಮ್ಮಾ.... ನನ್ನನ್ನು ಕ್ಷಮಿಸಿ ಬಿಡಿ. ನಾನು ನಿಮಗೆ ಒಳ್ಳೆಯ ಮಗನಾಗಲಿಲ್ಲ". ಎಂದು ಹೇಳಿ ಕೈಮುಗಿದ. ಆಕೆ ಮಾತಾಡಲಿಲ್ಲ. ನೀವು ನನ್ನ ಪತ್ನಿಯನ್ನು ಸೊಸೆಯಾಗಿ ಸ್ವೀಕರಿಸುವುದಿಲ್ಲ ಅಂತ ನನಗೆ ಬೇಸರ ಇಲ್ಲ. ಯಾಕೆಂದರೆ ನಮ್ಮಿಬ್ಬರ ನಡುವೆ ಬಾಂಧವ್ಯ ಬೆಳೆಯಲೇ ಇಲ್ಲ. ಅಂತರ ಹೆಚ್ಚುತ್ತಲೇ ಹೋಯಿತು. ಆದರೂ, ನನಗೆ ನಿಮ್ಮ ಬಗ್ಗೆ ಗೌರವವಿದೆ. ವಿಶ್ವಾಸವಿದೆ. ನನ್ನ ಈ ನಿರ್ಧಾರದಿಂದ ಅಪ್ಪನಿಗೆ ಬೇಸರವಾಗಬಹುದು... ನಾನು ಎಲ್ಲವನ್ನೂ ಬಿಟ್ಟು ಹೋಗುತ್ತಿದ್ದೇನೆ. ನನಗೆ ಏನೂ ಬೇಡ... ನಾನು ಇಷ್ಟರ ಮಟ್ಟಿಗೆ ಬರಲು ನನ್ನ ಅಪ್ಪನೇ ಕಾರಣ ಎನ್ನುವುದನ್ನು ನಾನು ಎಂದಿಗೂ ಮರೆಯುವುದಿಲ್ಲ. ನನ್ನ ಬಗ್ಗೆ ನಿಮಗೆ ಒಳ್ಳೆಯ ಭಾವನೆಗಳಿಲ್ಲದಿರಬಹುದು. ಆದರೆ ಕೆಟ್ಟ ಭಾವನೆಯೂ ಇಲ್ಲ ಎಂದು ಭಾವಿಸ್ತೀನಿ. ನೀವು ನನ್ನ ಮದುವೆಗೆ ಬರುವುದಿಲ್ಲ ಎಂದು ತಿಳಿದಿದ್ದರೂ ಕರೆಯುತ್ತಿದ್ದೇನೆ. ನೀವು ಬಂದರೆ ನನಗೆ ಸಂತಸವಾಗುತ್ತದೆ..."

"ನಿನ್ನ ಈ ಬೂಟಾಟಿಕೆ ಮಾತುಗಳು ಸಾಕು... ಇವರ ಬೆಂಬಲ ನಿನಗಿದೆ ಅಂತ, ನಿನಗೆ ಇಷ್ಟು ಧೈರ್ಯ ಬಂದಿದೆ... ನಿನಗೂ ಸ್ವಾಭಿಮಾನ ಇದೆ ಅನ್ನುವುದನ್ನು ಉಳಿಸಿಕೋ. ... ನೀನಿನ್ನು ಹೋಗಬಹುದು" ಎಂದಳು.

"ಲಕ್ಷ್ಮೀ ಈ ಹೊತ್ನಲ್ಲಾದರೂ ಮೃದುವಾಗಿ ಮಾತಾಡು... ಅವನು ಬೇರೆ ಯಾರೂ ಅಲ್ಲ. ನಮ್ಮ ಚಂದ್ರು...."

"ಸಾಕು... ನನಗೆ ಆಪ್ತನಾಗದವನನ್ನು ಕಟ್ಟಿಕೊಂಡು ನಾನು ಏನು ಮಾಡಬೇಕಾಗಿದೆ....? ಇದು ನಮ್ಮ ಅಮ್ಮ ಮಾಡಿದ ತಪ್ಪು. ನಿಮ್ಮನ್ನು ಅಂದು ಏನೂ ಪ್ರಯೋಜನವಿಲ್ಲ... ಮದುವೆಗೆ ನೀವೂ ಹೋಗಬೇಡಿ ಎಂದು ಹೇಳುವಷ್ಟು ನಿಷ್ಠುರದ ಹೆಂಗಸು ನಾನಲ್ಲ.... ನನ್ನ ಕಡೆಯಿಂದ ಎರಡು ಮಂತ್ರಾಕ್ಷತೆಯ ಕಾಳನ್ನು ಇವನ ತಲೆಯ ಮೇಲೆ ಹಾಕಿ... ಇಷ್ಟೇ ಋಣ ಇದ್ದದ್ದು ಅಂತ ಅಂದ್ಕೊಳ್ತೀನಿ..." ಎಂದು ಹೇಳಿ, ಒಳಗೆ ದೇವರ ಮನೆಗೆ ಹೋಗಿ ದೇವರ ಮುಂದೆ ಕುಳಿತು ಬಿಟ್ಟಳು. ಅವಳ ಮನದ ಮಂಥನ ಅವಳಿಗೆ, ಅವಳನ್ನು ಸೃಷ್ಟಿಸಿದ ಬ್ರಹ್ಮನಿಗೆ ಮಾತ್ರ ತಿಳಿದಿತ್ತೇನೋ...? ಚಂದ್ರು ಗೋಪಾಲಯ್ಯ ಇಬ್ಬರೂ ಮನೆಯಿಂದ ಹೊರಟರು.

○ ○ ○

ಚಂದ್ರು ಪಂಕಜರ ಮದುವೆ ಸರಳವಾಗಿ ಆರ್ಯ ಸಮಾಜದಲ್ಲಿ ನೆರವೇರಿತ್ತು. ಚಂದ್ರು ತನ್ನ ಹತ್ತಿರದ ಸ್ನೇಹಿತರನ್ನು ಮದುವೆಗೆ ಆಹ್ವಾನಿಸಿದ್ದ. ಗೋಪಾಲಯ್ಯನ ಹತ್ತಿರದ ಬಳಗದವರು ಮಾತ್ರ ಮದುವೆಗೆ ಹಾಜರಾಗಿದ್ದರು. ಚಂದ್ರು ತನ್ನ ಸ್ವಂತ ತಂದೆ ತಾಯಿಯರ ಮನೆಗೆ ತಿಳಿಸಲು ನಿರಾಕರಿಸಿದ. ಅವರೊಡನೆ ನನಗೆ ಯಾವ ಬಾಂಧವ್ಯವೂ ಇರಲಿಲ್ಲ. ವ್ಯವಹಾರವೂ ಇರಲಿಲ್ಲ.... ನನ್ನನ್ನು ದತ್ತು ಕೊಟ್ಟು ಸಂಬಂಧವನ್ನು ಕಳೆದುಕೊಂಡವರು. ಈಗ ಮತ್ತೆ ಆ ಸಂಬಂಧವೇನೂ ಮತ್ತೆ ಕೂಡಿ ಬರುಲ್ಲ ಎಂದು ಬಿಟ್ಟಿದ್ದ.

ಗೋಪಾಲಯ್ಯನ ತಮ್ಮ ನಾರಾಯಣನ ಮನೆಯವರೇ ಮುಂದಾಳತ್ವ ವಹಿಸಬೇಕಾಗಿ ಬಂತು." ಇದೆಂಥಾ ಗಟ್ಟಿ ಹೃದಯಾನೋ...? ಕಡೇ ಪಕ್ಷ ತೋರಿಕೆಗಾದ್ರೂ ನಿನ್ನ ಹೆಂಡತಿ ಮದುವೆಗೆ ಬರಬೇಕಾಗಿತ್ತು... ಹಸೆಮಣೆ ಮೇಲೆ ಕೂತ್ಕೋ ಅಂತ ಯಾರೂ ಬಲವಂತ ಮಾಡ್ತಿರ್ಲಿಲ್ಲ..." ಗೋಪಾಲಯ್ಯನ ತಾಯಿ ನುಡಿದಳು... ಅವನು ಮೌನವಾಗಿದ್ದುಬಿಟ್ಟ...

"ಹೀಗೆ ನೀನು ಮೌನವಾಗಿದ್ದೇ ಇದ್ದೇ ಅವಳು ತನ್ನ ಪಟ್ಟು ಬಿಡಲಿಲ್ಲ. ನೋಡಿದ್ಯಲ್ಲ ಕಡೆಗೆ ಆದದ್ದೇನು? ಅವಳಿಗೆ ಮಗ ಬೇಕಿಲ್ಲ, ಸೊಸೆ ಬೇಕಿಲ್ಲ..."

"ಅಮ್ಮಾ ಅವಳಿಗೆ ಈ ಮದುವೆ ಇಷ್ಟವಿರಲಿಲ್ಲ..."

"ಚಂದ್ರು ಮಾಡಿದ್ದು ಸರಿಯಿಲ್ಲ ನಿಜ. ಆದರೆ, ಅದಕ್ಕೂ ಅವಳೇ ಕಾರಣ. ಮೊದಲ್ನಿಂದ ಅಂಕೆ ಶಿಕ್ಷೇಲಿ ಬೆಳೆಸಬೇಕಾಗಿತ್ತು... ತಪ್ಪು ಯಾವುದು, ಸರಿ ಯಾವುದು ಅಂತ ತಿಳಿಸಿಕೊಡಬೇಕಾಗಿತ್ತು. ಈ ಹುಡುಗಿಯೋ ಒಂಟಿಯಾಗಿ ವಠಾರದ ಮನೇಲಿತ್ತು. ಇವನೋ ವಯಸ್ಸಿಗೆ ಬಂದ ಹುಡುಗ. ಅವಿವೇಕ ನಡೆಯೋಕೆ ಎಷ್ಟು ಹೊತ್ತು

ಬೇಕಾಗುತ್ತೆ?"

"ಇಲ್ಲಮ್ಮ ಹಾಗೇನೂ ಇರಲಿಲ್ಲ. ಪಂಕಜನ ಗಂಡ ಇಲ್ಲ ಅಂತ ಇವನಿಗೆ ತಿಳೀತು... ಅವನ ಮನಸ್ಸು ಕರಗಿತು... ಬಾಳು ಕೊಡ್ತೀನಿ ಅಂದ. ಹೂಂ ಅಂದೆ..."

"ಏನು ನಡೀತು ಏನು ನಡೀಲಿಲ್ಲ ಅಂತ ನಿಂಗೆ ಗೊತ್ತು ಅಲ್ವಾ?.... ನೀನು ಅಪ್ಪಟ ಪ್ರಾಮಾಣಿಕ. ನಿನ್ನ ಹೆಂಡತಿಗೆ ನ್ಯಾಯವಾಗಿ ನಡೆದುಕೊಂಡಿದೀಯ... ಎಲ್ಲರೂ ಹಾಗೇ ಇರ್ತಾರಾ ?..."

"ಏನೇನೋ ಮಾತ್ಯಾಕೆ ಆಡ್ತೀಯಮ್ಮಾ.... ಚಂದ್ರು ಪಂಕಜನ ಮಧ್ಯೆ ಏನೂ ನಡೆದಿಲ್ಲ ಅಂತ ನಾನು ಧೈರ್ಯವಾಗಿ ಹೇಳಬಲ್ಲೆ.... ಅವನೂ ಪ್ರಾಮಾಣಿಕನೇ... ಆದರೆ ಅವನ ಗ್ರಹಚಾರ! ಸ್ವಂತ ತಂದೆ ತಾಯಿಗಳಿಂದ ದೂರವಾದ. ನಮಗೆ ಹತ್ತಿರವಾಗಲಿಲ್ಲ. ಅಥವಾ ಲಕ್ಷ್ಮಿ ಹತ್ತಿರವಾಗಲು ಪ್ರಯತ್ನಿಸಲಿಲ್ಲ.... ಈಗಲಾದರೂ ಅವನಿಚ್ಛೆಯಂತೆ ಸುಖವಾಗಿರಲಿ ಅಂತ ನಾನು ಅವನ ಪರವಾಗಿ ನಿಂತೆ..."

"ನಿನ್ನ ಹೆಂಡತಿ, ಸುಖವಾಗಿರುಕ್ಕೆ ಬಿಡ್ತಾಳೇನೋ... ಮದುವೆಗೇ ಬರದಿದ್ದವಳು ಮನೆಗೆ ಸೇರಿಸ್ತಾಳ್ಯೇ?"

"ಅದೆಲ್ಲಾ ಇತ್ಯರ್ಥವಾಗಿದೆ... ಅವನು ಅವನ ಹೆಂಡತಿ ಆ ಮನೆಗೆ ಬರುವುದಿಲ್ಲ.... ಈಗ ಅವನು ಇರುವ ಊರಿಗೇ ಹೋಗುತ್ತಾರೆ. ಅಲ್ಲಿ ಹೊಸ ಸಂಸಾರವನ್ನು ಪ್ರಾರಂಭಿಸುತ್ತಾರೆ.... ನೀನೂ ಬೇಕಾದರೆ ಹೋಗಿದ್ದು ಬಾ.... ಚಂದ್ರು ನಿನ್ನನ್ನು ಪ್ರೀತಿಯಿಂದ ಅಜ್ಜಿ ಅಂತ ಬಾಯ್ತುಂಬಾ ಕರೀತಾನಲ್ಲ..."ನಗುತ್ತಾ ನುಡಿದ.

"ನಂಗೆ ಈ ವೈಮನಸ್ಯ ಅರ್ಥವಾಗುಲ್ಲ ಗೋಪಿ... ಹೆಂಗಸಾದವಳಿಗೆ ಇಷ್ಟು ದುರಭಿಮಾನ ಇರಬಾರದು. ಮುಂದೆ ಹೇಗೆ ಅಂತ..."

"ಇನ್ಮುಂದೆ ನನಗೆ ಅವಳು, ಅವಳಿಗೆ ನಾನು ಅಷ್ಟೇ..."

"ಅಷ್ಟೇ ಅಂತೀಯ.... ನೀನು ಚಂದ್ರು ಮನೆಗೇ ಹೋಗಿ ಯಾಕೆ ಇರಬಾರದು? ಈ ಇಳಿ ವಯಸ್ನಲ್ಲಿ ಅವಳು ಒಬ್ಬಳೇ ಇರಲಿ... ಆಗ ಗೊತ್ತಾಗುತ್ತೆ"

"ಈಗ ಚಂದ್ರು ಜೊತೆ ಹೋಗಿ ಇರಲು ಸಾಧ್ಯವಿಲ್ಲ. ಲಕ್ಷ್ಮಿಗೆ ನನ್ನ ಹೊರತು ಬೇರೆ ಯಾರಿಲ್ಲ. ಚಂದ್ರೂಗೆ ಮಡದಿ ಇದ್ದಾಳೆ. ಲಕ್ಷ್ಮಿಯ ಗಂಡನಾಗಿ ಅವಳ ಮನೆಯಲ್ಲಿರು ಅಂತ ಕಳಿಸಿಕೊಟ್ಟವರು ನೀವೇ.... ಅದನ್ನು ಮುರಿ ಅಂತ ಹೇಳ್ತೀಯಲ್ಲ. ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ."

"ನಿನ್ನ ಹಣೇಬರಹ ಅನುಭವಿಸು" ಎಂದು ಗೊಣಗಿದಳು. ಚಂದ್ರು ಈಗ ನಮ್ಮ ಮಗನಲ್ಲ. ಅವನ ದತ್ತು ಸ್ವೀಕಾರವನ್ನೂ ರದ್ದುಗೊಳಿಸಿದ್ದೇವೆ ಎಂದು ಹೇಳಲು ಇಷ್ಟಪಡಲಿಲ್ಲ. ಉದ್ಭವಿಸಬಹುದಾದ ಪ್ರಶ್ನೆಗಳಿಗೆ ಉತ್ತರಿಸುವ ಸಹನೆ, ವ್ಯವಧಾನ ಯಾವುದೂ ಇರಲಿಲ್ಲ. ಅಲ್ಲಿ ನಿಲ್ಲದೇ ಹೊರಬಂದ.

ಅಲ್ಲಿಂದ ವಾಪಸ್ಸು ಊರಿಗೆ ಹೊರಡುವ ಮೊದಲು ಚಂದ್ರುಗೆ ಹೇಳಿದ. ನಿನಗೆ, ಅಮ್ಮನ ಸ್ವಭಾವ ಗೊತ್ತಿದ್ದದ್ದೇ... ಬೇಸರ ಮಾಡ್ಕೋ ಬೇಡ. ಆಗ ಈಗ ಮನೆಗೆ ಬಾ, ನನಗೋಸ್ಕರವಾದ್ರೂ ಬಾ." ಎಂದ.

"ಅಮ್ಮನ ಮನಸ್ಸಿಗೆ ಬೇಸರವಾಗದಿದ್ರೆ ಖಂಡಿತಾ ಬರ್ತೀನಿ. ನೀವೇ ಬರ್ತಾ ಇರಿ. ಅಪ್ಪಾ, ಅಮ್ಮನನ್ನು ಕರ್‍ಕೊಂಡು ಬನ್ನಿ..." ಮೊಟ್ಟ ಮೊದಲ ಬಾರಿಗೆ ತಾನು ಎಲ್ಲರನ್ನು ಕಳೆದುಕೊಂಡನೇನೋ ಅಂತ ಅನ್ನಿಸಿತ್ತು. ಎರಡು ಮೂರು ಬಗೆಯ ಸಿಹಿ ತಿಂಡಿಗಳನ್ನು ತೆಗೆಸಿಕೊಟ್ಟ. ವಠಾರದವರಿಗೆಲ್ಲಾ ಸಿಹಿಯನ್ನು ಹಂಚಿಬಿಡಿ ಅಪ್ಪಾ..." ಎಂದ. ಗೋಪಾಲಯ್ಯ ಮಗನನ್ನು ತಬ್ಬಿಕೊಂಡ ಇವತ್ತು ಒಂಥರಾ ಸಂತೋಷವೂ ಆಗ್ತಿದೆ. ಒಂಥರಾ ವ್ಯಥೆಯೂ ಆಗ್ತಿದೆ ಕಣೋ ಚಂದ್ರು" ಎನ್ನುತ್ತಾ ಕಣ್ಣುಗಳನ್ನು ಒರೆಸಿಕೊಂಡ.

"ನನ್ನಿಂದ ತಪ್ಪಾಗಿದ್ದರೆ ಕ್ಷಮಿಸಿ ಬಿಡಿ ಅಪ್ಪಾ..."

'ಇಲ್ಲ ಚಂದ್ರು, ನಿನ್ನ ತಪ್ಪು ಏನೂ ಇಲ್ಲ. ನಿನಗೆ ಸರಿ ಎನಿಸಿದ್ದನ್ನು ನೀನು ಧೈರ್ಯವಾಗಿ ಮಾಡಿದ್ದೀಯೆ. ಯಾರಿಗೂ ನೀನು ಹೆದರಬೇಕಾಗಿಲ್ಲ. ಸದಾ ಕಾಲ ಸುಖವಾಗಿರಿ" ಎಂದು ಹಾರೈಸಿದ.

ಸಿಹಿ ತಿಂಡಿಗಳನ್ನು ಲಕ್ಷ್ಮೀದೇವಮ್ಮನ ಮುಂದಿಟ್ಟ. "ಇದರಲ್ಲಿ ಒಂದೆರಡು ಬಗೆಯ ಸಿಹಿ ತಿಂಡಿಗಳಿವೆ. ತಗೋ, ವಠಾರದರಿಗೆಲ್ಲಾ ಹಂಚಿಬಿಡು."

"ನಾನೂ ತಿನ್ನಲ್ಲ. ನಾನು ಯಾರಿಗೂ ಕೊಡುಲ್ಲ. ಇವನು ಯಾವ ಘನಕಾರ್ಯ ಮಾಡಿದ್ದಾನೆ ಅಂತ ಸಿಹಿ ತಿಂಡಿಯನ್ನು ಹಂಚಿ ತಿನ್ನಬೇಕು? ಮರ್ಯಾದೆ ತೆಗೆದವನ ಹೆಸರನ್ನು ಎತ್ತಲೂ ನನಗೆ ಇಷ್ಟವಿಲ್ಲ." ಅವಳು ತಿಂಡಿಗಳ ಕಡೆ ಕಣ್ಣೆತ್ತಿ ಸಹ ನೋಡಲಿಲ್ಲ...

"ಸರಿ ನಾನೇ ಎಲ್ಲರಿಗೂ ಕೊಟ್ಟು ಬಂದು ಬಿಡ್ತೀನಿ. ಹಾಳಾಗಿ ಬಿಡುತ್ತೆ."

"ಏನಾದ್ರೂ ಮಾಡ್ಕೊಳ್ಳಿ... ಇಷ್ಟು ಖರ್ಚು ಮಾಡಿ ತರುವ ಅವಶ್ಯಕತೆ ಏನಿತ್ತು ದುಡ್ಡು ದಂಡ." ಗೊಣಗಿದಳು.

"ನಾನು ದುಡ್ಡು ಕೊಟ್ಟು ತರಲಿಲ್ವೇ ಮಾರಾಯ್ತಿ. ಚಂದ್ರು ತೆಗೆಸಿಕೊಟ್ಟ."

"ವರದಕ್ಷಿಣೆ ದಂಡಿಯಾಗಿ ಸಿಕ್ಕಿರಬೇಕು. ಇಷ್ಟು ಉದಾರವಾಗಿ ಸಿಹಿಯನ್ನು ಹಂಚಬೇಕಾದರೆ..." ಮತ್ತೆ ಗೊಣಗಿದಳು. ಆದರೆ, ಗೋಪಾಲಯ್ಯ ಕೇಳಿಸದವನಂತೆ, ಸಿಹಿ ತಿಂಡಿಗಳಿದ್ದ ಚೀಲವನ್ನೆತ್ತಿಕೊಂಡು ಮನೆಯಿಂದ ಹೊರಬಿದ್ದ. ಮೊದಲಿಗೆ, ಹೊಸ ದಾಗಿ ಬಾಡಿಗೆಗೆ ಬಂದಿದ್ದ, ಜನಾರ್ಧನರಾಯರ ಮನೆಗೆ ಬಂದ. ಹೊರಬಾಗಿಲಲ್ಲೇ ಅವನ ತಾಯಿ ಎದುರುಗೊಂಡಳು. "ನನ್ನ ಮಗನ ಮದುವೆಯ ಸಿಹಿತಿಂಡಿ ತಗೊಳ್ಳಿ" ಎನ್ನುತ್ತಾ ಅಲ್ಲಿ ಇದ್ದವರ ಮುಂದೆ ಡಬ್ಬಿಯನ್ನು ಹಿಡಿದ. ಎಲ್ಲರೂ ಸಂಕೋಚದಿಂದ

ಚೂರು ಚೂರು ತೆಗೆದುಕೊಂಡರು.

"ಮಗ ಸೊಸೇನೂ ಬಂದಿದಾರೇನು?.... ನಿಮ್ಮ ಶ್ರೀಮತಿ ಇಲ್ಲೇ ಇದ್ದ ಹಾಗಿತ್ತು..." ಹಿರಿಯಾಕೆ ಕೇಳಿದಾಗ ಮುಜುಗರಗೊಂಡ.

" ಇನ್ನೆಂದಾದ್ರು ಮತ್ತೆ ಬಂದು ಮಾತಾಡ್ತೀನಿ. ಎಲ್ಲರ ಮನೆಗೂ ಕೊಡ್ಬೇಕು" ಎಂದು ಹೇಳಿ ಅಲ್ಲಿ ನಿಲ್ಲದೇ ಬಾಗಿಲನ್ನು ದಾಟಿದ. ಅಲ್ಲಿಂದ ಜೋಷಿಯವರ ಮನೆಗೆ ಬಂದ. ಅವರ ಮನೆಯ ವಾತಾವರಣ ಬಿಗುವಾಗಿದೆಯೆಂದೆನಿಸಿತ್ತು. ಅವರುಗಳು ಅಗತ್ಯಕ್ಕಿಂತ ಹೆಚ್ಚು ಮೌನವಾಗಿದ್ದಾರೆನಿಸಿತು..."ಚಂದ್ರು, ನಿಮ್ಮೆಲ್ಲರಿಗೂ ಸಿಹಿತಿಂಡಿಯನ್ನು ಕಳಿಸಿದ್ದಾನೆ. ತಿಂದು ಶುಭ ಹಾರೈಸಿ" ಎಂದ.

" ಆಯ್ತು ರಾಯರ ಎಲ್ರಿಗೂ ಒಳ್ಳೇದಾಗಲಿ. ತುಂಗಾ, ಸಿಹಿತಿಂಡಿಗಳನ್ನು ತೆಗೆದಿಡವ್ವಾ ಮಕ್ಕಳು ಸ್ಕೂಲ್ನಿಂದ ಬಂದ್ಮೇಲೆ ಒಟ್ಟಿಗೇ ತಿನ್ನೋಣು."ಹಿರಿಯ ಜೋಷಿ ಹೇಳಿದಾಗ, ತುಂಗಮ್ಮ ಅಂತೆಯೇ ಮಾಡಿದಳು. ಅಲ್ಲಿಂದ ಹೊರಟಾಗ ಅವರ್‍ಯಾರೂ ಕಾಫಿ ಟೀ ತಗೊಳ್ಳಿ ಎಂದೂ ಹೇಳಲಿಲ್ಲ. ಹೆಚ್ಚಿಗೆ ಮಾತಾಡಲಿಲ್ಲ.

ಅಲ್ಲಿಂದ ದಿಬ್ಬದ ಮೇಲಿನ ಮನೆಗೆ ಬಂದ. ಮನೆಯಾತನೇ ಬಾಗಿಲನ್ನು ತೆಗೆದ. ಬೇಸರಗೊಂಡು, ನಿರಾಸಕ್ತಿಯಿಂದ. ಕರೆಯಲೋ ಬೇಡವೋ ಎಂಬಂತೆ ಒಳಕ್ಕೆ ಕರೆದ. ಏನಿಲ್ಲ, ಮದುವೆಯ ಸಿಹಿತಿಂಡಿಗಳನ್ನು ಕೊಟ್ಟು ಹೋಗೋಣ ಅಂತ ಬಂದೆ ತಗೊಳ್ಳಿ..." ಎಂದು ಡಬ್ಬಿಯನ್ನು ಮುಂದೆ ಹಿಡಿದ. ಆತ ನಾಲ್ಕು ಜನಕ್ಕೆ ಮಾತ್ರ ತೆಗೆದುಕೊಂಡು ಮುಗುಳ್ನಕ್ಕ. ಅಲ್ಲಿಗೆ ಬಂದ ಕೆಲಸ ಮುಗಿದಿತ್ತು. "ಬರ್ತೀನಿ" ಎಂದು ಹಾಗೇ ಹಿಂತಿರುಗಿದ. ಅವನ ಪತ್ನಿ ಹೊರಕ್ಕೆ ಬಂದಿರಲೇ ಇಲ್ಲ. ಅಲ್ಲಿಂದ ರಾಮರಾಯರ ಮನೆಗೆ ಬಂದವನು, ಉಸ್ಸೆಂದು ಜಗುಲಿಯ ಮೇಲೆ ಕುಳಿತ. ಬಾಲು ಒಳಬಾಗಿಲಲ್ಲಿ ನಿಂತು ಇಣುಕಿ ನೋಡಿತು...

"ಬಾರೋ... ಮುದ್ದು ಗೋಪಾಲ".... ತಿಂಡಿ ಕೊಡ್ತೀನಿ ಬಾ..."ಗೋಪಾಲ ಮುದ್ದಾಗಿ ಕರೆದ. ಅವನು ಮುಂದಕ್ಕೆ ಎರಡು ಹೆಜ್ಜೆ ಇಡುವಷ್ಟರಲ್ಲಿ ಮಂಗಳಾ ಆತನ ಧ್ವನಿಯನ್ನು ಕೇಳಿ ಹೊರಕ್ಕೆ ಬಂದಳು.

"ಇಲ್ಲೇ ಕೂತು ಬಿಟ್ರೆಲ್ಲಾ ಮಾವ. ಒಳಕ್ಕೆ ಬನ್ನಿ" ಕರೆದಳು.

"ಇರ್ಲಿ.... ಇಲ್ಲೇ ಹಿತವಾಗಿದೆ. ಮನೇಲೆ ಯಾರೂ ಇಲ್ವೇನು ? ಕೇಳಿದ.

"ನಾನು, ಅಮ್ಮಾ, ಇವನು ಮಾತ್ರ ಇದೀವಿ. ಉಳಿದೋರೆಲ್ಲಾ ನಮ್ಮ ಚಿಕ್ಕಪ್ಪನ ಮನೆಗೆ ಊಟಕ್ಕೆ ಹೋಗಿದಾರೆ..."

"ಹೌದೇನು ? ನೀನ್ಯಾಕೆ ಹೋಗ್ಲಿಲ್ಲ?" ಎನ್ನುತ್ತಾ ಬಾಲುವಿನ ದುಂಡು ಕೆನ್ನೆಗಳನ್ನು ಮೃದುವಾಗಿ ಹಿಂಡಿ, ಕೈಗೆ ಒಂದು ಲಾಡು ಕೊಟ್ಟ. ಬಾಲು ಅಕ್ಕನ ಕಡೆ ನೋಡುತ್ತಾ ಉಂಡೆಗೆ ಬಾಯಿ ಹಾಕಿದ.

"ಅಮ್ಮನ ಜೊತೆಗೆ ಉಳ್ಕೊಂಡೆ... ಇದೆಲ್ಲಿಯದು ಲಾಡು ಮಾವಾ? ಪ್ರಸಾದಾನಾ?" ಅವನಿತ್ತ ತಿಂಡಿಯ ಡಬ್ಬಿಯನ್ನು ಕೈಗೆತ್ತಿಕೊಂಡಳು.

"ಮದುವೆ ಮುಗಿಸ್ಕೊಂಡು ಬರ್ತಿದೀನಮ್ಮ.... ಚಂದ್ರು ಎಲ್ಲರಿಗೂ ಕೊಡಿ ಅಂತ ತೆಗೆಸಿಕೊಟ್ಟ.... ಮನೆ ಮುಂದೆ ಚಪ್ಪರ ಹಾಕಿಸಿ, ವಾಲಗ ಊದಿಸಿ, ಮನೆ ತುಂಬಿಸಿ ಕೊಂಡಿದ್ದರೆ, ಎಲ್ರಿಗೂ ನೆನೆಪಿನಲ್ಲಿರ್ತಿತ್ತು. ಆ ಭಾಗ್ಯ ಈ ಮುದುಕಂಗಿಲ್ಲ. ಮನೆ ಮನೆಗೆ ಸಿಹಿ ಹಂಚಿ, ನಾನೇ ಸಿಹಿ ಸುದ್ದಿಯನ್ನು ತಿಳಿಸ್ತೀದೀನಿ... ನನ್ನ ಪೇಚಾಟ ನೋಡು..." ವ್ಯಥೆಯಿಂದ ಹೇಳಿದ.

"ಮದುವೆ ಚೆನ್ನಾಗಿ ನಡೀತಾ ಮಾವಾ? ಅವರಿಬ್ರೂ ಯಾವಾಗ ಬರ್ತಾರೆ?"

"ಮದುವೆ, ಸರಳವಾದ ಸಮಾರಂಭ, ಇಲ್ಲಿಂದ ಚಂದ್ರು ಜೊತೆ ಹೋದವನು ನಾನೊಬ್ಬನೇ... ಬರುವಾಗ ಒಬ್ಬನೇ ಬಂದೆ... ಅವರಿಬ್ಬರೂ ಯಾವಾಗ ಬರ್ತಾರೋ ಗೊತ್ತಿಲ್ಲ... ಅಥವಾ ಬರುವುದೇ ಇಲ್ಲವೋ?...."

"ಯಾಕೆ ಹಾಗಂತೀರಿ ರಾಯರೇ?" ಒಳಗಿನಿಂದ ಬಂದ ಜಾನಕಿ ಕೇಳಿದ್ದಳು.

"ಹೊಸಾ ವಿಷಯಾನಾ ಹೇಳಿ.... ಇದು ಲಕ್ಷ್ಮಿಗೆ ಇಷ್ಟವಿಲ್ಲದ ಮದುವೆ.... ಇವಳಿಗೆ ಸಮಾಧಾನವಿಲ್ಲ. ಚಂದ್ರು ಪಟ್ಟು ಹಿಡಿದ.... ಇಷ್ಟು ಸಾಕು ಅಲ್ವಾ?...

"ಮದುವೆ ನೆರವೇರಿದ ಮೇಲೆ ಹಠ ಸಾಧಿಸ್ಬಾರ್ದು... ಸಾಕಿದವನು ಆದರೇ ನಂತೆ? ಮಗನೇ ತಾನೇ.... ಆ ವಾಂಛಲ್ಯ ಎಲ್ಲಿ ಹೋಗುತ್ತೆ?'

"ವಾಂಛಲ್ಯ ಬೆಳೀಲೇ ಇಲ್ಲ... ನಾನಿನ್ನು ಬರ್ಲ್ಲಾ?" ಎದ್ದ.

"ಒಳಗೆ ಬನ್ನಿ ಮಾವ. ಕಾಫಿ ಕೊಡ್ತೀನಿ."

"ಇದು ಕಾಫಿ ಕುಡಿಯುವ ಹೊತ್ತಲ್ಲ... ಆದರೆ ನೀನು ಕೊಡುವ ಕಾಫಿಗೆ ಆ ನೆವ ಎಲ್ಲಾ ಹೇಳುವ ಹಾಗಿಲ್ಲ. ಸರಿ ಕೊಡು ಒಂದು ಚಮಚ ಸಕ್ಕರೆ ಜಾಸ್ತೀನೇ ಇರಲಿ... ಮೈಸೂರ್ನೂರು ಮಾತು ಮಾತ್ರ ಸವಿಯಾಗಿ ಸಿಹಿಯಾಗಿ ಆಡ್ತಾರೆ. ಆದರೆ ಕಾಫೀನ ಸ್ವಲ್ಪ ಕಹಿಯಾಗೇ ಕುಡೀತಾರೆ ಯಾಕೋ ಗೊತ್ತಿಲ್ಲ..." ಮಂಗಳ ನಕ್ಕಳು.... ಮಂಡ್ಯದಲ್ಲಿ, ಪಾಂಡವಪುರದಲ್ಲಿ ಸಕ್ಕರೆ ಕಾರ್ಖಾನೆಗಳಿವೆ... ಆದರೂ ಹಾಗೇನೇ...' ಎಂದು ಮಾತನ್ನು ಸೇರಿಸಿ, ಒಳ ಬಂದು ಕುಳಿತ... ಮಂಗಳ ಒಳಗೆ ಹೋಗಿದ್ದಳು. "ಜೋಷಿ ಮನೆಯವರೆಲ್ಲಾ ಭಾಳ ಮಂಕಾಗಿದ್ದರು..... ಹಾಗಿರುವ ಪೈಕಿ ಅಲ್ಲ ಅವರು..." ಎಂದ.

"ನಿಮಗೆ ಗೊತ್ತಿಲ್ಲವೇನು ? ಅವರ ಸೊಸೆಗೆ ವಿಪರೀತ ಹುಶಾರಿಲ್ಲ... ಎಂಥದೋ ಆಸ್ಪತ್ರೇಲಿ ಇಟ್ಟಿದಾರಂತೆ... ಸ್ಥಿತಿ ಗಂಭೀರವಂತೆ..."

"ಹೌದೇನು? ಪಾಪ... ಆ ಹುಡ್ಗೀನ ನೋಡಿದ್ದೆ... ಗೊತ್ತಾಗ್ಲೇ ಇಲ್ಲ..." ನಾನು ಬೇರೆ ಆಲೋಚನೆಗಳಲ್ಲಿದ್ದೆ...

"ಏನೋ... ಯಾವ ಗಳಿಗೇಲಿ ಏನೋ ಅನ್ನುವ ತವಕದಲ್ಲಿದಾರೆ.... ಅಲ್ಲಿಂದ ಪತ್ರ ಬಂದ ದಿನ ಭಾಳ ಮಂಕಾಗಿರ್ತಾರೆ...

"ಛೇ.... ಯಾಕೆ ಹೀಗಾಯ್ತೋ?" ಅಷ್ಟರಲ್ಲಿ ಮಂಗಳ ಕಾಫಿಯನ್ನು ತಂದಿತ್ತಳು. ಆತ ಮಾತನ್ನು ನಿಲ್ಲಿಸಿ ಕಾಫಿಯ ಆಸ್ವಾದದಲ್ಲಿ ನಿರತರಾದರು.

○ ○ ○

ಪಂಕಜ ಇದ್ದ ಮನೆಗೆ ಸಣ್ಣಪುಟ್ಟ ರಿಪೇರಿ ಮಾಡಿಸಿ, ಸುಣ್ಣಬಣ್ಣ ಹೊಡೆಸಿ, "ಮನೆ ಬಾಡಿಗೆಗ ಇದೆ" ಎಂಬ ಫಲಕವನ್ನು ಬೀದಿಗೆ ಕಾಣುವಂತೆ ತಗುಲಿ ಹಾಕಿದ್ದರು. ಅವರ ಮನೆಯ ಮುಂದಿನ ಅಂಗಳದಲ್ಲಿ ವಠಾರದ ಮಕ್ಕಳುಗಳು ಸೇರಿ ಆಟ ಆಡುತ್ತಿದ್ದರು. ಲಕ್ಷ್ಮಿದೇವಮ್ಮನನ್ನು ಕಂಡು ಎಲ್ಲರೂ ಮರೆಗೆ ಓಡುತ್ತಿದ್ದರು. ಒಮ್ಮೆ ಹಾಗೆ ಓಡುವಾಗ, ದಿಬ್ಬದ ಮನೆಗೆ ಬಾಡಿಗೆಗೆ ಬಂದಿದ್ದವರ ಮನೆಯ ಹುಡುಗಿ ಬಿದ್ದುಪೆಟ್ಟು ಮಾಡಿಕೊಂಡು 'ಹೋ' ಎಂದು ಅಳತೊಡಗಿದಳು.

ಹುಡುಗಿಯ ತಾಯಿ, ಮಗಳ ಅಳುವನ್ನು ಕೇಳಿ, ಓಡಿ ಬಂದು ಎತ್ತಿಕೊಂಡಳು. "ಇವರುಗಳ ಜೊತೆ ಸೇರ್ಕೊಂಡು ಆಟ ಆಡ್ಬೇಡ ಅಂದ್ರೆ ನೀನು ಕೇಳುಲ್ಲ... ಅವರೆಲ್ಲಾ ದೊಡ್ಡವರು...ಯಾರು ಬೀಳ್ಸಿದ್ದು.?" ಎಂದು ಮಗಳನ್ನೇ ಗದರಿ ಕೇಳಿದಳು.

"ಇಲ್ಲ ಅತ್ತೆ... ಇವಳು ಲಂಗ ತೊಡರಿ ಬಿದ್ದಳು. ನಾವು ಆಟ ಆಡಿಸ್ತೀವಿ.. ಬೈಯಬೇಡಿ ಎಂದಳು ಜಲಜ.

"ನೀನು ಸುಮ್ನಿರು. ನಿಮಗೆಲ್ಲಾ ಓದೋದು ಬರೆಯೋದು ಏನೂ ಇಲ್ವಾ ಸದಾ ಆಟ ಆಟ.... ನಿಮ್ಮ ಜೊತೆ ಸೇರಿದ್ರೆ ಇವಳೂ ದಡ್ಡಿಯಾಗಿ ಬಿಡ್ತಾಳೆ... ನಡೀ ಮನೆಗೆ " ಮಗಳನ್ನು ಗದರಿದಳು.

"ನಾನೇನು ದಡ್ಡಿಯಲ್ಲ... ನಾನು ಕ್ಲಾಸಿಗೇ ಫಸ್ಟ್... ಬೇಕಾದರೆ ಸ್ಕೂಲಿಗೆ ಬಂದು ಕೇಳಿ..." ಅವಳೂ ಎದುರುತ್ತರ ನೀಡಿದಳು.

"ಮಾತಿಗೆ ಮಾತು ಆಡ್ತೀಯಾ.... ತಡೀ ನಿನ್ನ ತಾಯಿಗೆ ಹೇಳ್ತೀನಿ." ಎನ್ನುತ್ತಾ ತನ್ನ ಮಗಳನ್ನೆತ್ತಿಕೊಂಡು ರಾಮರಾಯರ ಮನೆಯ ಕಡೆಗೆ ಬಂದಳು. ಜಲಜಳೂ ಅವಳ ಹಿಂದೆಯೇ ಓಡಿ ಬಂದು ಮನೆಯೊಳಗೆ ಸೇರಿಕೊಂಡಳು... ಜಾನಕಿ ಹೊರಬಂದಳು.

"ನಿಮ್ಮ ಮಗಳಿಗೆ ಸರಿಯಾಗಿ ಬುದ್ಧಿ ಹೇಳಿ... ಮಾತಿಗೆ ಎದುರು ಮಾತನ್ನಾಡ್ತಾಳೆ... ನಮ್ಮ ಮಗು ಚಿಕ್ಕದು... ಅದನ್ನು ಬೀಳಿಸಿದ್ದಾಳೆ..."

"ಇಲ್ಲಮ್ಮ ನಾನೇನು ಬೀಳಿಸಿಲ್ಲ. ಅವಳೇ ಲಂಗ ತೊಡರಿ ಬಿದ್ದದ್ದು ಅತ್ತೆ ಸುಳ್ಳು ಹೇಳಿದ್ದಾರೆ. "

" ಮಕ್ಕಳು ಮಕ್ಕಳು ಆಡುವಾಗ ಬೀಳೋದು, ಪೆಟ್ಟಾಗೋದು ಸಹಜ ಅದನ್ಯಾಕೆ

ಇಷ್ಟು ದೊಡ್ಡದು ಮಾಡ್ತೀರಿ... ಅವರವರೇ ಸರಿ ಹೋಗಿ ಸ್ಕೊಳ್ತಾರೆ. ದೊಡ್ಡೋರು ಮಕ್ಕಳ ಮಾತಿಗೆ ಬರಲೇ ಬಾರದು.

"ಯಾಕ್ರಿ ಬರ್ಾರ್ದು ಅಂ? ನಿಮಗೆ ಮನೇಲಿ ನೋಡ್ಕೊಳ್ಳೋಕೆ ಆಗುಲ್ಲ ಅಂತ ಬೀದೀಲಿ ಬಿಟ್ಟು ಬಿಡ್ತೀರಿ ಸದಾ ಬೀದೀಲೇ ಕುಣೀತಾ ಇರುತ್ವೆ...."

"ಬಿಡ್ಬೇಡಿ ನಿಮ್ಮ ಮಗಳನ್ನ ಒಳಗೇ ಇಟ್ಕೊಳ್ಳಿ ... ಇದುವವರೆಗೂ ನೀವು ಇಲ್ಲಿ ಇರ್ಲೇ ಇಲ್ಲ.... ನಮ್ಮ ಮಕ್ಕಳು ಬೀದೀಲೇ ಆಡ್ಕೊಂಡು ಕಾಲ ಹಾಕಿದ್ರು... ನಿಮಗೇನು ಕಷ್ಟ ?ಜಾನಕಿ ಎತ್ತರದ ಧ್ವನಿಯಲ್ಲಿ ಕೇಳಿದಳು.

"ಅಮ್ಮಾ ಸ್ವಲ್ಪ ಮೆಲ್ಲಗೆ ಮಾತಾಡಮ್ಮ ಎಲ್ರಿಗೂ ಕೇಳುತ್ತೆ."ಸರೋಜ ಒಳಗಿನಿಂದ ಬಂದಳು.

'ನೀವಾದ್ರೂ ನಿಮ್ಮ ತಾಯಿಗೆ ಹೇಳಿ ಅದೇನು ಕಿರುಚ್ಕೋತಾರೆ?" ಆಕೆ ನುಡಿದಾಗ ಜಾನಕಿ ಮತ್ತು ಸಿಟ್ಟಾದಳು.

"ನನ್ನ ಮನೇಲಿ ನಾನು ಕಿರುಚಾದ್ರೂ ಕಿರುಚ್ಕೋತೀನಿ. ಅರಚಾದ್ರೂ ಅರಚ್ಕೋತೀನಿ. ನೀವ್ಯಾರು ಕೇಳುಕ್ಕೆ? ನೀವೇನು ಈ ವಠಾರದ ಮಾಲಿಕರಾ? ನೀವೂ ನಮ್ಮ ಹಾಗೆ ಬಾಡಿಗೆಗೆ ಇರೋದು... ಜಾನಕಿ ಒದರಿದಳು.

ಅಷ್ಟರಲ್ಲಿ ಲಕ್ಷ್ಮಿ ದೇವಮ್ಮ ತನ್ನ ಮನೆಯ ಹಿಂಬಾಗಿಲಿನಿಂದ ಬಂದಳು. ಯಾಕ್ರೀ ಕಿತ್ತಾಡೀದೀರಿ! ಇದೇನು ಸಂತೆ ಅಂತ ತಿಳ್ಕೊಂಡ್ರಾ ? ನೀವೇನು. ಸಂಸಾರಸ್ಥರೋ... ಅಲ್ವೋ ...?" ಇಬ್ಬರು ಮಾತು ನಿಲ್ಲಿಸಿದರು "ಹೇಳಿ ಜಾನಕಮ್ಮ ಏನಾಯ್ತು ನೀವು ಈ ವಠಾರಕ್ಕೆ ಹಳಬರು ... ಈಕೆ ಏನಂದ್ಲು?"

"ಏನಿಲ್ಲ ಲಕ್ಷ್ಮಿದೇವಮ್ಮ ... ಮಕ್ಕಳ ಮಕ್ಕಳ ಜಗಳ. ಅದನ್ನೇ ದೊಡ್ಡದು ಮಾಡ್ತಿದಾರೆ ಇವರು...."

"ಹೌದು, ನನ್ನ ಮಗಳಿಗೆ ಪೆಟ್ಟಾಗಿದೆ. ಅದಕ್ಕೆ ಕಾರಣ ಇವರ ಮಗಳು ಕೇಳ್ದೆ ತಪ್ಪೇನು?"

"ಮಕ್ಕಳ ವಿಷಯಕ್ಕೆ ದೊಡ್ಡೋರು ಯಾಕೆ ತಲೆ ಕೆಡಿಸ್ಕೋತೀರಿ? ನಿಮಗೆ ಅರ್ಥ ವಾಗುಲ್ಲ ನಿಮಗೆ ಮಕ್ಕಳಿಲ್ಲ ನೋಡಿ..... ಮಕ್ಕಳನ್ನು ಹೊತ್ತು ಹೆತ್ತು ಸಾಕಿ ಬೆಳೆಸೋದು ಅದರ ಕಷ್ಟ ಏನೂ ಗೊತ್ತಿಲ್ಲ ಸುಮ್ನಿರಿ" ಎಂದು ಬಿಟ್ಟಳು ಅಕೆ ಲಕ್ಷ್ಮಿ ದೇವಮ್ಮನ ಮುಖ ಕೆಂಪಾಯಿತು.

"ಏನಂದೆ ! ನನ್ನ ವಠಾರದಲ್ಲಿ, ನನ್ನ ಮನೇಲಿ ಬಾಡಿಗೆಗೆ ಇದ್ದುಕೊಂಡು ನನ್ನನ್ನೇ ಅಂತೀಯ... ನಿನಗೆಷ್ಟು ಕೊಬ್ಬು ... ಎರಡು ದಿನದಲ್ಲಿ ಮನೇನ ಖಾಲಿ ಮಾಡ್ಕೊಂಡು ಹೋಗಿ.... ನಿನ್ನಂಥೋರನ್ನ ಬೇಕಾದಷ್ಟು ಜನರನ್ನ ನೋಡಿದೀನಿ.. ಏನೊಂತ ತಿಳ್ಕೊಂಡಿ ದೀಯ ನನ್ನನ್ನು. "

"ಹೋಗ್ಲಿ ಬಿಡಿ ಲಕ್ಷ್ಮಿ ದೇವಮ್ಮ ಆಕೆ ಏನೋ ಗಾಬರಿಯಿಂದ ಬೇಸರದಿಂದ ಮಾತಾಡ್ತಿದಾರೆ. ನಾನು ಬಾಯಿ ಹಾಕಬಾರದಾಗಿತ್ತು."

"ಏನ್ರೀ ಬಿಡೋದು ? ನಿಮಗೆ ಮನೆ ತುಂಬಾ ಮಕ್ಕಳಿಲ್ವಾ? ಹೊತ್ತು ಹೆತ್ತು ಬೆಳೆಸಿಲ್ವಾ... ಏನು ಇವಳೊಬ್ಬಳೇನಾ ಮಹಾತಾಯಿ. ನಾಲಿಗೆ ಇದೆ ಅಂತ ಹರಿಯ ಬಿಡಬಾರದು. ನಿನ್ನ ಗಂಡ ಬಂದ್ಮೇಲೆ, ನಮ್ಮ ಮನೆಗೆ ಒಂದು ಮಾತನಾಡುಕ್ಕೆ ಹೇಳು. ನಿನ್ಹತ್ರ ಏನ್ಮಾತು ?" ಎಂದು ಹೇಳಿ ಅಲ್ಲಿ ನಿಲ್ಲದೇ ಹೊರಟು ಹೋದಳು. ಅವಳು ಅಲ್ಲಿಯೇ ಅಳಲಾರಂಭಿಸಿದಳು. ಅವಮಾನದಿಂದ ಮುಖ ಧಾಮುಗುಟ್ಟಲಾರಂಭಿಸಿತು. ಜಾನಕಿಗೆ ವ್ಯಥೆಯಾಯಿತು.

"ಆ ಮೇಲೆ ಹೋಗಿ ಆಕೆಯನ್ನು ಕ್ಷಮಾಪಣೆ ಕೇಳಿ ಆಕೆ ವಿಪರೀತ ಹಠದ ಹೆಂಗಸು ಹಿಡಿದ ಪಟ್ಟನ್ನು ಬಿಡುವುದೇ ಇಲ್ಲ. ಎರಡು ದಿನಗಳೊಳಗೆ ನಿಮಗೆ ಬೇರೆ ಮನೆ ಎಲ್ಲಿ ಸಿಗುತ್ತೆ? ಬೀದೀಲಿ ನಿಂತ್ಕೊಳ್ಳೋಕೆ ಆಗುತ್ತಾ? "ಆಕೆ ಉತ್ತರಿಸದೇ ಕಣ್ಣೊರೊಸಿ ಕೊಂಡು ತನ್ನ ಮನೆಗೆ ಹೊರಟು ಹೋದಳು.... ಮಂಗಳ ತಾಯಿಯನ್ನು ಒಳಕ್ಕೆ ಕರೆದಳು. ಜಲಜಳನ್ನು ಎಳೆದುಕೊಂಡು ಬಂದು ಎರಡೇಟು ಹಾಕಿದಳು.

"ಎಲ್ಲಾ ನಿನ್ನಿಂದ್ಲೇ. ಒಂದಲ್ಲ ಒಂದು ಗಲಾಟೆ ಮಾಡ್ತಾನೇ ಇರ್ತೀಯ ಇನ್ಮೇಲೆ ಆ ಹುಡ್ಗೀನ ಆಟಕ್ಕೆ ಸೇರಿಸ್ಕೊಳಲೇ ಬೇಡ... ಕತ್ತೇ ಹಾಗೆ ವಯಸ್ಸಾಗಿದೆ. ಮೊದಲು ಧಿಮಿ ಧಿಮಿ ಅಂತ ಕುಣಿಯೋದನ್ನ ನಿಲ್ಲಿಸು. " ವನಜ ಬೈದಳು.

"ನನ್ನ ತಪ್ಪು ಏನೂ ಇಲ್ಲ ಅಂದ್ರೂ ಎಲ್ರೂ ನನ್ನನ್ನೇ ಬೈತೀರಿ" ಜಲಜ ಅತ್ತಳು ಜಾನಕಿಯೂ ಎರಡೇಟು ಹಾಕಿದಳು. ಅವಳು ಮತ್ತೂ ಅತ್ತಳು. ಸರೋಜ ಬೇಸರಗೊಂಡಳು."

"ಇದೇ ನಮ್ಮ ಈ ವಠಾರದ ಜನ ಹೀಗೆ.. ಸಧ್ಯ ನಾನು ಬಾಣಂತನ ಮುಗಿ ಸ್ಕೊಂಡು ಬೇಗ ಹೋದ್ರೆ ಸಾಕಾಗಿದೆ. ಪಾಪ... ಅತ್ತೆಗೆ ಮಕ್ಕಳಿಲ್ಲ. ಅದು ಅವರ ತಪ್ಪಾ ? ಅವರನ್ಯಾಕೆ ಹೀಯಾಳಿಸ್ತಾರೆ... ಆಕೆಗೆ ನೋವಾಗುವಲ್ವಾ..?"

"ಮಕ್ಕಳಿಲ್ಲ ಅನ್ನೋ ಒಂದೇ ಒಂದು ನೋವು ಆಕೆಗೆ ಮಕ್ಕಳಿರೋರ್ಗೆ ನೂರೆಂಟು ನೋವು.... ಈ ಹೆಂಗಸು ಮಗಳಿಗೆ ಪೆಟ್ಟಾಯ್ತು ಅಂತ ಅದನ್ನೇ ಒಂದು ರಂಪ ಮಾಡಿ ಅತ್ತಳು.... ಈ ಪೀಡೆಯ ದೆಸೆಯಿಂದ ನಾನು ಇಷ್ಟು ಮಾತಾಡಬೇಕಾಯ್ತು...." ಜಲಜಳ ಕೆನ್ನೆಯನ್ನು ಜೋರಾಗಿ ಹಿಂಡಿದಳು ಅವಳು ನೋವಿನಿಂದ ಕಿರುಚಿದಳು.

"ಸಾಕು ಬಿಡು ಎಷ್ಟು ಶಿಕ್ಷೆ ಮಾಡ್ತೀಯ?" ಸರೋಜ ಜಲಜಳನ್ನು ತನ್ನ ಕಡೆಗೆ ಎಳೆದುಕೊಂಡಳು.

"ನೀನು ಇವಳನ್ನು ನಿನ್ನ ಮನೆಗೆ ಕರ್ಕೊಂಡು ಹೋಗು... ನಿನ್ನ ಮಗುವಿನ ಕೆಲಸ ಮಾಡ್ಕೊಂಡು ಇರಲಿ " ಮಂಗಳ ನಗುತ್ತಾ ನುಡಿದಳು....

"ನಾನು ಹೋಗಲ್ಲ" ಜಲಜ ಮುಖ ಊದಿಸಿದಳು.

ಂ ಂ ಂ

ಊಟದ ಸಮಯದಲ್ಲಿ ದಿಬ್ಬದ ಮನೆಯಿಂದ ಗಂಡ ಹೆಂಡತಿ ತಮ್ಮ ಮಕ್ಕಳೊಂದಿಗೆ, ಲಕ್ಷ್ಮಿದೇವಮ್ಮನ ಮನೆಗೆ ಬಂದರು. ಗೋಪಾಲಯ್ಯ ಬಾಗಿಲು ತೆರೆದು ಇಬ್ಬರನ್ನ ಅಶ್ಚರ್ಯದಿಂದ ನೋಡಿದ.... "ಏನೋ ಬರಹೇಳಿದ್ರಂತೆ...." ಅವನು ಮುಜುಗರದಿಂದ ಹೇಳಿದ. ಅವನ ಪತ್ನಿ ಮಂಕು ಬಡಿದವಳಂತೆ ನಿಂತಿದ್ದಳು. ಸೊಂಟದಲ್ಲಿದ್ದ ಮಗು ಅಳುತ್ತಿತ್ತು. ಮಗುವಿನ ಅಳುವಿನ ಧ್ವನಿಯನ್ನು ಕೇಳಿ ಲಕ್ಷ್ಮಿ ದೇವಮ್ಮ ಹೊರಕ್ಕೆ ಬಂದಳು. "ನಮ್ಮಸ್ಕಾರ ಅಮ್ಮ ಅವನು ಕೈ ಜೋಡಿಸಿದ.

"ಬನ್ನಿ ಕೊತ್ಕೊಳ್ಳಿ" ಗೋಪಾಲಯ್ಯ ಉಪಚರಿಸಿದ.

"ಉಪಚಾರ ಮಾಡಿಸ್ಕೊಳೋಕೆ ಬಂದಿಲ್ಲ. ನಾನೇ ಬರ ಹೇಳಿದ್ದೆ ಅಲ್ಲಪ್ಪಾ... ನಿನ್ನ ಹೆಂಡತಿಗೆ ಈ ವಠಾರದಲ್ಲಿ ಇರುಕ್ಕೆ ಆಗ್ದೇ ಇದ್ಮೇಲೆ ಈ ಮನೆಗ್ಯಾಕೆ ಬಂದ್ರೀ ...?"

"ಅವಳದು ತಪ್ಪಾಗಿದೆ ಅವಳ ಪರವಾಗಿ ನಾನು ಕ್ಷಮೆ ಕೇಳ್ತೀನಿ"

'ಕ್ಷಮೆ ಕೇಳಿದ್ರೆ ...? ನಾನು ಕ್ಷಮಿಸಿ ಬಿಡ್ತೀನಾ ? ಎರಡು ದಿನ ಸಮಯ ಕೊಟ್ಟಿದೀನಿ. ಬೇರೆ ಮನೆಗೆ ಹೊರಟು ಹೋಗಿ."

"ತಕ್ಷಣಕ್ಕೆ ಮನೆ ಸಿಗುಲ್ಲ. ನೀವು ದೊಡ್ಡ ಮನಸ್ಸು ಮಾಡ್ಬೇಕು ಇವಳಿಗೆ ನಾನು ತಿಳುವಳಿಕೆ ಹೇಳ್ತೀನಿ. ಇನ್ಮುಂದೆ ಇವಳು ಯಾರ ವಿಷಯಕ್ಕೆ ಬರುಲ್ಲ. ನಾನು ಮಾತು ಕೊಡ್ತೀನಿ."

"ಸದಾ ಕಾಲ ಮನೇಲಿ ಎಲ್ಲಿರ್ತೀಯ? ಈ ವಠಾರದಲ್ಲಿ ಇರೋರೇ ಆರು ಮನೆ. ನೀರಿಗೆ ಕೊರತೆ ಇಲ್ಲ. ದೀಪಕ್ಕೆ ತೊಂದರೆ ಇಲ್ಲ. ಒಳ್ಳೆ ಗಾಳಿ ಬೆಳಕು ಎಲ್ಲಾ ಇದೆ. ಇಂಥಾ ಮನೆ ನಿಮಗೆಲ್ಲಿ ಸಿಗುತ್ತೆ... ಬಾಡಿಗೆ ಹಣ ಕೊಡುವಾಗ ಲೆಖ್ಖ ಹಾಕ್ತೀರಿ. ಜೊತೆಗೆ ಬಾಯಿಗೆ ಬಂದ ಹಾಗೆ ಮಾತು ಬೇರೆ. ಬೇರೆ ಮನೆಗೆ ಹೋಗ್ಬೇಕು ಅಂದ್ರೆ ಹೋಗ್ತಿರ್ಬೇಕು... ಅಷ್ಟೇ."

"ಬಾಡಿಗೆ ಜಾಸ್ತಿ ಬೇಕಾದ್ರೆ ಕೋಡೋಣ.. ಮನೆ ಬಿಡಿ ಅಂತ ಮಾತ್ರ ಹೇಳ್ಬೇಡಿ ಬಹಳ ಕಷ್ಟ ಆಗುತ್ತೆ...."

"ಅಲ್ಲಾ ಲಕ್ಷ್ಮೀ ಈ ಗೇನಾಯ್ತು..." ಗೋಪಾಲಯ್ಯ ಮಧ್ಯೆ ಕೇಳಿದ.

"ನೀವು ಸುಮ್ನಿರಿ, ಇದು ನಮ್ಮಿಬ್ಬರ ವಿಚಾರ."

"ಸರಿ ಒಂದು ತಿಂಗಳ ಸಮಯ ಕೊಡಿ. ನಮ್ಮ ಅನುಕೂಲಕ್ಕೆ ತಕ್ಕಂಥ ಮನೆಯನ್ನು ಹುಡುಕ್ತೀನಿ."

"ಏನೋ ಮಕ್ಕಳೊಂದಿಗ ಅಂತ ಒಪ್ಪೋತಿದೀನಿ.... ಒಂದೇ ಒಂದು ತಿಂಗಳು

ಮೂವತ್ತೊಂದನೇ ದಿನ ನಾನೆ ನಿಂತು ಮನೆಯ ಸಾಮಾನುಗಳನ್ನು ಹೊರಕ್ಕೆ ಹಾಕಿಸ್ತೀನಿ..." ಹೊಂ ಕರಿಸಿದಳು. ಅದುವರೆಗೂ ಸುಮ್ಮನಿದ್ದ ಅವನ ಪತ್ನಿ ಮಗುವನ್ನು ಕೆಳಗಿಳಿಸಿ, ಲಕ್ಷ್ಮಿ ದೇವಮ್ಮನ ಕಾಲಿಗೆ ಬಿದ್ದಳು.

"ನನ್ನ ತಪ್ಪನ್ನಾ ಕ್ಷಮಿಸಿ ಬಿಡಿ. ನನಗೆ ತವರಿನವರ ಬೆಂಬಲ ಇಲ್ಲ. ಅತ್ತೆ ಮನೆಯ ಕಡೆ ಯಾರೂ ಇಲ್ಲ. ಇನ್ನು ಮುಂದೆ ನೀವು ಹೇಳಿದ ಹಾಗೇ ಕೇಳ್ತೀನಿ. ಮಕ್ಕಳು ಚಿಕ್ಕವರು. ಇವಳ ಸ್ಕೂಲಿಗೆ ತೊಂದರೆ ಆಗುತ್ತೆ. ನೀವು ದೊಡ್ಡಮನಸ್ಸು ಮಾಡ್ಬೇಕು." ಕೈ ಮುಗಿದಳು.

"ಎದ್ ನಿಂತ್ಕೋ... ಈಗ ಬಂತಾ ಬುದ್ಧಿ... ನಾನು ಅಂದ್ರೆ ಏನೂಂತ ತಿಳ್ಕೊಂಡಿದೀಯ. ನನ್ನ ಸುದ್ಧಿಗೆ ಮಾತ್ರ ಬರ್ಬೇಡ... ಹೋಗು " ಅವಳು ಒರಟಾಗಿ ನುಡಿದಾಗ ಅವಳಿಗೆ ಅವಮಾನವಾದಂತಾಗಿತ್ತು. ಲಕ್ಷ್ಮಿದೇವಮ್ಮ ತಾನೇ ಒಳಕ್ಕೆ ಹೊರಟು ಹೋಗಿದ್ದಳು. ಸ್ವಲ್ಪ ಹೊತ್ತು ಸುಮ್ಮನೇ ನಿಂತಿದ್ದು ಅವರುಗಳೂ, ಗೋಪಾಲಯ್ಯನಿಗೆ ಕೈ ಮುಗಿದು ಹಿಂತಿರುಗಿದರು ಮುಂಬಾಗಿಲನ್ನು ಹಾಕಿ, ಗೋಪಾಲಯ್ಯ ಒಳಗೆ ನಡೆದ.

"ಲಕ್ಷ್ಮೀ ... ಏನಾಯ್ತು ಅಂತ ನೀನು ನಂಗೆ ಹೇಳಲೇ ಇಲ್ಲ.. ಇದ್ದಕ್ಕಿದ್ದ ಹಾಗೆ ಅವರನ್ನು ಮನೆ ಬಿಟ್ಟು ಬಿಡಿ ಅಂತ ಹೇಳಿದ್ಯಲ್ಲ .... ಯಾಕೆ?"

"ಆ ಹೆಂಗಸಿಗೆ ವಿಪರೀತ ದುರಹಂಕಾರ.... ನಿಮಗೆ ಅದೆಲ್ಲ ಅರ್ಥವಾಗುಲ್ಲ ನನಗೇ ಎದುರುವಾದಿಸ್ತಾಳೆ.... ಸ್ವಂತ ಮನೆ ಇಲ್ಲ... ಮನೆ ಮಾಲೀಕರ ಜೊತೆ ಹೇಗೆ ವರ್ತಿಸಬೇಕು ಅನ್ನೋ ವಿವೇಕ ಇಲ್ಲ... ಅನುಭವಿಸ್ಲಿ..."

"ಚಿಕ್ಕ ವಯಸ್ಸು... ಸ್ವಲ್ಪ ಪೊಗರು ಇರುತ್ತೆ... ಎರಡೆರಡು ಚಿಕ್ಕ ಮಕ್ಕಳು ತಕ್ಷಣಕ್ಕೆ ಮನೆ ಬಿಡು ಅಂದ್ರೆ ಕಷ್ಟ ಆಗುಲ್ವಾ?.... ಮಕ್ಕಳಿರೋರೆಲ್ಲಾ ಹೀಗೆ ಮಾತಾಡ್ತಾರಾ? ನಾನ್ಯಾಕೆ ಕರಗ್ಬೇಕು ?.... ನನಗೇನು ಭಯ....?"

"ಗ ಗೋಪಾಲಯ್ಯನಿಗೆ ಸ್ವಲ್ಪ ಅರ್ಥವಾಗಿತ್ತು. ಆ ಹೆಂಗಸು ಮಕ್ಕಳಿಲ್ಲ ಅಂತ ಏನೋ ಆಡಿರಬಹುದು... "ಗ ತಾನು ಮತ್ತೆ ಮಾತನ್ನು ಮುಂದುವರೆಸಿದರೆ ಮಾತು ಎಲ್ಲೆಲ್ಲಿಗೋ ಹೋಗುತ್ತದೆ ಎಂದುಕೊಂಡ.... ರಾತ್ರಿ ಹತ್ತು ಗಂಟೆಯ ಸಮಯವಾಗಿತ್ತು. ಮಲಗಲು ಸಿದ್ಧತೆಗಳನ್ನು ಮಾಡಿಕೊಂಡ... ಇಬ್ಬರ ಹಾಸಿಗೆಗಳನ್ನು ಕೊಡವಿ ಹಾಸಿ, ಹೊದಿಕೆಗಳನ್ನು ಜೋಡಿಸಿಟ್ಟ. ಲಕ್ಷ್ಮಿದೇವಮ್ಮ ಅಡಿಗೆ ಮನೆಯ ಕೆಲಸಗಳನ್ನು ಪೂರೈಸಿ ಬರುವವರೆಗೂ ಇವನು ಮಲಗುವಂತಿಲ್ಲ. ಅವಳಿಗೆ ಕೋಪ ಬಂದು ಬಿಡುತ್ತಿತ್ತು. ಇದ್ದಕ್ಕಿದ್ದಂತೆ ಅವನಿಗೆ ಚಂದ್ರು ನೆನೆಪಿಗೆ ಬಂದ. ಗಂಡ ಹೆಂಡತಿ ಹೇಗಿದಾರೋ.... ಸಂಸಾರ ಹೇಗಿದೆಯೋ ? ಯಾವುದೇ ಕಾರಣಕ್ಕೂ ಇಬ್ಬರಲ್ಲೂ ಒಡಕು ಮೂಡದಿರಲಿ.... ಸಂಸಾರ ಬೆಳೆಯಲಿ. ಮನೆ ತುಂಬಾ ಮಕ್ಕಳಾಗಲಿ. ಚಂದ್ರುವಿನ ಜೀವನ ನನ್ನ ಜೀವನದಂತೆ ಆಗದಿರಲಿ ಎಂದು ದೇವರಲ್ಲಿ ಪ್ರಾರ್ಥಿಸಿ,

ಕಣ್ಣು ಮುಚ್ಚಿ ಕುಳಿತ.

"ಏನದು ಕೂತ್ಕೊಂಡೇ ತೂಕಡಿಸ್ತಿದೀರಾ ಮಲಗ್ಬಾರ್ದಾ?" ಮಲಗುವ ಕೋಣೆಗೆ ಬರುತ್ತಿದ್ದಂತೆಯೇ ಪ್ರಶ್ನಿಸಿದಳು.

"ಎಂದು ನೀನು ಬರೋಕ್ಮುಂಚೆ ಮಲಗಿದೀನಿ ಹೇಳು... ಏನೋ ಯೋಚಿಸ್ತಿದ್ದೆ... ಅಡಿಗೆ ಮನೆ ಕೆಲಸ ಎಲ್ಲಾ ಮುಗೀತಾ?"

"ಮುಗೀತು.... ದೀಪ ಆರಿಸಿ" ಎಂದು ಹೇಳಿ ಹಾಸಿಗೆಯ ಮೇಲೆ ಕುಳಿತಳು. ದೀಪವಾರಿಸಿ ಬಂದ ಗೋಪಾಲಯ್ಯ ಮೈ ತುಂಬಾ ಹೊದ್ದು ಮಲಗಿದ. ಲಕ್ಷ್ಮೀದೇವಮ್ಮನಿಗೆ ನಿದ್ದೆ ಬಂತೋ ಇಲ್ಲವೋ ಎಂದು ತಿಳಿದುಕೊಳ್ಳುವ ಗೋಜಿಗೆ ಹೋಗಲಿಲ್ಲ. ಇವನಿಗೆ ಮಾತ್ರ ಎಷ್ಟೋ ಹೊತ್ತಿನ ತನಕ ನಿದ್ದೆ ಬಂದಿರಲಿಲ್ಲ. "ಇನ್ನೆರಡು ತಿಂಗಳಿಗೆ ದಸರಾ ಹಬ್ಬ ಪ್ರಾರಂಭ ಆಗುತ್ತೆ. ಈ ಸಾರಿ, ಪಟ್ಟದ ಬೊಂಬೆಗಳಿಗೆ ಬೇರೆ, ಉಡಿಗೆ ತೊಡಿಗೆ ಅಲಂಕಾರ ಮಾಡ್ಬೇಕು. ಮಾರ್ಕೆಟ್ಟಿಗೆ ಹೋಗಿ, ಕ್ರೇಪ್‌ಕಾಗದ, ಚಿನಾರಿ ಕಾಗದ, ರಸ್ತು ಗುಂಡು, ಬಣ್ಣದ ರಿಬ್ಬನ್ನುಗಳನ್ನೆಲ್ಲಾ ತಗೊಂಡ್ಬನ್ನಿ... ಒಳ್ಳೆಯ ಗೋಂದು ತಗೊಂಡ್ಬನ್ನಿ. ಹಾಗೇ ಪೇಪರ್ ಕತ್ತರಿಸುವ ಕತ್ತರಿಯನ್ನು ಹರಿತ ಮಾಡಿಸ್ಕೊಂಡು ಬನ್ನಿ...." ಲಕ್ಷ್ಮೀದೇವಮ್ಮ ಹೇಳುತ್ತಲೇ ಇದ್ದಳು. ಇವನು ನಿದ್ದೆಯ್ನು ನಟಿಸಿದ. ಇವಳಿಗೆ ದಸರಾ ಬೊಂಬೆಗಳ ಉಡಿಗೆ ತೊಡಿಗೆ ಅಲಂಕಾರಗಳ ಚಿಂತೆ... ಬರೀ ಇವಿಷ್ಟೇನಾ ಇವಳ ಪ್ರಪಂಚ ಎಂದುಕೊಂಡ. " ದಿಂಬಿಗೆ ತಲೆ ಊರಿದ್ಕೂಡ್ಲೆ ನಿದ್ದೆ ಆವರಿಸಿಕೊಂಡು ಬಿಡುತ್ತೆ. ಬೆಳಿಗ್ಗೆ ಮತ್ತೆ ಹೇಳಬೇಕು"ಎಂದುಕೊಂಡದ್ದು ಇವನಿಗೆ ಕೇಳಿಸಿತ್ತು. ಸಧ್ಯ ಮೈ ಮುಟ್ಟಿ ಎಬ್ಬಿಸುಲ್ಲ. ಇಲ್ಲದಿದ್ರೆ ಎಚ್ಚರ ಆಗಿಬಿಡ್ತಿತ್ತು" ಎಂದು ತನ್ನಲ್ಲೇ ಹೇಳಿಕೊಂಡು ಮನದಲ್ಲೇ ನಕ್ಕ. ಮತ್ತೊಂದು ದಸರಾ ಬರುತಿದೆ ಇವಳ ಸಡಗರಕ್ಕೆ.... ಆದರೆ ನನ್ನಲ್ಲಿ ಯಾವ ಸಂಭ್ರಮವೂ ಉಳಿದಿಲ್ಲ ಎಂದುಕೊಂಡ.

೦ ೦ ೦

ಶ್ರಾವಣ ಮಾಸ ಪ್ರಾರಂಭವಾಗಿತ್ತು. ಮೊದಲ ವರ್ಷದ ಪಂಚಮಿ ಹಬ್ಬಕ್ಕೆಂದು ಸುಧಾಳನ್ನು ತವರು ಮನೆಗೆ ಕರೆದುಕೊಂಡು ಬಂದಿದ್ದರು. ಮಗಳು ಹಬ್ಬಕ್ಕೆ ಬಂದಿದಾಳೆಂದು ಒಂದು ಕಡೆ ಸಡಗರವಾದರೆ, ರಾಧಾಬಾಯಿ ಕತೆ ಏನೋ ಎಂಬ ಚಿಂತೆಯೂ ಹಿರಿಯರಲ್ಲಿ ಕಾಣುತ್ತಿತ್ತು. ಅಣ್ಣತಂಗಿ, ಅಕ್ಕತಮ್ಮಂದಿರ ಹಬ್ಬ. ಸುಧಾ ತವರಿಗೆ ಬಂದಿದಾಳೆ. ಮಾಡೋದೆಲ್ಲ ಮಾಡಲೇಬೇಕು ಎಂಬ ಆಸೆ ವಾರಗಿತ್ತಿಯರಿಗೆ. ಕಡುಬು, ಕಜ್ಜಾಯ, ಹೋಳಿಗೆ ಉಂಡೆ ಎಲ್ಲಾವನ್ನು ತಯಾರಿಸಿದರು. ವಠಾರದ ಮನೆಗೆಲ್ಲಹಂಚುವ ಆಸೆಯನ್ನು ಪೂರೆಸಿಕೊಂಡರು... ಮಗಳು ಅಳಿಯ ಪಂಚಮಿ ಹಬ್ಬಕ್ಕೆ ಬಂದಾರ್ರೀ... ಆರತಿ ಮಾಡ್ತೀವ್ರೀ... ಬರಬೇಕ್ರೀ..." ಎಂದು ಎಲ್ಲರಿಗೂ

ಆಹ್ವಾನ ಕೊಟ್ಟಿದ್ದರು. ಲಕ್ಷ್ಮಿದೇವಮ್ಮ ಆರತಿಗೆ ಹೋಗುವುದಿಲ್ಲವೆಂದು ಬಿಟ್ಟಳು. ಗೋಪಾಲನಿಗೆ ಚಂದ್ರು ನೆನಪಿಗೆ ಬಂದಿದ್ದ.... ಮದುವೆಯಾದ ಹೊಸದು... ಹಬ್ಬದ ಸಡಗರದ ಆಸೆ ಇರುತ್ತೆ. ಇಲ್ಲಿಗೆ ಬರುವಂತಿದ್ದರೆ.... ನಮ್ಮ ಮನೆಯೂ ಸಂಭ್ರಮದಿಂದ ತುಂಬಿರುತ್ತಿತ್ತೆಂದುಕೊಂಡ. ಆದರೆ ಅದನ್ನು ಹೆಂಡತಿಯ ಎದುರಿಗೆ ಆಡುವಂತೆಯೇ ಇಲ್ಲ...

ಸುಧಾ ಹಬ್ಬವನ್ನು ಮುಗಿಸಿಕೊಂಡು, ಉಡುಗೊರೆಗಳನ್ನು ತೆಗೆದುಕೊಂಡು ಗಂಡನ ಮನೆಗೆ ವಾಪಸ್ಸು ಹೊರಟು ಹೋಗಿದ್ದಳು. ಹಬ್ಬಕ್ಕೆ ವಿನಾಯಕ ಮಾತ್ರ ಬಂದಿದ್ದ. ದತ್ತನಿಗೆ ಬರಲಾಗಿರಲಿಲ್ಲ. 'ರಕ್ಷಾಬಂಧನ'ದ ಹಬ್ಬಕ್ಕೆ ಒಂದು ದಿನದ ರಜ ಸಿಗುವುದಿಲ್ಲ. ಶನಿವಾರ ಭಾನುವಾರಗಳನ್ನು ಸೇರಿಸಿಕೊಂಡು, ಅವನು ಹೆಂಡತಿಯನ್ನು ನೋಡಲೆಂದು ಬಂದಿದ್ದ. ಆಸ್ಪತ್ರೆಯಲ್ಲಿ ಅವಳನ್ನು ದೂರದಿಂದ ಮಾತ್ರ ನೋಡಬೇಕಾಗಿತ್ತು... ಕಂಡಳೋ ಕಾಣಲಿಲ್ಲವೋ ಎಂಬಂತೆ, ಹಾಸಿಗೆಗೆ ಅಂಟಿಕೊಂಡು ಮಲಗಿದ್ದವಳನ್ನು ಕಂಡು ಅವನಿಗೆ ವ್ಯಥೆಯಾಗಿತ್ತು. ಡಾಕ್ಟರುಗಳು ಯಾವ ಭರವಸೆಯನ್ನು ಕೊಟ್ಟಿರಲಿಲ್ಲ. ಅಲ್ಲಿ ನಿಂತಿರಲು ಆಗದೇ ಮಾವನ ಮನೆಗೆ ಬಂದಿದ್ದ. ಅತ್ತೆ ಮಾವ ಬಹಳ ವ್ಯಥೆಯಲ್ಲಿದ್ದರು.

"ದತ್ತಾ, ನಮ್ಮ ರಾಧಾಗ ಈ ಗತಿ ಬರ್ತದ ಅಂತ ನಾನು ಭಾವಿಸಿರ್‍ಲಿಲ್ಲಪ್ಪಾ, ಯಾರ ಕೈಯಾಗೂ ಏನೂ ಇಲ್ಲ... ಭಗವಂತನ ಮೇಲೆ ಭಾರ ಹಾಕೀವಿ... ಆಕಿಗೆ ನಿನ್ನದೇ ಚಿಂತಿ... ನಿನ್ನ ಹತ್ರ ಮಾತಾಡ್ಬೇಕು ಅಂತಾಳಂತ. ಆದರ ಡಾಕ್ಟರ್ ಬ್ಯಾಡ ಅಂತಾರ.... ಆಕಿ ನರ್ಸಮ್ಮನ ಕೂಡೇ ನಿಂಗೊಂದು ಸಂದೇಶ ಕಳಿಸ್ಯಾಳ. ಹ್ಯಾಂಗ ಹೇಳೋದು ಅಂತ ತಿಳೀವಲ್ಲು...."

"ಅಂಥಾ ಸಂದೇಶ ಏನದ ತಿಳಿಸ್ರೀ ಮಾವ.... ನಾನು ನಡೆಸಿಕೊಡ್ತೀನಿ..."

"ನಾನು ಆ ನರ್ಸಮ್ಮನ ಹತ್ರಕ್ಕೆ ನಿನ್ನನ್ನು ಕೊಂಡೋಯ್ತೀನಿ ನೀನೇ ಮಾತಾಡಪ್ಪಾ.... ನಂಗೆ ಬಾಯಿ ಬರಾಕಿಲ್ಲ..."

" ಅಂಥಾ ಮಾತೇನದ ಮಾವಾ... ಈಗ್ಲ ನಡೀರಿ.... ನಾನು ಈಗ್ಲೇ ತಿಳಕೋಬೇಕು... ನಡೀರಿ ಮಾವಾ... ಎನ್ನುತ್ತಾ ಮತ್ತೆ ಮಾವನೊಂದಿಗೆ ಆಸ್ಪತ್ರೆಗೆ ಬಂದಿದ. ಆ ನರ್ಸನ್ನು ಕಂಡು ಮಾತಾಡಿದ. ಆಕೆ ಹೇಳಲೋ ಬೇಡವೋ ಎಂಬಂತೆ ಅನುಮಾನಿಸಿದಳು. ಇಬ್ಬರ ಕಡೆಯೂ ನೋಡಿದಳು.

"ನನ್ನ ಹೇಣ್ತಿಯ ಆರೋಗ್ಯ ಸುತರಾಂ ಚೆಂದಿಲ್ಲ ಅಂತ ನಂಗ ತಿಳಿದೈತ್ರೀ.... ಆಕೀನ ಹತ್ರದಿಂದ ನೋಡು ಹಂಗಿಲ್ಲ. ಮಾತಾಡು ಹಂಗಿಲ್ಲ... ಕಡೇಪಕ್ಷ ಆಕಿಯ ಆಸೆ ಏನರ ಅಂತ್ಲಾದ್ರೂ ತಿಳಿಸ್ರಲ್ಲಾ.... ಆಕಿಗೆ ಸಂತೋಷ ಆಗೂದಾದ್ರೆ ನಾನು ಈಗ್ಲೇ ನಡೆಸಿಕೊಡ್ತೀನಿ.... ಹಂಗಂತ ಆಕಿಗೆ ತಿಳಿಸ್ರೀ..."

"ಈಗೊಂದು ವಾರದಿಂದ ಆಕೆ ನಿಮ್ಮ ಬಗ್ಗೆ ಕೇಳತಾನೇ ಇದಾರೆ... ಅವರಿಗೆ ಒಂದು ಆಸೆ... ನೀವು ಮತ್ತೆ ಮದುವೆಯಾಗಬೇಕಂತೆ... ಅದೂ ಆದಷ್ಟೂ ಬೇಗ..."ದತ್ತ ದಿಗ್ಭ್ರಮೆ ಗೊಂಡವನಂತೆ ಮಾವನ ಕಡೆ ನೋಡಿದ. ಅವನು ಹೌದು ಎನ್ನುವಂತೆ ತಲೆಯಾಡಿಸಿದ. ಈಕಿಯ ಈ ಆಸೆಗೆ ಏನ್ಹೇಳ್ಬೇಕೂಂತ ತಿಳೀವಲ್ದಪ್ಪಾ... ಆಕಿಗೆ ತಿಳಿದು ಹೋಗದ ತಾನಿನ್ನು ಉಳಿಯೂದಿಲ್ಲ ಅಂತ..."

"ಇಲ್ಲ ಮಾವ... ನಾನು ಈ ಆಸೀನ ನೆರವೇರ್ಸು ಹಂಗಿಲ್ಲ... ರಾಧಾನ್ನ ನಾನು ಪ್ರೀತಿಸ್ತೀನಿ. ಆಕಿ ಎದುರ್ಗೇ ಇನ್ನೊಬ್ಬಾಕೀನ ಲಗ್ನ ಆಗೋದು ಎಂದ್ರೆ.... ರಾಧಾಗೆ ಏನೇ ಆಗ್ಲಿ ನಾನು ಮತ್ತೆ ಲಗ್ನ ಆಗೋದಿಲ್ಲ... ಇದು ಖರೇ..."

"ಇದಕ ನಾನೇನು ಹೇಳ್ಲೋ ದತ್ತಾ... ನೀನು ಹಂಗೇ ಒಂಟಿಯಾಗಿರ್‍ಲಿ ಅಂತ ಈಕಿ ಬಯಸೂದಿಲ್ಲ.... ಅದಕೇ ತಾನು ಇರೋವಾಗ್ಲೇ ನೀನು ಲಗ್ನ ಆಗ್ಲಿ ಅಂತ ಬಯಸ್ತಾಳ... ಇದಕ ನಾನೇನ ಹೇಳಲಿ ? ನಂಗೂ ಸಂಕಟ ಆಗತೈತಿ...."

"ನಾನು ರಾಧಾ ಹತ್ರ ಮಾತಾಡ್ತೀನಿ ಮಾವ... ಡಾಕ್ಟರ ಹತ್ರ ಪರ್ಮಿಷನ್ ತಗೊಂಡು ಆಕೀನ ನೋಡ್ತೀನಿ. ಆಕಿಗೆ ಸಮಾಧಾನ ಹೇಳ್ತೀನಿ..."

"ಅದರಿಂದ ಏನು ಉಪಯೋಗ ಆಗ್ತದೋ ದತ್ತ. ಡಾಕ್ಟರೇನು ಈಕೀನ ಉಳಿಸಿ ಕೊಡ್ತಾರ...?|ಎದೆ ಗೂಡೆಲ್ಲಾ ವಂದರಿ ಆಗದಂತ... ಕೆಮ್ಮು ನಿಂತಿಲ್ಲಂತ... ಇನ್ನು ಏನೇನೋ... ನಾ ಹೇಳೋದೂ ಬ್ಯಾಡಾ... ನೀ ಕೇಳೋದೂ ಬ್ಯಾಡ..."

"ಮತ್ತೆ ಹೆಂಗ್ಮಾವ? ಈಕಿಗ ಹೇಳೋದು ಹ್ಯಾಂಗ?"

"ಹೇಳೋದೇನಿದೆ ? ಆಕಿ ಎಲ್ಲಿ ಕೇಳ್ತಾಳಾ ?.... ಆಕಿ ತೀರ್ಮಾನ ತಗೊಂಡು ಆಗ್ಯದ... ಅದನ್ನು ನಡೆಸೋ ಕೆಲಸ ನಿಂದಪ್ಪಾ... ನಾನಿನ್ನೇನು ಹೇಳ್ಲಪ್ಪಾ..."

"ಅಲ್ಲಾ ಮಾವ... ನೀವೂ ಹೀಂಗ ಹೇಳಿದ್ರೆ..."

"ನಾನು ಆಕಿಗೆ ತಂದೆ ಇದೀನಪ್ಪಾ... ನನ್ನ ಮಗಳ ಜೀವಕ್ಕ ತ್ರಾಣ ಇಲ್ಲ. ತ್ರಾಸ ಐತಿ... ನೀನು ಲಗ್ನ ಆದಿ ಅಂದ್ರ ಆಕಿಯ ಜೀವಕ್ಕ ಛಲೋ ಎನಿಸ್ತೈತಿ... ಆಕಿಗೋಸ್ಕರನಾದ್ರೂ ನೀನು ಲಗೂನೆ ಲಗ್ನ ಆಗು..."

"ಅದ್ಹೆಂಗಾದೀತು ಮಾವ ? ಅವ್ವ ಅಪ್ಪ ಏನಂತಾರು ?... ಜನ ನಗೋದಿಲ್ಲೇನು.... ನಾನು ಒಲ್ಲೆ... " ತಲೆಯಾಡಿಸಿದ.

"ನೀನು ಒಲ್ಲೆ ಎಂದ್ರೆ ಈಕಿ ಸರಿ ಹೋಗ್ತಾಳೇನು ?.. ಇನ್ನು ನಿನ್ನ ಇಷ್ಟ ಬೇಕಾರ ನಾನು ನಿಮ್ಮವ್ವನ ಕೂಡೆ ಮಾತಾಡ್ತೀನಿ...."

"ಹಂಗಾರೆ ಬೇರೆ ಉಪಾಯವೇ ಇಲ್ಲ ಅಂತೀಯ ಮಾವ?"

"ನಾನೇನು ಹೇಳ್ಲೋ ದತ್ತಾ..." ಎನ್ನುತ್ತಾ ಮಾವ ಅವನ ಭುಜಕ್ಕೆ ಒರಗಿ ಅಳಲು ಪ್ರಾರಂಭಿಸಿದಾಗ, ದತ್ತನ ಕಣ್ಣುಗಳೂ ತೇವವಾಗಿದ್ದವು...

"ನಾನು ದೇಶಾಂತರ ಹೊರಟು ಹೋಗ್ತೀನಿ... ಹಾಗಂತ ರಾಧಾಗೆ ತಿಳಿಸ್ಬಿಡಿ ಮಾವ...." ಎನ್ನುತ್ತಾ ಆಸ್ಪತ್ರೆಯ ಆವರಣದಿಂದ ಹೊರನಡೆದ. ಮಾವ ದಾಪುಗಾಲು ಹಾಕುತ್ತಾ ಅವನ ಹಿಂದೆ ಬಂದ.

"ದತ್ತಾ ನಿಂತ್ಕೋ.... ನಿಂತ್ಕೋ...." ಜೋರಾಗಿ ಕರೆದ. ದತ್ತ ನಿಂತ."ಆಯ್ತು ನೀ ದೇಶಾಂತರ ಹೋದಿ ಅಂತ ತಿಲಿದ್ಕೂಡ್ಲೇ ಆಕಿಯ ಪ್ರಾಣಪಕ್ಷಿ ಹಾರಿ ಹೋಗ ಬಹುದು. ಆಕೀನ್ನ ಇನ್ನು ನಾಲ್ಕು ದಿನ ಉಳಿಸ್ಕೋಬೇಕೂಂತ ಇದ್ರೆ... ಆಕಿ ಹೇಳಿದ್ಹಂಗ ಕೇಳು" ಅವನ ಭುಜದ ಮೇಲೆ ಕೈ ಇಟ್ಟು ಮಾವ ನುಡಿದಾಗ, ದತ್ತ ಅವನನ್ನೇ ನೋಡಿದ. ಒಪ್ಕೋ ಎನ್ನುವಂತೆ ಮಾವ ಗೋಣು ಆಡಿಸಿದಾಗ ದತ್ತ ಅಲ್ಲಿದ್ದ ಕಲ್ಲು ಬೆಂಚಿನ ಮೇಲೆ ಕುಳಿತ.

"ಮಾವಾ... ನೀವು ಮನಿಗೆ ಹೋಗ್ರೀ.... ಅತ್ತೀ ನಿಮ್ಮ ದಾರಿ ಕಾಯ್ತಾ ಇರ್ತಾರ. ನಾನು ತುಸು ಹೊತ್ತು ಇಲ್ಲಿ ಕುಂದಿರ್ತೀನಿ."

"ನಾನೂ ಕುಂದಿರ್ತೀನಿ, ನಿನ್ನೊಬ್ಬನನ್ನೇ ಬಿಟ್ಟು ಹೋಗೂ ದಿಲ್ಲ." ಮಾವ ಕುಳಿತ.

"ಮಾವ, ನಾನು ಯೋಚಿಸ್ಬೇಕು ನಾನು ದೇಶಾಂತರ ಓಡಿ ಹೋಗೂದಿಲ್ಲ. ನೀವು ಹೋಗಿ... ನಾನು ಡಾಕ್ಟರ ಹತ್ರ ಮಾತಾಡಿ ಬರ್ತೀನಿ..."ಎಂದ. ಮಾವ ಅನುಮಾನಿ ಸುತ್ತಾ ಎದ್ದು ಹೋಗಿದ್ದ. ಹತ್ತು ನಿಮಿಷ ಅಲ್ಲಿಯೇ ಕುಳಿತಿದ್ದ ದತ್ತ ಡಾಕ್ಟರ ಬಳಿಗೆ ಬಂದ.

○ ○ ○

"ದತ್ತಣ್ಣ ಬಂದ... ದತ್ತಣ್ಣ ಬಂದ..." ಮಾರ್ತಾಂಡ ಒಳಗೆ ಹೋಗಿ ಸುದ್ಧಿ ಯನ್ನು ಮುಟ್ಟಿಸಿದ. ಎಲ್ಲರೂ ಮುಂಬಾಗಿಲಿಗೆ ಬಂದ. ಎಲ್ಲರ ಮುಖದಲ್ಲೂ ಗಾಬರಿ ತವಕ ಎದ್ದು ಕುಣಿಯುತ್ತಿತ್ತು. ದತ್ತಹಿರಿಯರೆಲ್ಲರ ಕಾಲಿಗೆ ನಮಸ್ಕರಿಸಿದ. ಅವನು ಶಾಂತಚಿತ್ತನಾಗಿದ್ದುದು ಸಮಾಧಾನವನ್ನು ತಂದಿತ್ತು.

"ನಾಕು ದಿನ ಮುಂಚೆ ಬರೋದಲ್ಲೇನೋ ಬಾಳಾ... ನಿನ್ನ ತಂಗಿ ಪಂಚಮಿ ಹಬ್ಬಕ್ಕೆ ಬಂದಿದ್ಲು... ಒಡಹುಟ್ಟಿದವರ ಹಬ್ಬದಲ್ಲಿ ನೀನೊಬ್ಬ ಇಲ್ಲದಂಗಾತು... ನೋಡು." ತಾಯಿ ಹೇಳಿದಾಗ, ದತ್ತ ನಕ್ಕ.

"ನನಗೆ ಸೂಟಿ ಸಿಗೋದು ರಕ್ಷಾ ಬಂಧನ ಹಬ್ಬಕ್ಕ... ಉಂಡಿ, ಹೋಳಿಗಿ ಏನಾದ್ರೂ ಉಳಿಸಿದ್ರ ಕೊಡು ಉಣ್ತೇನಿ..."

"ತಾಜಾ ಮಾಡಿ ಕೊಡ್ತೀನಪ್ಪಾ... ನೀ ಕೇಳೋದು ಹೆಚ್ಚೋ... ನಾನು ಮಾಡಿಕೊಡೋದು ಹೆಚ್ಚೋ" ದೊಡ್ಡಮ್ಮ ನುಡಿದಳು. ಯಾರೂ ರಾಧಾಳ ಸುದ್ದಿಯನ್ನು ಎತ್ತದೇ ಇದ್ದುದು ಅವನ ಗಮನಕ್ಕೆ ಬಂದಿತು. ಕೈಕಾಲು ತೊಳೆದು, ತಾಯಿ ಕೊಟ್ಟ

ಕಾಫಿಯನ್ನು ಕುಡಿದು, ಅಡಿಗೆ ಮನೆಗೇ ಬಂದ.

"ಕಕ್ಕೀ ನಂಗೋಸ್ಕರ ಏನೂ ತಿಂಡಿ ಮಾಡ್ಬೇಡ... ನಂಗೆ ಉಣ್ಣು ಮನಸ್ಸಿಲ್ಲ... ಸುಮ್ಮನೇ ಹಂಗಂದೆ... ನೀಯಾಕ ತ್ರಾಸ ಮಾಡ್ಕೋತಿ...."

"ತ್ರಾಸ ಏನು ? ಮನೀ ಮಗ ಬಂದೀಯು... ಶ್ರಾವಣ ಮಾಸ ಬಂದದ. ಒಂದಲ್ಲ ಒಂದು ಹಬ್ಬ ಇದ್ದೇ ಇದ... ಮಕ್ಕಳಿರುವ ಮನೆ ತಿಂಡಿ ತೀರ್ಥ ಮಾಡೂದೇ... ನಿಂಗೇನು ಬೇಕೋ ಕೇಳು... ಅದನ್ನೇ ಮಾಡಿ ಕೊಡ್ತೀನಿ..."

"ಅವ್ವಾ... ಕಕ್ಕೀ... ಗ್ಯಾನ ಇಟ್ಟು ಕೇಳ್ರಲಾ... ನಾನೊಂದು ಜರೂರು ಸುದ್ಧಿ ಹೇಳೂದದ..." ಇಬ್ಬರ ಎದೆ ಗುಂಡಿಗೆ ನಿಂತಂತಾಯಿತು. ಕೆಲಸ ಮಾಡುತ್ತಿದ್ದ ಕೈಗಳು ತಟಸ್ಥವಾದವು. ಬೆರಗು ಕಣ್ಣುಗಳಿಂದ ಅವನನ್ನೇ ನೋಡಿದರು.

"ನಾನು ಲಗೂನೇ ಲಗ್ನ ಆಗಬೇಕಾಗಿದೆ... ರಾಧಾ ಹೇಳ್ಯಾಳ..." ಇಬ್ಬರೂ ಅರ್ಥವಾಗದವರಂತೆ, ಮುಖ ಮುಖ ನೋಡಿಕೊಂಡರು. ದತ್ತ ಸಂಕ್ಷಿಪ್ತವಾಗಿ ಕೆಳದನಿಯಲ್ಲಿ ವಿಷಯವನ್ನು ತಿಳಿಸಿದ." ರಾಧಾಳ ಆಸೀನ ತೀರಿಸ್ಲಿಕ್ಕಾಗಿ ನಾನು ಲಗೂನೇ ಲಗ್ನ ಆಗ್ಬೇಕು ." ಮತ್ತೆ ನುಡಿಯುವಾಗ ಅವನ ಗಂಟಲು ಕಟ್ಟಿತ್ತು...

"ಬಾಳಾ... ಏನ್ಹೇಳ್ತೀಯೋ... ರಾಧಾ ಹೀಂಗ ಹೇಳ್ಯಾಳಂತಾ?... ಮಾವನ ಹೇಳಿದ್ನಾ?" ತುಂಗಾಬಾಯಿಯ ಧ್ವನಿ ಗದ್ಗದವಾಗಿತ್ತು.

"ಹೂಂ ನವ್ವಾ... ಇಲ್ಲಿಗೆ ಬರೋ ಮುಂದೆ, ರಾಧಾನ ನೋಡೋಕೆ ಹೋಗಿದ್ನವ್ವಾ... ಆಕಿಗೆ ನಂದೇ ಚಿಂತಿ... ಆಕಿ ಇರೂವಾಗ್ಲೇ ನಾ ಲಗ್ನ ಆಗ್ಬೇಕಂತಾ..."

"ಹಂಗಾರ... ಆಕಿ ?... ಡಾಕ್ಟರು ಏನಂದ್ರು ?" ತಿಳಿದಿದ್ರೂ ಕೇಳಿದಳು.

"ಹೂಂನವ್ವಾ.... ಆಕಿ ಸ್ಥಿತಿ ಗಂಭೀರವಾಗಿಯೇ ಇದ... ಯಾರನ್ನೂ ನೋಡುಕ್ಕೆ ಬಿಡುಲ್ಲ... ಇಂಜೆಕ್ಷನ್ ಹಾಕಿಸ್ಕೋಬೇಕಂತ.... ನಾನು ದೂರದಿಂದ ಆಕೀನ ನೋಡ್ದೆ..."

"ಹೆಂಗಿದಾಳೋ... ಮಾತಾಡಿದ್ಲಾ?"

"ಇಲ್ಲವ್ವಾ... ಮಾತಾಡು ತ್ರಾಣ ಇಲ್ಲ. ಕೆಮ್ಮು ಜಾಸ್ತಿಯಾಗದಂತ... ಈಗ ನಾನು ಏನು ಮಾಡ್ಲೀ ನೀನೇ ಹೇಳು ಕಕ್ಕೀ...."

"ಹೀಂಗೆ ಒಂಟಿಯಾಗಿ ಹೆಂಗಿರ್ತೀ.... ಮುಂದೆ ಲಗ್ನ ಆಗೋದೇ... ಆದ್ರೆ ಈಗ? ಆಕಿ ಕಣ್ಮುಂದೇನೇ... ಜನ ಏನಂದಾರು?"

"ಅದು ಆಕಿ ಆಸಿ ಆಗದ ಅವ್ವಾ... ಲಗೂನೇ ನೀನೇ ಯಾವ್ದಾರ ಹೆಣ್ಣು ಹುಡ್ಕು... ನಾನು ಲಗ್ನ ಆಗಿ, ಆಕಿನ ಕರ್ಕೊಂಡು ಹೋಗಿ ರಾಧಾಗೆ ತೋರಿಸ್ಬೇಕು..."

"ಜಾದೂ ಮಾಡುಕ್ಕಾದೀತೇನೋ ದತ್ತಾ... ನಿಂತ ನಿಂತ್ಹಂಗೆ ನಾನು ಯಾವ ಹೆಣ್ಣನ್ನು ಹುಡುಕ್ಲಿ... ತಡೀ ನಿಮ್ಮಪ್ಪಗ, ನಿಮ್ಮ ಕಾಕಾಗೆ ತಿಳಿಸೋಣು... ಅವರೇನು

ಹೇಳ್ತಾರೋ ಹಂಗೇ ಆಗ್ಲಿ...

"ಯಾರು ಏನೇ ಹೇಳ್ಲಿ.... ನಾನು ರಾಧಾಗೋಸ್ಕರ ಲಗ್ನ ಆಗೋನೇ... ನೀವು ಏನು ಬೇಕಾದ್ರೂ ಮಾಡ್ಕೊಳ್ಳಿ... " ಎನ್ನುತ್ತಾ ಎದ್ದು ಹೊರಬಂದ. ಅಕ್ಕತಂಗಿಯರಿಗೆ ತಿಂಡಿ ಮಾಡುವ ಉತ್ಸಾಹ ಇಳಿದಿತ್ತು. ಕೈ ಒರೆಸಿಕೊಂಡು ಎದ್ದರು.

ಹೊರ ಬಂದು ನಿಂತ ದತ್ತ, ಅಭ್ಯಾಸ ಬಲದಂತೆ, ಪ್ಯಾಂಟಿನ ಜೇಬುಗಳಿಗೆ ಕೈಯನ್ನು ಇಳಿಬಿಟ್ಟು ಸುತ್ತಲೂ ನೋಡಿದ... ಅವನ ಕಣ್ಣುಗಳು ರಾಮರಾಯನ ಮನೆಯ ಕಡೆ ಹರಿಯಿತು. ಜಗುಲಿಯ ಮೇಲೆ ಕುಳಿತಿದ್ದ ಸರೋಜಳನ್ನು ಕಂಡ... ಇವಳು ಮಂಗಳ ಅಲ್ಲ. ಯಾರಿರಬಹುದು?.... ಮಂಗಳನಿಗೆ ಮದುವೆಯಾಗಿ ಗಂಡನ ಮನೆಗೆ ಹೋಗಿರ ಬಹುದೇನೋ... ತನ್ನನ್ನೇ ದಿಟ್ಟಿಸುತ್ತಿರುವವನನ್ನೂ ಕಂಡು ಸರೋಜ ಮುಜುಗರಗೊಂಡು ಎದ್ದಳು ಭಾರವಾದ ದೇಹವನ್ನು ಹೊತ್ತು ನಿಂತವಳನ್ನು ಕಂಡು ಗರ್ಭಿಣಿ ಎಂದು ತಿಳಿದು ಗೌರವ ಭಾವ ಮೂಡಿತು... ಸರೋಜ ಕಷ್ಟದಿಂದ ಮೆಟ್ಟಿಲುಗಳನ್ನೇರಿ ಒಳಗೆ ಹೊರಟು ಹೋಗಿದ್ದಳು.

"ದತ್ತಾ ದತ್ತಾ"ಒಳಗಿನಿಂದ ದೊಡ್ಡಪ್ಪ ಕರೆದಿದ್ದು ಕೇಳಿಸಿತ್ತು.

"ಏನು ಕಾಕಾ ಕರೆದ್ಯಾ?" ಎನ್ನುತ್ತಾ ಒಳಬಂದ.

"ಇದೆಲ್ಲಾ ಏನೋ... ನಿಮ್ಮವ್ವ ಏನೇನೋ ಹೇಳಾಕೆ ಹತ್ಯಾಳ.... ಖರೇ ಸುದ್ದಿ ಏನು ಹೇಳು... ರಾಧಾಬಾಯಿ ಸುದ್ದಿ ಏನು?... ಆಕಿ ಬದುಕಿರುವಾಗಲೇ... ಮತ್ತೆ ಲಗ್ನ ಆಗೋದು ಅಂದ್ರೇನು?... ಇದೇನು ಗೊಂಬಿ ಆಟಾನಾ...?"

"ಅವ್ವ ಹೇಳಿದ್ದು ಖರೇ ಕಾಕಾ... ನಾನೇನು ಆಸೆಯಿಂದ, ನನಗಾಗಿ ಲಗ್ನ ಆಗೂದಿಲ್ಲ. ಆಕಿಗೋಸ್ಕರ ಲಗ್ನ ಆಗ್ತೀನಿ..."

"ಅಂದ್ರೇ... ಏನು ನಿನ್ನ ಮಾತಿನರ್ಥ... ಆಮೇಲೆ ಈ ಹುಡುಗಿ ಗತಿ ? ನಿನಗ ರಾಧಾಬಾಯಿಯ ಮರೀಲಿಕ್ಕೆ ಆಗ್ತದೇನೋ...?"

"ನಂಗೊತ್ತಿಲ್ಲ ಕಾಕಾ.... ಈಗ ನಾನೇನ ಮಾಡ್ಲಿ ನೀನೇ ಹೇಳು"

"ಡಾಕ್ಟರು ಏನಂದ್ರು....?"

"ಏನೂ ಭರವಸೆ ಕೊಟ್ಟಿಲ್ಲ. ಈಕಿ ನೋಡಿದ್ರೆ ಹೀಂಗ ಹೇಳ್ಯಾಳ ನನ್ನ ತಲಿ ಕೆಟ್ಟು ಹೋಗದ. ಅದಕ ಇಲ್ಲಿಗೆ ಓಡಿ ಬಂದೇನಿ."

"ಯೋಚ್ನೆ ಮಾಡ್ಬೇಕು ಬಾಳಾ... ಹಂಗೆಲ್ಲಾ ಮಾಡುಕ್ಕಾಗದು... ವಿಷಯ ಹೀಂಗದ ಅಂತ ತಿಳಿದ್ರ ನಿಂಗ ಯಾರು ಹೆಣ್ಣು ಕೊಡ್ತಾರು...?"

"ಹುಡುಗಿ ಮನೆಯೋರ ಹತ್ರ ವಿಷಯ ಹೀಂಗದ ಅಂತ ಮಾತಾಡ್ತೀನಿ, ಹಿರೀ ಹೆಂಡ್ತಿಯ ಸಂತೋಷಕ್ಕಾಗಿ ಲಗ್ನ ಆಗ್ತೇನಿ ಅಂತ ತಿಳಿಸ್ತೀನಿ."

"ಇದಕ್ಕ ಯಾವ ಹೆಣ್ಣೂ ಒಪ್ಪೂದಿಲ್ಲ... ಅವಳ ತಂದೆ ತಾಯೀನೂ ಒಪ್ಪೂ

ದಿಲ್ಲ... ಹುಚ್ಚ ಅಂತ ನಿನ್ನ ಬೈತಾರ...."

"ಶಾಸ್ತ್ರಿಗಳ ಹತ್ರ ಮಾತಾಡು ಕಾಕಾ... ಯಾರಾದರೂ ಸಿಗಬಹುದು... ಬಡವರಾದ್ರೂ ಪರವಾಗಿಲ್ಲ. ಅವರಿಗೆ ರೊಕ್ಕ ಕೊಡೋಣಂತೆ. ಅವರಿಗೆ ಸಹಾಯ ಆದೀತು... ಅಥವಾ

"ಯಾವುದೂ ನಡೆಯುಲ್ಲ... ಆಮೇಲೆ ಥೂ ಛೀ... ಅಂತ ಉಗಿಸ್ಕೊಳ್ಳೋ ಹಣೇ ಬರಹ ನಮಗ್ಯಾಕ?...

"ಹುಡ್ಗೀನ ಗೊತ್ತು ಮಾಡು ಕಾಕಾ.... ನಾನು ಆಕಿ ಸಂಗಡ ಮಾತಾಡ್ತೀನಿ."

"ಗಬಕ್ಕನೆ ಯಾರು ಸಿಗ್ತಾರೋ ನನ್ನ ಮಗನೇ... ಪತ್ತೆ ಹಚ್ಲಿಕ್ಕೆ ಸಮಯ ಬೇಡ್ವಾ?.. ಈ ರಾಧಾ ಬಾಯಿಗ್ಯಾಕ ಇಂಥಾ ಬುದ್ಧಿ ಬಂತೋ ಶಿವನೇ..." ತುಂಗಾ ಬಾಯಿ ತಲೆಯ ಮೇಲೆ ಕೈಯನ್ನಿಟ್ಟುಕೊಂಡಳು.

"ಸರಿ, ನಡೆಯೋ ತಮ್ಮ ಒಂದಿಬ್ಬರನ್ನು ವಿಚಾರಿಸೋಣು...."ಎನ್ನುತ್ತಾ ಹಿರಿಯ ಜೋಷಿ ತಲೆಗೆ ಮುಂಡಾಸನ್ನು ಸುತ್ತಿ, ಚಪ್ಪಲಿ ಮೆಟ್ಟಿ, ಕೋಲನ್ನು ಹಿಡಿದು ನಡದೇ ಬಿಟ್ಟರು. ಕಿರಿಯ ಜೋಷಿ ಅವರನ್ನು ಹಿಂಬಾಲಿಸಿದ.

"ಅಣ್ಣಾ ಯಾವಾಗ ಬಂದ್ಯೋ... ಒಬ್ಬನೇ ಬಂದ್ಯಾ! ವೈನಿ ಬರ್ಲಿಲ್ವಾ?" ಸ್ಕೂಲಿನಿಂದ ಬಂದ ಸೀತ ದತ್ತನನ್ನು ಕಂಡು ಕೇಳಿದಳು.

"ಹೂಂ, ನಿನ್ನ ವೈನಿ ಇನ್ನೂ ಸುಧಾರಿಸ್ಕೊಂಡಿಲ್ಲ... ಶಾಲಿ ಹೆಂಗಿತ್ತು?"

"ಬರೀ ಮಳಿ ಬೀಳ್ತದ.... ಹೋಗ್ಲಿಕ್ಕೆ ತ್ರಾಸ ಆಗ್ತದ. ಬುಟ್ಟಿ, ಪುಸ್ತಕ ಎಲ್ಲಾ ಒದ್ದೆ ಆಗ್ತದ. ಪಂಚಮಿ ಹಬ್ಬಕ್ಕೆ ನೀನೂ ಬಂದಿದ್ರೆ ಚೆನ್ನಾಗಿತ್ತು... ಅವ್ವ, ಕಕ್ಕಿ ಇಬ್ರೂ ಸೇರಿ ಉಂಡಿ, ಚಕ್ಕುಲಿ ಎಲ್ಲಾ ಮಾಡಿದ್ರು... ನಂಗೇನು ತಂದಿದೀಯ ನೀನು?"

"ನಿಂಗೇನು ಬೇಕು ಹೇಳು... ಎಲ್ಲಾ ಕೊಡಿಸೋಣಂತೆ. ಕಾಫಿ ಕುಡಿದು ಪ್ಯಾಟಿಕಡೆ ಹೋಗೋಣಂತೆ..."

"ಬಳೆ, ರಿಬ್ಬನ್ನು, ಸರ ಎಲ್ಲಾ ಬೇಕು. ಕೊಡಿಸ್ತೀಯಾ?...."

"ಕೊಡಿಸ್ತೀನಿ..." ತಂಗಿಯ ಕೆನ್ನೆಯನ್ನು ಸವರಿದ.

"ಸೀತಾ... ಸೀತಾ..." ಎಂದು ಯಾರೋ ಕರೆದ ಧ್ವನಿಯನ್ನು ಕೇಳಿ ಎದ್ದು ಬಂದ. ಬಾಗಿಲಾಚೆ ಮಂಗಳಾ ನಿಂತಿದ್ದಳು. ಅವಳನ್ನೇ ದಿಟ್ಟಿಸಿದ. ಮೈಯೊಳಗೆ ಒಂದು ರೀತಿಯ ಸಂಚಾರವಾಯಿತು. ತಾನು ಅವಳಿಗಾಗಿಯೇ ಕಾಯುತ್ತಿದ್ದನೇನೋ ಎಂಬಂತೆ ಹರ್ಷಿತ ನಾದ... "ನಮಸ್ಕಾರ" ಎಂದು ಕೈ ಮುಗಿದಳು.

"ನಮಸ್ಕಾರ ರೀ... ಹೆಂಗಿದೀರಿ?...."ಎನ್ನುತ್ತಾ ಅವಳ ಕೊರಳ ಕಡೆ ನೋಡಿದ. ಅಲ್ಲಿ ಕರಿಮಣಿ ಸರ ಕಾಣಲಿಲ್ಲ. ನೋಟ ಕಾಲುಗಳ ಕಡೆ ಸರಿಯಿತು. ಅಲ್ಲಿ ಕಾಲುಂಗುರವಿರಲಿಲ್ಲ. ಒಂದು ರೀತಿ ಹಾಯೆನ್ನಿಸಿತ್ತು... ಒಳಗೆ ಬರ್ರೀ... ಸೀತಾ...

ನಿನ್ನ ಗೆಳತಿ ಬಂದಾರ ನೋಡು" ನಿಂತಲ್ಲಿಂದಲೇ ಕೂಗು ಹಾಕಿದ...

"ಓ.... ಮಂಗಳಕ್ಕಾ ಏನಾಗಬೇಕಿತ್ರೀ..." ಹೊರಬಂದ ಸೀತ ಕೇಳಿದಳು.

"ನಿಮ್ಮಣ್ಣ ಬರ್ತಾರೆ ಅಂತ ನೀನು ಹೇಳಲೇ ಇಲ್ಲ... ಅಕ್ಕ ನಿನ್ನನ್ನ ಕರೀತಿದಾಳೆ. ಬರ್ತೀಯಾ ಅಂತ ಕೇಳೋಣ ಅಂತ ಬಂದೆ. ಪರವಾಗಿಲ್ಲ ಬಿಡು."

"ನಿಮ್ಮಕ್ಕ ಬಂದಾರೇನು ?.... ಆಗ್ಲೇ ಕಂಡೆ ಬಾಣಂತನಕ್ಕೆ ಬಂದಾರೇಂತ ಕಾಣ್ತದೆ" ಮಂಗಳ ಕೆಂಪಾದಳು. "ಹೂಂ' ಎನ್ನುವಂತೆ ತಲೆಯಾಡಿಸಿದಳು.

"ನಾನು ಈಗ ಅಣ್ಣನ ಸಂಗಡ ಅಂಗಡಿಗೆ ಹೊಂಟೀನಿ... ಬಂದ್ಮೇಲೆ ಬರ್ತೀನಿ... ಹಾಗಂತ ಹೇಳ್ಬಿಡಿ ಅಕ್ಕಾ..."

"ಅದೇನು ಅಂತ ಹೋಗಿ ಕೇಳ್ಕೊಂಡು ಬಾ ಸೀತಾ... ಅಂಗಡಿಗೆ ಆಮೇಲೆ ಹೋದ ರಾಯ್ತು... ನೀವು ಒಳಗೆ ಬರ್ರೀ..."

"ಮನೇಲಿ ಅಕ್ಕ ಒಬ್ಬಳೇ ಇದಾಳೆ. ಉಳಿದವರೆಲ್ಲಾ ನೆಂಟರೊಬ್ಬರ ಮನೆಯ ಮದುವೆಗೆ ಹೋಗಿದಾರೆ... ಅಕ್ಕನ ಜೊತೆ ಸೀತಾ ದಿನಾ ಏನಾದ್ರೂ ಆಟ ಆಡ್ತಾಳೆ. ಅದಕ್ಕೇ ಕರೆಯೋಣ ಅಂತ ಬಂದೆ... ನಾನು ಅಕ್ಕಂಗೆ ಹೇಳ್ತೀನಿ..."

"ಲಗ್ನ ಅನ್ನುತ್ಲು ನೆನಪಿಗೆ ಬಂತು. ನಿಮ್ಮ ಲಗ್ನಕ್ಕೆ ದಿನ ಗೊತ್ತು ಮಾಡಾರೇನ್ರೀ... ಯಾವಾಗ ಲಗ್ನ?" ಕಾತುರನಾಗಿ ಪ್ರಶ್ನಿಸಿದ.

"ಸಧ್ಯಕ್ಕೆ ಇಲ್ಲ..." ಎಂದು ಹೇಳುವಷ್ಟರಲ್ಲಿ ಸಾಕಾಗಿತ್ತು... ಸೀತಾ, ಅಷ್ಟರಲ್ಲಿ ಸರೋಜನ ಬಳಿಗೆ ಹೋಗಿ ಮಾತನಾಡಿ ವಾಪಸ್ಸು ಬಂದಿದ್ದಳು. ದತ್ತಾ ಬಾಗಿಲಲ್ಲೇ ನಿಲ್ಲಿಸ್ಕಂಡು ಹರಟಿ ಹೊಡೆಯೋದೇನು ಚಂದ? ಇಬ್ಬರೂ ಒಳಗ ಬರ್ರೀ..." ತುಂಗಾಬಾಯಿ ಕರೆದಳು.

"ಆಮೇಲೆ ಬರ್ತೀನಿ" ಎಂದು ಹೇಳಿ ಮಂಗಳಾ ಹಿಂತಿರುಗಿ ಹೊರಟು ಹೋಗಿದ್ದಳು ತುಂಗಾಬಾಯಿ ಕಾಫಿಯನ್ನು ತಂದಿತ್ತಳು.

"ಆ ಹುಡ್ಗೀ ಎಲ್ಲಿ ? ಕಾಫಿ ಕುಡಿದು ಹೋಗು ಅಂತ ಕರೀಬೇಕಿತ್ತು" ಮಂಗಳಿಗೆ ಹೇಳಿದಳು.

"ಹೋಗಿ ಕರೆದು ಬರ್ಲೇನವ್ವಾ ಆಕಿ ಅಕ್ಕನೂ ಇದಾರ ಮತ್ತೆ..."

"ದತ್ತಾ ನೀ ಕಾಫಿ ಕುಡಿ. ಆರಿ ತಣ್ಣಗಾಗುತ್ತೆ. ಸೀತಾ ನೀ ಕಾಫಿ ಕುಡಿದು ಬಟ್ಟಲು ಗಳನ್ನು ಸ್ವಚ್ಛ ಮಾಡಿಡು."

"ಅವ್ವಾ ಹೋಗವ್ವಾ... ನಾ ಆ ಮೇಲೆ ಮಾಡ್ತೀನಂತ.. ಅಣ್ಣ ನಾನೂ ಮಾರ್ಕೆಟ್ಟಿಗೆ ಹೊಂಟೀವಿ... ಅವನ ನನಗ ಬಳೆ ರಿಬ್ಬನ್ನು ಎಲ್ಲಾ ಕೊಡಿಸ್ತಾನಂತ..."

"ಹಬ್ಬದ ಮುಂದೆ ತೆಗೆಸಿಕೊಟ್ಟಿದ್ನಲ್ಲೇ... ಸುಮ್ನೆ ರೊಕ್ಕ ಹಾಳು... ಮಾರ್ನವಮಿ ಹಬ್ಬಕ್ಕೆ ತಗೊಳ್ಳುವಂತೆ..."

"ಆಗ ಅಣ್ಣ ಮತ್ತೆ ಬರ್ತಾನಾ...?"

"ಹೋಗ್ಲಿ ಬಿಡವ್ವಾ... ಇನ್ನೆಷ್ಟು ರೊಕ್ಕ ಆದೀತು... ಸೀತಾ ನಡಿ ಹೋಗೋಣು" ಇಬ್ಬರೂ ಮನೆಯಿಂದ ಹೊರಬಿದ್ದರು. ದಾರಿ ಉದ್ದಕ್ಕೂ ಸೀತಾ ಏನೋ ವಟಗುಟ್ಟು ತ್ತಲೇ ಇದ್ದಳು. ದತ್ತನಿಗೆ ಅವಳ ಮಾತಿನ ಮೇಲೆ ಗಮನವಿರಲಿಲ್ಲ. ಮಂಗಳನ ಬಗ್ಗೆ ಚಿಂತಿಸುತ್ತಿದ್ದ. ಇಬ್ಬರೂ ಅಂಗಡಿಯನ್ನು ತಲುಪಿದರು. ತಂಗಿ ಕೇಳಿದ್ದನ್ನೆಲ್ಲಾ ಕೊಡಿಸಿ ಹಣಕೊಟ್ಟ. ಇಬ್ಬರೂ ಮನೆಯ ಕಡೆಗೆ ತಿರುಗಿದರು. ಇನ್ನೇನು ಮನೆಯನ್ನು ತಲುಪು ತ್ತಿದ್ದೇವೆ ಎನ್ನುವಾಗ ತಂಗಿಗೆ ಹೇಳಿದ. "ಸೀತಾ ಇದನ್ನೆಲ್ಲ ನಿನ್ನ ಮಂಗಳಕ್ಕನಿಗೆ ತೋರಿಸುಲ್ವಾ...?"

"ತೋರಿಸ್ಬಿಟ್ಟು ಬರ್ಲಾ? ನೀನು ಇಲ್ಲೇ ಇರು." ಎಂದು ಹೇಳಿ ಆ ಮನೆಯ ಕಡೆಗೆ ಓಡಿದಳು... ದತ್ತ ನಿಧಾನವಾಗಿ ಆ ಮನೆಯ ಕಡೆಗೆ ಹೆಜ್ಜೆ ಹಾಕಿದ. ಸೀತಾ ಸಂಭ್ರಮದಿಂದ ತಾನು ತೆಗೆದುಕೊಂಡ ವಸ್ತುಗಳನ್ನು ಅಕ್ಕತಂಗಿಯರಿಗೆ ತೋರಿಸು ತ್ತಿದ್ದಳು. ಇವನೂ ಒಳಗೆ ಬಂದು ನಿಂತ. ಸೀತಾ ಅಣ್ಣನ ಕಡೆ ತಿರುಗಿದಳು.

"ನೀನೂ ಬಂದ್ಯಾ ? ಅಲ್ಲೇ ನಿಂತಿರು ಅಂತ ಹೇಳಿದ್ದೆ"

"ಅವ್ವ ಕರೆದ್ಲು..." ಎನ್ನುತ್ತಾ ಇವರಿಬ್ಬರ ಕಡೆ ನೋಡಿದ. ಇಬ್ಬರೂ ಸಂಕೋಚ ಮುಜುಗರಗಳಿಂದ ಅವನ ಕಡೆ ನೋಡಿದರು. "ಈಗ ನಿಮ್ಮ ತಾಯಿ ಹೆಂಗಿದ್ದಾರ್ರೀ..." ವಿಚಾರಿಸಿದ.

"ಹೂಂ... ಆರಾಮವಾಗಿದಾರೆ... ರಾಧಾಬಾಯಿ ಹೇಗಿದಾರೆ?" ಮಂಗಳ ವಿಚಾರಿಸಿದಳು. ಅವನ ಮುಖದ ಬಣ್ಣ ಬದಲಾಗಿತ್ತು. ಉತ್ತರಿಸದೇ ಸೀತಳ ಕಡೆ ನೋಡಿದ.

"ನೀ ಮನಿಗೆ ಹೋಗು... ನಾನು ಇನ್ನು ಹತ್ತು ನಿಮಿಷ ಬಿಟ್ಟು ಬರ್ತೀನಿ. ನಾನು ಇಲ್ಲಿ ಇದೀನಿ ಅಂತ ಅವ್ವಗೆ ಹೇಳು" ಎಂದು ಹೇಳಿ, ಸೀತಳನ್ನು ಕಳಿಸಿ, ತಾನು ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತ." ನಿಮ್ಮ ತಂದೆ ಎಷ್ಟು ಹೊತ್ತಿಗೆ ಬರ್ತಾರ್ರೀ ನಾನು ಅವರ ಕೂಡೆ ಸ್ವಲ್ಪ ಮಾತಾಡೋದಿತ್ತು..."ಎಂದ.

"ಗೊತ್ತಿಲ್ಲ... ಏನು ಹೇಳ್ಬೇಕು... ನಂಗೇ ಹೇಳಿ... ನಾನು ಅವರಿಗೆ ಹೇಳ್ತೀನಿ..."

"ಅದೂ ಬರೋಬ್ಬರೀನೇ... ಹೆಂಗೂ ನಿಮ್ಮ ಅಕ್ಕನೂ ಇದಾರ... ನಂಗೆ ನೀವು ಒಂದು ಸಹಾಯ ಮಾಡಬೇಕ್ರೀ... ತಪ್ಪು ತಿಳೀಬ್ಯಾಡ್ರೀ...."

"ಸಹಾಯಾನಾ ? ಏನದು?..."

"ನಿಮ್ಮ ಲಗ್ನಕ್ಕ ಇನ್ನು ಎಷ್ಟು ತಿಂಗಳು ಉಳಿದ್ಯಾವ್ರೀ...?" ಅಕ್ಕತಂಗಿಯರು ಮುಖ ಮುಖ ನೋಡಿಕೊಂಡರು. ಅಸಂಬದ್ಧ ಮಾತನಾಡುತ್ತಿದ್ದಾನೆಂದೆನಿಸಿತ್ತು....

"ನೀವು ದಿಗಲು ಬೀಳಬ್ಯಾಡ್ರೀ ಸರೋಜಕ್ಕಾ... ನನ್ನ ಹೆಣ್ತೀಗೆ ಸಖತ್ ಆರಾಮ

ಇಲ್ಲ... ಆಸ್ಪತ್ರೆಯಲ್ಲಿ ಇದಾಳ್ರೀ... ಮದ್ದು ಮೈಗೆ ಅಂಟುತ್ತಿಲ್ಲ... ಯಾವಾಗ ಮೇಲು ಆಗ್ತಾಳೋ ತಿಳೀವಲ್ಲು.. ಅಥವಾ ಆಗೋದೇ ಇಲ್ವೋ... ಡಾಕ್ಟ್ರು ಸರ್ಯಾಗಿ ಹೇಳೂದಿಲ್ಲ. ನಂಗೆ ದಿಕ್ಕು ತೋಚದಂತಾಗಿದೆ."

ಮಂಗಳ ಅವನ ಕಡೆ ವ್ಯಥೆಯಿಂದ ನೋಡಿದಳು... ಈಗ ಇದಕ್ಕೆ ನಮ್ಮಿಂದ ಏನು ಸಹಾಯ ಬೇಕೋ ಅಂತ ಸರೋಜ ಯೋಚಿಸುತ್ತಿದ್ದಳು. ಹಣದ ಸಹಾಯ ಏನಾದ್ರೂ ಬೇಕಾಗಿದ್ರೆ ಅಪ್ಪ ಎಲ್ಲಿಂದ ಹೊಂದಿಸ್ತಾರೆ... ಎಂದು ಚಿಂತಿಸಿದಳು.

"ಅಷ್ಟರಲ್ಲಿ ಸೀತಾ ಓಡಿ ಬಂದಳು... ಕಾಕಾ ನಿನ್ನ ಕರೀಲಿಕ್ಕೆ ಹತ್ಯಾರ ಲಗೂನೇ ಬರ್ಬೇಕಂತೆ..." ಅವಳು ಮತ್ತೆ ಓಡಿ ಹೋಗಿದ್ದಳು. ಅವನು ತನ್ನ ಪ್ಯಾಂಟಿನ ಜೇಬಿನಲ್ಲಿದ್ದ ಪರ್ಸನ್ನು ಹೊರತೆಗೆದು, ಅದರೊಳಗೆ ಮಡಿಸಿಟ್ಟಿದ್ದ ಒಂದು ಪತ್ರವನ್ನು ಹೊರ ತೆಗೆದು ಮಂಗಳನ ಕೈಗಿತ್ತ.

"ಈ ಪತ್ರ ನಿಮ್ದು ರೀ... ನಿಮ್ಮ ಭಾವೀ ಪತಿ ನಿಮಗೆ ಬರದಿದ್ದು... ಅದು ದಿಬ್ಬದ ಮನೆಯ ಹತ್ರ ಬಿದ್ದಿತ್ರೀ... ನನ್ನ ಕೈಗೆ ಸಿಕ್ತು... ನಿಮಗೆ ಕೊಡ್ಲಿಕ್ಕೆ ಆಗ್ಲೇ ಇಲ್ರೀ. ನನ್ನೊಡನೆ ಉಳಿದಿತ್ರೀ... ತಪ್ಪು ತಿಳೀಬ್ಯಾಡ್ರೀ..." ಎಂದ ಕ್ಷಮೆ ಯಾಚಿಸುವವನಂತೆ...

ಮಂಗಳ ಆ ಪತ್ರವನ್ನು ಬಿಚ್ಚಿ ನೋಡದೇ, ಹಾಗೆ ಹರಿದು ಚೂರು ಚೂರು ಮಾಡಿದಳು. ಅವನು ಅಚ್ಚರಿಗೊಂಡ. "ತಪ್ಪಾತ್ರೀ... ನಿಮಗೆ ಕೋಪ ಬಂದ್ಹಂಗಿದೆ... ನನ್ನನ್ನು ಕ್ಷಮಿಸ್ರೀ... ಪತ್ರದಾಗೆ ಏನಿದೆ ಅಂತ ಓದ್ಲಿಲ್ಲೇನ್ರೀ...?" ಇಲ್ಲ ಎನ್ನವಂತೆ ತಲೆಯಾಡಿಸಿದಳು. ಮುಖ ಬಿಗಿದುಕೊಂಡಿತು.

"ಸರೋಜಕ್ಕ ನೀವಾದ್ರೂ ನಿಮ್ಮ ತಂಗಿಗೆ ಹೇಳ್ರೀ.... ನಾ ಬೇಕೂಂತ ಏನೂ ಮಾಡ್ಲಿಲ್ಲರೀ..."

"ಪರವಾಗಿಲ್ಲ ಈಗ ಈ ಪತ್ರದ ಅವಶ್ಯಕತೆ ಇವಳಿಗಿಲ್ಲ..."

"ಯಾಕ್ರೀ... ಭಾವಿ ಪತಿರಾಯ ಬರೆದ ಪತ್ರ... ಹರಿದು ಹಾಕಿದ್ರಲ್ಲ..."

"ಆ ವ್ಯಕ್ತಿ ಈಗ ಬದುಕಿಲ್ಲ." ಸರೋಜ ಹೇಳಿದ್ದು ಕೇಳಿಸಲಿಲ್ಲವೇನೋ ಎಂಬಂತೆ ಆಂ, ಎಂದು ಬಾಯಿಬಿಟ್ಟು ನೋಡಿದ. ಆಕ್ಸಿಡೆಂಟ್‌ನಲ್ಲಿ ಆತ ತೀರಿಹೋದ್ರು. ಮದುವೆ ಮುರಿದು ಹೋಯ್ತು... ಇನ್ನು ಏನೂ ಕೇಳ್ಬೇಡಿ..."

"ನಂಗೆ ಗೊತ್ತಿದ್ದಿಲ್ರೀ... ಅಪರಾಧ ಆತ್ರೀ... ಹೀಂಗಾಗಬಾರ್ದಾಗಿತ್ತು..." ಬಾಯಿ ಲೊಚಗುಟ್ಟಿದರೂ, ಒಳಗೊಳಗೇ ನಿರಾಳವೆನಿಸಿತ್ತು... ಮಂಗಳನ ಕೈಹಿಡಿದು, "ತಪ್ಪು ತಿಳೀ ಬ್ಯಾಡ್ರೀ... ನನ್ನನ್ನ ನಿಮ್ಮ ಗೆಳೆಯ ಅಂತ ಭಾವಿಸ್ರೀ..." ಅವಳು ಕೈಯನ್ನು ಕೊಸರಿಕೊಂಡು, ಒಳಗೆ ಹೋಗಿಬಿಟ್ಟಳು. ಅವನು ಅವಳ ಹಿಂದೆಯೇ ಹೋದವನು ಒಳಬಾಗಿಲಲ್ಲಿ ನಿಂತ. ನಿಮ್ಮ ಹತ್ರ ಜರೂರು ಮಾತಾಡೋದು ಇದೆ. ಇಲ್ಲ

ಅನ್ನಬ್ಯಾಡಿ... ನಾನು ಮತ್ತೆ ಬರ್ತೀನಿ..." ಎಂದು ಹೇಳಿ ಮನೆಯಿಂದ ಹೊರಬಂದು, ತನ್ನ ಮನೆಯ ಕಡೆಗೆ ನಡೆದ. ಸರೋಜ ಬೆರಗು ಗಣ್ಣುಗಳಿಂದ ಅವನ ವರ್ತನೆಯನ್ನು ಗಮನಿಸಿದಳು ಅವನ್ಯಾಕೆ ಹಾಗೆ ಆಡಿದ ಎಂದು ಅರ್ಥವಾಗಿರಲಿಲ್ಲ.

"ಅವನ್ಯಾಕೆ ಹಾಗೆ ಮಾತಾಡ್ದ. ಒಳಗೆ ಬಂದು ಏನು ಹೇಳ್ದ? ನೋಡೋಕೆ ಒಳ್ಳೆಯವನ ಥರ ಕಾಣ್ತಾನೆ. ಆದ್ರೆ ವರ್ತನೆ ಒಂಥರಾ ವಿಚಿತ್ರವಾಗಿತ್ತು."

"ನಂಗೂ ಅದೇ ತಿಳೀಲಿಲ್ಲ. ಅದ್ಯಾವುದೋ ನಂಗೆ ಬಂದ ಕಾಗದ, ಓದುಕ್ಕೆ ಅಂತ ದಿಬ್ಬದ ಮನೆ ಹತ್ರ ತಗೊಂಡು ಹೋಗಿದ್ದೆ. ಓದ್ಲೇ ಇಲ್ಲ, ಬಿದ್ದು ಹೋಗಿತ್ತು. ಅದು ಇವನಿಗೆ ಸಿಕ್ಕಿದೆ. ಈಗ ಕೊಟ್ಟ.. ಅದಕ್ಕೇ ಹರಿದು ಹಾಕಿದೆ..."

"ಅವನು ಓದಿದ್ನೋ ಏನೊ?"

"ಏನೋ ಯಾರಿಗೆ ಗೊತ್ತು. ಓದಿದ್ರೆ ಹೇಳಿರ್ತಿದ್ದ ಇದನ್ನೆಲ್ಲ ಅಮ್ಮಂಗೆ ಹೇಳಲೇ ಬೇಡ. ಸುಮ್ಮನೆ ರಂಪ ಮಾಡ್ತಾಳೆ... ಇವನೇನೋ ಮಾತಾಡಬೇಕಂತೆ... ನಂಗೆ ಏನೂ ಬೇಕಿಲ್ಲ... ಏಳು ಊಟ ಮಾಡೋಣ..." ಎಂದು ಹೇಳಿ ಮುಂಬಾಗಿಲನ್ನು ಹಾಕಿದಳು ಇಬ್ಬರೂ ಊಟಕ್ಕೆ ಎದ್ದರು.

○ ○ ○

ಅದೇ ತಾನೇ ಹಿಂದಿರುಗಿದ್ದ ರಾಮರಾಯ, ಜಾನಕಮ್ಮ, ಮದುವೆ ಮನೆಯ ವಿಷಯ ಕುರಿತು ಮಾತನಾಡುತ್ತಿದ್ದರು ಅಷ್ಟರಲ್ಲಿ ಮಾರ್ತಾಂಡ ಬಂದಿದ್ದ. "ಮಾವಾ... ಕಾಕಾ ಕರೀತಾನ ಬರ್ಬೇಕಂತ" ಎಂದು ಸುದ್ದಿಯನ್ನು ಮುಟ್ಟಿಸಿದ.

"ಏನಂತೋ ಮಾರ್ತಾಂಡ..." ಎನ್ನುತ್ತಾ ರಾಮರಾಯ, ಹೆಗಲ ಮೇಲೆ ಶಲ್ಯವನ್ನು ಹೊದ್ದುಕೊಳ್ಳುತ್ತಾ ಅವನೊಂದಿಗೆ ಅವರ ಮನೆಗೆ ನಡೆದ. ಸರೋಜ, ಮಂಗಳಾ ಮುಖ ಮುಖ ನೋಡಿಕೊಂಡರು.

"ಬರ್ರೀ... ಬರ್ರೀ ರಾಮರಾಯರ.... ನಮಸ್ಕಾರರೀ..." ಹಿರಿಯ ಜೋಷಿ ಸ್ವಾಗತಿಸಿದರು. ರಾಮರಾಯ ಕೈ ಮುಗಿದು ನಮಸ್ಕಾರ ಎನ್ನುತ್ತಾ ಒಳ ಬಂದು ಕುಳಿತ... "ಇವ ನಮ್ಮ ಮಗ ದತ್ತಪರಿಚಯ ಅದ ಅಲ್ಲಾ..." ದತ್ತನೂ ಕೈ ಮುಗಿದ.

"ನಮಗ ಒಂದು ಸಹಾಯ ಮಾಡಬೇಕ್ರೀ ನೀವು... ಮಂಗಳಾನ ನಮಗ ಕೊಟ್ಟು ಬಿಡ್ರೀ, ನಾವು ಸೊಸೆ ಮಾಡ್ಕೊಳ್ತೀವಿ." ಅರೆಬೆರೆತ ಹಾಸ್ಯದಿಂದ ಹೇಳಿದರು.

"ಏನು ಹೇಳ್ತಿದೀರಿ ಜೋಷಿಗಳೇ... ನಮ್ಮದೂ ನಿಮ್ಮದೂ ಸಂಪ್ರದಾಯಗಳು ಬೇರೆ ಅಲ್ವಾ?" ರಾಮರಾಯ ಕಕ್ಕಾ ಬಿಕ್ಕೀ ಆಗಿದ್ದ.

"ಸಂಪ್ರದಾಯಾನ ಬಿಡ್ರೀ... ಈಗ ಕಾಲ ಬದಲಾಗದ... ನಮ್ಮ ಮಗನಿಗೆ ಜರೂರಾಗಿ ಲಗ್ನ ಆಗಬೇಕಾಗದ... ನಮಗ ಮಂಗಳ ಶಾನೇ ಹಿಡಿಸ್ಯಾಳ... ಸರಳವಾಗಿ ಧಾರೆ ಎರೆದುಕೊಟ್ಟು ಬಿಡಿ... ಅಷ್ಟೇ ನಾವು ಕೇಳೋದು..."

"ಅದ್ಸರಿ... ನಾನೊಬ್ನೇ ಹೇಗೆ ಹೇಳಲಿ! ಮನೇಲಿ ಕೇಳಬೇಕಾಗುತ್ತೆ.."

"ಯಾರನ್ನ ? ಮಂಗಳನ್ನ ಹೌದೋ ಅಲ್ವೋ... ಈಗ್ಲೇ ಕೇಳೋಣಂತ... ಹೋಗೋ ಮಾರ್ತಾಂಡ ಮಂಗಳಾನ್ನ ನಾನು ಕರೆದಿ ಅಂತ ಹೇಳಿ ಕರ್ಕೊಂಡು ಬಾರೋ...." ಮಾರ್ತಾಂಡ ಓಡಿದ್ದ. ಕೆಲವೇ ಕ್ಷಣಗಳಲ್ಲಿ ಅವನೊಂದಿಗೆ ಮಂಗಳ ಬಂದಳು. ಮುಜುಗರದಿಂದ ದೂರದಲ್ಲೇ ನಿಂತಳು. ಕಸಿವಿಸಿಗೊಂಡಿದ್ದಳು.

"ತಾಯೀ ಮಂಗಳವ್ವಾ ಇತ್ಲಾಗ ಬಾರವ್ವಾ... ಇಲ್ಲಿ ಕುಂದ್ರು. ನಾಜೂಕಾಗಿ ಅವಳನ್ನು ತಮ್ಮ ಬಳಿಗೆ ಕರೆದರು. ಅವಳು ಬಂದು ಅವರ ಬಳಿ ಕುಳಿತಳು. ಅವಳ ತಲೆಯ ಮೇಲೆ ಕೈಯಾಡಿಸಿದರು. "ನಮ್ಮ ಮಗನನ್ನು ಲಗ್ನ ಆಗ್ತೀಯೇನವ್ವಾ?' ಪ್ರಶ್ನಿಸಿದರು.

ಅವಳು ಕಕ್ಕಾಬಿಕ್ಕಿಯಾಗಿ ದತ್ತನ ಕಡೆ ನೋಡಿದಳು. ಕೈಕಟ್ಟಿನಿಂತಿದ್ದವನು ನಕ್ಕಂತೆ ಮಾಡಿದ. "ನಾನು ನಿಮ್ಮ ಸಂಗಡ ಮಾತಾಡುದಿದೆ..." ಎಂದ.

"ಇಲ್ಲೇ ಹೇಳಿ... ಎಲ್ಲರ ಎದುರಿಗೆ" ಕಷ್ಟಪಟ್ಟು ಹೇಳಿದಳು. ಅವನು ಮಾತಾಡದೇ ಹೊರಗೆ ಹೋಗಿ ನಿಂತ ಹಿರಿಯ ಜೋಷಿ, ಹಾಗೂ ತುಂಗಾಬಾಯಿ, ವಿಷಯಗಳನ್ನು ಸ್ವಚ್ಛವಾಗಿ, ಸಂಕ್ಷಿಪ್ತವಾಗಿ ತಿಳಿಸಿದರು.

"ಈಗ ನಿಮ್ಮಿಂದ ಸಹಾಯ ಆಗಬೇಕಾಗದ. ರಾಧಾಬಾಯಿಯ ಆಸೇನ ತೀರಿಸ್ಬೇಕಾಗದೆ... ನಮ್ಮ ದತ್ತನ್ನ ನೀವು ಕಂಡೀರಿ... ಒಳ್ಳೇ ಹುಡುಗ... ಚಲೋ ಸಂಪಾದನೆ ಇದೆ. ಹೆಣ್ತೀನ ಪ್ರೀತಿಯಿಂದ ನೋಡ್ಕೋತಾನೆ..." ರಾಮರಾಯರ ಮುಖ ಕಪ್ಪಿಟ್ಟಿತು. ಮಂಗಳ ತಲೆ ತಗ್ಗಿಸಿದಳು. "ಏನಾದ್ರೂ ಹೇಳವ್ವಾ... ಬೇಕಾದ್ರ ದತ್ತನ ಸಂಗಡ ಮಾತಾಡವ್ವಾ... ಹೋಗು... ಅಲ್ಲಿ ಕುಂತು ಮಾತಾಡು... ಅವ ಎಲ್ಲಾ ತಿಳಿಸ್ತಾನ..." ಮಂಗಳ ದತ್ತನ ಕಡೆ ನೋಡಿ ಎದ್ದಳು. ಇಬ್ಬರೂ ವೆರಾಂಡಕ್ಕೆ ಬಂದರು.

ದತ್ತ ಕೈ ಮುಗಿದ. "ನನ್ನನ್ನ ತಪ್ಪು ತಿಳೀಬ್ಯಾಡ್ರೀ... ರಾಧಾಬಾಯಿ ಆಸಿಪಟ್ಟಾಳ... ನಿಮಗೆ ಇಷ್ಟ ಇಲ್ಲ ಅಂದ್ರ ಹೇಳ್ಬಿಡಿ... ನಂಗೆ ಬ್ಯಾಸ್ರ ಏನೂ ಇಲ್ಲ... ನನ್ನ ಲಗ್ನ ಆಗದ ಅಂತ ಆಕಿಗೆ ತೋರಿಸ್ಬೇಕು... ಆಕಿಗೆ ಸಮಾಧಾನ ಆಗ್ತದೆ..."

"ಅದಕ್ಕೇ... ಲಗ್ನ ಆಗ್ತೀರಾ? ಮುಂದೇನು?..."

"ಬೇಕಾದರ ಸುಳ್ಳು ಸುಳ್ಳೆ ಲಗ್ನ ಆದ್ಹಂಗ ನಾಟ್ಕ ಆಡೋಣು... ನಿಮಗ ನಾನು ಘಸಂದ ಇಲ್ಲದಿದ್ರ..." ಕೈ ಹೊಸೆಯುತ್ತಾ ಹೇಳಿದ. ಅವಳು ಕ್ರೂರವಾಗಿ ಅವನ ಕಡೆ ನೋಡಿದಳು.

"ನಾಟಕದ ಹೆಣ್ಣಿನ ಥರ ಕಾಣ್ತೀನಾ ನಾನು ?.... ಏನು ಈ ಹುಡುಗಾಟ...?"

"ಹುಡುಗಾಟ ಅಲ್ರೀ... ರಾಧಾಬಾಯಿ ಎಷ್ಟು ದಿನ ಬದುಕಿರ್ತಾಳೋ ನಂಗೆ ತಿಳಿದಿಲ್ರೀ... ಆಕಿಗ ನನ್ನ ಲಗ್ನ ನೋಡ್ಬೇಕೂಂತ ಆಸಿ ಹುಟ್ಟದ..."

"ಬೇರೆ ಯಾರೂ ಸಿಗಲಿಲ್ವಾ ನಿಮಗೆ?"

"ನನ್ನನ್ನ ಅರ್ಥ ಮಾಡ್ಕೊಂಬೋರು ಯಾರು ಸಿಕ್ತಾರ್ರೀ... ನಿಮಗಾದರ ನಾನು ಖುಲ್ಲಾ ಎಲ್ಲಾ ಹೇಳಬಹುದು. ನಿಮಗ ನನ್ನ ತುಡಿತ ಅರ್ಥ ಆಗ್ತದರೀ..."

"ನಾನು ಒಪ್ಪದಿದ್ದರೇ..?"

"ಒಲ್ಲೇ ಎನಬ್ಯಾಡ್ರೀ... ನಾನು ನಿಮ್ಮನ್ನೇ ನಂಬೀನಿ.." ಎನ್ನುತ್ತಾ ಅವಳ ಕೈಗಳನ್ನು ಹಿಡಿದ. ಅವಳು ಸರ್‍ರನೆ ಕೈಗಳನ್ನು ಹಿಂದಕ್ಕೆ ಎಳೆದುಕೊಂಡಳು. ಅವನ ಕಣ್ಣುಗಳಲ್ಲಿ ಕೋರಿಕೆಯ ಭಾವವನ್ನು ಕಂಡಳು. ಅನುಮಾನಿಸಿದಳು. "ಸಂಕೋಚ ಬ್ಯಾಡ್ರೀ... ನಾನು ನಿಮ್ಮ ಗೆಳೆಯನಿದ್ದೀನ್ರೀ... ನೀವು ಹ್ಯಾಂಗ ಹೇಳಿದ್ರ ಹಾಂಗ... ರಾಧಾಬಾಯಿಗೋಸ್ಕರ ಒಪ್ಕೊಳ್ರೀ..."

"ಅವರನ್ನು ನೀವು ತುಂಬಾ ಪ್ರೀತಿಸ್ತೀರಿ... ಮತ್ತೆ ಮದುವೆ ಆಗ್ತೀರಾ?"

"ಪ್ರೀತಿಸ್ತೀನ್ರೀ...ಅದಕ ಆಕಿ ಮಾತನ್ನ ನಡೆಸ್ಬೇಕೂಂತ ಮಾಡಿನ್ರೀ..."

"ಆಮೇಲೆ ನಾನೇನು ಮಾಡ್ಲೀ... ನನಗೆ ಅಪವಾದ ಬರುಲ್ವಾ?"

"ಅಪವಾದ ಬರದ ಹಾಂಗ ನಾನು ನೋಡ್ಕೋಳ್ತೀನ್ರೀ... ಯಾರ್‍ಗೂ ತಿಳ್ಯೋದೇ ಬೇಡ... ಬರೀ ನಮ ನಮಗ ಮಾತ್ರ ಗೊತ್ತಿರಲಿ... ನಾನು ಭಾಷೆ ಕೊಡ್ತೀನ್ರೀ...."

"ನಾನು ಯೋಚಿಸ್ಬೇಕು... ನಂಗೆ ಸಮಯ ಬೇಕು..."

"ಹಂಗೇ ಆಗ್ಲಿ... ನೀವು ಹ್ಯಾಂಗ ಹೇಳಿದರ ಹಾಂಗ... ನಾನು ನಿಮ್ಮ ಉತ್ತರಕ್ಕೆ ಕಾಯ್ತೀನ್ರೀ... ಯಾವಾಗ ತಿಳಿಸ್ತೀರ್ರೀ..."

"ಬೆಳಿಗ್ಗೆವರೆಗೂ ಕಾಯ್ಬೇಕು ನೀವು... ನಾನು ಬರ್ತೀನಿ... " ಎಂದು ಹೇಳಿ ಹೊರಬಂದು, ಸೀದಾ ತನ್ನ ಮನೆಯ ಕಡೆಗೆ ನಡೆದು ಬಿಟ್ಟಳು.

"ನಿಮ್ಮ ಮಗಳು ಒಪ್ಪಿದ್ದ್ಹಾಂಗ ಅನ್ನಿಸ್ತದ. ನಾಚ್ಕೆ ಪಟ್ಕೊಂಡು ಹೋಯ್ತು..." ಹಿರಿಯ ಜೋಷಿ ಹೇಳಿದಾಗ, ರಾಮರಾಯ ಕೈ ಮುಗಿದು ಎದ್ದ. ಅವನ ಚಿತ್ತ ಕಲಕಿತ್ತು.

"ಇದು ಸಂಧಿಗ್ದ ಪರಿಸ್ಥಿತಿ. ನಾವು ಮಾತಾಡಿ, ಯೋಚ್ನೆ ಮಾಡಿ ನಿರ್ಧಾರಾನ ತಿಳಿಸ್ತೀವಿ... ಇವೆಲ್ಲಾದಿಡೀರನೇ ಹೇಳುಕ್ಕೆ ಆಗುಲ್ಲ..." ಎಂದು ಹೇಳಿ ದತ್ತನ ಕಡೆ ತಿರುಗಿದ. ಅವನ ಮುಖದ ಮೇಲಿನ ಸಮಾಧಾನವನ್ನು ಕಂಡು, ಮಂಗಳ ಒಪ್ಪಿರಬಹುದೇ ಎಂದು ಅನ್ನಿಸಿತು.ಚಡಪಡಿಕೆ ಹೆಚ್ಚಾಯಿತು. ಸರಸರನೆ ತನ್ನ ಮನೆಯ ಕಡೆಗೆ ಬಂದ.

ಂ ಂ ಂ

ಚಿಕ್ಕವರೆಲ್ಲ ಮಲಗಿದ್ದರು. ರಾಮರಾಯ, ಜಾನಕಿ, ಸರೋಜ, ಮಂಗಳ ಒಂದೆಡೆ ಸೇರಿದರು. ರಾಮರಾಯ ನಡೆದ ಮಾತುಗಳನ್ನು ತಿಳಿಸಿದ. ಎಂಥಾ ಫಜೀತಿಗೆ ತಂದಿಡ್ತಾರೆ ನೋಡು... ಇವರ ಆಸೆಗೆ ನಾವು ಕುಣೀಬೇಕಾ?....ಅದೂ ಇಂಥಾ ವಿಷಯಕ್ಕೆ ?"

"ನಂಗೂ ಅರ್ಥ ಆಗ್ತಿಲ್ಲ. ಅಲ್ಲ... ಇದೆಂಥಾ ಆಸೆ?.... ತಾನು ಬದುಕಿರುವಾಗ್ಲೇ ಗಂಡಂಗೆ ಮದುವೆ ಮಾಡುವ ಆಸೆ.... ವಿಚಿತ್ರವಾಗಿ ಕಾಣುತ್ತೆ. ಅದಕ್ಕೆ ನಾವೇ ಆಗ್ಬೇಕಾ.?"

"ನಿಂಗೇನು ಅನ್ಸುತ್ಯೇ ಮಂಗಳಾ.... ಅವನು ನಿನ್ಹತ್ರ ಮಾತಾಡಿದ್ನಾ?"

"ಮಾತಾಡ್ದ.... ನಿಮಗೆಲ್ಲ ಏನನ್ಸುತ್ತೆ...? ನಾನು ಒಪ್ಕೋಬೇಕಾ?..." ಅಸಹನೆಯಿಂದ ಕೇಳಿದಳು

" ಹೌದು ಇದು ಸರಿಯಲ್ಲ. ಇಲ್ಲಿ ನಿನ್ನ ನಿರ್ಧಾರ ಮುಖ್ಯ ಮಂಗಳಾ... ಯಾರ ಬಲವಂತವಿಲ್ಲ... ಈಗ ಇದನ್ನು ಸಹಾಯ ಅಂತ ಮಾಡ್ಬೇಕೋ.... ಅನುಕೂಲ ಅಂತ ಮಾಡ್ಬೇಕೋ ತಿಳೀತಿಲ್ಲ."

"ಇದರಲ್ಲಿ ಅನುಕೂಲ ಏನು?.... ನಮಗೇನು ಲಾಭ?....."

"ಅವರಾಗಿಯೇ ಕೇಳ್ಕೊಂಡು ಬಂದಿದಾರೆ... ಎರಡನೇ ವರ ಅನ್ನೋದನ್ನೊಂದನ್ನು ಬಿಟ್ಟರೆ..." ಅನುಮಾನವನ್ನು ವ್ಯಕ್ತಪಡಿಸುತ್ತಾ ಹೇಳಿದ.

"ನೀವು ಒಪ್ಕೊಂಡು ಬಿಟ್ರಾ?.... ಅವರ ಸಂಪ್ರದಾಯ ಬೇರೆ ಅಲ್ವಾ?...."

"ನೀನು ಯಾವ ಕಾಲದಲ್ಲಿ ಇದೀಯ... ಸಂಪ್ರದಾಯ ಕಟ್ಕೊಂಡು ಏನ್ಮಾಡ್ತೀಯ.... ಇವಳ ಮದುವೆ ನಿಂತು ಹೋಗಿ, ಇವಳಿಗೂ ಬೇಜಾರಾಗಿದೆ... ಏನೇನೋ ಮಾತಾಡ್ಬೇಡಿ... ಮಂಗಳನಿಗೆ ಒಪ್ಪಿಗೆ ಇದ್ದರೆ ಮದುವೆಗೆ ಹೂಂ ಅನ್ನಿ" ಸರೋಜ ಎಂದಳು.

"ಏನೇ ಹಿರೀ ಮಗಳಾಗಿ ಹೀಗೆ ಹೇಳ್ತೀಯಲ್ಲ... ಮಂಗಳ ನಿನ್ನ ಸ್ವಂತ ತಂಗಿ..."

"ಅದಕ್ಕೇ ಹೇಳಿದ್ದು... ಮಂಗಳಂಗೆ ಒಪ್ಪಿಗೆ ಆದರೆ, ಸಂಪ್ರದಾಯ ಸಂಬಂಧ ಏನೂ ನೋಡ್ಬೇಡಿ. ದೈವೇಚ್ಛೆ ಅಂತ ಅಂದ್ಕೊಳ್ಳಿ."

" ನಂಗೆ ಏನೂ ತೋಚ್ತಿಲ್ಲ. ಸರಿ ದೈವೇಚ್ಛೆ ಹೇಗಿದೆಯೋ ಹಾಗಾಗಲಿ... ಬೆಳಿಗ್ಗೆ ಎದ್ದ ಮೇಲೆ ಸ್ನಾನ ಪೂಜೆಯ ನಂತರ, ಚೀಟಿಯಲ್ಲಿ ಬರೆದು ದೇವರ ಮುಂದೆ ಇಟ್ಟು, ಮಗುವಿನ ಕೈಯಲ್ಲಿ ಎತ್ತಿಸೋಣ... ಏನು ಬರುತ್ತೋ ಅದೇ ಅಂತಿಮ ನಿರ್ಧಾರ... ಏನಂತೀಯೇ ಮಂಗಳಾ?"

"ನೀವೆಲ್ಲಾ ಹೇಗೆ ಹೇಳ್ತೀರೋ ಹಾಗೆ... ನಂಗೂ ಏನೂ ತೋಚ್ತಿಲ್ಲ..."

"ಸರಿ... ಈಗ ಎಲ್ರೂ ಮಲಗಿ. ಬೆಳಿಗ್ಗೆ ಬೇಗ ಏಳೋಣ...."ಎಲ್ಲರೂ ಮಲಗಿದರು.

ರಾತ್ರಿ ಆತಂಕದಿಂದ ನಿದ್ದೆ ಬಂದಿರಲಿಲ್ಲವಾದರೂ, ಬೆಳಿಗ್ಗೆ ನಿತ್ಯಕ್ಕಿಂತ ಬೇಗ ಎದ್ದುದಾಗಿತ್ತು. ರಾಮರಾಯರು ಸ್ನಾನವನ್ನು ಮುಗಿಸಿ, ದೇವರಪೂಜೆಯನ್ನು ಪ್ರಾರಂಭ ಮಾಡಿದರು... "ಸರೋಜಮ್ಮ ಬಾ ಇಲ್ಲಿ... ಈ ಎರಡು ಚೀಟಿಗಳಲ್ಲಿ 'ಓಂ' ಬರೆದು,

ದೇವರ ನಿರ್ಣಯ ಏನೂಂತ ತಿಳಿದುಕೊಳ್ಳೋಕೆ 'ಒಪ್ಪಿಗೆ'ಯನ್ನು ಕೇಳಿ, ಚೀಟಿ ಎತ್ತೋಣ. ನೀನು ಬರೆದುಕೊಡು." ಅವಳ ಮುಂದೆ ಕಾಗದ ಪೆನ್ನುಗಳನ್ನಿಟ್ಟರು.

ಸರೋಜ ಮುಜುಗರಗೊಂಡಳು. ಆದರೂ ದೇವರಿಗೆ ಕೈ ಮುಗಿದು, ನಾನು ಏನೇ ಬರೆದರೂ, ನನ್ನ ತಂಗಿಗೆ ಒಳ್ಳೇದಾಗಲಿ ಎಂದು ಮನದಲ್ಲಿ ಪ್ರಾರ್ಥಿಸಿ, ಎರಡೂ ಚೀಟಿಗಳಲ್ಲೂ ತಂದೆ ಹೇಳಿದಂತೆ ಬರೆದು, ದೇವರ ಮುಂದೆ ಇಟ್ಟಳು. ಮನದಲ್ಲಿ ಗೊಂದಲ ತುಂಬಿ ಕೊಂಡಿತ್ತು... ಆದರೆ ನಿರ್ಧಾರವಾಗಿ ಹೋಗಲಿ ಎಂದುಕೊಂಡು ಕಣ್ಣು ಮುಚ್ಚಿ ಕುಳಿತಳು.

"ಮಂಗಳಾ, ನೈವೇದ್ಯಕ್ಕೆ ಹಣ್ಣು ತಂದಿಡು. ಹಾಗೇ ಬಾಲುಗೆ ಸ್ನಾನ ಮಾಡಿಸಿ, ಮುಗುಟ ಉಡಿಸು. ನೀನೂ ಸ್ನಾನ ಮಾಡಿ ಬಾ... ಮಂಗಳಾರತಿ ಮಾಡಿ ಪ್ರಸಾದ ತಗೊಂಡು ಚೀಟಿಯನ್ನು ಎತ್ತಿಸೋಣ..." ಎಂದು ಮಗಳಿಗೆ ಹೇಳಿದರು. ಉಳಿದ ಮಕ್ಕಳಿಗೆ ಕುತೂಹಲವಿದ್ದರೂ, ಸ್ಕೂಲಿಗೆ ಹೋಗಬೇಕಾಗಿದ್ದುದರಿಂದ, ಅವರವರ ಕೆಲಸದಲ್ಲಿ ತೊಡಗಿದ್ದರು.

ಪೂಜೆ ಮುಗಿದಿತ್ತು. ಮಂಗಳಾರತಿಯ ನಂತರ ಎಲ್ಲರಿಗೂ ತೀರ್ಥ ಪ್ರಸಾದವನ್ನು ಕೊಟ್ಟು ಬಾಲುವನ್ನು ಎತ್ತಿ ತಮ್ಮ ತೊಡೆಯ ಮೇಲೆ ಕೂರಿಸಿಕೊಂಡರು... ದೇವರನ್ನು ಪ್ರಾರ್ಥಿಸಿ, ಚೀಟಿಗಳನ್ನು ಇಟ್ಟಿದ್ದ ಸಣ್ಣ ತಟ್ಟೆಯನ್ನು ಅವನ ಮುಂದೆ ಹಿಡಿದರು. ಅವನು ಕಿಲ ಕಿಲ ನಗುತ್ತಾ ಒಂದು ಚೀಟಿಯನ್ನು ಎತ್ತಿ ತಂದೆಯ ಕೈಗೆ ಕೊಟ್ಟ... "ತಗೋಮ್ಮ ಇದರಲ್ಲಿ ಏನು ಬರೆದಿದೆ" ಅಂತ ಓದು ಎಂದು ಹೇಳಿ ಮಂಗಳನ ಕೈಗೆ ನೀಡಿದರು. ಅವಳು ನಡುಗುವ ಕೈಗಳಿಂದ ಚೀಟಿಯನ್ನು ಬಿಡಿಸಿದಳು. ಓದಿಕೊಂಡಳು. ಮೈ ಸಣ್ಣಗೆ ನಡುಗಿತು. ಮೈ ನಡುಗಿತು. ಅಕ್ಕನ ಕಡೆ ನೋಡಿದಳು. ಅವಳು ಮುಗುಳ್ನಕ್ಕಳು. ಈ ಮೊದಲೇ ಉತ್ತರ ಅವಳಿಗೆ ಗೊತ್ತಿದೆ ಎನ್ನುವಂತಿತ್ತು ಭಾವ. ಚೀಟಿಯಲ್ಲಿ ಬರೆದುದನ್ನು ಮನದಲ್ಲೇ ಓದಿಕೊಂಡು ತಂದೆಗೆ ಕೊಟ್ಟಳು. ಆತನೂ ಓದಿಕೊಂಡು ಹೆಂಡತಿಯನ್ನು ಕರೆದರು. ಜಾನಕಿ ಒಳಗೆ ಬಂದಳು. "ದೇವರು ತನ್ನ ನಿರ್ಧಾರವನ್ನು ತಿಳಿಸಿದ್ದಾನೆ... ನಾನು ಹೋಗಿ ಜೋಷಿಯವರಿಗೆ ತಿಳಿಸಿ ಬರ್ತೀನಿ." ಮನದಲ್ಲಿನ ತುಮುಲ ಕಡಿಮೆ ಆಗಿತ್ತು.

"ಏನೂಂತ ಬಂತೇ ಚೀಟಿಯಲ್ಲಿ?" ಸರೋಜಳನ್ನು ಪಿಸುದನಿಯಲ್ಲಿ ಕೇಳಿದಳು. ಸರೋಜ ನಸುನಗುತ್ತಾ ತಲೆಯಾಡಿಸಿದಳು. ಜಾನಕಿ ಮಂಗಳನ ಕಡೆ ನೋಡಿದಳು. ಅವಳು ಕಣ್ಣು ಮುಚ್ಚಿ, ದೇವರಿಗೆ ವಂದಿಸುತ್ತಿದ್ದಳು...ಅವಳ ಕಳವಳ ತಾಯಿಗೆ ಅರ್ಥವಾಗಿತ್ತು.. ಇದೇನು ಈ ಹುಡುಗಿಯ ಗ್ರಹಚಾರ? ಇದೇನು ಪರೀಕ್ಷೆ. ಇದು ವರವೋ... ಶಾಪವೋ... ಹೇಳೋರು ಯಾರು? ದೇವರಿಗೆ ಎಲ್ಲಾ ಸೇರಿದ್ದು... ಇನ್ನು ತಡ ಏಕೆ ಎಂದುಕೊಂಡಳು... ಆದರೂ ಇದು ಸರಿಯೇ ಎಂದು ಮನ ತವಕಗೊಂಡಿತ್ತು.

ಸರೋಜ ತಟ್ಟೆಯಲ್ಲಿದ್ದ ಇನ್ನೊಂದು ಚೀಟಿಯನ್ನು ಎತ್ತಿಕೊಂಡಳು. ತಿಂಡಿ ತಿಂದು ಮಕ್ಕಳೆಲ್ಲ ಸ್ಕೂಲಿಗೆ ಹೊರಟು ಹೋಗಿದ್ದರು. ರಾಮರಾಯ ಮಡಿ ಬಟ್ಟೆಯಲ್ಲೇ ಜೋಷಿಯ ಮನೆಗೆ ಬಂದ. ಅವರುಗಳು ಇವನಿಗಾಗಿಯೇ ಕಾಯುತ್ತಿರುವಂತೆ ಅನ್ನಿಸಿತು.

"ಏನು ಸುದ್ದಿ ತಂದಿದೀರಿ ರಾಯರೇ ಹಣ್ಣೋ ಕಾಯೋ....?" ಹಾಸ್ಯ ಬೆರೆತ ಆತಂಕದಿಂದ ಹಿರಿಯ ಜೋಷಿ ಪ್ರಶ್ನಿಸಿದರು.

"ದೇವರ ನಿರ್ಣಯ ಸಿಕ್ಕಿದ್ದು ಆಗಿದೆ... ಮುಂದೆ ನೀವು ಹೇಗೆ ಹೇಳ್ತೀರೋ ಹಾಗೆ" ಎನ್ನುತ್ತಾ, ಒಪ್ಪಿಗೆಯ ಸುದ್ದಿಯ ವಿವರವನ್ನು ತಿಳಿಸಿದ.

"ನೋಡ್ರೀ ಮತ್ತ, ನಂಬಿದ ದೇವರು ಕೈ ಬಿಡೂದಿಲ್ಲ ಅನ್ನೋದಕ್ಕೆ ಇದೇ ಸಾಕ್ಷಿ.... ಅದಕೋ ಏನೋ ನಿಮ್ಮ ಹುಡ್ಗಿಯ ಲಗ್ನ ಗೊತ್ತಾದದ್ದು ಮುರಿದು ಹೋಯ್ತು... ಆಕೀ ನಮ್ಮ ಮನಿಯ ಸೊಸಿ ಆಗಿ ಬರೂದಿತ್ತು... ತುಂಗಾ ಬೀಗರು ಬಂದಿದಾರೆ... ಸಿಹಿ ತಗೊಂಡು ಬಾ...."ದೊಡ್ಡಪ್ಪನ ಮಾತನ್ನು ಕೇಳಿ ದತ್ತನೂ ಹೊರಬಂದು ರಾಮರಾಯರಿಗೆ ಕೈ ಮುಗಿದ.

"ನಿಮ್ಮ ಉಪಕಾರಾನ ನಾನು ಯಾವತ್ತಿಗೂ ಮರೆಯೂದಿಲ್ರೀ..." ಎಂದ.

"ಇದರಲ್ಲಿ ಉಪಕಾರ ಏನು ಬಂತಪ್ಪಾ. ಧರ್ಮಕರ್ಮ ಸಂಯೋಗ ಅನ್ರೀ... ಮಂಗಳನ ಹಣೇಲಿ ನೀವೇ ಪತಿ ಅಂತ ಬರೆದಿದೆ... ಅಂತ ತಿಳೀತು..."

"ನಾನು ಮಂಗಳನ ಹತ್ರ ಮಾತಾಡ ಬೇಕಲ್ರೀ..."

"ಈಗ ಮಾತೂ ಬೇಡ... ಕತಿಯೂ ಬೇಡ..."ಶುಭಸ್ಯ ಶೀಘ್ರಂ" ಅಂತ ಬಲ್ಲೋರು ಹೇಳ್ತಾರ. ನಡೀ ಈಗ್ಲೇ ನಾವುಗಳು ರಾಯರ ಮನಿಗೆ ಹೋಗೋಣು... ತುಂಗವ್ವಾ... ಅರಿಸಿನದ ದಾರಕ್ಕೆ ಅರಿಸಿನದ ಕೊಂಬನ್ನು ಕಟ್ಟಿಕೊಂಡು ಸಿದ್ಧ ಮಾಡು... ದೇವರ ಮುಂದೆ ಕೂರಿಸಿ ಆಕಿಯ ಕೊರಳಿಗೆ ಕಟ್ಟಿಸೇ ಬಿಡೋಣು... ಏನಂತೀರಿ... ಒಂದಿಷ್ಟು ಪಾಯಸ ಚಿತ್ರಾನ್ನ ಮಾಡಿಸು... ಎಲ್ರೂ ಒಟ್ಗೇ ಕೂತು ಉಂಬೋಣು.... ಇವತ್ತು ರಾತ್ರಿಗೇ ದತ್ತ ಮಂಗಳನ್ನ ಕರ್ಕೊಂಡು ಊರಿಗೆ ಹೋಗ್ಲೀ... ರಾಧಾ ಇವನ ದಾರೀನ ಕಾಯ್ತಾ ಇರ್ತಾಳ..."

ಯಾರೂ ಮಾತಾಡಲಿಲ್ಲ... ಎಲ್ಲರೂ ಆತನ ಮಾತಿಗೆ ಮೌನದಿಂದ ಚಾಲನೆಯನ್ನು ನೀಡಿದರು. ಕೆಲವೇ ಕ್ಷಣಗಳಲ್ಲಿ ಜೋಷಿಯ ಮನೆಯ ಹಿರಿಯ ದಂಪತಿಗಳು, ದತ್ತನೊಂದಿಗೆ, ಅನುಕೂಲದ ತಟ್ಟೆಯನ್ನು ಹಿಡಿದು, ರಾಮರಾಯರ ಮನೆಗೆ ಬಂದರು. ರಾಮರಾಯರ ಮನೆಯಲ್ಲಿ ಎಲ್ಲರಿಗೂ ಮಾತು ಮರೆತು ಹೋದಂತಾಗಿತ್ತು. ದತ್ತ ಮಂಗಳನ ಕಡೆ ನೋಡಿ ಕೃತಜ್ಞತೆಯನ್ನು ಕಣ್ಣುಗಳಲ್ಲೇ ಸೂಚಿಸಿದ. ಅವಳು ತಲೆತಗ್ಗಿಸಿ ನಿಂತಳು.

"ರಾಯರೇ, ದೇವರಿಗೆ ಮತ್ತೊಮ್ಮೆ ಮಂಗಳಾರತಿ ಮಾಡ್ರೀ... ತುಂಗವ್ವಾ

ಹಸೆಮಣೆ ಮೇಲೆ ಮದುಮಕ್ಕಳನ್ನು ಕೂರಿಸವ್ವಾ... ಹಣೆಗೆ ಕುಂಕುಮ ಹಚ್ಚು... ಹಿರಿಯ ಜೋಷಿ ಅವಸರಿಸಿದರು. ಮಂಗಳ ತನ್ನ ಮದುವೆಗೆಂದು ಖರೀದಿಸಿದ್ದ ರೇಶಿಮೆಯ ಸೀರೆಯನ್ನು ಉಟ್ಟು ಬಂದಳು. ಜಡೆ ಹೆಣೆದು ಹೂ ಮುಡಿದುಕೊಂಡಿದ್ದಳು. ರಾಮರಾಯ ತನ್ನ ಅಳಿಯನಿಗೆಂದು ತಂದಿದ್ದ, ಮುಗುಟವನ್ನು ಶಲ್ಯವನ್ನು ದತ್ತನಿಗೆ ಕೊಟ್ಟು ಉಟ್ಟು ಹಸೆ ಮಣೆಯ ಮೇಲೆ ಕುಳಿತುಕೊಳ್ಳುವಂತೆ ಹೇಳಿದ. ಮದುಮಕ್ಕಳು ಹಸೆಮಣೆಯ ಮೇಲೆ ಕುಳಿತ. ನಂತರ, ರಾಮರಾಯ ತನಗೆ ತಿಳಿದ ಮಂಗಳ ಶ್ಲೋಕಗಳನ್ನು ಪಠಿಸಿದ. ಮತ್ತೊಮ್ಮೆ ಘಂಟಾನಾದದೊಂದಿಗೆ, ದೇವರಿಗೆ ಮಂಗಳಾರತಿ ಎತ್ತಿ, ಎಲ್ಲರಿಗೂ ಕೊಟ್ಟ. ದೇವರ ಮುಂದೆ ತಟ್ಟೆಯಲ್ಲಿಟ್ಟು ಪೂಜಿಸಿದ್ದ ಅರಿಶಿನದ ದಾರವನ್ನು ದತ್ತ ಮಂಗಳನ ಕೊರಳಿಗೆ ಕಟ್ಟಿದ. ಕೆನ್ನೆಗಳಿಗೆ ಅರಿಶಿನವನ್ನು ಹಚ್ಚಿ, ಹಣೆಗೆ ಕುಂಕುಮವನ್ನು ಇಟ್ಟ. ಮುಡಿಗೆ ಹೂವನ್ನು ಮುಡಿಸಿದ. ಜಾನಕಿ ಹಾಗೂ ಸಕ್ಕೂಬಾಯಿ ನವದಂಪತಿಗಳಿಗೆ ಆರತಿಯನ್ನೆತ್ತಿ ಆಶೀರ್ವದಿಸಿದರು. ನವದಂಪತಿಗಳು ಹಿರಿಯರಿಗೆಲ್ಲರಿಗೂ ನಮಸ್ಕರಿಸಿ ಆಶೀರ್ವಾದವನ್ನು ಪಡೆದರು. ಅಲ್ಲಿಗೆ ಮದುವೆ ಕಲಾಪ ಮುಗಿದಿತ್ತು. ಜಾನಕಿ ಎಲ್ಲರಿಗೂ ಕೊಬ್ಬರಿ ಸಕ್ಕರೆಯನ್ನು ಕೊಟ್ಟು, ಕುಡಿಯಲು ಬಾದಾಮಿ ಹಾಲನ್ನು ಕೊಟ್ಟಳು.

"ದತ್ತಾ, ನಿನ್ನ ಹೇಣ್ತಿಯ ಕೈ ಹಿಡಿದು ನಡೆಸ್ಕೊಂಡು ನಮ್ಮ ಮನಿಗೆ ಕರ್ಕೊಂಡು ಬಾ... ಮನಿ ತುಂಬಿಸ್ಕೊಳ್ಳೋಣ..."ಕಾಕಿಯ ಮಾತುಗಳಿಗೆ ದತ್ತ ಸ್ಪಂದಿಸಿದ. ಮೆಲ್ಲನೆ, ಮಂಗಳನ ಬಲ ಹಸ್ತವನ್ನು ಹಿಡಿದು ವಿಶ್ವಾಸದಿಂದ ಒತ್ತಿದ. ಅವಳ ಕೈ ತಣ್ಣಗಿದೆ ಎನಿಸಿತ್ತು. ಅವನ ಅಂಗೈ ಬಿಸಿಯಾಗಿತ್ತು. ಇಬ್ಬರೂ ಭಾವುಕರಾಗಿದ್ದರು.

"ನೀವು ಎಲ್ರೂ, ನಮ್ಮ ಮನಿಗೆ, ನಿಮ್ಮ ಮಗಳನ್ನು ತಂದು ಒಪ್ಪಿಸಿ, ಹಂಗೇ ಇವತ್ತಿನ ಊಟ ನಮ್ಮ ಮನೇಲಿ... ತಿಳೀತೋ..." ಹಿರಿಯ ಜೋಷಿ ದರ್ಪದಿಂದ ಹೇಳಿದಾಗ, ಎಲ್ಲರೂ ಚುರುಕಾದರು.

"ನಮ್ಮ ಮನೇಲೆ ಊಟ ಮಾಡೋರಂತೆ. ಅದು ಎಷ್ಟು ಹೊತ್ತಿನ ಕೆಲಸ..."

"ಹಂಗಾಗುಲ್ಲ... ಮಂಗಳ ಮದುವಣಗಿತ್ತಿ, ಇವಳ ಅಕ್ಕ ದಿನ ತುಂಬಿದ ಗರ್ಭಿಣಿ. .. ನೀವು ಒಬ್ಬಾಕಿ... ಇನ್ನು ಮೈಯಾಗ ತ್ರಾಣ ಸೇರಿಲ್ಲ... ನಾವು ಇಬ್ಬಿಬ್ರು ಇದೀವ್ರೀ... ಪಾಯಸ, ಚಿತ್ರಾನ್ನ ಮಾಡಿದರಾಯ್ತು.... ನಾವು ಮುಂದಾಗಿ ಹೋಗಿ, ಮನಿ ತುಂಬಿಸ್ಕೊಳ್ಳಲಿಕ್ಕೆ ತಯಾರಿ ಮಾಡ್ತೀವ್ರೀ." ಅವರಿಬ್ಬರೂ ಹೆಂಗಸರು ಹೊರಟಾಗ, ಜಾನಕಿ ಅವರಿಬ್ಬರಿಗೂ ಅರಿಶಿನ ಕುಂಕುದೊಂದಿಗೆ, ಸೀರೆಯನ್ನು ಉಡುಗೊರೆಯನ್ನಾಗಿ ಕೊಟ್ಟಳು. ಗಂಡಸರಿಗೆ ಪಂಚೆಗಳನ್ನು ಕೊಡಿಸಿದಳು..." ಎಲ್ಲಾ ಸಿದ್ಧಾನೇ ಇಟ್ಕೊಂಡೀರಿ ಬೀಗಿತ್ತವ್ವಾ..." ಇಬ್ಬರೂ ಜಾನಕಿಯನ್ನು ಹೊಗಳಿದರು.

"ಹೆಣ್ಣು ಮಕ್ಕಳ ಮದುವೆಗೆ ಎಲ್ಲಾ ಸಿದ್ಧ ಮಾಡ್ಲೇ ಬೇಕು ತಾನೇ...

ಕೊಡೋದನ್ನೆಲ್ಲ ಕೊಟ್ಟು ಕಳಿಸ್ತೀವಿ..."

"ಅವಸರ ಏನೂ ಇಲ್ಲ... ನಿಮ್ಮ ಮಗಳ ಸಂಸಾರಕ್ಕೆ ನೀವು ಕೊಟ್ಟೇ ಕೊಡ್ತೀರಪ್ಪಾ... ಖರೇ ಹೌದಲ್ರೋ.... ಇನ್ನು ನಾವು ಬರತೇವ್ರೀ.... ಉಂಡು ಒಂದು ಗಳಿಗೆ ಸುಧಾರಿಸ್ಕೊಳ್ರೀ.... ಹಂಗಾ... ಮಂಗಳಾನ ಅರಿವಿಗಳನ್ನು ಜೋಡಿಸಿಡ್ರೀ... ದತ್ತನ ಕೂಡಾ ಆಕೀನೂ ರಾತ್ರಿ ಹೊರಡಬೇಕಾಗ್ತದ.... ಅವರುಗಳು ಹೊರಟರು. ಜಾನಕಿ ಸರಸರನೆ ಮಡಿಲು ತುಂಬಲು ಸಿದ್ಧತೆಗಳನ್ನು ಮಾಡಿಕೊಂಡಳು. ಮಂಗಳನನ್ನು ದೇವರ ಮುಂದೆ ಕೂರಿಸಿ, ಅರಿಶಿನ ಕುಂಕುಮ ಎಲೆ ಅಡಿಕೆ ಹಣ್ಣುಗಳನ್ನು ಕೊಟ್ಟು ರೇಶಿಮೆ ಸೀರೆಯ ಜೊತೆಗೆ ರವಿಕೆ ಖಣ ಹಾಗೂ ಐವತ್ತು ರೂಪಾಯಿಗಳನ್ನು ಇಟ್ಟು ಮಡಿಲು ತುಂಬಿದಳು.

"ಅಮ್ಮಾ ನಮಸ್ಕಾರ ಮಾಡ್ತೀನಮ್ಮ..." ಅಂತ ಅವಳು ಕಾಲು ಮುಟ್ಟಿ ನಮಸ್ಕರಿಸಿದಾಗ ಇವಳ ಕಣ್ಣೀರು ಕೋಡಿ ಹರಿಯಿತು. ಇದೆಂಥಾ ಬಂಧನದ ಬೆಸುಗೆ ಅಂಥ ಅನಿಸದೇ ಇರಲಿಲ್ಲ.

"ನಿಂದೆಂಥ ದುರಾದೃಷ್ಟವೇ ಮಂಗಳಾ... ಲಗ್ನಪತ್ರಿಕೆ ಶಾಸ್ತ್ರ ಮಾಡಿ ಗೊತ್ತು ಮಾಡಿದ್ದ ಮದುವೆ ಹಾಗೇ ನಿಂತ್ಹೋಯ್ತು... ಈಗ ನೋಡಿದ್ರೆ ಹತ್ತು ನಿಮಿಷದಲ್ಲಿ ಎಲ್ಲಾ ನಡೆದ್ಹೋಯ್ತು... ಚಪ್ಪರ ಇಲ್ಲ. ವಾಲಗ ಇಲ್ಲ. ನೆಂಟರಿಷ್ಟರ ಗದ್ದಲವಿಲ್ಲ. ಏನೂ ಎಡವಟ್ಟಾಗದಿರಲಿ... ಗಂಡ ಹೆಂಡತಿ ಸುಖವಾಗಿರಿ. "ಆಶೀರ್ವದಿಸಿದಳು. ನಂತರ ತಂದೆಗೂ ನಮಸ್ಕರಿಸಿ ಆಶೀರ್ವಾದವನ್ನು ಪಡೆದಳು.

"ಎರ್ರಾಬಿರ್ರಿ ಮದುವೆ ನಡೆದು ಹೋಯ್ತು ಅಂತ ಬೇಸರ ಪಟ್ಕೋಬೇಡ. ಊರಿಂದ ಬಂದಮೇಲೆ, ನೆಂಟರಿಷ್ಟರನ್ನೆಲ್ಲ ಕರೆದು ಆರತಕ್ಷತೆ ಸಮಾರಂಭವನ್ನು ಇಟ್ಕೊಳ್ಳೋಣ. ಫೋಟೋಗ್ರಾಫರ್‌ನ ಕರೆಸೋಣ" ಮಗಳ ತಲೆಯ ಮೇಲೆ ಕೈಯನ್ನಿಟ್ಟು ಸಾಂತ್ವನ ಹೇಳಿದ.

"ಮಕ್ಕಳೂ ಸ್ಕೂಲ್ನಿಂದ ಬಂದಿದ್ರೆ ಚೆನ್ನಾಗಿತ್ತು... ಜನವೇ ಇಲ್ಲ. ಸಂಭ್ರಮವೇ ಇಲ್ಲ" ಜಾನಕಿ ಗೊಣಗಿದಳು.

"ಅದನ್ನೆಲ್ಲಾ ಚಿಂತೆ ಮಾಡುವ ಸಮಯ ಅಲ್ಲ ಇದು. ಅವರುಗಳು ಕಾಯ್ತಾ ಇದಾರೆ. ಮಂಗಳನನ್ನು ಅವರ ಮನೆಗೆ ಒಪ್ಪಿಸಿಕೊಟ್ಟು ಬರೋಣ ನಡೀ..." ಮದು ಮಕ್ಕಳನ್ನೊಡಗೂಡಿ ಕೊಂಡು, ಅವರುಗಳು ಜೋಷಿಯ ಮನೆಗೆ ಬಂದರು. ಮುಂಬಾಗಿಲ ಹೊಸ್ತಿಲ ಮೇಲೆ ಅಕ್ಕಿ ತುಂಬಿದ ಕಲಶವನ್ನಿಟ್ಟಿದ್ದರು... ಮುಂಬಾಗಿಲಿನಲ್ಲಿ ಮದುಮಕ್ಕಳಿಗೆ ಆರತಿ ಎತ್ತಿದರು. ಕಲಶವನ್ನು ಒದ್ದು ಅಕ್ಕಿಯನ್ನು ಚೆಲ್ಲಿ ಬಲಗಾಲನ್ನಿಟ್ಟು ಒಳಗೆ ಬಾ ತಾಯೀ..." ಮಂಗಳ ಅಂತೆಯೇ ಮಾಡಿದಳು. ದತ್ತಾ ನಿನ್ನ ಹೆಣ್ತೀಯ ಬಲಗೈಯನ್ನು ಬಿಗಿಯಾಗಿ ಹಿಡಿದುಕೊಂಡು ಒಳಗೆ ಕರ್ಕೊಂಡು ಬಾ..."

ಕಾಕಿ ಆಜ್ಞೆ ಮಾಡಿದಳು ದತ್ತ ಕೈ ನೀಡಿದ. ಮಂಗಳ ಹಿಡಿದಳು. ಹಿಡಿತ ಬಿಗಿಯಾಗಿತ್ತು. ಇಬ್ಬರೂ ಒಳಗೆ ಬಂದರು. ದೇವರ ಕೋಣೆಗೆ ಹೋಗಿ, ದೇವರಿಗೆ ನಮಸ್ಕಾರ ಮಾಡಿ, ಹಿರಿಯೋರ್ಗೆಲ್ಲಾ ನಮಸ್ಕಾರ ಮಾಡಿ ಬರ್‍ರೀ ಇಬ್ರೂ.... ಎಂದಳು.

ಮಂಗಳನಿಗೆ ಈ ಮನೆ ಹೊಸದೇನಲ್ಲ. ಆದರೆ ಈಗಿನ ಸ್ಥಿತಿ ಹೊಸದು. ತುಸು ನಾಚುತ್ತಾ, ತುಸು ಬೆದರುತ್ತಾ ಗಂಡನ ಕೈ ಹಿಡಿದು ದೇವರ ಮನೆಗೆ ಬಂದಳು. ಇಬ್ಬರೂ ದೇವರಿಗೆ ನಮಸ್ಕರಿಸಿ, ಹಿರಿಯರಿಗೆ ನಮಸ್ಕರಿಸಿದರು... "ಹತ್ತು ಮಕ್ಕಳನ್ನು ಹೆತ್ತು ನೂರು ಕಾಲ ಸುಖವಾಗಿರು" ಹಿರಿಯ ಜೋಷಿ ಬಾಯ್ತುಂಬಾ ಹರಸಿದರು. ಅವರ ನೋಟ ಜಾನಕಿಯ ಸೊಂಟದ ಮೇಲೆ ಕುಳಿತಿದ್ದ ಬಾಲು ಮೇಲೆ ಇತ್ತು.

"ವರ್ಷದೊಳಗೆ, ನಿನ್ನ ತಮ್ಮನಂಥ ಬಂಗಾರದ ಕೂಸನ್ನು ಹಡೆದು ಬಿಡವ್ವಾ... ಈ ಅದೃಷ್ಟ ನಮ್ಮ ರಾಧಗೆ ಸಿಕ್ಕಲೇ ಇಲ್ಲ..." ಕಾಕಿ ನುಡಿದಾಗ, ಆ ಮಾತು ಆ ಸಮಯದಲ್ಲಿ ಬೇಕಿರಲಿಲ್ಲ ಎನಿಸಿತು. ನೀವಿಬ್ರೂ ಕೂಡ್ರಿ... ನಾನು ಸಕ್ಕರೆ ಬಾದಾಮಿ ಹಾಕಿದ ಹಾಲನ್ನು ತರ್ತೀನಿ..." ಎಂದು ಅಡಿಗೆ ಮನೆಯ ಕಡೆಗೆ ನಡೆದಳು.

" ಹೀಂಗ ದಿಢೀರನ ಲಗ್ನ ಆಗ್ತದ ಅಂತ ನಾವು ಭಾವಿಸಿರ್‍ಲಿಲ್ಲ... ಸುಧಾ ಲಗ್ನದ ಸಮಯದಲ್ಲಿ ಮಂದಿ ನನಗೆ ಬಳುವಳಿಯಾಗಿ ಕೊಟ್ಟ ಸೀರೆಗಳಿವೆ... ಅದರಲ್ಲಿ ನಿಮಗೆ ಯಾವುದು ಬೇಷ್ ಅನ್ನಿಸ್ತದೋ ಅದನ್ನೇ ಕೊಡ್ತೀನಂತ" ಎಂದು ಹೇಳಿ ತುಂಗಾಬಾಯಿ, ಜಾನಕಿ ಹಾಗೂ ಸರೋಜಳ ಮುಂದೆ ಸೀರೆಗಳನ್ನು ತಂದಿಟ್ಟಳು.

"ಇವೆಲ್ಲಾ ಏನೂ ಬೇಡ... ಇವತ್ತೇ ಏನು ಅವಸರ ? ನಿಧಾನವಾಗಿ ಕೊಟ್ಟರಾಯ್ತು. ನಾವು ಇಲ್ಲಿ ಎದುರುಮನೇಲೇ ಇದೀವಲ್ಲ."

"ಹಂಗಲ್ರೀ, ಈಗಳಿಗಿ ಶುಭ ಐತಿ. ನೀವೂ ನಮಗ ಉಡುಗೊರಿ ಕೊಟ್ಟೇರಿ. ನಾವೂ ಕೊಡೋಣು... ಬ್ಯಾಡ ಎನ್ಬೇಡಿ, ಎನ್ನುತ್ತಾ, ತಾಂಬೂಲದೊಂದಿಗೆ, ಜಾನಕಿ, ಸರೋಜ ಹಾಗೂ ರಾಮರಾಯರಿಗೆ ಉಡುಗೊರೆಗಳನ್ನು ಕೊಟ್ಟರು. ಮನೆಯಲ್ಲಿ ಎಂದೋ ತಂದಿಟ್ಟಿದ್ದ ಷರಟಿನ ಬಟ್ಟೆಯನ್ನು ಬಾಲುಗೆ ಕೊಟ್ಟರು ಮರೆಯದೇ ಮಂಗಳನಿಗೂ ಒಂದು ಸೀರೆಯನ್ನು ಕೊಟ್ಟರು.

" ಈ ಹೊಸಾ ಸೀರೀನ ಉಟ್ಟು ಬಾ... ಊಟಕ್ಕೆ ಎಲೆ ಹಾಕೋಣಂತೆ." ಮಂಗಳ ಸರೋಜಳನ್ನು ಕರೆದುಕೊಂಡು ಪಕ್ಕದಲ್ಲಿದ್ದ ರೂಮಿಗೆ ಬಂದಳು. ಸುತ್ತಲೂ ಕಣ್ಣಾಡಿಸಿದಳು. ಇನ್ನು ಮುಂದೆ ಈ ಮನೆ ತನ್ನ ಮನೆ. ಕೆಲವೇ ಗಂಟೆಗಳ ಹಿಂದೆ ಈ ಮನೆಗೆ ಸೇರಿದವ ಳಾಗಿರಲಿಲ್ಲ. ತಾನು ಈ ಮದುವೆಗೆ ಒಪ್ಪಿ ತಪ್ಪು ಮಾಡಿದೆನೆ?... ಎಂದೆನಿಸಿ, ಅಕ್ಕನ ಕಡೆ ತಿರುಗಿದಳು. ಮುಖದ ಬಣ್ಣ ಬೆವರಿನಿಂದ ಕಲೆಸಿತ್ತು.

"ಅಕ್ಕಾ... ನಾನು ತಪ್ಪು ಮಾಡಿದ್ನೇನೋ ಅಂತ ಅನ್ನಿಸ್ತಿದೆ... ರಾಧಾಬಾಯಿ ನನ್ನನ್ನು ನೋಡಿ ಏನಂದ್ಕೊಳುಲ್ಲ!.... ಮೊದಲೇ ನೊಂದ ಜೀವಿ... ನಾನು ದಿನಾ

ಅವರನ್ನು ನೋಡ್ತಿದ್ದೆ. ಈಗ ಅವರ ಗಂಡನಿಗೆ ಪತ್ನಿಯಾಗಿ ಅವರಿಗೆ ಹೇಗೆ ಮುಖ ತೋರಿಸಲಿ ?...."

"ನೀನೇನು ಆಸೆಪಟ್ಟು ಮದುವೆಯಾದ್ಯಾ?.... ವಿಧಿ ಬರಹ ಹೀಗಿತ್ತು... ಹೇಗೂ ನಿನ್ನ ಗಂಡ ನಿನ್ನ ಜತೆಗಿರ್ತಾರಲ್ಲ. ದೂರದಿಂದ ನೋಡ್ತಾರೆ... ಮಾತನಾಡಿಸುವುದಿಲ್ಲವಲ್ಲ..."

"ಆದರೂ...." ಗಂಟಲು ಒಣಗಿದಂತಾಗಿತ್ತು.

"ಯಾವ ಅಳುಕನ್ನು ಇಟ್ಕೋ ಬೇಡ. ಇಲ್ದಿದ್ರೆ ಬದುಕುಕ್ಕಾಗುಲ್ಲ... ನಿನ್ನ ನಿರ್ಧಾರದಿಂದ, ಎಲ್ರಿಗೂ ಉಪಕಾರವಾಗಿದೆ. ಅಪ್ಪ ಅಮ್ಮನ ಜವಾಬ್ದಾರಿಯೂ ಸುನಾಯಾಸವಾಗಿ ಕಳೀತು ಅಲ್ವಾ?.... ನಿನ್ನ ಗಂಡ ಮೊದಲಿನಿಂದ ಪರಿಚಯದವನೇ... ನಿನಗೆ ಏನೂ ಕಷ್ಟ ಆಗುಲ್ಲ. ಇಲ್ಲೇ ಎದುರುಗಡೆ ಮನೇಲೇ ಇರ್ತೀಯ... ಅಪ್ಪ ಅಮ್ಮಂಗೂ ಚಿಂತೆ ಇರುಲ್ಲ. ಆದದ್ದೆಲ್ಲಾ ಒಳ್ಳೇದಕ್ಕೆ ಅಂತ ಅಂದ್ಕೋ... ಬೇಗ ಸೀರೆ ಬದಲಾಯಿಸು. .. ಅದೇನು ಊಟ ಹಾಕ್ತಾರೋ ಅದನ್ನು ತಿಂದು, ಮನೆಗೆ ಹೋಗಿ ಸ್ವಲ್ಪ ಹೊತ್ತು ಮಲಗ್ತೀನಿ. ತುಂಬಾ ಪ್ರಯಾಸ ಆಗುತ್ತೆ ಕಣೇ... ಬೇಗ ಹೆರಿಗೆ ಆದ್ರೆ ಸಾಕು ಅಂತ ಅನ್ನಿಸ್ತಿದೆ..."

"ಅಮ್ಮಂಗೆ ಒಬ್ಬಳಿಗೇ ಕಷ್ಟ ಆಗುತ್ತೇನೋ... ಸಹಾಯಕ್ಕೆ ನನ್ನನ್ನು ಕಳಿಸ್ಬೇಇದ್ರೇ... ಎದುರು ಮನೇಲೆ ಇದ್ಕೊಂಡು ಹೇಗೇ ನೋಡ್ಕೊಂಡಿರ್ಲಿ..."

"ನಾನು ನಿನ್ನ ಅತ್ತೇನೇ ಕರೀತೀನಿ. ಬಂದು ಮಾಡ್ಲಿ..." ಇಬ್ಬರೂ ಮೆಲ್ಲಗೆ ನಕ್ಕರು. ಮಂಗಳ ಸೀರೆಯನ್ನು ಬದಲಾಯಿಸಿ, ಉಟ್ಟಿದ್ದ ಸೀರೆಯನ್ನು ಮಡಿಚಿಟ್ಟು ಹೊರಬಂದಳು. ವಾರಗಿತ್ತಿಯರು, ಎಲ್ಲರಿಗೂ ಬಾಳೆ ಎಲೆಗಳನ್ನು ಹಾಕಿ, ನೀರಿನ ಲೋಟಗಳನ್ನಿಟ್ಟು, ಬಡಿಸಲು ಸಿದ್ಧರಾಗಿದ್ದರು. ದತ್ತನ ಪಕ್ಕದಲ್ಲಿ ಮಂಗಳನನ್ನು ಕೂರುವಂತೆ ಹೇಳಿದರು. ಎಲ್ಲರಿಗೂ ಸಾವಕಾಶವಾಗಿ ಬಡಿಸಿದರು.

"ಇವತ್ತು ನಮ್ಮ ಸುಧಾ ಭಾಳ ನೆನೆಪಿಗೆ ಬರ್ತಿದಾಳ್ರೀ... ಆಕೆಯ ಲಗ್ನಕ್ಕೆ ನೀವು ಬರ್ಲೇ ಇಲ್ಲ. ಇದೇ ಮೊದಲನೇ ಸಲ ನೀವು ಬಂದಿರೋದು..."

"ಸುಧಾಗೆ ಪತ್ರ ಬರೀರಿ... ಬಂದು ಹೋಗು ಅಂತ..." ಗಂಡನಿಗೆ ಹೇಳಿದಳು.

"ಏ.... ಆಕಿ ಈಗೆಲ್ಲಿ ಬರತಾಳ... ಇನ್ನು ಮೊನ್ನಿ ಮೊನ್ನಿ ಪಂಚಮೀ ಹಬ್ಬ ಮುಗಿಸ್ಕೊಂಡು ಹೋಗ್ಯಾಳ... ದತ್ತಾ ನೀನೇ ನಿನ್ನ ಹೇಣ್ತೀನ ಕರ್ಕೊಂಡು ಹೋಗಿ, ಆಕಿಗೆ ತೋರಿಸ್ಕೊಂಡು ಬಾ...."

"ಆಕಿ ನೋಡ್ಯಾಳ... ಈಕಿ ಹೊಸಬಳಲ್ಲ."

"ಆಗ ಎದುರು ಮನಿ ಹುಡುಗಿ ಅಂತ ನೋಡಿದ್ದಾಳು... ಈಗ ವೈನಿ ಅಂತ ನೋಡ್ತಾಳು... ಅಲ್ಬೇನವ್ವಾ..."

"ಕಾಕಾ... ಈಗ ನಾನು ಯಾರ ಮನಿಗೂ ಹೋಗೂದಿಲ್ಲ. ಸುಧಾಗ ಪತ್ರ ಬರೆಯೋದೂ ಬ್ಯಾಡ..." ದತ್ತನೆಂದ.

"ಯಾಕೋ ಮಂಗ್ಯಾ...? ಸುಧಾ ನಿನ್ನ ತಂಗಿ ಹೌದಲ್ಲೋ... ಈ ಮನಿಯಾಕೀನೇ..."

"ಹೌದು ಕಾಕಾ... ಈಗ ನನ್ನ ಮನಸು ಸುಧ್ಧಾ ಇಲ್ಲ. ಬೇಡಿ ಕಾಡಿ, ಒಂದು ವಾರ ಸೂಟಿ ತಗೊಂಡೀನಿ... ಈಗ ಸುಮ್ಮನ ಉಣ್ಣಾಕೆ ಬಿಡು.. ರಾತ್ರಿಯ ಬಸ್‌ಗೆ ಟಿಕೆಟ್ ಮಾಡಿಸ್ಲಿಕ್ಕೆ ಹೋಗ್ಬೇಕು..."

"ನೀನ್ಯಾಕೆ ಹೋಗ್ಬೇಕು... ನಾನು ಮಾಡಿಸ್ಕೊಂಡು ಬರ್ತೀನಿ."|ತಂದೆ ಎಂದ.

"ಎರಡು ಸೀಟು ಮಾಡಿಸ್ಕೊಂಡು ಬಾರೋ ತಮ್ಮಾ... ಮರೆತು ಒಂದೇ ಸೀಟು ಮಾಡಿಸಿದ್ರೆ, ಈಕಿ ಏನು ಅವನ ತೊಡೀ ಮೇಲೆ ಕೂತಾಳಾ?" ಅವರ ಮಾತಿಗೆ ಯಾರೂ ನಗಲಿಲ್ಲ... ದತ್ತ ಓರೆಗಣ್ಣಿಲ್ಲಿ ಮಂಗಳನ ಕಡೆ ನೋಡಿದ. ಅವಳಿಗೆ ಊಟ ಸೇರುತ್ತಿಲ್ಲ ವೆಂದು ಅನ್ನಿಸಿತು... ರುಚಿ ಬೇರೇ ಎಂದೋ... ಅಥವಾ... ಈ ಹೊಸ ಪರಿಯೋ... ಎಂದು ಕೇಳುವ ತವಕವಾದರೂ ತಡೆದುಕೊಂಡ. ಅವಳ ಗೊಂದಲವನ್ನು ತಿಳಿಯುವ ಸಮಯ ಅದಾಗಿರಲಿಲ್ಲ.

○ ○ ○

ರಾತ್ರಿಯಲ್ಲಾ ಪ್ರಯಾಣ ಮಾಡಿ, ಬೆಳಗಿನ ಝಾವದ ಹೊತ್ತಿಗೆ ಮಾವನ ಊರನ್ನು ತಲುಪಿದರು. ಜಟಕಾ ಗಾಡಿಯನ್ನು ಗೊತ್ತು ಮಾಡಿಕೊಂಡು, ಮನೆಯನ್ನು ಸೇರಿದರು. ಬಾಗಿಲನ್ನ ಬಡಿದಾಗ, ಬಾಗಿಲನ್ನು ತೆಗೆದವನು ಮಾವನೇ.... ಗಾಬರಿಗೊಂಡಿದ್ದ ಮುಖ, ಪಕ್ಕದಲ್ಲಿ ನಿಂತಿದ್ದ ಮಂಗಳನನ್ನು ಕಂಡು ಅಚ್ಚರಿಗೊಂಡಿತು.... ಮಾವಾ ... ಈಕಿ ಮಂಗಳಾ ನಾನು ಈಕೀನ ಲಗ್ನ ಆಗೇನಿ.... " ಕೆಳದನಿಯಲ್ಲಿ ತಡವರಿಸುತ್ತಾ ನುಡಿದ.

ಮಾವ ಮೇಲಿನಿಂದ ಕೆಳಕ್ಕೆ ಅವಳನ್ನೇ ನೋಡಿ, ಹೆಂಡತಿಯನ್ನು ಕರೆದ ಗೋದಾ... ಬೇಗ ಬಾ... ದತ್ತ ಬಂದಾನ. "

ಆಕೆಯೂ ಗಾಬರಿಯಿಂದ ಎದ್ದು ಬಂದಳು.

"ದತ್ತ ಬಂದಾನ ಅಂದ್ರಿ... ಈಕಿ ನಮ್ಮ ರಾಧಾ ಅಲ್ಲ....." ವ್ಯಥೆಗೊಂಡಿದ್ದಳು.

"ಹೌದೇ... ಈಕಿ ರಾಧಾ ಅಲ್ಲ. ಅವಳು ಅಲ್ಲಿ ಮಲಗ್ಯಾಳ... ಈಕಿ ದತ್ತನ ಹೊಸ ಹೆಂಡತಿ... ಇವ ಮತ್ತೆ ಲಗ್ನ ಆಗ್ಯಾನ...."

"ಮಾವಾ... ನಿಂಗೇ ಗೊತ್ತಲ್ಲ. ನಾನ್ಯಾಕೆ ಮತ್ತೆ ಲಗ್ನ ಆದೆ ಅಂತ. ಈಗೇನು ಒಳಗೆ ಬರೋ...ೋ... ಬೇಡ್ವೋ....?" ದತ್ತ ಅಸಮಾಧಾನದಿಂದ ಕೇಳಿದ.

"ಹೌದಲ್ಲಾ? ರಾಧಾಳ ಸಲುವಾಗಿ. ಆಕೆಯ ಆಸೀನ ತೀರಿಸ್ಲಿಕ್ಕಾಗಿ ಲಗ್ನಆಗಿದೀ .... ಪಾಪ ಈಕಿದೇನು ತಪ್ಪದ... ಹೋಗೇ ಗೋದಾ.... ಆರತಿ ಮಾಡ್ಕೊಂಡು ಬಾ....

ಹೊಸ ದಂಪತಿಗಳು ಬಂದಾರ..."

"ಇಲ್ಲ ಮಾವ ಈ ಉಪಚಾರ ಎಲ್ಲಾ ಏನೂ ಬೇಡ . ನಾನು ಆಸ್ಪತ್ರೆಗೆ ಹೋಗಿ, ರಾಧಂಗೆ ಈಕೀನ ತೋರ್ಸಿ, ಮತ್ತೆ ಊರಿಗೆ ಹೋಗಿ ಈಕೀನ್ನ ಬಿಟ್ಟು, ನಾನು ನನ್ನೂರಿಗೆ ವಾಪಸ್ಸು ಹೋಗ್ಬೇಕು."

"ಇರ್ಲಿ ಬಾರೋ ದತ್ತಾ.... ನನ್ನ ಮನಸ್ಸೂ ಕೆಟ್ಟಿದೆ.... ಈ ಹುಡ್ಗಿ ಏನೆಂದ್ಕೂ ಳ್ಳುತ್ತೋ ಏನೋ.... ಮೊದಲ ಬಾರಿಗೆ ಬಂದದೆ... ಆರತಿ ಎತ್ತೂದೂ ಸಂಪ್ರಾದಾಯ ಏ.... ಗೋದಾ ಜಲ್ದೀ ಬಾರೇ..... ಏನ್ ಮಾಡ್ಲಿಕ್ ಹತ್ತಿದೀಯ....?"

ಗೋದಾ ಆರತಿ ತಟ್ಟೆ ಹಿಡಿದು ಬಂದಳು. "ಇವ ಲಗ್ನ ಆಗಿ ಹೆಣ್ತೀ ಜತೆ ಬರ್ತಾನೆ ಅಂತ ನಂಗೇನಾರು ಕನಸು ಬಿದ್ದಿತ್ತಾ... ಒಂದೇ ದಿನದಾಗ ಲಗ್ನ ಆಗ್ಯಾನ." ಗೋದಾ ಆರತಿ ಎತ್ತಿ, ಇಬ್ಬರನ್ನ ಒಳಕ್ಕೆ ಬರಮಾಡಿಕೊಂಡಳು. "ಈಕಿನ್ನ ಒಳಕ್ಕೆ ಕರ್ಕೊಂಡು ಹೋಗು. ಬಿಸಿ ಬಿಸಿ ಚಾ ಮಾಡು..."ಎಂದು ಹೆಂಡತಿಗೆ ಆಜ್ಞೆ ಮಡಿದ. ಅವರಿಬ್ಬರೂ ಒಳಗೆ ಹೋದರು. ದತ್ತ ಕಿಟ್ ಬ್ಯಾಗ್‌ನ್ನು ಒಳಗೆ ತಂದಿಟ್ಟು ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತ.

"ಮಾವ.. ಈಕಿದೇನೂ ತಪ್ಪಿಲ್ಲ.. ಈಕಿ ಎದುರ್ಗೆ ಏನೇನೋ ಒದರ್ಬ್ಯಾಡ ನೀನು."

"ಆಯ್ತೋ ಒದರೂದಿಲ್ಲ ... ಇಷ್ಟು ಲಗೂನೆ ಈ ಹುಡ್ಗಿ ನಿಂಗೆ ಹೆಂಗೆ ಸಿಕ್ಲು?"

"ವಠಾರದಾಗ, ನಮ್ಮ ಮನಿ ಎದುರುಗಡಿ ಮನ್ಯಾಗೆ ಇವರ ವಾಸಕ್ಕೆ ಬಂದಾರು. ನಾನು ಈಕಿ ಹತ್ರ ಮಾತಾಡ್ದೆ. ಒಪ್ಗೆ ಕೊಟ್ಲು... ಮನೇಲೇ ನೆನ್ನೆ ಬೆಳಿಗ್ಗೆ ಲಗ್ನ ಆತು....

"ಅಂದ್ರೇ ನಾಟಕದ ಮದುವಿ ಅನ್ನು.... ರಾಧಂಗೆ ತೋರಿಸ್ಲಕ್ಕೆ ." ಮಾವನ ಮುಖದಲ್ಲಿ ಸ್ವಲ್ಪ ಮಟ್ಟಿಗೆ ಸಮಾಧಾನ ಕಂಡಿತು.

"ಹಂಗೇ ತಿಳ್ಕೋ...."

"ಆದರೆ.... ನೀನು ಗಂಡಸದಿ, ಆಕಿ ಹೆಣ್ಣು ಅದಾಳ ಲಗ್ನವಿನ್ನಾನೇ...."

"ಹಂಗೇನಿಲ್ಲ ಮಾವ... ನಾನು ಈಕಿಗೆಲ್ಲಾ ಹೇಳೇನಿ...."

"ಹಂಗಾರ ನಂಗೆ ಮಾತು ಕೊಡು. ರಾಧಾ ಬದುಕಿರೋ ತನ್ಕ ನೀನು ಈಕಿ ಸಂಗಡ ಮಲಗೂದಿಲ್ಲ ಅಂತ." ಮಾವ ದೈನ್ಯದಿಂದ ಕೇಳಿಕೊಂಡಾಗ ಇವನಿಗೂ ಕೆಡುಕೆನಿಸಿತ್ತು. ಸ್ವಲ್ಪ ರೇಗಿತು.

"ನಾನೇನ್ ಅಂತಾ ಹಲ್ಕಟ್ ಮನುಷ್ಯ ಅಂದ್ಕೊಂಡ್ಯಾ ಮಾವ ?... ನಾನು ರಾಧನ್ನ ಮನಸಾರೆ ಪ್ರೀತಿಸ್ತೀನಿ... ಆಕಿ ಇರುವರೆಗೂ ಆಕೀನೇ ನನ್ನ ಪತ್ನಿ...."

"ಆಮೇಲೆ ? .....

"ಈಕಿಗ ಅನ್ಯಾಯ ಮಾಡುಕಾಗ್ತದ ಮಾವ .. ರಾಧಗೂ ನಾನು ಸುಖಾವಾಗಿಲ್ಲ ನಮ್ಮ ವಂಶ ಬೆಳೀಲಿ ಅಂತ ಆಸಿ ಇತ್ತಲ್ಲಾ ?.. ಆಕಿಗೋಸ್ಕರ ಲಗ್ನ ಆಗೇನಿ. ನಾನು

ಆಕಿಗೆ ಎಂದೂ ದ್ರೋಹ ಮಾಡ್ಲಿಲ್ಲ. ಈಕಿಗೂ ಮಾಡೂದಿಲ್ಲ. ಈಗ ಈ ಮಾತೆಲ್ಲಾ ಬೇಕಾ ಮಾವ.... ?"

"ನನ್ನ ಸಂಕಟ ಯಾರಿಗೆ ಹೇಳ್ಕೊಳ್ಳಲೋ ದತ್ತಾ... ಗೋದಾನ್ನ ನೋಡು ಹೆಂಗಾಗ್ಯಾಳೆ? ಕೊರಗಿ ಕೊರಗಿ ಕೃಶವಾಗಿದ್ದಾಳೆ. ಈಕಿಗೂ ಹುಶಾರು ತಪ್ಪಿದ್ರೆ ನಾ ಹ್ಯಾಂಗಿರ್ಲಿ? ಈಕಿನ ಹಗಲೂ ರಾತ್ರಿ ನೋಡ್ಕೊಳ್ಳೋಕೆ ನಾನು ಇದೀನಿ. ನೀನು ತಪ್ಪು ಮಾಡ್ದೆ ದತ್ತಾ.... ರಾಧನ್ನ ನೀನು ಲಗ್ನ ಆಗ್ಬದಾರಗಿತ್ತು. ಆದ್ಮೇಲೆ, ನಿಮ್ಮವ್ವನ ಮನೇಲಿ ಬಿಟ್ಟು ಹೋಗ್ಬಾರ್ದಾಗಿತ್ತು. ಮನೆ ತುಂಬಾ ಮಂದಿ ಇದ್ರೂ ರಾಧಾ ಒಂಟಿ ಯಾಗಿದ್ಲು. ಕೊರಗಿ ಕೋರಗಿ ಹಿಂಗಾದ್ಲು. ಮೊದಲೇ ಶರೀರ ಸೂಕ್ಷ್ಮ ಇತ್ತು ಅಂತ ನಿಂಗೆ ತಿಳಿದಿತ್ತಲ್ಲಾ... ನಿಮ್ಮವ್ವ, ಈಕಿನ ಮನೀ ಕೆಲಸದಾಕಿ ಥರ ದುಡಿಸ್ಕೊಂಡ್ಲು. ... ಹೆಣ್ಣು ಮಕ್ಕಳ್ನ ಲಗ್ನ ಆದ್ಮೇಲೆ ಜತನ ಮಾಡ್ಬೇಕಪಾ... ಗಂಡನ ಪ್ರೀತಿ, ಮನೇಲಿ ನೆಮ್ಮದಿ ಎರಡು ಬೇಕಾಗ್ತದೆ... ಈ ಹುಡ್ಗೀನಾರ ನೆಟ್ಟಗೆ ನೋಡ್ಕೋ... ನನ್ನ ಮಗಳು ಸುಖವಾಗಿರ್ಲಿಲ್ಲ. ಈಕಿಗಾದ್ರೂ ಸುಖ ಕೊಡು...." ಮಾವ ಅತ್ತಾಗ ಅವನು ಎದ್ದ.

"ಮಾವ ಪದೇ ಪದೇ ಇದೇ ಮಾತಾಡಿ ನನ್ನನ್ನ ನೋಯಿಸ್ತೀಯ. ನಾನೇನು ಬೇಕೂಂತ ಹೀಂಗ ಮಾಡಿದ್ನಾ.... ಹಂಗಾರ ನನ್ನನ್ನ ನೋಯಿಸ್ತೀಯ ನನ್ನನ್ನ ಜೈಲಿಗೆ ಕಳಿಸು...." ರೋಷದಿಂದ ನುಡಿದ.

ತಂದೆಯ ಒಡಲ ಸಂಕಟ ನಿಂಗೆ ತಿಳಿಯುದಿಲ್ಲ ನಿಮ್ಮ ಅತ್ತಿ ಇಷ್ಟು ಹೊತ್ತಾದ್ರೂ ಚಾ ತರ್ಲಿಲ್ಲ. ಅದೇನು ಮಾಡ್ತಿದಾಳೋ ನಾನು ಒಳಗೇ ಹೋಗಿ ನೋಡ್ತೀನಿ. "ಎಂದ ಇಬ್ಬರೂ ಎದ್ದು ಅಡಿಗೆ ಮನೆಯ ಬಾಗಿಲಿಗೆ ಬಂದರು. ಮಂಗಳಾ ಒಲೆಯ ಮುಂದೆ ಕೂತಿದ್ದಳು. ಗೋದಾಬಾಯಿ, ಅಲ್ಲೇ ಹತ್ತಿರದಲ್ಲಿ ಮಣೆಯ ಮೇಲೆ ಕುಳಿತಿದ್ದಳು. ನೀನ್ಯಾಕೆ ಹೀಂಗ ಕೂತಿದೀಯ ! ನೀನ್ಯಾಕವ್ವಾ ಚಾ ಮಾಡ್ತಿದೀಯ....?"

" ತಲೆ ಸುತ್ತಿದ್ಹಂಗಾತು ನಾನೇ ಆಕೆಗೆ ಚಾ ಮಾಡ್ಲಿಕ್ಕೆ ಹೇಳ್ದೆ, ಈಗ ಆರಾಮಾಗಿದೀನಿ. ಈಕಿನ ನಾನು ಸುಧಾಳ ಲಗ್ನದ ಸಮಯದಾಗೆ ನೋಡಿದ್ದೆ... ಅವರ ಮನೇಲಿ ಈಕೀದೆ ಎಲ್ಲ ಕೆಲ್ಸ. ತಾಯಿ ಸೋಂಟ ಮುರಿದ್ಕೊಂಡು ಮಲಗಿದ್ರು..."

ಮಂಗಳಾ ಕಪ್‌ಗಳಿಗೆ ಚಹಾ ಸುರಿದು ಎಲ್ಲರಿಗೂ ಕೊಟ್ಟಳು. ಚಲೋ ಚಾ ಮಾಡಿಯವ್ವಾ.. ದೇವರು ನಿನ್ನನ್ನ ಚೆನ್ನಾಗಿಟ್ಟಿರಲಿ.. ಹೋಟೆಲ್ನಿಂದ ಇಡ್ಲಿ ಕಟ್ಟಿಸ್ಕೊಂಡು ಬರ್ತೀನಿ. ನಿಧಾನವಾಗಿ ಅಡುಗೆ ಬೇಯಿಸು ಇವರಿಬ್ಬರೂ ತಿಂಡಿ ತಿಂದು ಆಸ್ಪತ್ರೆಗೆ ಹೋಗಿ ಬರಲಿ ' ಎಲ್ಲರೂ ಮೌನವಾಗಿ ಚಹಾ ಕುಡಿದರು. ಮಂಗಳನಿಗೆ ಬೆಳಗಿನ ಹೊತ್ತು ಕಾಫಿ ಕುಡಿದು ಅಭ್ಯಾಸ ಚಹಾ ಸೇರುವಂತಿರಲಿಲ್ಲ... ಬೇಸರದಿಂದ ಅರ್ಧ ಕಪ್ ಕುಡಿದಳು. ಅದನ್ನು ದತ್ತ ಗಮನಿಸಿದ ಹೊರಗೆ ಹೋದಾಗ ಕಾಫಿ ಕೊಡಿಸ ಬೇಕೆಂದುಕೊಂಡ.



ಇಬ್ಬರೂ ಬೇಗ ಬೇಗ ಸ್ನಾನ ತಿಂಡಿ ಮುಗಿಸಿ ಸಿದ್ಧರಾದರು . ಮಂಗಳ ಮುಜುಗರ ಗೊಂಡಿದ್ದಳು. ಅವರಿಬ್ಬರೂ ತನ್ನನ್ನೇ ಗಮನಿಸುತ್ತಿದ್ದಾರೆಂದು ಅವಳಿಗೆ ಅರಿವಾಗಿತ್ತು... ಬೇಗ ಮನೆಯಿಂದ ಹೊರಟರೆ ಸಾಕೆಂದು ತವಕಿಸಿದಳು. ಜಟಕಾದಲ್ಲಿ ಕುಳಿತು ಸ್ವಲ್ಪದೂರ ಹೋದ ನಂತರ ಜಟಕಾದವನಿಗೆ ನಿಲ್ಲಿಸುವಂತೆ ಹೇಳಿದ. ಎದುರಿಗೆ ಒಂದು ಕಾಫಿ ತಿಂಡಿಯ ಹೋಟೆಲ್ಲಿತ್ತು.... " ಆಸ್ಪತ್ರೆ ತುಂಬಾ ದೂರ ಇದೆ ಅಂದ್ರು ... ಇಲ್ಲೇ ಇದೆಯಾ?"

"ಕಾಫಿ ಕುಡಿದು ಹೋಗೋಣ ನಿಮಗೆ ಚಹಾ ಅಭ್ಯಾಸ ಇಲ್ಲ ಅಂತ ಗೊತ್ತದೆ. ನಂಗೆ"

"ಪರವಾಗಿಲ್ಲ ಬಿಡಿ...." ಸಂಕೋಚದಿಂದ ನುಡಿದಳು.

"ಏನು ಹಂಗಂದ್ರ !... ನಂಗೂ ಕಾಫಿ ಕುಡಿಯೋ ಮನಸ್ಸಾಗದ ಏನಾದ್ರೂ ತಿಂಡಿ ತಿಂತಿರೇನು..?"

"ಬೇಡ... ರಾಧಾಬಾಯಿಗೆ ಒಂದಿಷ್ಟು ಹಣ್ಣುಗಳನ್ನು ತೊಗೊಳ್ಳೋಣ."

"ಆಕಿಗೆ ದಮ್ಮು ಆದ, ಹಣ್ಣಿನ ರಸ ಕೊಡೂದಿಲ್ಲ, ಡಾಕ್ಟ್ರನ್ನ ಕೇಳೋಣ...."

ಇಬ್ಬರೂ ಕಾಫಿಗೆ ಆರ್ಡರ್ ಕೊಟ್ಟು ಟೇಬಲ್ ಹುಡುಕಿ ಕುಳಿತರು. "ನಿಮಗೆ ಬೇಸರ ಆಯ್ತಾ? ಮಾವ ಒಂದು ನಮೂನಿ ಮಾತಾಡ್ತ...."

"ಅವರೀಗ ಕಷ್ಟದಲ್ಲಿದಾರೆ... ಅದಕ್ಕೆ ಆಡಿದಾರೆ. ನಂಗೆ ಬೇಸರ ಏನಿಲ್ಲ ಎಷ್ಟಾಗಲೀ ಅವರು ದೊಡ್ಡೋರು. ಏನು ಆಡಿದ್ರೂ ನಡೆಯುತ್ತೆ... "

"ಇದರಲ್ಲಿ ನನ್ನ ತಪ್ಪೂ ಇಲ್ಲ;ನಿಮ್ಮ ತಪ್ಪೂ ಇಲ್ಲ. ಅದಗೊತ್ತು ಅವಗೆ ಅಷ್ಟರಲ್ಲಿ ಮಾಣಿ ಹೊಗೆಯಾಡುವ ಬಿಸಿ ಕಾಫಿಯನ್ನು ತಂದಿತ್ತ. ಇಬ್ಬರೂ ಕಪ್‌ಗಳನ್ನು ಎತ್ತಿಕೊಂಡರು.

"ಆಸ್ಪತ್ರೆಯಿಂದ ಹಂಗೇ ಊರಿಗೆ ವಾಪಸ್ಸು ಹೊಂಟು ಬಿಡ್ಬಹುದಾಗಿತ್ತು. ಕಿಟ್‌ಬ್ಯಾಗ್ ಮಾವನ ಮನೇಲೇ ಉಳೀತು."

"ನೀವು ಇನ್ನೊಂದೆರಡು ದಿನ ಇದ್ದು ಬನ್ನಿ. ನನ್ನನ್ನ ಬಸ್ಸಿಗೆ ಹತ್ತಿಸಿಬಿಡಿ."

"ಇಲ್ಲ, ನಿಮ್ಮನ್ನ ಒಬ್ಬಾಕೀನೇ ಕಳಿಸೋದು ಬ್ಯಾಡ... ಸರಿಯಲ್ಲ" ಇಬ್ಬರೂ ಎದ್ದು ಹೊರಬಂದು ಜಟಕಾ ಹತ್ತಿ, ಆಸ್ಪತ್ರೆಯ ದಾರಿಯಲ್ಲಿ ಸಾಗಿದರು.

ಊರಿನಿಂದ ಆಚೆ ಕಟ್ಟಲ್ಪಟ್ಟಿದ್ದ ಸ್ಯಾನಿಟೋರಿಯಂನ್ನು ತಲುಪಿದರು. ಮಂಗಳಾ, ದೊಡ್ಡ ಗೇಟಿನ ಬಳಿ ತಗುಲಿ ಹಾಕಿದ್ದ ದೊಡ್ಡ ಫಲಕವನ್ನು ಓದಿಕೊಂಡಳು. ಒಂದು ರೀತಿಯ ಭೀತಿ ಹತ್ತಿಕೊಂಡಿತು. ಅವಳಿಗರಿವಿಲ್ಲದೆಯೇ ಅವಳು ದತ್ತನ ಕೈ ಹಿಡಿದಳು. "ಯಾಕ ಭಯ ಆಗ್ತದಾ ಮಂಗಳಾ ?" ಕೇಳಿದ.

ಇಲ್ಲ ಎನ್ನುವಂತೆ ತಲೆಯಾಡಿಸಿದರೂ ಅವನ ಕೈ ಬಿಡಲಿಲ್ಲ. ಒಳಗಿನ ಆವರಣದಲ್ಲಿ ಎಷ್ಟೋ ದೂರ ನಡೆದ ಮೇಲೆ, ರಾಧಾ ಇದ್ದ ಸ್ಪೆಷಲ್ ವಾರ್ಡಿನ ಕಡೆಗೆ ಬಂದರು. ನರ್ಸ್ ಬಳಿ ಮಾತನಾಡಿ, ಮುಂದೆ ನಡೆದರು. ದೂರದಿಂದಲೇ ರಾಧಾ ಇದ್ದ ವಾರ್ಡ ಬಳಿ ನಿಂತು. ಗಾಜಿನ ಕಿಟಕಿಯ ಮೂಲಕ, ಅವಳು ಮಲಗಿದ್ದ ಮಂಚವನ್ನು ತೋರಿದ "ಅಲ್ಲಿ ಬೆಡ್ ಮೇಲೆ ರಾಧಾ ಮಲಗ್ಯಾಳ ಕಾಣ್ತದೇನ?"

ಹಾಸಿಗೆಗೆ ಹಾಸಿದ್ದ ಬಿಳಿಯ ದುಪ್ಪಟ್ಟಿಯಂತೆ, ಮಲಗಿದ್ದ ರಾಧಾಳ ಮುಖ ಸರಿಯಾಗಿ ಕಾಣಲಿಲ್ಲ. ಒಳಗೆ ಇದ್ದ ನರ್ಸ್, ರಾಧಾಳನ್ನು ಎಬ್ಬಿಸಿ ಕೂರಿಸಿ, ಕಿಟಕಿಯ ಕಡೆ ಕೈ ಮಾಡಿದಳು. ರಾಧಾಳ ಕೈ ಚಲಿಸಿತು.

"ಮಂಗಳಾ ನೀವು ಕೈ ಬೀಸ್ರಿ... ಆಕೆ ಕೈ ಅಲ್ಲಾಡಿಸ್ತಿದಾಳೆ" ಮಂಗಳ ತನ್ನ ಉಸಿರನ್ನು ಬಿಗಿ ಹಿಡಿದುಕೊಂಡು, ಕೈಯನ್ನು ಸ್ವಲ್ಪವೇ ಮೇಲೆತ್ತಿ ಆಡಿಸಿದಳು. ನರ್ಸ್ಏನು ಹೇಳಿದಳೋ ಕೇಳಿಸುತ್ತಿರಿಲ್ಲ ರಾಧಾ ಮುಗುಳ್ನಕ್ಕಂತೆ ಮುಖ ಅಲ್ಲಾಡಿತ್ತು ಅನ್ನಿಸಿತು. ಒಣಗಿದ ದಬ್ಬೆಯಂತೆ ಹತ್ತಿಗೊಂಡಿದ್ದ, ಬತ್ತಿ ಹೋದ ಕೆನ್ನೆಗಳ ಗುಳಗಗೆ ಬಿದ್ದ ಕಣ್ಣುಗಳ ಹೆಂಗಸು, ರಾಧಾಬಾಯಿ ಎನಿಸಲಿಲ್ಲ.

"ಬೇಗ ಹೋಗೋಣ ನಂಗೆ ಇನ್ನು ನಿಂತಿರುಕ್ಕಾಗುಲ್ಲ.. " ಪಿಸುದನಿಯಲ್ಲಿ ನುಡಿದಳು. ದತ್ತ ರಾಧಾಳ ಕಡೆ ಕೈ ಮಾಡಿ ಸಂಜ್ಞೆಯಲ್ಲಿ, ಮಂಗಳನ್ನ ಲಗ್ನವಾಗಿರುವುದಾಗಿ ತಿಳಿಸಿದ. ಅವಳು ಇಬ್ಬರೂ ಚೆನ್ನಾಗಿರಿ ಎಂದು ಕೈ ಎತ್ತಿ ಹಾರೈಸಿದಂತೆ ಅನ್ನಿಸಿತು. ಕಣ್ಣಂಚಿನಲ್ಲಿ ಹನಿ ಜಿನುಗಿತು. ಅವಳಿಗೆ ಕಾಣದಂತೆ ಕಣ್ಣುಗಳನ್ನು ಒರೆಸಿಕೊಂಡ. ಎಷ್ಟು ಹೊತ್ತು ನಿಂತಿದ್ದರೂ ಅಷ್ಟೇ ಹತ್ತಿರ ಹೋಗುವಂತಿಲ್ಲ. ಕಣ್ಣಾರೆ ನೋಡುವಂತಿಲ್ಲ. ಅನ್ನಿಸಿದ್ದನ್ನು ಕೇಳುವಂತಿಲ್ಲ. ಹೇಳುವಂತಿಲ್ಲ ಆದರೂ ಅಲ್ಲಿಂದ ಕದಲಲಾರ. .. ರಾಧಾ ಬೇಸರಗೊಂಡಾಳೆಂದು ಅಲ್ಲಿಯೇ ನಿಂತ. ಅಷ್ಟು ಹೊತ್ತು ಅಲ್ಲಿ ಕುಳಿತಿದ್ದುದಕ್ಕೆ ಅವಳಿಗೆ ಬೆನ್ನು ನೋವು, ನಿಶ್ಶಕ್ತಿ ಪ್ರಾರಂಭವಾಗಿತ್ತು... ಅವಳನ್ನು ನೋಡಿಕೊಳ್ಳುತ್ತಿದ್ದ ನರ್ಸ್ ಸಂಜ್ಞೆ ಮಾಡಿ ನೀವಿನ್ನು ಹೋಗಿ ಎಂದು ತಿಳಿಸಿ ಅವಳನ್ನು ಮಲಗಿಸಿದಳು. ರಾಧಾ ಕೆಮ್ಮುತ್ತಿದಾಳೆಂದು ಗೋಚರವಾಗಿತ್ತು... ಅವನಿಗೆ ಇನ್ನು ಅಲ್ಲಿ ನಿಲ್ಲಲಾಗಲಿಲ್ಲ. ಮಂಗಳನ ಕೈ ಹಿಡಿದುಕೊಂಡು ಬಿರಬಿರನೆ ಇತ್ತ ಬಂದು ಬಿಟ್ಟ ಇಬ್ಬರೂ ಮೌನದಿಂದ ಆಸ್ಪತ್ರೆಯ ಆವರಣದಿಂದ ಆಚೆಗೆ ಬಂದರು.

ಅಲ್ಲಿಂದ ಸೀದಾ ಮಾವನ ಮನೆಗೆ ಬಂದರು ಆಸ್ಪತ್ರೆಯ ಮೈಲಿಗೆಯ ಬಟ್ಟೆಗಳನ್ನು ಬದಲಾಯಿಸಿ, ಶುಭ್ರವಾದ ಉಡುಪುಗಳನ್ನು ಧರಿಸಿದರು. ಮಾವ ಏನು ಕೇಳಿ ಬಿಡುವನೋ ಎಂದು ಇವನಿಗೆ ಮುಜುಗರ ಏನಿಸಿದರೆ, ದತ್ತ ಏನು ಹೇಳಿ ಬಿಡುವನೋ ಎನ್ನುವಂತೆ ಮಾವ ಚಡಪಡಿಸುತ್ತಿದ್ದ. ಗೋದಾ ಬಾಯಿ ಏನನ್ನು ಕೇಳದೆ ತಟ್ಟೆಗಳನ್ನು ಹಾಕಿ ಎಲ್ಲರನ್ನಾ ಊಟಕ್ಕೆ ಎಬ್ಬಿಸಿದಳು. ಯಾರಿಗೂ ಊಟ ಸೇರದಂತಾಗಿತ್ತು. ಆದರೂ

ಆ ಕ್ರಿಯೆಯನ್ನು ಮುಗಿಸಿದರು'ಮಾವ ನಾವು ಈಗ್ಲೇ ಊರಿಗೆ ವಾಪಸ್ಸು ಹೋರಡ್ತೀವಿ ಈಕಿನ್ನ ಬಿಟ್ಟು, ನಾ ಮತ್ತೆ ಬರತೀನಿ..." ಮಾವ ಗೋಣು ಆಡಿಸಿದ.

ಹೊರಡುವ ಮುನ್ನ ದತ್ತ, ಮಂಗಳಾ, ಅವರಿಬ್ಬರಿಗೂ ನಮ್ಮಸ್ಕರಿಸಿದರು.. ಗೋದಾ ಇಬ್ಬರಿಗೂ ಉಡುಗೊರೆಗಳನ್ನಿತ್ತಳು. "ಇದೆಲ್ಲಾ ಯಾಕೆ ಅತ್ತೀ... ನಾನೇನು ಹೊರಗಿನವನಾ! ನಾನು ತಗಳ್ಳುದಿಲ್ಲ" ಎಂದು ಅತ್ತ ತಳ್ಳಿದ.

"ನೀ ನಮ್ಮೊೀನೇ ಸರಿ. ಈಕೀ ನಿನ್ನ ಹೊಸ ಹೇಣ್ತಿ. ನೆನ್ನೆ ಇನ್ನು ಲಗ್ನ ಆಗದ. ಬರೀ ಕೈಯಲ್ಲಿ ಕಳಿಸೋದು ಚಂದ ಅಲ್ಲ. ಈಕೀನೂ ನಮಗೆ ಮಗಳಿದ್ದಾಂಗ ... ಇನ್ನೆರಡು ದಿನ ಇದ್ದು ಹೋಗಿದ್ರೆ ಆಗ್ತಿತ್ತು... ಆದರ ನಾ ಹ್ಯಾಂಗ ಹೇಳಲಿ?" ಅತ್ತೆ ಕಣ್ಣಿರನ್ನು ಒರಸಿಕೊಂಡಳು.

"ನೀ ಅಳಬ್ಯಾಡ ಅತ್ತೇ... ನಾ ಮತ್ತೆ ಬರತೀನಿ..."

"ಆಕಿ ಇರೂವರ್ಗೂ ಬರ್ತೀಯ ಆಮೇಲೆ ಯಾಕೆ ಬಂದೀಯ ?"

"ಅತ್ತೀ ನೀ ಹಿಂಗೆಲ್ಲಾ ಮಾತಾಡ್ಬೇಡ ನೋಡು. ನಂಗೂ ದುಃಖ ಆಗ್ತೈತಿ"ಎನ್ನುತ್ತಾ ಕಿಟ್‌ಬ್ಯಾಗ್‌ನ್ನೆತ್ತಿಕೊಂಡ ಮಂಗಳಾ ಮೈತುಂಬಾ ಸೆರಗನ್ನು ಹೊದ್ದು ಅವನೊಂದಿಗೆ ಹೆಜ್ಜೆ ಹಾಕಿದಳು. ಗೇಟಿನ ಬಳಿಗೆ ಬಂದಾಗ ಹಿಂತಿರುಗಿ ನೋಡಿದ. ಅವರಿಬ್ಬರೂ ಬಾಗಿಲಲ್ಲಿಯೇ ನಿಂತಿದ್ದರು. .. ಮನಸ್ಸು ಕಲಕಿ ಹೋಯಿತು. ವೇಗವಾಗಿ ನಡೆದು, ಜಟಕಾಗಾಡಿ ನಿಲ್ಲಿಸಿದ್ದ ಕಡೆಗೆ ಬಂದರು....

ಊರನ್ನು ಸೇರಿ, ಮನೆಗೆ ಬಂದು ತಲುಪಿದಾಗ, ರಾತ್ರಿ ಹತ್ತು ಗಂಟೆಯ ಮೇಲಾಗಿತ್ತು. ತುಂಗಾ ಬಾಯಿ ಬಾಗಿಲನ್ನು ತೆರೆದಳು. "ಬಾಳಾ... ಬಂದ... "ಎಂದಳು. ಉಳಿದವರೂ ಎದ್ದು ಬಂದರು. ಎರಡ್ದಿನ ಇದ್ದು ಬರೋದಲ್ಲೇನೋ... ಹೀಗೆ ಹೋದಿ ಹಾಗ ಬಂದಿ...."

"ನಮ್ಮಿಬ್ಬರಿಗೂ ಊಟ ಬಡಿಸು. ಮಧ್ಯಾಹ್ನ ಉಂಡದ್ದು.." ಎಂದು ಹೇಳಿ ಕೈ ಕಾಲು ತೊಳೆಯಲು ಹೋದ.

"ಮಂಗಳಾ ನೀನಾದ್ರೂ ಹೇಳವ್ವಾ... ಏನಾಯ್ತೇ... ಮಾವ ಏನಾದ್ರೂ ಅಂದ್ನಾ! ರಾಧಾಬಾಯಿ ಹ್ಯಾಂಗಿದ್ದಾಳೆ? ನಿನ್ನ ಸಂಗಡ ಮಾತಾಡಿದ್ಲಾ? ಕೋಪ ಮಾಡ್ಕೊಂಡಿದ್ಲಾ?" ಪ್ರಶ್ನೆಗಳನ್ನು ಸುರಿಸಿದಳು.

"ಅದನ್ನೆಲ್ಲ ಆಕೀನೇನು ಕೇಳ್ತಿ, ನನ್ನ ಕೇಳು... ಅತ್ತೀ ಮಾವ ಇಬ್ಬರೂ ಎರಡ್ದಿನ ಇದ್ದು ಹೋಗಿ ಅಂದ್ರು.... ನನಗೆ ಸೂಟಿ ಇಲ್ಲ. ನಾನು ನಾಳೆ ಬೆಳಿಗ್ಗೇನೇ ಮತ್ತೆ ಊರಿಗೆ ಹೋಗೋನಿದೀನಿ... ಬೇಗ ಬಡಿಸು. ನಿದ್ದೆ ಹೋಗ್ಬೇಕು... ನೀವೂ ಬರ್ರೀ.." ಮಂಗಳನನ್ನು ಅವಸರಿಸಿದ ತಾಯಿ ಎಲೆ ಹಾಕಿ ಬಡಿಸಿದಳು. ಊಟ ಮುಗಿಸಿ ಕೈ ತೊಳೆದು ಬಂದ.

"ಮಂಗಳಾ ನೀವು ಬರ್ರೀ. ನಾನು ನಿಮ್ಮನ್ನ ನಿಮ್ಮನೀಲಿ ಬಿಟ್ಟು, ಅತ್ತೀಮಾವಗೆ ಹೇಳಿ ಬರ್ತೀನಿ"

"ಅಯ್ಯೋ ಇದೇನೋ ಬಾಳಾ... ಅಕಿ ಇಲ್ಲೇ ಮಲಗ್ಲೀ... ಅಪ್ಪನ ಮನೀಗ್ಯಾಕೆ ಹೋಗ್ಬೇಕು...?"

"ಇಲ್ಲಿ ಸ್ಥಳ ಇಲ್ಲವ್ವಾ? ಸೀತಾ ಮಾರ್ತಾಂಡ ಮಲಗಿ ನಿದ್ದೆ ಹೋಗ್ಯಾರ .. ನೀವು ನಡೀರೀ.... ಮಂಗಳಾ..."

"ದತ್ತ ನಿಂತ್ಕೋ... ನಾನು ಇಬ್ರನ್ನೂ ಎಬ್ಬಿಸ್ತೀನಿ... ನೀವಿಬ್ರೂ ಈ ಕೋಣೇಲಿ ಮಲಗ್ರೀ..."

"ಏನೂ ಬ್ಯಾಡವ್ವಾ "ಎನ್ನುತ್ತಾ ಮಂಗಳನ ಕೈ ಹಿಡಿದು ಎಳೆದು ಕೊಂಡು ಹೊರಟ ಮಂಗಳ ಬೆಪ್ಪಳಂತೆ ಅವನ ಹಿಂದೆ ನಡೆದಳು. ಮಂಗಳನನ್ನು ಅಲ್ಲಿ ಬಿಟ್ಟು, ತಾನು ಮತ್ತೆ ಊರಿಗೆ ಹೊರಟಿರುವ ವಿಷಯವನ್ನು ಅವರುಗಳಿಗೆ ತಿಳಿಸಿ ತನ್ನ ಮನೆಗೆ ಬಂದ.

"ಇದೇನೋ ನಿನ್ನ ಕತಿ ! ಆ ಹುಡ್ಗಿ ಏನಂದ್ಕೊಂಡಾಳು? ನೀ ಮತ್ತ ಎಂದಿಗೆ ಬರ್ತೀಯೋ ಏನೋ.. ಆಕೆಗೆ ಬೇಸ್ರ ಆಗೋದಿಲ್ಲೇನು ?...."

"ಇಲ್ಲವ್ವಾ ಆಕೆಗೆ ಏನೂ ಬೇಸರ ಇಲ್ಲ. ನಾಮತ್ತೆ ಸೂಟಿ ಮೇಲೆ ಬರೋವರ್‍ಗೂ ಆಕಿ ಅವರ ಮನೇಲೇ ಇರ್ತಾಳ.... ಬಂದೂ ಹೋಗಿ ಮಾಡ್ತಾಳ ಅಷ್ಟೇ."

"ಅಂದ್ರೇ ... ಈ ಚಂದಕ್ಕೆ ಲಗ್ನ ಯಾಕೋ ಆದಿ ?"

"ಅದನ್ನೆಲ್ಲ ಈ ಮೊದಲೇ ಹೇಳೇನಿ ಈಗೇನೂ ಕೇಳ್ಬ್ಯಾಡ" ಎಂದು ಹೇಳಿ, ಮಾರ್ತಾಂಡನ ಪಕ್ಕದಲ್ಲಿ ಮಲಗಿದ ಆಯಾಸವಾಗಿದ್ದುದರಿಂದ ಬೇಗನೇ ನಿದ್ದೆ ಹತ್ತಿತು.

o o o

"ಇದೇನೇ ಮಂಗಳಾ ಒಂದೇ ದಿನಕ್ಕೆ ವಾಪಸ್ಸು ಬಂದು ಬಿಟ್ರೇ ... ಏನಾದ್ರೂ ಮಾತು? ... ನಿನ್ನನ್ನ ಇಲ್ಲಿ ಬಿಟ್ಟು ಹೋದ್ನಲ್ಲ. ಯಾಕೆ ? " ಸರೋಜ ಕೇಳಿದಳು.

"ನನ್ನ ಪಾತ್ರ ಮುಗಿದಿರಬೇಕು. ಸಾಕು ನನ್ನ ಸಹವಾಸ ಅಂತ ಅನಿಸಿರಬೇಕು." ಗೊಣಗಿದಳು.

"ಒಂದೇ ದಿನಕ್ಕೆ ಬೇಡ ಅಂತ ಅನ್ನಿಸ್ತಾ... ಈ ಚಂದಕ್ಕೆ ಮದುವೆ ಯಾಕೆ ಬೇಕಿತ್ತು ಯಾರಾದ್ರೂ ನಾಟಕದವಳನ್ನು ಕರ್ಕೊಂಡು ಹೋಗಿ ರಾಧಾ ಬಾಯಿಗೆ ತೋರಿಸಿದ್ರೂ ಆಗ್ತಿತ್ತು..."

"ಹೋಗ್ಲಿ ಬಿಡೇ ಅಕ್ಕ ಹೋಗೂ ನಾಳೆ ವಾಪಸ್ಸು ಊರಿಗೆ ಹೋಗ್ತಿದಾರೆ ಮತ್ತೆ ಎಂದಿಗೆ ಬರ್ತಾರೋ... ನಾನಂತೂ ಕೇಳಲಿಲ್ಲ."

"ಪತ್ರ ಬರೆದರೆ ಓದು... ಉತ್ತರ ಬರಿ ಪೆದ್ದು ಪೆದ್ದಾಗಿ ಆಡ್ಬೇಡ"

"ಪತ್ರ ಬರೀತೀನಿ ಅಂತ ಹೇಳಿಲ್ಲ. ಅವರ ಮನಸ್ಸೇ ಸರಿಯಿಲ್ಲ. ಭಾಳ ಗೊಂದಲ

ದಲ್ಲಿ ದಾರ.... ನಾನೇನೂ ಕೇಳಲೂ ಇಲ್ಲ ಹೇಳಲೂ ಇಲ್ಲ."

"ಬೆಳಿಗ್ಗೆ ಅವನು ಹೊರಡುವ ಹೊತ್ತಿಗೆ ಅವನ ಮುಂದೆ ಹೋಗಿ ನಿಂತ್ಕೋ ಇಲ್ಲದಿದ್ರೆ ನಿನ್ನನ್ನ ಮದುವೆಯಾಗಿದೀನಿ ಅನ್ನೋದನ್ನೇ ಮರೆತು ಹೊರಟು ಹೋದಾನು...."

"ನಂಗೆ ಈಗ ನಿದ್ದೆ ಬರ್ತಿದೆ. ನಾನು ಬೇಕಾಗಿದ್ರೆ ಬೆಳಿಗ್ಗೆ ಅವನೇ ಬಂದು ಮಾತನಾಡಿ ಸಲಿ ನಾನಂತೂ ಹೋಗುಲ್ಲ." ಎನ್ನುತ್ತಾ ಹಾಸಿಗೆಯ ಮೇಲೆ ಉರುಳಿ ಕೊಂಡಳು. ಆಯಾಸಕ್ಕೆ ಮಂಪರು ನಿದ್ದೆ. ಆರೆ ನಿದ್ದೆಗೆ ಕನಸ್ಸುಗಳು. ರಾಧಾ ಹತ್ತಿರಕ್ಕೆ ಕರೆದು ನಕ್ಕಂತೆ.... ಬೆದರಿ ಎಚ್ಚರಗೊಂಡಳು ಆ ನಗು ಎಂಥದು! ನೋವಿನ ನಗುವೆ? ಸಂತಸದ ನಗುವೆ! ಯಾರಿಗೇ ಆಗಲಿ, ತಾನು ಬದುಕಿ ಉಳಿಯುವ ಆಸೆಯೋ ಇಲ್ಲದಿರುವಾಗ ಗಂಡನ ಒಳಿತಿಗಾಗಿ ಸಂತಸದಿಂದ ನಗಲು ಸಾಧ್ಯವೆ. ದತ್ತ ಹೀಗೆ ಮಾಡಬಾರದಾಗಿತ್ತು. ತಾನು ಅವನೊಡನೆ ಮಾತನಾಡಬೇಕು ಹೇಗೂ ಈ ಮದುವೆ ಬಗ್ಗೆ ಬೇರೆ ಯಾರಿಗೂ ತಿಳಿದಿಲ್ಲ. ತನ್ನಿಂದ ದೂರ ಹೊರಟು ಹೋಗು ಎಂದು ಅವನಿಗೆ ಹೇಳಬೇಕೆಂದು ಕೊಂಡಳು.

○ ○ ○

ಬೆಳಿಗ್ಗೆ ಅವಳಿನ್ನು ಹಾಸಿಗೆಯಲ್ಲಿರುವಾಗಲೇ, ಮುಂಬಾಗಿಲನ್ನು ಬಡಿದ ಸದ್ದು ಕೇಳಿಸಿ ಪೂರ್ಣ ಎಚ್ಚರಗೊಂಡಳು. "ಅಕ್ಕ ಯಾರೋ ಬಾಗಿಲು ಬಡೀತಿದಾರೆ.." ಅವಳು ಉತ್ತರಿಸದಿದ್ದಾಗ, ಎದ್ದು ಕೈ ಬೆರಳುಗಳಿಂದ ಮುಂಗೂದಲನ್ನು ಸರಿ ಪಡಿಸಿ ಕೊಂಡು ಬಾಗಿಲನ್ನು ತೆರೆದಳು. ಎದುರಿಗೆ ದತ್ತ ನಿಂತಿದ್ದ, "ನಾ ಹೊಂಟೇನ್ರೀ ಹೇಳಿ ಹೋಗೋಣು ಅಂತ ಬಂದೆ.... ಪತ್ರ ಬರೀತೀನಿ. ನೀವೂ ಬರೀತೀರಿ ಹೌದಲ್ಲೋ..." ಅವಳ ಕೈಗೆ ನೂರರ ಎರಡು ನೋಟನ್ನು ಇಟ್ಟ. ಇದು ನಿಮಗೆ ಬ್ಯಾಡ ಅನ್ಬೇಡಿ... ತಗೊಳ್ಳಿ " ಎಂದು ಕೊಟ್ಟ ಅವಳು ಅನುಮಾನದಿಂದ ಹಣವನ್ನು ಕೈಗೆತ್ತಿಕೊಂಡು "ಆಗಲಿ" ಎನ್ನುವಂತೆ ತಲೆ ಯಾಡಿಸಿದಳು. "ಅವ್ವಾ ಕರೀತಾಳ ಅಲ್ಲೇ ತಿಂಡಿ ತಿನ್ನೋಣ... ಬರ್ರೀ... " ಕರೆದ.

"ನಾನಿನ್ನೂ ಈಗ ಎಳ್ತಾ ಇದೀನಿ. ನನ್ನ ಸ್ನಾನ ಇನ್ನೂ ಆಗಿಲ್ಲ... "

"ಲಗೂನೇ ಸಿದ್ಧ ಆಗಿ ಬರ್ರೀ... ನಾ ಕಾಯ್ತಾ ಇರ್ತೀನಿ "ಎಂದು ಹೇಳಿ ಹೊರಟು ಹೋಗಿದ್ದ. ಸರೋಜ ಮಲಗಿದ್ದಲ್ಲಿಂದಲೇ ನುಡಿದಳು. ಮಂಗಳ ಪುಸ್ತಕಗಳ ನಡುವೆ ನೋಟುಗಳನ್ನಿಟ್ಟಳು "ಹೋಗೇ ಅವನು ಊರಿಗೆ ಹೊರಟಿದೀನಿ ಅಂತ ಬಂದು ಕರೆದಿದಾನೆ'

"ನೀನೂ ಬರ್ತೀಯಾ...."

"ಇದೋಳ್ಗೆ ಸರಿ ಹೋಯ್ತು.... ಗಂಡ ಪ್ರಯಾಣ ಮಾಡಿದ್ಮೇಲೆ ಸ್ನಾನ ಮಾಡ

ಬಾರ್ದು ... ನೀರು ಕಾದಿದೆ ಅಂತ ಕಾಣ್ಣುತ್ತೆ. ಅಣ್ಣ ಆಗ್ಲೇ ಒಲೆ ಉರಿ ಹಾಕಿದ್ರು ಹೋಗಿ ಸ್ನಾನ ಮಾಡು ... ಹಾಗೇ ಅವತ್ತು ಅವರು ಒಂದು ಸೀರೆ ಕೊಟ್ರಲ್ಲ ಅದನ್ನೇ ಉಟ್ಕೋ... ಅವರಿಗೆ ಖುಷಿ ಆಗುತ್ತೆ."

"ಇವತ್ತೇನು ಸಂಭ್ರಮ ?| ಯಾವುದೋ ಒಂದು ಉಟ್ಕೋತೀನಿ...." ಎನ್ನುತ್ತಾ ಬಚ್ಚಲ ಮನೆಯ ಕಡೆಗೆ ನಡೆದಳು . ಮುಖ ತೊಳೆದು ಸ್ನಾನವನ್ನು ಮುಗಿಸಿ ಹೊರ ಬಂದಳು. ಬೇಗ ಬೇಗ ಸಿದ್ದರಾಗಿ ಇಬ್ಬರೂ ತಾಯಿಗೆ ಹೇಳಿ ಹೊರಟರು. ಅವರುಗಳು ತಿಂಡಿಯ ತಯಾರಿ ಮುಗಿಸಿದ್ದರು.

"ಒಂದು ತಾಸು ಇಬ್ರೂ ದೇವರ ಕೋಣೆಗೆ ಬನ್ನಿ'ಅತ್ತೆ ಮಂಗಳನನ್ನು ಕರೆದಳು ಅನುಮಾನಿಸುತ್ತಾ ಇಬ್ಬರೂ ಒಳಬಂದರು. ಕರಿಮಣಿ ಸರಕ್ಕೆ ಮಾಂಗಲ್ಯ ಪೋಣಿಸಿ ದೇವರ ಮುಂದೆ ಇಟ್ಟಿದೀನಿ ಕಾಲುಂಗುರ ಇದೆ... ಅರಿಶಿನ ಕುಂಕುಮ ಏರಿಸು ಹೂ ಹಾಕಿ ಬೇಡ್ಕೋ" ಸೆರಗೊಡ್ಡಿ ಮಂಗಳಾ ಸರೋಜನ ಕಡೆ ನೋಡುತ್ತಾ ಹಾಗೆಯೇ ಮಾಡಿದಳು.

"ಬಾಳಾ... ಬಾರಪ್ಪಾ" ಮಗನನ್ನು ಆತ್ಮೀಯವಾಗಿ ಕರೆದಳು. "ಇಗಾ ನೋಡು ಈ ಮಾಂಗಲ್ಯ ಸರಾನ ಆಕಿಯ ಕೊರಳಿಗೆ ಹಾಕು... ಈ ಕಾಲುಂಗುರ ತೊಡ್ಸು."

"ಅವ್ವಾ ಇದೆಲ್ಲಾ ಏನವ್ವಾ ಈಗ್ಯಾಕೆ ಇವೆಲ್ಲಾ..."

"ನಾ ಹೇಳಿದಷ್ಟ ಕೇಳು ಮತ್ತಾ ... ಶ್ರಾವಣ ಮಾಸದಾಗೆ, ಮಂಗಳಾ ಗೌರಿ ಹರತಾಳ ಗೌರಿ ಪೂಜೆ ಮಾಡಬೇಕಾಗ್ತದ ಮುತ್ತೈದೆ ಲಕ್ಷಣ ಕರಿಮಣಿ ಸರ, ಕಾಲುಂಗುರ ಬಾ ಇತ್ಲಾಗೆ... ನೀ ಸರ್ಯಾಗಿ ನಿಲ್ಲವ್ವಾ..."ದತ್ತ ತಾಯಿ ಹೇಳಿದಂತೆ, ಮಂಗಳನ ಕೊರಳಿಗೆ ಮಾಂಗಲ್ಯದ ಕರಿಮಣಿ ಸರವನ್ನು ಹಾಕಿದ ಕಾಲಿಗೆ ಕಾಲುಂಗುರವನ್ನು ತೊಡಿಸಿದ ಮಂಗಳ ಮುಜುಗರಗೊಂಡಿದ್ದಳು. "ಅವ ನಿನ್ನ ಕಾಲ ಮುಟ್ಟಾನ ನೀ ಅವಗೆ ನಮ್ಮಸ್ಕಾರ ಮಾಡಿ ಕ್ಷಮಾಪಣೆ ಕೇಳಿ ಆಶೀರ್ವಾದ ತಗೋ. " ಆಕೆ ಮತ್ತೆ ಹೇಳಿದಳು.

ಮಂಗಳಾ ಮನಸ್ಸಿಲ್ಲದ ಮನಸ್ಸಿನಲ್ಲಿ ಗಂಡನಿಗೆ ನಮಸ್ಕಾರ ಮಾಡಿದಳು. ಅವನು ಭುಜ ಹಿಡಿದೆತ್ತಿ ಎಬ್ಬಿಸಿದ. "ಏನೂ ತಿಳೀಬ್ಯಾಡ್ರೀ... ಅವ್ವ ಹಳೇ ಕಾಲದವಳು ಅವಳಿಗೆ ಮಾತ್ರ ಕೇಳುವಂತೆ ಹೇಳಿದ. ಮಂಗಳಾ ದೂರ ಸರಿದು ನಿಂತಳು.

"ಅಕ್ಕ ಎಲ್ರಿಗೂ ತಿಂಡಿ ಹಾಕಿಡ್ರಿ.... ಹಂಗೆ ಚಾಗೆ ನೀರು ಇಡಿ...." ಎಂದು ಹೇಳಿ, ಮಕ್ಕಳನ್ನು ಎಬ್ಬಿಸಿದಳು. ಸೀತಾ, ಮಾರ್ತಾಂಡ ಎದ್ದು ಬಂದು ಕಣ್ಣುಜ್ಜುತ್ತಾ ನಿಂತರು.... ಲಗೂನೇ ಮುಖ ತೊಳೆದ್ಬನ್ನಿ. ಎಲ್ರೂ ಕೂಡಿ ತಿಂಡಿ ತಿನ್ನೋರಂತೆ. ಹಂಗೇ ವನಜ, ಜಲಜ, ಶಂಕರ ಸಚ್ಚೀನ ಕರೆದ್ಬನ್ನಿ..." ಸೀತಾ ಕರೆಯಲು ಓಡಿದಳು.

ಎಲ್ಲರೂ ಸಾಲಾಗಿ ಕುಳಿತು, ತುಪ್ಪ ಹಾಕಿದ ಸಿಹಿ ಸಜ್ಜಿಗೆಯನ್ನು, ಉಪ್ಪಿಟ್ಟನ್ನು ತಿಂದರು. ಮಂಗಳಾ ಕೈ ತೊಳೆಯಲೆಂದು ಬಚ್ಚಲು ಮನೆಯ ಕಡೆಗೆ ಬಂದಾಗ, ದತ್ತ

ಅವಳಿದ್ದಲ್ಲಿಗೆ ಬಂದ. "ಯಾಕ್ರೀ ಸಪ್ಪಗಿದ್ದೀರಿ? ಮೈಯಾಗ ಆರಾಮ ಇಲ್ಲೇನು?"

"ಹಾಗೇನಿಲ್ಲ... ರಾತ್ರಿ ತುಂಬಾ ಹೊತ್ತು ನಾನು ನಮ್ಮಕ್ಕ ಮಾತಾಡ್ತಿದ್ವು... ತಡವಾಗಿ ನಿದ್ರೆ ಬಂತು."

"ನಿಮಗ ಧನ್ಯವಾದ ಹೇಳಬೇಕ್ರೀ.... ನನಗ ಉಪಕಾರ ಮಾಡೀರಿ... ನನ್ನ ಪತ್ರಕ್ಕೇ ಮರೀದೇ ಉತ್ತರ ಬರೀರಿ.... ಸುಮ್ಮನೇ ಕುಂಡ್ರಬೇಡಿ...."

"ಬರೀತೀನಿ.... ನಾನು ಹೋಗ್ಲಾ.... ದಾರಿ ಬಿಡಿ...."

"ನಾನು ಬಸ್‌ಸ್ಟ್ಯಾಂಡ್‌ಗೆ ಹೋಗೋವರ್‍ಗೂ ಇದ್ದು ಹೋಗ್ರಲ್ಲಾ... ನಂಗ ಸರಿ ಅನ್ನಿಸ್ತದ.... ಅವ್ವಾ ಚಾ ಮಾಡ್ಯಾಳ ಕುಡಿಯೋಣು ಬನ್ನಿ. ಸೇರದಿದ್ರೆ ಕುಡೀಬ್ಯಾಡಿ"

"ಪರವಾಗಿಲ್ಲ ಸ್ವಲ್ಪ ಕುಡೀತೀನಿ" ಇಬ್ಬರೂ ಹೊರಬಂದರು. ಸರೋಜ ತುಂಟ ನಗೆಯನ್ನು ನಕ್ಕಳು. ಮಂಗಳನಿಗೆ ಸರಿ ಎನಿಸಲಿಲ್ಲ. ಅವನ ಮಾತಿಗೆ ಬೆಲೆ ಕೊಟ್ಟು ಮಂಗಳ ಅಲ್ಲೇ ನಿಂತಳು ಉಳಿದವರೆಲ್ಲ ಮನೆಗೆ ಹೊರಟು ಹೋಗಿದ್ದರು.

"ಆಕೀನ ಕ್ವಾಣೆಗೆ ಕರ್‍ಕೊಂಡು ಹೋಗಿ ನಾಕು ಪ್ರೀತಿ ಮಾತಾಡು. ಆಕೀಗೂ ಖುಷಿ ಆಗ್ತದ" ಕಾಕಿ ಹೇಳಿದಳು...

"ಬಿಡು ಕಾಕಿ ಈಗ ಏನು ಮಾತಿದೆ ? ನಾನು ಆಮೇಲೆ ಪತ್ರ ಬರೀತೀನಿ..."

"ಕೇಳಿದ್ವೇನೇ ತುಂಗವ್ವಾ... ನಮ್ಮ ಎದುರಿಗೆ ಇವಗೆ ನಾಚ್ಕೆ....ಪತ್ರ ಬರೀತಾನಂತೆ..."ಕಿಸಕ್ಕನೆ ನಗುತ್ತಾ ನುಡಿದಳು.

"ಕಾಕೀ ನೀ ಏನೇನೋ ಅಡ್ಬೇಡ... ಆಕಿಗೆ ಹಿಡಿಸೂದಿಲ್ಲ..."

"ಓ ನೋಡಪ್ಪಾ... ಒಂದು ದಿನದಾಗ ನಿನ್ನ ಹೇಣ್ತಿ ನಿನಗ ಏನು ಮೋಡಿ ಮಾಡ್ಯಾಳ... ಆಕಿ ಪರ ವಹಿಸಿ ಮಾತಾಡ್ತಿಯಲ್ಲೋ...."

"ನೀನು ಸುಮ್ನಿರು ಕಾಕಿ... ನಂಗ ಹೊತ್ತಾತು.... ಹೊರಡ್ತೀನಿ..."

"ಚೆಂದುಳ್ಳಿ ಚೆಲುವೀನ ಬಿಟ್ಟು ಅಲ್ಲಿ ಒಂಟಿಯಾಗಿ ಹ್ಯಾಂಗಿರ್ತೀಯೋ... ರಾಧಾ ನಿನ್ನ ದಾರಿ ಕಾದೂ ಕಾದೂ ನೋಡ್ತಿದ್ಲು. ಈಕಿಗೂ ಹಂಗ ಮಾಡ್ಬೇಡ ಮತ್ತೆ... ಆ ನೌಕರಿ ಬಿಟ್ಟು ಇಲ್ಲೇ ಕೆಲ್ಸ ಮಾಡು..." ದತ್ತ, ಸೀತಳ ಜೊತೆ ಕೂತು ಹರಟೆ ಹೊಡೆಯುತ್ತಿದ್ದ ಮಂಗಳನ ಕಡೆ ನೋಡಿದ. ಮಂಗಳ ಚೆಲುವೆ ನಿಜ... ರೂಪ ಇದೆ ವಯ್ಯಾರ ಇದೆ ಯೌವನ ಇದೆ... ನಾನು ಈಕೀನ ಮೆಚ್ಚುಗೆಯಿಂದ ನೋಡಿದ್ದು ಉಂಟು. ಆದರೆ ಈಕಿ ಪತ್ನಿ ಆಗ್ತಾಳ ಅಂತ ಭಾವಿಸಿರ್ಲಿಲ್ಲ ಈಕಿ ಮನಸ್ನಾಗೆ ಏನಿದೆಯೋ... ಪತ್ರದಾಗ ಕೇಳಿ ತಿಳ್ಕೋಬೇಕು.... ಮಾವ ಹೇಳಿದ್ದ ಮಾತುಗಳು ನೆನಪಿಗೆ ಬಂದವು. ರಾಧಾಳ ಸೋತ ಮುಖ ಕಣ್ಣ ಮುಂದೆ ಬಂದು ನಿಂತಿತು."ನನ್ನನ್ನು ಕ್ಷಮಿಸು ರಾಧಾ... ನಿನಗ ದ್ರೋಹ ಮಾಡ್ಲಿಲ್ಲ... ಆದರೆ ಮುಂದೆ ಈಕಿಗೆ ದ್ರೋಹ ಮಾಡ್ಬಾರ್ದು ಅಲ್ವಾ...?" ತನ್ನಲ್ಲೇ ಕೇಳಿಕೊಂಡ...

"ಹೊತ್ತಾತು ಅಂತಂದೆ... ಆಕೀನೇ ನೋಡ್ತಾ ಕುಂತ್ಯಲ್ಲಾ... ಇನ್ನೆರಡು ದಿನ ಇದ್ದು ಹೋಗು. ನಿಷೇಕ ಪ್ರಸ್ಥ ಮುಗಿಸ್ಕೊಂಡೇ ಹೋಗೂವಂತೆ. ಇವತ್ತೆ ಆಗಲಿ... ಏನಂತೀಯಾ?" ದತ್ತ ನಾಚಿದ. ಮಂಗಳ ಕೇಳಿಸದವಳಂತೆ ಕೂತಿದ್ದಳು.

"ಕಾಕೀ ನೀನೊಂದು ಸಮಯ ಸಂದರ್ಭ ತಿಳೀದೇ ಏನೇನೋ ಒದರಿ ಬಿಡ್ತೀಯ...." ಎನ್ನುತ್ತಾ ಕಿಟ್‌ಬ್ಯಾಗ್‌ನ್ನೆತ್ತಿಕೊಂಡ. ಎಲ್ಲರಿಗೂ ಬರ್ತೀನಿ ಎಂದು ಹೇಳಿದ. ಅಷ್ಟರಲ್ಲಿ ರಾಮರಾಯ, ಜಾನಕಿಯೂ ಅಲ್ಲಿಗೆ ಬಂದು ಸೇರಿದರು. ಮಂಗಳನಿಗೆ ಕಣ್ಣು ಸಂಜ್ಞೆಯಲ್ಲಿಯೇ ಬರ್ತೀನಿ ಎಂದು ಹೇಳಿ ಹೊರಬಂದ.

"ಬಸ್ ಸ್ಟ್ಯಾಂಡ್ ತನಕ ನಾನೂ ಬರ್ತೀನಿ" ಎಂದು ರಾಮರಾಯ ಹೊರಟ.

"ಪರವಾಗಿಲ್ಲ ಮಾವ... ನಾನು ಬರ್ತಾನೇ ಇರ್ತೀನಿ. ಹೋಗ್ತಾನೇ ಇರ್ತೀನಿ..."

"ಇದು ಹೊಸಪರಿ... ನೀವು ಕೂಡಿ ಹೋಗ್ಬನ್ನಿ ರಾಯರ...." ಹಿರಿಯ ಜೋಷಿ ಹೇಳಿದ. ರಾಮರಾಯ ದತ್ತನೊಂದಿಗೆ ಹೆಜ್ಜೆ ಹಾಕಿದ.

"ಅಮ್ಮಾ ನಾನು ನಿನ್ನ ಜತೆ ಬರ್ತೀನಿ. ನೀ ಹೇಳಿಬಿಡು..." ಮಂಗಳ ಪಿಸುದನಿಯಲ್ಲಿ ಹೇಳಿದಳು.

"ಹೌದು... ಇಲ್ಲಿ ನಿನ್ನ ಗಂಡನೂ ಇಲ್ಲ. ಇದ್ದು ಏನು ಮಾಡ್ತೀಯ. ಅಲ್ಲಿ ಸರೋಜ ಒಬ್ಬಳೇ.... ನಾನು ಹೇಳ್ತೀನಿ" ಎನ್ನುತ್ತಾ ತುಂಗಾಬಾಯಿಯ ಕಡೆ ತಿರುಗಿದಳು. ನಾವು ಬರ್ತೀವಿ. ಬೇಕಾದಷ್ಟು ಕೆಲಸ ಬಿದ್ದಿದೆ. ಎಲ್ಲರನ್ನೂ ಸ್ಕೂಲಿಗೆ ಸಿದ್ಧ ಮಾಡ್ಬೇಕು. ಬಾಲು ಇನ್ನೂ ಮಲಗೇ ಇದಾನೆ."

"ಸೊಸೀನ ಇಲ್ಲೇ ಇಟ್ಕೊಳ್ತೀವಿ..."

"ತಂಗೀರ್‍ಗೆ ಜಡೆ ಹಾಕಿ ಬರ್ತಾಳೆ. ಅವಳು ಜಡೆ ಹಾಕಿದ್ರೇ ಬಿಚ್ಚು ಹೋಗೂದಿಲ್ಲ ಬಿಗಿಯಾಗಿ ಕಟ್ತಾಳೆ... ಆಮೇಲೆ ಬರ್ತಾಳೆ..."

"ಹಂಗಾರೆ... ಊಟದ ಹೊತ್ಗೆ ಇಲ್ಲೇ ಬಂದು ಬಿಡವ್ವಾ... ಮನಿ ಬಿಕೋ ಬಿಕೋ ಅನಿಸತೈತಿ... ನಿನ್ನ ಅಕ್ಕನನ್ನು ಕರ್ಕೊಂಡ್ಬಾ... ಹರಟಿ ಹೊಡೆಯೋಣು...."ಮಂಗಳ ತಲೆಯಾಡಿಸಿ, ತಾಯಿಯೊಂದಿಗೆ ನಡೆದಳು.

○ ○ ○

ಮುಖ ಕಿವುಚುತ್ತಾ ಕುಳಿತಿದ್ದ ಸರೋಜ, ತಾಯಿಯನ್ನು ಸಂಜ್ಞೆ ಮಾಡಿ ಕರೆದಳು. ಅಮ್ಮಾ ನಂಗೆ ಏನೋ ಆಗ್ತಿದೆ. ಆಸ್ಪತ್ರೆಗೆ ಹೋಗಬೇಕಾಗುತ್ತೆ..."ಕಷ್ಟಪಟ್ಟು ಹೇಳಿದಳು.

"ಏನಾಗುತ್ತೆ... ಎಲ್ಲೋ ಹೊಟ್ಟೇಲಿ ಚುಳ್ ಅಂದಿರ್ಬೇಕು... ಹೆದರಿ ಬಿಟ್ಯಾ?" ಮಂಗಳಾ ಇವರನ್ನೆಲ್ಲ ಸ್ಕೂಲಿಗೆ ಸಿದ್ಧ ಮಾಡಿ ಕಳಿಸು. ಬೆರಗಾಗಿ ನೋಡ್ತಾ ನಿಂತು ಬಿಡುತ್ತೆ.

"ಬನ್ರೇ ಜಡೆ ಹಾಕ್ತೀನಿ" ಎನ್ನುತ್ತಾ ಮಂಗಳ ಅವರನ್ನು ಕೂರಿಸಿಕೊಂಡಳು.

"ಅಕ್ಕಾ... ಯಾಕೆ ಹೀಗೆ ಬೇಗನೇ ಮದುವೆ ಮಾಡ್ಕೊಂಡು ಬಿಟ್ಟೆ?.... ಸೀತ ಹೇಳ್ತಿದ್ಲು... ಅವರ ಅತ್ತಿಗೆ ಮತ್ತೆಬರೂದೇ ಇಲ್ವಂತೆ ಹೌದಾ?" ವನಜ ಕೇಳಿದಳು.

"ನಂಗೊತ್ತಿಲ್ಲ. ನನ್ನನ್ನ ಏನೂ ಕೇಳ್ಬೇಡ. ಸ್ಕೂಲಿಗೆ ಹೊತ್ತಾಗುತ್ತೆ. ಸುಮ್ನೆ ಹೊರಡು" ತಂಗಿಯ ಮೇಲೆ ಗದರಿದಳು.

"ಇನ್ಮುಂದೆ ಅವರ ಮನೇಲೇ ಇರ್ತೀಯೇನೇ ಅಕ್ಕಾ?' ಶಂಕರ ಕೇಳಿದ.

"ಯಾಕೇ ? ನಾನು ಇಲ್ಲಿದ್ರೆ ನಿಂಗೆ ತೊಂದರೇನಾ?" ಸಿಡುಕಿದಳು.

"ನೋಡೇ, ಆಗ್ಲೇ ಇವಳಿಗೆ ಜಂಭ ಬಂದು ಬಿಟ್ಟಿದೆ... ಗದರ್ತಾಳೆ..."

"ಸುಮ್ನಿದ್ರೆ ಹರಟ್ತಾನೇ ಇರ್ತೀರಿ, ಸ್ಕೂಲಿಗೆ ಹೋಗ್ತೀರೋ ಇಲ್ವೋ... ಮಧ್ಯಾಹ್ನ ಊಟಕ್ಕೆ ಬನ್ನಿ... ಏನಾದ್ರೂ ರುಚಿಯಾಗಿ ಮಾಡ್ತೀನಿ."

"ಅತ್ತೇ ಮನೆಯಿಂದ ತರ್ತೀಯಾ?" ವನಜ ಚುಡಾಯಿಸಿದಳು...." ನಮಗ್ಯಾರ್ಗೂ ಸೇರುಲ್ಲಪ್ಪಾ" ಶಂಕರನ ಕಡೆ ನೋಡಿ ನಕ್ಕಳು. ಮಂಗಳನೂ ನಕ್ಕಂತೆ ಮಾಡಿದಳು.

ಗಂಡ ಮನೆಗೆ ವಾಪಸ್ಸು ಬರುವುದನ್ನೇ ಕಾಯುತ್ತಿದ್ದ ಗಂಡನನ್ನು ಸಮೀಪಿಸಿದಳು. "ಸರೋಜಂಗೆ ಹೆರಿಗೆ ನೋವು ಕಾಣಿಸ್ಕೊಂಡಿದೆ... ಆಸ್ಪತ್ರೆಗೆ ಸೇರಿಸ್ಬೇಕು..."

"ಹೂಂ... ಸೇರಿಸಿದ್ರಾಯ್ತು. ತಡಯಾಕೆ ಮಾಡ್ಬೇಕು...?"

"ಮನೇಲಿ ಯಾರಿಲ್ಲ... ಮಕ್ಕಳೆಲ್ಲ ಸ್ಕೂಲಿಗೆ ಹೊರಟು ಹೋಗಿದಾರೆ... ಬಾಲೂನ ಯಾರು ನೋಡ್ಕೋತಾರೆ?.... ಮಂಗಳ ಏನಂತಾಳೋ...

"ಏನಂತಾಳೆ? ನೀನೊಂದು. ಅದೇನು ಸಿದ್ಧತೆ ಬೇಕೋ ಮಾಡ್ಕೋ.... ಜಟಕಾ ಮಾಡ್ಕೊಂಡು ಬರ್ತೀನಿ. ಹತ್ತುಕ್ಕೆ ಆಗುತ್ತೆ ತಾನೇ... ಅಥವಾ ಟ್ಯಾಕ್ಸಿ ತರ್ಲೋ. ?"

"ಟ್ಯಾಕ್ಸಿನೇ ತನ್ನಿ. ದುಡ್ಡು ಇದೆಯಾ?.... ಹಾಗೇ ಅಳಿಯಂಗೆ ಟೆಲಿಗ್ರಾಂ ಕೊಟ್ಟು ಬಿಡಿ. ಬರೋದಾದ್ರೆ ಬರಲಿ. ಓಡಾಡುಕ್ಕೆ ಅನುಕೂಲ ಆಗುತ್ತೆ...."

"ಮೊದಲು ಆಸ್ಪತ್ರೆಗೆ ಸೇರಿಸಿದ್ರಾಯ್ತು... ಆಮೇಲೆ ಉಳಿದದ್ದು. ನಾನು ಹೋಗಿ ಟ್ಯಾಕ್ಸಿ ತರ್ತೀನಿ..." ಎನ್ನುತ್ತಾ ಮತ್ತೆ ಚಪ್ಪಲಿ ಮೆಟ್ಟಿ ಹೊರಟ. ಮನೆಯ ಮುಂದೆ ಟ್ಯಾಕ್ಸಿ ಬಂದು ನಿಂತ ಕೂಡಲೇ, ಜೋಷಿ ಮನೆಯವರು ಹೊರಗೆ ಬಂದು ನಿಂತರು. ಲಕ್ಷ್ಮಿದೇವಮ್ಮ ಕಿಟಕಿಯಲ್ಲಿ ಇಣುಕಿ ನೋಡಿದಳು...

"ಯಾರೋ ಬಂದ್ರೂಂತ ಕಾಣುತ್ತೆ. ಹೋಗಿ ನೋಡಿ" ಗಂಡನನ್ನು ಕಳಿಸಿದಳು. ಗೋಪಾಲಯ್ಯ ಟ್ಯಾಕ್ಸಿಯ ಬಳಿಗೆ ಬಂದು ನಿಂತ. ಸರೋಜ ನಿಧಾನವಾಗಿ ಬಂದು ಟ್ಯಾಕ್ಸಿಯನ್ನು ಹತ್ತಿದಳು.

"ಸರೋಜನ್ನ ಆಸ್ಪತ್ರೆಗೆ ಸೇರಿಸ್ತಿದೀವಿ....ಹೆರಿಗೆನೋವು ಕಾಣಿಸಿಕೊಂಡಿದೆ."

ರಾಮರಾಯ ಹೇಳಿದ.

"ಹೌದೇನೂ....? ನನ್ನಿಂದ ಏನಾದ್ರೂ ಸಹಾಯ ಬೇಕಾ?" ಕೇಳಿದ.

"ಏನೂ ಬೇಡ... ಅಳಿಯಂಗೆ ಟೆಲಿಗ್ರಾಂ ಕೊಡ್ತೀನಿ... ಮನೇಲಿ ಮಂಗಳ ಒಬ್ಬಳೇ ಇರ್ತಾಳೆ. ತಮ್ಮನೂ ಚಿಕ್ಕವನು. ಸ್ವಲ್ಪ ಗಮನ ಇರಲಿ ಅಷ್ಟೇ."

"ನೀವೇನೂ ಚಿಂತೆ ಮಾಡ್ಬೇಡಿ... ನಮ್ಮ ವಠಾರದಲ್ಲಿ ಯಾವ ಭಯವೂ ಇಲ್ಲ. ಎದುರಿಗೆ ಜೋಷಿ ಮನೆ ಇದೆ.... ಆಕಡೆ ದಿಬ್ಬದ ಮೇಲೆ ಒಂದು ಸಂಸಾರ ಇದೆ... ನೀವು ಕರ್ಕೊಂಡು ಬೇಗ ಹೊರಡಿ...." ಅವಸರಿಸಿದ. ಟ್ಯಾಕ್ಸಿ ಹೊರಟಿತು. ಗೋಪಾಲಯ್ಯ ಜಗುಲಿಯ ಮೇಲೆ ನಿಂತಿದ್ದ ಮಂಗಳನ ಬಳಿಗೆ ಬಂದ. ಬಾಗಿಲು ಹಾಕ್ಕೊಂಡು ಒಳಗೇ ಇರು... ಏನಾದ್ರೂ ಬೇಕಾದ್ರೆ ಜೋಷಿ ಮನೆಯವರನ್ನು ಕೇಳು. ಬೇಜಾರಾದ್ರೆ ನಮ್ಮ ಮನೆಗೆ ಬಾ.... ಅತ್ತೆ ಜೊತೆ ಪಗಡೆ ಆಡೂವಂತೆ...." ಸರ್ರನೆ ಅವನ ನೋಟ ಅವಳ ಕೊರಳ ಬಳಿಗೆ ಹರಿಯಿತು. ಅವಳು ತಕ್ಷಣವೇ ಸೆರಗನ್ನು ಮುಚ್ಚಿಕೊಂಡಳು. ತಪ್ಪಿತಸ್ಥಳಂತೆ ಮುಖ ಮಾಡಿದಳು. ಅವನು ಏನಾದರೂ ಕೇಳಿ ಬಿಡುವನೇನೋ ಎಂದು ಆತಂಕಗೊಂಡಳು.

"ಕಾಫೀ ತರ್ಲಾ ಮಾವ?.... ಅವರುಗಳಿಗೆ ಮಾಡಿದ್ದು ಮಿಕ್ಕಿದೆ."

"ಹೂಂ, ಕೊಡು. ನಿಮ್ಮ ಮನೆಗೆ ಬಂದು ಕಾಫೀನ ಕುಡೀದೇ ಹೋಗ್ತೀನಾ?... ಎನ್ನುತ್ತಾ ಒಳಗೆ ನಡೆದ. ಅದನ್ನು ಕಂಡು ಹಿರಿಯ ಜೋಷಿ ಕೈ ಬೀಸಿಕೊಂಡು ಇತ್ತ ಧಾವಿಸಿ, ತಾನೂ ಒಳಗೆ ಬಂದು ಕುಳಿತ.

"ಏನು ಜೋಷಿಗಳೇ ನಿಮಗೆ ಕಾಫಿ ಸೇರ್ತದೇನು?...." ತಮಾಷೆ ಮಾಡಿದ.

"ಕಾಫಿ, ಚಾಗೆ ಬರ್ಲಿಲ್ಲ ರಾಯರೇ. ಈಕಿ ಇಲ್ಲಿ ಒಬ್ಬಳೇ ಕುಳಿತು ಏನು ಮಾಡ್ತಾಳ? ನಮ್ಮನೀಗೆ ಬಾ ಅಂತ ಕೂಗ್ಲಿಕ್ಕೆ ಬಂದೆ.... ನೀವೂ ಕಾಫಿ ಕುಡಿದು ಹೊರಡ್ರಿ."

"ನಿಮ್ಮ ಮನೆಗಾ? ಏನು ವಿಷಯ ಜೋಷಿಗಳೇ?"

"ನಿಮಗೊಂದು ಸುದ್ದಿ ತಿಳಿಸೋದು ಅದ... ಈಗ ತಿಳಿಸ್ಯಾನ ಅಂತ ಕೋಪಿಸ್ಕೋ ಬ್ಯಾಡಿ. ... ನಮ್ಮ ಮಗ ಈಕಿನ ಲಗ್ನ ಆಗ್ಯಾನ.... ಮಂಗಳ ನಮ್ಮ ಮನಿ ಸೊಸೆ ಅದಾಳ..."

"ಏನು ?.... ಮದುವೆ? ಯಾವಾಗ ಆಯ್ತು? ನಮಗ್ಯಾರ್ಗೂ ತಿಳಿಸ್ಲೇ ಇಲ್ಲ ನೀವು?" ಅಸಹನೆ ಬೆರೆತ ಅಚ್ಚರಿಯಿಂದ ಕೇಳಿದ.

"ಅದೊಂದು ದೊಡ್ಡ ಕತೀನೇ ಇದೆ ಬಿಡ್ರೀ.... ಯಾರ್ಗೂ ತಿಳಿಸ್ಲೇ ಇಲ್ಲ ನೋಡ್ರೀ ಮುಂದೆ ಆರತಕ್ಷತೆ ಮಾಡೋ ಇರಾದೆ ಇದೆ... " ಅಷ್ಟರಲ್ಲಿ ಮಂಗಳಾ ಕಾಫಿಯ ಕಪ್ ಗಳನ್ನು ಹಿಡಿದು ಬಂದಳು. ಬಾಲು ಅವಳ ಹಿಂದೆಯೇ ಬಂದ.

"ಏನಮ್ಮಾ ಮಂಗಳಾ ನೀನೂ ನಿನ್ನ ಮಾವಂಗೆ ಹೇಳಲೇ ಇಲ್ಲವಲ್ಲ. ನಾನು ಬರದೇ ಇದ್ದಿದ್ದರೆ ತಿಳೀತಾನೆ ಇರ್ಲಿಲ್ಲವಲ್ಲ ..."

"ಆಕೀನ ಏನೂ ಕೇಳಬ್ಯಾಡ್ರೀ... ಆಕಿ ಮುಗ್ಧೆ ಇದಾಳ. ನೀವೂ ಈಗ್ಲೇ ನಿಮ್ಮ ಶ್ರೀಮತಿಯವರಿಗೆ ತಿಳಿಸ್ಬ್ಯಾಡ್ರೀ.... ಮೊದಲ ಆಕಿಗೆ, ತಮ್ಮ ಮಗನ ಮೇಲೆ ಕ್ವಾಪ ಐತಿ... ಅಂದ್ಹಂಗ, ನಿಮ್ಮ ಮಗ ಸೊಸಿ ಒಮ್ಮೆ ಬಂದು ಹೋದ್ರೇನ್ರೀ...." ಗೋಪಾಲಯ್ಯ ಕಾಫಿಯನ್ನು ಕುಡಿದು ಮುಗಿಸಿ ನುಡಿದ.

"ಎಲ್ಲಿ ಜೋಷಿಗಳೇ.... ನಮ್ಮಾಕೆಗೆ ಇಷ್ಟವಿರಲಿಲ್ಲ. ನಂಗೆ ಮಂಗಳನ್ನ ನನ್ನ ಮನೆ ಸೊಸೆ ಮಾಡ್ಕೋ ಬೇಕು ಅಂತ ಆಸೆ ಇತ್ತು. ಅವನು ಟೀಚರ್‌ನ ಇಷ್ಟಪಟ್ಟ. ಇವಳು ಕರೆಯುಲ್ಲ; ಅವರು ಬರುಲ್ಲ. ಇದು ಮುಗಿದ ಸಂಬಂಧ.... ದೇವರ ಲೀಲೆ ನೋಡಿ. ಮಂಗಳಾ ನಿಮ್ಮ ಮನೆಯ ಸಂಪ್ರದಾಯಕ್ಕೆ ಈಕೆ ಹೊಂದಿಕೊಳ್ಳೋದು ಕಷ್ಟವೇ... ಅಂಥಾದ್ದೇನು ನಡೀತು... ಯಾರಿಗೂ ತಿಳಿಸದಂತೆ ಮದುವೇನ ಅವಸರದಲ್ಲಿ ಮುಗಿಸೋಕೆ...? ಮಂಗಳಾ ಕೆಂಪಾಗಿದ್ದಳು. ಕಾಫಿಯ ಬಟ್ಟಲನ್ನು ಎತ್ತಿಕೊಂಡು ಒಳಗೆ ಹೊರಟು ಹೋಗಿದ್ದಳು."

"ಈಕಿ ಎದುರ ಹೀಂಗೆಲ್ಲಾ ಮಾತಾಡ್ಬೇಡಿ ರಾಯರ... ಈಕಿ ಮನಸ್ಸು ಕೆಡ್ತದ. ಈಕಿ ಗುಣವಂತಿ ಇದಾಳೆ. ನಮ್ಮ ಮಕ್ಕಳೂ ಲಂಪಟರಲ್ಲ.... ಇನ್ಮುಂದೆ ಈಕಿ ಜವಾಬ್ದಾರಿ ನಮ್ಮದು... ನಮ್ಮ ಮನಿಗೆ ಕರೆದೊಯ್ತೀನಿ... ನೀವೂ ಬರ್ರೀ..."

"ನಾನು ಕೆಟ್ಟ ಅರ್ಥದಲ್ಲಿ ಹೇಳಲಿಲ್ಲ ಜೋಷಿಗಳೇ.... ನಾವು ವಠಾರದವರೆಲ್ಲಾ ಒಂದೇ ಮನೆಯವರ ಥರ ಇರ್ಬೇಕು ಅಂತ ನನ್ನ ಆಸೆ... ಆ ಸಲುಗೆಯಲ್ಲಿ ಕೇಳಿದೆ. ಕ್ಷಮಿಸಿ..." ಎನ್ನುತ್ತಾ ಎದ್ದ.

"ಮಂಗಳವ್ವಾ... ನಿನ್ನ ಈ ಮಾವಗ ನಮಸ್ಕಾರ ಮಾಡವ್ವಾ... ಹರಸ್ರೀ ರಾಯರ"

ಹೊರಬಂದ ಮಂಗಳ ಗೋಪಾಲಯ್ಯನಿಗೆ ನಮಸ್ಕರಿಸಿದಳು. ಗೋಪಾಲಯ್ಯ ತನ್ನ ಜೇಬಿನಲ್ಲಿದ್ದ ಹತ್ತು ರೂಪಾಯಿಯ ನೋಟನ್ನು ಅವಳಿಗೆ ಉಡುಗೊರೆಯನ್ನಾಗಿ ಕೊಟ್ಟು ಆಶೀರ್ವದಿಸಿದ...."ದೇವರು ನಿನ್ನನ್ನು ಚೆನ್ನಾಗಿಟ್ಟಿರಲಿ.... ನಿನ್ನ ಮನೆಗೆ ಬಂದರೆ ಕಾಫಿ ಕೊಡ್ತೀಯೋ ಚಹಾ ಕೊಡ್ತೀಯೋ ?.... ತಮಾಷೆ ಮಾಡಿದ. ಮಂಗಳ ಮುಗುಳ್ನಕ್ಕಳು.

"ಕಾಫಿ ಬೇಕಾದ್ರೆ ಈ ಮನಿಗೆ ಬನ್ನಿ... ಚಹಾ ಬೇಕಾದ್ರೆ ಆ ಮನಿಗೆ ಬನ್ನಿ. ಎರಡೂ ಮನಿಗಳೂ ನಿಮ್ಮವೇ...." ಜೋಷಿಯೂ ಹಾಸ್ಯವಾಗಿ ಹೇಳಿದ.

"ನೀವುಗಳು ಹೋಗಿರಿ. ನಾನು ಸ್ವಲ್ಪ ಕೆಲಸ ಮುಗಿಸ್ಬೇಕು" ಎಂದು ಹೇಳಿ ಅವರುಗಳನ್ನು ಕಳಿಸಿದಳು.

ಒಣಗಿದ ಬಟ್ಟೆಗಳನ್ನು ಮಡಿಸಿಟ್ಟು, ಒಗೆಯುವ ಬಟ್ಟೆಗಳನ್ನು ಸಾಬೂನಿನ

ನೀರಿನಲ್ಲಿ ನೆನೆಸಿಟ್ಟಳು. ಅಷ್ಟರಲ್ಲಿ ಲಕ್ಷ್ಮೀದೇವಮ್ಮ ಮಗೂ ಮಗೂ ಎಂದು ಕರೆದದ್ದು ಕೇಳಿಸಿತ್ತು. ಆಕೆ ತುಳಸೀಪೂಜೆಗೆ ಬಂದಿರಬೇಕು.... ಬಾಲುವನ್ನು ಕಾಣದೇ ಅವನನ್ನು ಕರೆಯುತ್ತಿದ್ದಾಳೆಂದುಕೊಂಡು, ಅವನನ್ನು ಎತ್ತಿಕೊಂಡು, ಮುಂಬಾಗಿಲನ್ನು ಮುಂದಿನಿಂದ ಭದ್ರಪಡಿಸಿ, ಮೈತುಂಬಾ ಸೆರಗನ್ನು ಹೊದ್ದು, ತುಳಸಿ ಕಟ್ಟೆಯ ಬಳಿಗೆ ಬಂದಳು.

"ದಿನಾ ಬಂದು ನಿಂತಿರ್ತಿದ್ದ... ಇವತ್ತು ಕಾಣ್ಲಿಲ್ಲ... ಅದಕ್ಕೇ ಕರೆದೆ.... ನಿನ್ನ ಅಕ್ಕನ್ನ ಆಸ್ಪತ್ರೆಗೆ ಕರೆದುಕೊಂಡು ಹೋದ ಹಾಗಿತ್ತು. ಅಲ್ಲಿಂದ ಏನಾದ್ರೂ ಸುದ್ದಿ ಬಂತೇನು?...." ಮುದುರಿ ನಿಂತು ಕೇಳಿದಳು.

"ಇನ್ನೂ ಇಲ್ಲ ಅತ್ತೆ. ಅಣ್ಣ ಮನೆಗೆ ಬಂದಿಲ್ಲ... ಅತ್ತೇ ನಾನೂ ತುಳಸೀ ಪೂಜೆ ಮಾಡ್ಲಾ?.... ಸಂಕೋಚದಿಂದ ಕೇಳಿದಳು.

"ಮಾಡು. ಅದಕ್ಕೇನಂತೆ. ಮೊದಲು ನಾನು ಆರತಿ ಮಾಡಿ ಬಿಡ್ತೀನಿ ತಡೀ" ಎನ್ನುತ್ತಾ ತನ್ನ ಪೂಜೆಯನ್ನು ಮುಗಿಸಿ, ಆರತಿ ಎತ್ತಿದಳು. ನೈವೇದ್ಯದ ಹಾಲನ್ನು ಬಾಲುಗೆ ಕುಡಿಸಿ, ದ್ರಾಕ್ಷಿಯನ್ನು ಅವನ ಕೈಗೆ ಹಾಕಿದಳು. ಪೂಜೆ ಮಾಡಿದ ನಂತರ, ಪೂಜೆ ತಟ್ಟೆಗಳನ್ನು ಜ್ಞಾಪಾನವಾಗಿ ತಂದಿಟ್ಟು ಬಿಡು..." ಎಂದು ಹೇಳಿ ತನ್ನ ಮನೆಯ ಕಡೆಗೆ ನಡೆದಳು. ಆಕೆ ಮಾಡಿದಂತೆಯೇ ಮಂಗಳ ತುಳಸೀಪೂಜೆಯನ್ನು ಮಾಡಿ, ತೀರ್ಥವನ್ನು ಪ್ರೋಕ್ಷಿಸಿಕೊಂಡು, ಸೂರ್ಯನಿಗೆ ನಮಸ್ಕಾರ ಮಾಡಿ, ತುಳಸೀ ಕಟ್ಟೆಯನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡಳು. ಕಟ್ಟೆಗೆ ಹಚ್ಚಿದ್ದ ಅರಿಶಿನ ಕುಂಕುಮವನ್ನು ತನ್ನ ಮಾಂಗಲ್ಯದ ಸರಕ್ಕೆ ಹಚ್ಚಿಕೊಂಡು, ಕುಂಕುಮವನ್ನು ಹಣೆಗಿಟ್ಟುಕೊಂಡಳು. ದತ್ತನ ಮುಖ ಕಣ್ಣೆದುರಿಗೆ ಬಂದಿತು. ಮದುವೆಗೆ ಮೊದಲು ಅವನನ್ನು ದೂರದಿಂದ ನೋಡಿದ್ದು. ನಂತರ ಹತ್ತಿರದಿಂದ ನೋಡಲೇ ಇಲ್ಲ... ಎಂದುಕೊಂಡು, ತುಳಸೀ ಪ್ರಾರ್ಥನೆಯನ್ನು ಮುಗಿಸಿ, ಪೂಜಾತಟ್ಟೆಯನ್ನು ಹಿಡಿದು ಬಾಲುಗೆ ತನ್ನ ಹಿಂದೆ ಬರುವಂತೆ ಹೇಳಿ, ಲಕ್ಷ್ಮೀದೇವಮ್ಮನ ಮನೆಯ ಕಡೆಗೆ ನಡೆದಳು. ಆಕೆ ಇವಳಿಗಾಗಿಯೇ ಕಾಯುತ್ತಿರುವಂತೆ ಅನ್ನಿಸಿತ್ತು.

"ಅತ್ತೇ.... ಎಲ್ಲಿಡಲಿ?...." ಎಂದು ಕೇಳಿದಳು. ಲಕ್ಷ್ಮೀದೇವಮ್ಮನ ಗಮನ ಅವಳ ಕೊರಳಿನತ್ತ ತಿರುಗಿತ್ತು. ಅವಳು ಸೆರಗನ್ನು ಕರಿಮಣಿಸರ ಮುಚ್ಚುವಂತೆ ಹೊದ್ದಿರಲಿಲ್ಲ.... ಆತಂಕ ಕಾಡಿತು.

"ಮಂಗಳಾ.... ಅದೇನು ನಿನ್ನ ಕತ್ನಲ್ಲಿ ಕರೀಮಣಿ ಸರ?" ಕೇಳಿಯೇ ಬಿಟ್ಟಳು...

"ಅತ್ತೇ.... ನಾನು ಮೊದಲು ನಮಸ್ಕಾರ ಮಾಡ್ತೀನಿ" ಎಂದು ಹೇಳಿ, ತಟ್ಟೆಯನ್ನು ಬದಿಯಲ್ಲಿಟ್ಟು ಕಾಲು ಮುಟ್ಟಿ ನಮಸ್ಕರಿಸಿದಳು..." ಆಶೀರ್ವಾದ ಮಾಡಿ" ಎಂದಳು.

"ಏನಂತ ಆಶೀರ್ವಾದ ಮಾಡ್ಲೀ?... ನಂಗೇನೂ ಗೊತ್ತೇ ಇಲ್ವಲ್ಲಾ..."

"ಹೇಳ್ತೀನಿ ಅತ್ತೇ ಎನ್ನುತ್ತಾ ನಡೆದ ವಿಷಯವನ್ನು ತಿಳಿಸಿ, ಏಕಾಏಕಿ ಮದುವೆ ನಡೆದು ಹೋಯ್ತು... ಇದು ತಪ್ಪಾಗತ್ತಾ ಅತ್ತೇ?" ಪ್ರಶ್ನಿಸಿದಳು.

"ತಪ್ಪೋ ಸರಿಯೋ... ಆ ಜಗನ್ಮಾತೆಗೇ ಗೊತ್ತು... ಹೀಗೆ ಜರುಗಬೇಕಾದರೆ, ಏನೋ ಪ್ರಬಲವಾದ ಕಾರಣ ಇರಲೇ ಬೇಕು... ನನ್ನನ್ನು ಈಗ ಕೇಳಿದ್ರೆ?"

"ಗೊತ್ತಾಗಿದ್ದ ಮದುವೆ ನಿಂತ್ಹೋಯ್ತು... ದಿಢೀರನೇ ಈ ಮದುವೆ ಆಗಿ ಹೋಯ್ತು ಜೋಷಿ ಮನೆಯವರು ಬಂದು ಕೇಳಿದಾಗ ಇಲ್ಲ ಅನ್ನುಕ್ಕಾಗ್ಲಿಲ್ಲ.... ದೇವರ ಮುಂದೆ ಚೀಟೀಲಿ ಬರೆದು ಈ ಬಾಲು ಕೈಲೇ ಎತ್ತಿಸಿದೆವು.... ಒಪ್ಪಿಕೊಳ್ಳಿ ಅಂತ ಬಂತು..."

"ಸರಿ ಮತ್ತೆ... ಇನ್ನೇನು ಸಂಶಯ? ಎರಡ್ನೇ ಹೆಂಡ್ತಿ ಅನ್ನೋದನ್ನ ಮನಸ್ಗೆ ಹಚ್ಕೊಳ್ಳಲೇ ಬೇಡ... ಪಾಲಿಗೆ ಬಂದದ್ದು ಪಂಚಾಮೃತ ಅಂತ ಅಂದ್ಕೋ... ಈಗ ನೋಡು ಆ ಟೀಚರ್ರು... ಎರಡ್ನೇ ಮದುವೆ ಆಗ್ಲಿಲ್ವೇ..." ಎಂದು ಹೇಳಿ ತಟ್ಟನೆ ಮಾತನ್ನು ನಿಲ್ಲಿಸಿದಳು...

"ಇದರಲ್ಲಿ ಟೀಚರ್‌ದು ತಪ್ಪೇನಿದೆ ಅತ್ತೇ...."

"ಇಲ್ಲಮ್ಮಾ.... ತಪ್ಪೇನಿಲ್ಲ. ಎಲ್ಲಾ ಆ ಭಗವಂತನ ಆಟ... ಅವನು ಆಡಿಸ್ತಾನೆ... ಆದರೆ ಅವನ ಆಟ ವಿಚಿತ್ರ ಅಂತ ನಮಗೆ ಅನ್ನಿಸುತ್ತಲ್ಲಾ... ಕೂತ್ಕೋ.... ಕುಂಕುಮ ಕೊಡ್ತೀನಿ..." ಎನ್ನುತ್ತಾ ಪೆಟ್ಟಿಗೆಯೊಳಗಿಂದ ಅರಿಸಿ, ಅರಿಸಿ ಒಂದು ರವಿಕೆ ಖಣವನ್ನು ಇಟ್ಟು ತಾಂಬೂಲದೊಂದಿಗೆ ಕೊಟ್ಟಳು.

"ನಾನು ಒಪ್ಪಿದ್ದಿದ್ರೆ, ನೀನು ಚಂದ್ರು ಹೆಂಡತಿಯಾಗಿ ಈ ಮನೆಗೆ ಬರ್ತಿದ್ದೆಯೇನೋ..." ಅಂತ ಮನದಲ್ಲೇ ಅಂದುಕೊಂಡಳು. ಅದೇ ಮಾತನ್ನು ಮಂಗಳ ತನ್ನ ಮನದಲ್ಲಿ ಅಂದುಕೊಂಡಳು. ಟೀಚರ್ ಮಾತಿಗೆ ಒಪ್ಪಿಕೊಂಡಿದ್ದಿದ್ರೆ, ಬಲವಂತ ವಾಗಿಯಾದರೂ, ಚಂದ್ರುವಿನ ಪತ್ನಿ ಆಗ್ತಿದ್ದೆನೋ ಏನೋ... ಆದರೆ ಆ ದೇವರಿಚ್ಛೆ ಅನ್ನಿಸಿದ್ದೇ ಬೇರೆ.

"ಒಂದು ಪಾಯಸದ ಅಡಿಗೆ ಮಾಡ್ತೀನಿ. ಹೇಗೂ ಶ್ರಾವಣಮಾಸ. ನೀನೂ ಬಾಲು ಇವತ್ತು ಇಲ್ಲೇ ಊಟ ಮಾಡಿ... ನಿಮ್ಮಮ್ಮ ಎಷ್ಟೊತ್ತಿಗೆ ಬರ್ತಾರೋ... ಅಡಿಗೆ ಮಾಡಿಟ್ಟು ಹೋಗಿಲ್ಲ ತಾನೇ?"

"ಇಲ್ಲ ಅತ್ತೇ.... ಇವತ್ತು ಜೋಷಿಗಳ ಮನೆಗೆ ಊಟಕ್ಕೆ ಎಲ್ಲರೂ ಹೋಗ್ಬೇಕಂತೆ..."

"ಅವರೆಲ್ಲಾ ಹೋಗಲಿ, ನಾನು ಹೇಳಿದ ಮೇಲೆ ಆಯ್ತು. ಇವತ್ತು ನಿಮ್ಮಿಬ್ಬರಿಗೂ ನಮ್ಮನೇಲಿ ಊಟ. ಅದ್ಸರಿ... ಅದೇನು ಜೋಷಿ ಜೋಷಿ ಅಂತೀಯ... ಲಕ್ಷಣವಾಗಿ ಅತ್ತೆ ಮನೆ ಅನ್ನು...ಅದು ನಿಜ ತಾನೆ." ಮಂಗಳ ನಾಚಿದಳು.

"ಇಲ್ಲಿ, ಅಪ್ಪನ ಮನೆ ಒಂದನ್ನು ಬಿಟ್ಟು ಎಲ್ಲರ ಮನೆಯೂ ಅತ್ತೆಯ ಮನೆಯೇ.. ಸರ್‍ರನೆ ಬಾಯಿಗೆ ಬರುಲ್ಲ..." ತೊದಲಿದಳು.

"ಅಭ್ಯಾಸ ಮಾಡ್ಕೋಬೇಕು.. ಅದೇ ಲಕ್ಷಣ... ಅದೇ ನೋಡು, ಅರಿಶಿನ ಕೊಟ್ಟ ತಕ್ಷಣ, ಮಾಂಗಲ್ಯದ ಸರದ ಕಡೆಗೆ ಕೈ ಹೋಗುತ್ತೆ. ಮೂರು ದಿನಗಳ ಕೆಳಗೆ ಅದರ ಅಭ್ಯಾಸ ಇತ್ತಾ....?"

"ಅತ್ತೇ ನಿಮ್ಮ ಹತ್ರ ಕಲಿಯೋದು ತುಂಬಾ ಇದೆ.. ಎಲ್ಲಾದ್ರಲ್ಲೂ ನೀವು ಸೈ."

"ಇಲ್ಲ ಮಂಗಳಾ, ನಾನು ಎಲ್ಲಾದ್ರಲ್ಲೂ ಸೈ ಅಲ್ಲ... ನನ್ನಲ್ಲೂ ಅಪವಾದಗಳಿವೆ. ನಾನು ಅಪೂರ್ಣ.... ನನಗೆ ಅಪಖ್ಯಾತಿ ಇದೆ..." ಎಂದು ಹೇಳಲು ಇಷ್ಟಪಡದೇ ಸುಮ್ಮನೆ ನಕ್ಕಂತೆ ಮಾಡಿದಳು.

"ಅತ್ತೇ ಮನೆಗೆ ಹೋಗಿ, ಮುಂಬಾಗಿಲಿಗೆ ಬೀಗ ಹಾಕಿ, ಹಾಗೇ ಅವರಿಗೆ ಹೇಳ್ಬಿಟ್ಟು ಬರ್ತೀನಿ. ಅವರುಗಳು ಕಾಯ್ತಾ ಇರ್ತಾರೆ..."

"ಹಾಗೇ ಮಾಡು. ಎಲೆ ಹಾಕಿದ್ಮೇಲೆ, ನಾನು ಹೇಳಿ ಕಳಿಸ್ತೀನಿ... ಈ ತಾಂಬೂಲ ಇಲ್ಲೇ ಇರಲಿ ಆಮೇಲೆ ಬಂದಾಗ, ತಗೊಂಡು ಹೋಗೂವಂತೆ..." ಮಂಗಳ ತಲೆಯಾಡಿಸಿ, ಬಾಲುನ ಎತ್ತಿಕೊಂಡು, ತನ್ನ ಮನೆಗೆ ಬಂದಳು...

"ಎಲ್ಲಿ ಹೋಗಿದ್ಯವ್ವಾ... ಮನಿಗೆ ಬೀಗಾನೂ ಹಾಕ್ಬೇ....? ತುಂಗಾ ಕೇಳಿದಳು.

"ಅತ್ತೇ... ನಾನು ತುಳಸೀಪೂಜೆ ಮಾಡುಕ್ಕೆ ಹೋಗಿದ್ದೆ.... ನಾನೂ ಬಾಲು ಅವರ ಮನೇಲೇ ಊಟ ಮಾಡ್ಬೇಕಂತೆ... ಬಲವಂತ ಮಾಡ್ತಿದಾರೆ...."

"ಆಕೆ ಈ ವಠಾರದ ಯಜಮಾನಿತಿ. ಆಕೆಯ ಮಾತನ್ನು ಮೀರು ಹಂಗಿಲ್ಲ. ಇವತ್ತಿಗೆ ಸರಿ. ಇನ್ಮುಂದೆ, ನಮಗೆ ತಿಳಿಸದೇ ಹಂಗೆಲ್ಲಾ ಹೋಗು ಹಂಗಿಲ್ಲ... ತಿಳೀತಾ?" ಮಂಗಳನ ಮುಖ ಪೆಚ್ಚಾಗಿತ್ತು...

"ಸರಿ... ಕೆಟ್ಟ ಮೋರೆ ಹಾಕ್ಕೋಬೇಡ... ನೋಡ್ದೋರು, ನಾವು ಬೈದೆವು ಅಂತ ಭಾವಿಸ್ತಾರೆ... ಆಕಿಗಾದ್ರೂ ತಿಳೀಬೇಡ್ವಾ... ಎಲ್ರಿಗೂ ಇಷ್ಟುದ್ದ ಬುದ್ಧಿ ಹೇಳ್ತಾರ..."

"ಹೋಗ್ಲಿ ಬಿಡೆ ತುಂಗಾ.... ಕಡ್ಡೀನ ಬಡಿಗಿ ಯಾಕ ಮಾಡ್ತೀಯ? ಆಕಿಯ ಮನದಾಗ ಏನೇನು ಆಸೆ ಐತೋ... ವಠಾರದಾಗ ಇದ್ಮೇಲೆ ಎಲ್ಲಾ ಸರಿ ಹೋಗಿಸ್ಕೋಬೇಕಲ್ವ... ಹೋಗು ಮಗಳೆ, ಉಂಡು ಬಾ... ರಾತ್ರಿ ನಮ್ಮನೀಲೇ ಉಣ್ಣುವಂತಿ..." ಹಿರಿಯ ಅತ್ತೆ ಹೇಳಿದಾಗ ಮಂಗಳ ಸಮಾಧಾನಗೊಂಡಳು. ಅವಳು ಅತ್ತ ತಿರುಗಿದಳು.

"ಅಕ್ಕಾ ನೀವೇನ್ರೀ... ಸೊಸೀ ಎದುರಾಗೇ ನನ್ನನ್ನ ಹಗುರ ಮಾಡ್ತೀರಿ... ಆಕಿ ನನಗೆ ಏನು ಬೆಲಿ ಕೊಟ್ಟಾಳು?"

"ನಿನಗ ನಿನ್ನ ಬೆಲಿ ಇದ್ದೇ ಇದ... ಮಂಗಳನ್ನ ಅವರು ಈ ಮನೆಗೆ ಬಂದಾಗ್ನಿಂದ ನಾವು ಕಂಡೀವಿ. ನೀನು ಬಾಯಿ ಕಡಿಮೆ ಮಾಡು. ಎಲ್ಲಾ ಸರಿಹೋಗ್ತದ...ನಂಗ ಈ

ದಿನ ರಾಧಾ ಭಾಳ ನೆನಪಿಗೆ ಬರ್ತಾ ಇದಾಳವ್ವಾ.... ಆಕಿಮೂಕ ಹಸುವಿನಂತೆ ದುಡಿದದ್ದೇ ದುಡಿದದ್ದು... ಏನೂ ಸುಖ ಕಾಣ್ಲಿಲ್ಲ... ಈಗ ನೋಡು, ಇಂದೋ ನಾಳೆಯೋ ಅನ್ನೋ ಹಾಂಗೆ ಹಾಸಿಗೆ ಹಿಡಿದು ಆಸ್ಪತ್ರೆಯಾಗೆ ಮಲಗ್ಯಾಳ... ಹೋಗಿ ಒಮ್ಮೆ ನೋಡಿ ಬರಬೇಕವ್ವಾ... ಏನಂತೀ.... ಇಬ್ಬರ ಮನಸ್ಸೂ ರಾಧಾಳತ್ತ ಸರಿದಿತ್ತು."

"ಹೌದ್ರೀ ಅಕ್ಕಾ... ನೀವು ಹೇಳೋದೂ ಖರೇ... ನಾವು ನೋಡಿ ಬರಬೇಕ್ರೀ ತಮ್ಮ ಏನು ಬಗದಾನ? ಗೋದಾ ಬೈದೇ ಇದ್ವಾಳಾ?...." ಇಬ್ಬರೂ ರಾಧಾಳನ್ನು ನೆನೆದು ಕಣ್ಣೀರು ಸುರಿಸಿದರು. ತಮಗೆ ತಾವೇ ಸಮಾಧಾನ ಹೇಳಿಕೊಂಡರು.

"ಮಕ್ಕಳು ಸ್ಕೂಲ್ನಿಂದ ಬರೋ ವ್ಯಾಳಿ ಆಯ್ತು.." ಎನ್ನುತ್ತಾ ಎದ್ದಳು.

೦ ೦ ೦

"ಟೆಲಿಗ್ರಾಂ" ಟೆಲಿಗ್ರಾಂನವನು ಸೈಕಲ್ ಗಂಟೆ ಬಾರಿಸಿ, ಎತ್ತರದ ಧ್ವನಿಯಲ್ಲಿ ಹೇಳಿದಾಗ ವಠಾರದ ಎಷ್ಟೋ ಮಂದಿಗೆ ಎಚ್ಚರವಾಗಿತ್ತು. ಯಾರ ಮನೆಗೆ ಈ ಟೆಲಿಗ್ರಾಂನವನು ಬಂದಿದಾನೋ... ಏನು ಸುದ್ಧಿ ತಂದಿದಾನೋ... ಎಂಬ ಆತಂಕದಿಂದ ಕೆಲವರು ಕಿಟಕಿ ತೆಗೆದ ಇಣುಕಿದರು. ಕೆಲವರು ಬಾಗಿಲನ್ನು ತೆರೆಯುವ ಧೈರ್ಯವನ್ನು ಮಾಡಿದರು. ಟೆಲಿಗ್ರಾಂನವರು ಜೋಷಿಯವರ ಮನೆಯ ಮುಂದೆ ನಿಂತಿದ್ದ. ಹಿರಿಯ ಜೋಷಿ ಹೊರಬಂದು ನಡಗುವ ಕೈಗಳಿಂದ ಸಹಿ ಹಾಕಿ ಟೆಲಿಗ್ರಾಂನ್ನು ತೆಗೆದುಕೊಂಡು ಬಿಡಿಸಿ, ಬರೆದುದನ್ನು ಓದಿಕೊಂಡ. ಎಲ್ಲರೂ ಅವನೇನು ಹೇಳಿ ಬಿಡುವನೋ ಎಂಬ ಕಾತುರ ದಿಂದ ನೋಡಿದರು. ಎಲ್ಲಾ ಮುಗೀತು" ಎನ್ನುವಂತೆ ಕೈ ಚೆಲ್ಲಿದರು..." ದತ್ತ ಕಳಿಸ್ಯಾನ... ರಾಧಾ ಹೊಂಟೋದ್ಲು..." ಎಂದನು. ಎಲ್ಲರ ಉಸಿರೂ ನಿಂತತಂತಾಗಿತ್ತು... "ಬೆಳಿಗ್ಗೆ ಮೊದಲನೇ ಬಸ್ಸಿಗೆ ನಾವು ಹೋಗೋಣಂತೆ" ಎಂದು ಹೇಳಿದ. ಎಲ್ಲರೂ ಅಲ್ಲಲ್ಲೇ ಕುಳಿತರು.

ರಾಮರಾಯ ಕೆಲವೇ ಗಂಟೆಗಳ ಮೊದಲು ಸಿಹಿ ಸುದ್ಧಿಯನ್ನು ತಿಳಿಸಿದ್ದ. ಸರೋಜ ಹೆಣ್ಣು ಮಗುವನ್ನು ಹೆತ್ತಿದ್ದಳು... ಇತ್ತ ಈಕಿ ಹೆಣ್ಣುಕೂಸು ಹಡದ್ಯಾಳ... ಅತ್ತ ರಾಧಾ ಪರಲೋಕಕ್ಕೆ ಹೋಗ್ಯಾಳ" ಸಕ್ಕೂಬಾಯಿ ನುಡಿದಳು.

"ದತ್ತ ಹೋಗಿ ಸೇರಿದ್ನೋ ಏನೋ... ಅಂತೂ ಆಕಿ ಕತೀ ಮುಗೀತು? ತುಂಗಾ ಬಾಯಿ ನಿಟ್ಟುಸಿರಿಟ್ಟಳು. ನಾನೂ, ಅಕ್ಕನೂ ನಿಮ್ಮೊಟ್ಟಿಗೆ ಬರ್ತೇವು... ಆಕೀನ್ನ ನೋಡ್ಲೇ ಇಲ್ಲ ನಾವು..."

"ಏನೂ ಬ್ಯಾಡ. ಅಲ್ಲಿ ಹೆಣ್ಣು ಮಂದಿ ಬಂದು ಏನ್ಮಾಡ್ತೀರಿ... ಇಲ್ಲಿ ಸೀತನ್ನೊಬ್ಬಾಕಿನೇ ಮಾರ್ತಾಂಡನ ಮೇಲೆ ಮನೀ ಬಿಟ್ಟು ಹೋಗುಕ್ಕಾಗ್ತದೇನು?"

"ಮಂಗಳ ಬಂದು ಇಲ್ಲಿರ್ತಾಳ... ಬೇಯಿಸಿ ಹಾಕ್ತಾಳ..."

"ಅಲ್ಲಿ ಆಸ್ಪತ್ರೆಗೆ ಅವರವ್ವ ಇದಾರ... ಅವರ ಮನೀಲು ಮನಿ ತುಂಬಾ ಮಕ್ಕಳು. ಬಾಲು ಕೈ ಗೂಸು... ಆಕಿಗ ತ್ರಾಸ ಆಗೂದಿಲ್ಲೇನು?.... ನಾವು ಗಂಡಸು ಮಂದಿ ಹೋಗ್ತೇವು. ನೀವು ಸುಮ್ನಿರಿ..."

"ಮಂಗಳನ್ನು ಕರೆದೊಯ್ಯೋಣ...." ಎಲ್ಲೂ ಹೋಗೋಣು..."

"ಒಮ್ಮೆ ಬ್ಯಾಡ ಅಂದ್ರ ಅರ್ಥ ಆಗೂದಿಲ್ಲೇನು ನಿಂಗ... ಆಕೀದು ಹಸೀಮೈ ಅದ... ದತ್ತಗಂತೂ ಕರ್ಮಾ... ಅಂದರ... ನಾನೂ ತಮ್ಮ ಹೋಗ್ತೇವು... ನಿನ್ನ ತಮ್ಮ ಏನು ಕೇಳೂದಿಲ್ಲ ನೀನ್ಯಾಕ ಬರ್ಲಿಲ್ಲ ಅಂತ... "ಹಿರಿಯ ಜೋಷಿ ಜೋರು ಮಾಡಿ ಹೇಳಿದ. ಅವರ ಮನೆಯ ಜೋರು ಜೋರು ಮಾತನ್ನು ಕೇಳಿ ರಾಮರಾಯ ಎದ್ದು ಬಂದಿದ್ದ. ಜೋಷಿ ಟೆಲಿಗ್ರಾಂನ ಅವನ ಕೈಗಿತ್ತ... ರಾಮರಾಯ ಓದಿಕೊಂಡ. ನೋಡ್ರೀ ಪ್ರಪಂಚ ಹೆಂಗದ ಅಂತ... ಇತ್ತ ಒಂದು ಜನ್ಮ ತಾಳಿತು ; ಅತ್ತ ಒಂದು ಜನ್ಮ ಹೋಯಿತು... ಇಷ್ಟೇ ವೇದಾಂತವನ್ನು ಆಡಿದ. ನಾನು ನನ್ನ ತಮ್ಮ ಬೆಳಗಾಗ್ತಿದ್ದಂಗೇ ಬಸ್ ಹತ್ತೀವಿ. ಸ್ವಲ್ಪ ಮನಿ ಕಡೆ ಗಮನ ಇಟ್ಕೊಳ್ರಪ್ಪಾ... ನಿಮಗೆ ಓಡಾಟ ಆಯ್ತು.. ನಾವು ರಾತ್ರಿಯ ವೇಳೆಗೆ ವಾಪಸ್ಸು ಬಂದು ಬಿಡ್ತೇವು..." ರಾಮರಾಯ ಮಾತನಾಡದೇ ತನ್ನ ಮನೆಗೆ ವಾಪಸ್ಸು ಬಂದಿದ್ದ. ಮಂಗಳ ತಂದೆಯ ಮುಖವನ್ನು ನೋಡಿಯೇ. ಏನಾಗಿರಬಹುದೆಂದು ಊಹಿಸಿದಳು ಪ್ರಶ್ನಿಸಲಿಲ್ಲ...

○ ○ ○

ತಂದೆ ಹಾಗೂ ದೊಡ್ಡಪ್ಪನೊಂದಿಗೆ ದತ್ತನೂ ಹಿಂತಿರುಗಿದ್ದ. ಸೀದಾ ಮನೆಗೆ ಹೋಗಿ ಸ್ನಾನ ಮಾಡಿ, ರಾಮರಾಯರ ಮನೆಗೆ ಬಂದ. ರಾತ್ರಿ ಸಾಕಷ್ಟು ಸಮಯವಾಗಿದ್ದುದರಿಂದ ಚಿಕ್ಕವರೆಲ್ಲ ಮಲಗಿದ್ದರು... ದತ್ತ ಒಳಗೆ ಬರದೇ ಜಗುಲಿಯ ಮೇಲೆ ಕುಳಿತ. "ಹೋಗು ಮಾತಾಡ್ಸು. ಬೇಸರದಲ್ಲಿದ್ದಾರೆ..." ರಾಮರಾಯ ಮಗಳನ್ನು ಕಳುಹಿಸಿದ. ಮಂಗಳ ಅವನ ಬಳಿಗೆ ಬಂದು ನಿಂತಳು. ದತ್ತ ಅವಳ ಕೈ ಹಿಡಿದೆಳೆದು ಅವಳನ್ನು ತನ್ನ ಮಗ್ಗುಲಲ್ಲಿ ಕೂರಿಸಿಕೊಂಡ. ಅವನು ಅಳುತ್ತಿರುವನೆಂದು ಅವಳಿಗೆ ತಿಳಿದರೂ ಹೇಗೆ ಸಮಾದಾನ ಹೇಳಬೇಕೆಂದು ಗೊತ್ತಾಗಲಿಲ್ಲ... ಸ್ವಲ್ಪ ಹೃದಯ ಹಗುರವಾದ ಮೇಲೆ ಮಾತಾಡಿದ.

"ನನ್ನ ದಾರೀನೇ ಕಾಯ್ತಿದ್ಲಂತೆ... ಬಂದ್ರೇನು ಅಂತ ಪದೇ ಪದೇ ಕೇಳ್ತಿದ್ಲಂತೆ. ನರ್ಸು ನನ್ನ ಕಡಿ ಕೈ ಮಾಡಿ ತೋರಿದಳು... ಆಕಿ ಮುಖ ನಂಗೆ ಸರಿಯಾಗಿ ಕಾಣ್ಲೇ ಇಲ್ಲ... ನಾನು ಅಲ್ಲೇ ನಿಂತಿದ್ದೆ. ಸ್ವಲ್ಪದರಲ್ಲೇ ಆಕಿಯ ಉಸಿರಾಟದ ವೇಗ ಹೆಚ್ಚಾಯ್ತು... ಆಕ್ಸಿಜನ್ ಮಾಸ್ಕ್ ಇಟ್ಟರು. ಇಂಜೆಕ್ಷನ್ ಕೊಟ್ಟರು... ನಾ ಅಲ್ಲೇ ನಿಂತಿದ್ದೆ. ಯಾವಾಗ ಆಕಿಯ ಪ್ರಾಣ ಹೋಯ್ತೋ ನಂಗೆ ತಿಳೀಲೇ ಇಲ್ಲ. ಮತ್ತೆ ಬಿಕ್ಕಿದ. ನಾ ಒಂಟಿಯಾಗಿ ಇರಬಾರ್ದು ಅಂತ ನಂಗ ಲಗ್ನ ಮಾಡಿಸಿದ್ಲು. ತಾನು

ಒಂಟಿಯಾಗಿ ಹೊಂಟೇ ಹೋದ್ಲು... ಆಕಿಗೆ ಸಾಯೋ ವಯಸ್ಸಾಗಿತ್ತಾ ನೀವೇ ಹೇಳಿ ಮಂಗಳಾ....?" ಅವಳ ಕೈ ಹಿಡಿದುಕೊಂಡ ಅವಳು ಅಂಜಿದಳು.

ಅಪ್ಪನೂ, ಕಾಕಾನೂ ಬರೋ ವ್ಯಾಳೆಗೆ ಎಲ್ಲಾ ಮುಗಿಸಿಬಿಟ್ಟಿದ್ರು... ಆಕಿ ಟಿ.ಬಿ. ಪೇಶಂಟ್ ಆಗಿದ್ದರಿಂದ ಯಾರ್ರೂ ಕಾಯೂ ಹಂಗಿರ್ಲಿಲ್ಲ... ಮೈತುಂಬಾ ಬಿಳಿ ಬಟ್ಟೆ ಬಿಗಿದು ಬಿಟ್ಟಿದ್ರು... ನಂಗ ಆಕಿ ಕಡಿ ನೋಡೂದೇ ಬ್ಯಾಡ ಅನ್ನಿಸ್ತು... ಲಗ್ನ ಆದಾಗ ರಾಧಾ ಹೀಂಗಿರ್ಲಿಲ್ಲ ಮಂಗಳಾ... ಎರಡೂವರೆ ವರ್ಷದೊಳ್ಗ ಹೀಂಗಾಗ್ಬಿಟ್ಲು. ದೇವರು ಆಕಿಗ ಹೀಗ ಅನ್ಯಾಯ ಮಾಡ್ಬಹುದಾ?... ನಾನೇನು ಪಾಪ ಮಾಡಿದ್ದೆ?... ನಿಟ್ಟುಸಿರು ಬಿಟ್ಟ... ಅವಳ ಕೈ ಹಿಡಿದೇ ಇದ್ದ. ಅವಳು ಬಿಡಿಸಿಕೊಳ್ಳಲಿಲ್ಲ.

"ಊಟ ಮಾಡಿದ್ರಾ?... " ಕೇಳಿದಳು.

"ಇಲ್ಲ... ಅನ್ನ ಗಂಟಲಲ್ಲಿ ಇಳಿಯೂದಿಲ್ಲ..."

"ಉಪವಾಸ ಇದ್ದರೆ ಆಗುತ್ತಾ?.... ಏಳಿ ಊಟ ಮಾಡೋರಂತೆ ಮನೆಗೆ ಹೋಗಿ. ನಿಮ್ಮ ತಾಯಿ ಅಡಿಗೆ ಮಾಡಿರಬಹುದು..."

"ನಾನು ಅಪರಾಧಿ ಅಂತ ಅನ್ನಿಸ್ತದೆ... ನಾ ಹ್ಯಾಂಗ ಉಣ್ಣಲಿ?"

"ನೀವು ಉಪವಾಸ ಇದ್ದರೆ ಅವರ ಆತ್ಮಕ್ಕೆ ಶಾಂತಿ ಸಿಗುತ್ತಾ? ನೀವು ಅಪರಾಧಿ ಅಲ್ಲ ಅಂತ ಅವರ ಆತ್ಮಕ್ಕೆ ತಿಳಿದಿರುತ್ತೆ. ಅದು ನಿಮಗೂ ಗೊತ್ತು... "ಏಳಿ ಮನೆಗೆ ಹೋಗಿ ನಿದ್ದೆ ಮಾಡಿ... ದುಃಖ ಕಡಿಮೆ ಆಗುತ್ತೆ...."

"ನೀವೂ ಬರ್ರೀ... ನಂಗೆ ಸಮಾಧಾನ ಇರ್ತದ."

"ಸರಿ ನಡೀರಿ... ಅಪ್ಪಂಗೆ ಹೇಳಿ ಬರ್ತೀನಿ...." ಎಂದು ಹೇಳಿ ಅವನೊಂದಿಗೆ ಅವರ ಮನೆಗೆ ಬಂದಳು. ದೊಡ್ಡವರಿಬ್ಬರದ್ದೂ ಊಟ ಆಗಿತ್ತು... ಮಂಗಳಾ ತಾನೇ ಬಾಳೆಲೆಯನ್ನು ಹಾಕಿ ನೀರನ್ನಿಟ್ಟು ಬಡಿಸಿದಳು. ಮಣೆಯ ಮೇಲೆ ಕುಳಿತು ಸ್ವಲ್ಪ ತಿಂದ. ಹಸಿವು ಶಮನವಾಗಿತ್ತು. ಚೈತನ್ಯ ಬಂದಂತಾಗಿತ್ತು. ಕೈ ತೊಳೆದು ಮಲಗುವ ಮನೆಗೆ ಬಂದ... ಮಾರ್ತಾಂಡನ ಪಕ್ಕದ ಹಾಸಿಗೆಯ ಮೇಲೆ ಮಲಗಿದ. ಎಲೆ ತೆಗೆದು ಗೋಮೆ ಹಚ್ಚಿ, ಅವನಿಗೆ ಹೇಳಿ ಹೋಗಲೆಂದು ಬಂದಳು.

"ನನ್ನ ಬಳೀನೇ ಕೂತಿರ್ರಿ ಮಂಗಳಾ... ನಂಗೆ ನಿದ್ದೆ ಬಂದ್ಮೇಲೆ ಹೋಗೋರಂತೆ ಇಲ್ಲ ಎನ್ನಲಾಗದೇ ಮಂಗಳ ಅವನ ಬಳಿಯಲ್ಲಿ ಕುಳಿತಳು. ಅವಳಿಗರಿವಿಲ್ಲದೆಯೇ ಅವಳ ಕೈ ಬೆರಳುಗಳು ಅವನ ತಲೆಗೂದಲಲ್ಲಿ ಆಡಿದವು... ಸ್ವಲ್ಪ ಹೊತ್ತಿನಲ್ಲೇ ಅವನು ಗಾಢವಾದ ನಿದ್ದೆಗೆ ಇಳಿದಿದ್ದ. ಅವನಿಗೆ ಎಚ್ಚರವಾಗದಂತೆ ಎದ್ದು ತನ್ನ ಮನೆಗೆ ಬಂದು ಮಲಗಿದಳು.

ದತ್ತ ಹದಿನೈದು ದಿನಗಳ ರಜವನ್ನು ಮಂಜೂರು ಮಾಡಿಸಿಕೊಂಡಿದ್ದ. ಮಾವ ತಾನೇ ಎಲ್ಲವನ್ನೂ ಮಾಡುವುದಾಗಿ ಹೇಳಿದ್ದನಾದರೂ, ಒಂದು ದಿನದ ಮಟ್ಟಿಗೆ

ಮನೆಯವರೆಲ್ಲರೂ ಊರಿಗೆ ಹೋಗಿ ಬಂದರು. ಮಂಗಳ ಬರಲೆಂದು ಯಾರೂ ಬಯಸಲಿಲ್ಲವಾದ್ದರಿಂದ ಅವಳು ಹೋಗಲಿಲ್ಲ.

ಮನೆಗೆ ಮಗು ಮಾಣಂತಿ ಬಂದಿದ್ದುರಿಂದ ಮನೆಯ ಕೆಲಸಕ್ಕೆ ಸಮಯವೇ ಸಾಕಾಗುತ್ತಿರಲಿಲ್ಲ. ಸರೋಜನ ಗಂಡ ಹಾಗೂ ಮನೆಯವರು ಬಂದು ಮಗು ಬಾಣಂತಿಯನ್ನ ನೋಡಿಕೊಂಡು ಹೋಗಿದ್ದರು. ಈ ಎಲ್ಲಾ ಕಾರಣಗಳಿಂದಾಗಿ, ಗೌರಿ, ಗಣಪತಿಯ ಹಬ್ಬವನ್ನು ದಸರಾ ಹಬ್ಬದಲ್ಲಿ ಆಚರಿಸುವುದೆಂದು ನಿರ್ಧರಿಸಿದರು.

ದತ್ತ ಊರಿನಲ್ಲಿದ್ದಷ್ಟು ದಿನವೂ, ಮಂಗಳ ಅವನೊಂದಿಗೆ ಸ್ವಲ್ಪ ಸಮಯವನ್ನು ಕಳೆಯುತ್ತಿದ್ದಳು. ರಾತ್ರಿಯ ಹೊತ್ತು ಅಲ್ಲಿ ಉಳಿಯುತ್ತಿರಲಿಲ್ಲ. ಮಲಗಲು ತನ್ನ ಮನೆಗೇ ಬಂದು ಬಿಡುತ್ತಿದ್ದಳು.

○ ○ ○

ದಿಬ್ಬದ ಮನೆಯಲ್ಲಿ ವಾಸವಾಗಿದ್ದವರಿಗೆ ಬಾಡಿಗೆಗೆ ಬೇರೆ ಮನೆ ಸಿಕ್ಕಿರಲಿಲ್ಲ. ಗೋಪಾಲಯ್ಯನೇ ಅವರಿಗೆ ಒಂದು ಉಪಾಯವನ್ನಾ ಸೂಚಿಸಿದ. ಆದರೆ ಈ ವಿಷಯ ತನ್ನ ಹೆಂಡತಿಗೆ ತಿಳಿಯಬಾರದೆಂದು ಹೇಳಿದ ದಂಪತಿಗಳು ಲಕ್ಷ್ಮಿದೇವಮ್ಮನನ್ನು ಕಾಣಲೆಂದು ಬಂದರು "ತಿಂಗಳ ಗಡವು ಮುಗಿದ್ರೂ ನಮಗೆ ಬೇರೆ ಮನೆ ಸಿಗಲಿಲ್ಲ. ಇಲ್ಲೇ ಇರುವ ಅವಕಾಶವನ್ನು ಮಾಡಿಕೊಡಬೇಕು." ಅಂತ ಕೇಳಿಕೊಂಡರು.

"ನೀವು ಸರಿಯಾಗಿ ಹುಡುಕಿಲ್ಲ. ಬೇಫಿತ್ರಿ ಜನ...ನೀವು ಏನಮ್ಮ ಮಾತಾಡುವಾಗ ನಾಲಿಗೆ ಮಾತ್ರ ಹರಿತವಾಗಿರುತ್ತೇ.... ಈಗ ? ಈಗ್ಯಾಕೆ ಬಾಯಿ ಕಟ್ಟಿದೆ....?"

"ತಪ್ಪಾಯ್ತು ಅಂತ ಹೇಳಿದ್ನಲ್ಲ. ಮುಂದಿನ ವರ್ಷ ವರ್ಗ ಆಗುತ್ತೆ. ಅಲ್ಲಿಯವರೆಗೂ ದೊಡ್ಡ ಮನಸ್ಸು ಮಾಡಿ...."

"ಸಾಧ್ಯವಿಲ್ಲ. ನಾನು ಆಡಿದ್ಮೇಲೆ ಆಯ್ತು.....

"ಹಾಗಾದ್ರೆ ಇನ್ನೊಂದು ಉಪಕಾರ ಮಾಡಿ ಅಮ್ಮಾ... ಹೇಗೂ ಆ ಮೂಲೆ ಮನೆ ಖಾಲಿ ಇದೆಯಲ್ಲ. ಅಲ್ಲಿ ಇರುಕ್ಕೆ ಒಪ್ಪಿಗೆ ಕೊಡಿ.... ಹೇಗೂ ಬಾಡಿಗೆಗೆ ಇದೆ ಅಂತ ಬೋರ್ಡು ಹಾಕಿದೀರಿ. ಇನ್ನೂ ಯಾರು ಬಂದಿಲ್ಲ. ನಾವೇ ಅಲ್ಲಿರ್ತೀವಿ."

"ನಾನು ಯೋಚಿಸ್ಬೇಕು... ತಕ್ಷಣಕ್ಕೆ ಹೂಂ ಅನ್ನಾಕ್ಕಾಗುಲ್ಲ..."

"ಯಾವಾಗ ಹೇಳ್ತೀರಿ ... ಬೇಕಾದ್ರೆ ಸ್ವಲ್ಪ ಬಾಡಿಗೆ ಹಣ ಜಾಸ್ತಿ ಕೊಡ್ತೀವಿ."

"ಏನೂ ಬೇಡ. ಆ ಮನೆ, ಈ ಮನೆಗಿಂತ ಸ್ವಲ್ಪ ಚಿಕ್ಕದು. .. ಈಗ ಈ ಮನೆಗೆ ಎಷ್ಟು ಕೊಡ್ತೀರೋ ಅಷ್ಟನ್ನೇ ಕೊಟ್ಟರಾಯ್ತು... ನಾನು ದುರಾಸೆಯ ಹೆಂಗಸಲ್ಲ ಆದರೆ ಕಟ್ಟು ನಿಟ್ಟಿನ ಹೆಂಗಸು....."

"ಹಾಗಾದ್ರೆ ಒಪ್ಗೇನಾ?"

"ನಾನಿನ್ನು ಹೂಂ ಅಂತ ಹೇಳಿಲ್ಲ... ರಾತ್ರಿ ಬನ್ನಿ ನೋಡೋಣ "ಅವರಿಬ್ಬರೂ

ಗೋಪಾಲಯ್ಯನ ಕಡೆ ನೋಡಿದರು. ಅವನು ಸಮ್ಮತಿ ಸಿಕ್ಕಿದೆ ಎಂಬಂತೆ ಸಂಜ್ಞೆ ಮಾಡಿದ.

"ಆಯ್ತು ರಾತ್ರಿಗೆ ಬನ್ನಿ ಮಾತನಾಡೋಣ" ಎಂದು ತನ್ನ ಮಾತನ್ನು ಸೇರಿಸಿದ. ಅವರುಗಳು ಹೊರಟು ಹೋಗಿದ್ದರು. ಗೋಪಾಲಯ್ಯ ಮೌನವಾಗಿದ್ದ.

"ಅಲ್ಲಾ ಎಂಥಾ ನಾಚಿಕೆಗೆಟ್ಟ ಜನ ಅಂತೀನಿ. ಆಮನೆಯಲ್ಲದಿದ್ರೆ ಈ ಮನೆ. ಈ ವಠಾರದಲ್ಲೇ ಆಗ್ಬೇಕು! ಬಾಯಿ ಮಾತ್ರ ಜೋರು....'

"ಅಂಥಾದ್ದೇನಂದ್ಲು ಆ ಹೆಂಗಸು?....

"ಅನ್ನದೇ ಏನು ಮಾಡ್ತಾಳೆ. ತನಗೇ ಎರಡು ಮಕ್ಕಳು ಅಂತ ಧಿಮಾಕು! ಅವಳು ಏನು ಅಂದಿರಬಹುದೆಂದು ಗೋಪಾಲ ಊಹಿಸಿದ. ಮಾತನ್ನು ಬದಲಾಯಿಸಿದ."

"ಪಟ್ಟದ ಬೊಂಬೆಗಳನ್ನು ಆಚೆ ತೆಗೆದಿಡ್ತಾ!.. ಇವತ್ತೇ ಮಾರ್ಕೆಟ್ಟಿಗೆ ಹೋಗಿ ನೀನು ಹೇಳಿದ ಸಾಮಾನುಗಳನ್ನೆಲ್ಲ ತಂದು ಬಿಡ್ತೀನಿ." ಮಾತಿನ ದಿಕ್ಕನ್ನು ಬದಲಾಯಿಸಿದ.

"ಸರಿಯಾಗಿ ನೋಡ್ಬಿಟ್ಟು ತನ್ನಿ. ಮಂಗಳಂಗೆ ಹೇಳಿದೀನಿ... ನಂಗೆ ಸಹಾಯ ಮಾಡ್ತಾಳೆ. ನನಗೆ ಬರೋ ಕಲೆಗಳನ್ನು ಅವಳಿಗೆ ಹೇಳಿ ಕೊಡ್ತೀನಿ....'

"ಪರವಾಗಿಲ್ವೇ ನಿನಗೊಬ್ಬಳು ಅಚ್ಚು ಮೆಚ್ಚಿನ ಶಿಷ್ಯೆ ಸಿಕ್ಕಿದ್ಲು... ಆದರೆ ಈ ಹುಡಿಗಿಗೆ ಬಿಡುವೆಲ್ಲಿದೆ.! ಎರಡೂ ಮನೆಗಳಲ್ಲಿ ಕೆಲಸವೋ ಕೆಲಸ."

"ಕಲಿಯಬೇಕು ಅಂತಂದ್ರೆ ಬಿಡುವು ಮಾಡ್ಕೋಳ್ಳಬೇಕು... ಗಂಡನೂ ಊರಲಿಲ್ಲ. ಬಿಡುವಾಗಿದ್ದಾಗ ಅಕ್ಕನ ಮಗುವಿನ ಮುಂದೆ ಕೂತಿರೋಕೆ ಆಗುತ್ತಾ? ಅವಳಮ್ಮನೇ ನೋಡ್ಕೋತಾರೆ. ಮಧ್ಯಾಹ್ನದ ಹೊತ್ನಲ್ಲಿ ಬರ್ತೀನಿ ಅಂದಿದಾಳೆ....."

"ಸರಿಯಪ್ಪ ನೀನುಂಟು ಅವಳುಂಟು..... ಏನೇನು ಸಾಮಾನು, ಎಷ್ಟೆಷ್ಟು ಬೇಕು ಅಂತ ಪಟ್ಟಿ ಮಾಡಿಕೊಡು.... ಹಾಗಾದ್ರೆ ಈ ಸಾರಿ ಹೆಚ್ಚಿನ ಕೆಲಸ ಆಹುಡ್ಗೀದು...."

"ಏನೇ ಆದ್ರೂ ಅವಳು ಹೊರಗಿನವಳು ಬೊಂಬೆಗಳನ್ನು ಸರಿಯಾಗಿ ಜೋಡಿಸಿಡೋ ಕೆಲಸ ನಿಮ್ಮದೇ.... ಬೊಂಬೆಗಳ ಅಲಂಕಾರ ಮುಗೀತಿದ್ದಂತೆ, ಮೆಟ್ಟಿಲುಗಳನ್ನು ಮಾಡಿ ಬೊಂಬೆಗಳನ್ನು ಜೋಡಿಸುವ ಕೆಲಸ ನಿಮ್ಮದೇ ನೀವೇ ಮಾಡ್ಬೇಕು. "

"ನನಗೆ ವಯಸ್ಸಾಯ್ತು ಕಣೇ ಲಕ್ಷ್ಮಿ....."

"ಏನು ವಯಸ್ಸಾಯ್ತು! ಅಪ್ಪ ಅನ್ನಿಸ್ಕೊಳ್ಲಿ. ಅಜ್ಜ ಅನ್ನಿಸ್ಕೊಳ್ಳಿಲ್ಲ. ಈ ಮನೇಲಿ ನಾವೇ ಇಬ್ಬರೂ ಚಿಕ್ಕವರು ನನಗೂ ವಯಸ್ಸಾಗುಲ್ಲ. ನಿಮ್ಗೂ ವಯಸ್ಸಾಗುಲ್ಲ."

"ತಮಾಷೆಯಾಗಿದೆ ನಿನ್ನ ಮಾತು ಅದು ಸಾಧ್ಯವೇನೇ ? "

"ಕೈಲಾಗುವವರೆಗೆ ಮಾಡಿದ್ರಾಯ್ತು. ಮುಂದಿನ ಮಾತು ಈಗ್ಯಾಕೆ. "ಎಂದು

ಹೇಳಿದ್ದಳು ಗೋಪಾಲಯ್ಯ ಅವಳ ಉತ್ಸಾಹಕ್ಕೆ ಬೆರಗಾದ... ಇವಳಿಗೆ ಏನೂ ಅನ್ನಿಸೋದೇ ಇಲ್ವೇ...ತಾನು!ತಾನು! !ಅಷ್ಟೇ.... ಇವಳಿಗೆ ಬೇಕಿರುವಾಗ, ನಾನು ಬೇಡ ಅನ್ನಲುಂಟೆ ನನಗೆ ಆ ಅಧಿಕಾರವೇ ಇಲ್ಲ ಅಂತ ಮನದಲ್ಲೆ ಹೇಳಿಕೊಂಡು ನಕ್ಕ.

ದಸರಾ ಪ್ರಾರಂಭವಾಗುವ ಮೊದಲೇ ಬೊಂಬೆಗಳ ಅಲಂಕಾರ ಮುಗಿದಿತ್ತು ಹೊಸಹೊಸ ವೇಷ ಭೂಷಣಗಳಿಂದ ಬೊಂಬೆಗಳು ಹೊಸತನವನ್ನು ಪಡೆದುಕೊಂಡಿದ್ದವು. ಎಲ್ಲಾ ಬೊಂಬೆ ಸಾಮಾನುಗಳನ್ನು ತೆಗೆದು ಒರೆಸಿ ಎಲ್ಲೆಲ್ಲಿ ಹೇಗೆ ಹೇಗೆ ಇಡಬೇಕೆಂದು ಯೋಜನೆ ಮಾಡಿಟ್ಟುಕೊಂಡಿದ್ದರು. ತನಗೆ ಬಿಡುವಿದ್ದಾಗಲೆಲ್ಲಾ ಮಂಗಳ ಬಂದು ಸಹಾಯ ಮಾಡುತ್ತಿದ್ದಳು. "ಈ ಅತ್ತೆ ಮನೆಗೆ ಹೋಗದೇ, ಆ ಅತ್ತೆ ಮನೆಗೆ ಹೋಗಿ ಹೋಗಿ ಕುಳಿತ್ಕೊಳ್ತಾಳೆ ...ಇವರು ಏನೆಂದುಕೊಳ್ಳಲ್ಲ! "ಜಾನಕಿ ಸರೋಜಳೊಡನೆ ಹೇಳಿದ್ದಳು.

"ಅವರ ಒಪ್ಪಿಗೆಯನ್ನು ತಗೊಂಡೇ ಹೋಗ್ತಾಳಮ್ಮ. ಅವರು ಈ ವಠಾರದ ಮಾಲ್ಲೀಕರಲ್ವಾ! ಇವರು ಅವರಿಗೆ ಹೆದರ್ತಾರೆ." ಇಬ್ಬರೂ ನಕ್ಕರು.

"ದತ್ತ ನಿಂದ ಪತ್ರ ಬರೆದಿತ್ತು. ಇವಳು ಉತ್ತರ ಬರೆದ್ಲೇನೆ!ಆಗ಼್ೂ ಹಾಗೇ ಅವನಿಗೆ ಉತ್ತರ ಬರೀದೇ ಬರೀದೇ ಅವನಿಗೆ ಬೇಜಾರು ಮಾಡಿದ್ಲು. ಈಗ ಇವನಿಗೂ ಹಾಗೇ ಮಾಡ್ತಾಳಲ್ಲ. ನಿನ್ನ ತಂಗಿಗೆ ಬುದ್ಧಿ ಹೇಳು."

"ಇವಳಿಗೆ ಬಿಡುವೇ ಇಲ್ಲವಲ್ಲ. ಅತ್ತೆಯರ ಮನೆಗೆ ತಿರುಗೋದೇ ಆಗಿದೆ... ದಸರಾ ಹಬ್ಬ ಶುರುವಾಗುಕ್ಕೆ ಒಂದು ವಾರ ಬಾಕಿ ಇದೆ. ಅವರ ಮನೇಲಿ, ಒಂದೊಂದೇ ಮೆಟ್ಟಿಲನ್ನು ಜೋಡಿಸ್ತಾ ಬಂದಿದಾರಂತೆ. ಎಲ್ಲಾ ಮಾವನೇ ಮಾಡ್ತಾರಂತೆ."

"ಆತಂಗೆ ಬೇರೆ ಇನ್ನೇನು ಕೆಲಸ ? ನಾಲ್ಕೈದು ಪೆಟ್ಟಿಗೆಗಳಲ್ಲಿ ಬೊಂಬೆ ಸಾಮಾನುಗಳಿವೆ ಯಂತೆ. ದಸರಾ ಹಬ್ಬದಲ್ಲಿ ಅವುಗಳ ಪ್ರದರ್ಶನ ಮಾಡ್ತಾರಂತೆ. ಏನು ಸಂಭ್ರಮದಿಂದ ಹೇಳಿಕೊಳ್ತಾರೆ ಅಂತ. ಮನೆ ತುಂಬಾ ಮಕ್ಕಳು ಮರಿ ಇದ್ದಿದ್ರೆ ಇನ್ನೆಷ್ಟು ಸಂಭ್ರಮ ಪಡ್ತಿದ್ರೋ...."

"ಮಕ್ಕಳು ಮರಿ ಇದ್ದಿದ್ರೆ, ಒಂದನ್ನು ಇರಗೋಡಿಸುತ್ತಿರ್ಲಿಲ್ಲ. ಮುರಿದು ಹರಿದು ಹಾಳು ಮಾಡಿರುತ್ತಿದ್ದರು. ಒಪ್ಪವಾಗಿ ಇಟ್ಟುಕೊಳ್ಬೇಕೆ ಆಗ್ತಿತ್ತಾ...?"

"ಅದೂ ನಿಜವೇ.... ನಮ್ಮ ಮನೇಲಿ ಸರಸ್ವತೀ ಹಬ್ಬದಿಂದ ಬೊಂಬೆ ಇಡೋಣ. ಮಕ್ಕಳ ಪುಸ್ತಕ , ಭಾರತ ಭಾಗವತ, ರಾಮಾಯಣ ಅವೇ ಬೇಕಾದಷ್ಟಿವೆ... ಮಹಾನವಮಿ ಹೊತ್ತಿಗೆ ದತ್ತನೂ ಬರಬಹುದು ನಿನ್ನ ಗಂಡಂಗೆ ಹೆಚ್ಚಿಗೆ ರಜ ಇದ್ದರೆ ಅವರೂ ಬರಲಿ ಕಾಗದ ಬರೆದು ಹಾಕು.

"ಬಿಡುವೆಲ್ಲಿದೆಯಮ್ಮ, ಈ ಮಗುವಿನ ಕೆಲಸವೇ ಆಯಿತು... ಅವರಿಗೆ ಬೇಕಿದ್ರೆ

ಅವರೇ ಬರ್ತ್ತಾರೆ ಬಿಡು."

"ನೀವೆಲ್ಲಾ ಒಂದೇ ಜಾತಿ ಮಗು ಮಲಗಿರುವಾಗ ನಿನಗೆ ಬೇರೇನು ಕೆಲಸ! ವಿಜಯದಶಮಿಯ ದಿನ, ದಿನ ಚೆನ್ನಾಗಿರುತ್ತೆ.... ನಾಮಕರಣದ ಶಾಸ್ತ್ರ ಮಾಡಿ, ಮಗೂನ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡಿ ಬಿಟ್ಟರಾಯ್ತು.... ಹಬ್ಬಕ್ಕೆ ಹಬ್ಬವೂ ಆಯಿತು...."

"ಅಣ್ಣಂಗೆ ಬರೆಯೋಕೆ ಹೇಳಮ್ಮ. ಅವರ ಮಾತಿಗೆ ಬೆಲೆ ಇರುತ್ತೆ. ಅತ್ತೆ ಮಾವನೂ ಬರಬಹುದು."

"ಎಲ್ಲರೂ ಬರಲಿ ಅಂತ ಏನೋ ಆಸೆ.... ಆದರೆ ಜಾಗ ಸಾಲದು. ಅಲ್ಲದೇ ನನ್ನ ಕೈಯಲ್ಲಿ ಆಗಬೇಕಲ್ಲ."

"ಸಹಾಯಕ್ಕೆ ಹೊಸಾ ಬೀಗರು ಇದಾರಲ್ಲ ಹೇಗೂ ಅವರಿಗೆ ಈ ವರ್ಷ ಹಬ್ಬ ಇಲ್ಲ ಎಲ್ಲರೂ ಸೇರಿ ಒಟ್ಟಿಗೇ ಇಲ್ಲೇ ಹಬ್ಬ ಮಾಡಿದರಾಯ್ತು. ದಿಬ್ಬದ ಮನೆ ಖಾಲಿ ಇದೆಯಲ್ಲ. ಅದನ್ನು ಬಿಡಿಸಿಕೊಂಡರೆ ಆಯ್ತು.

"ಅದು ಸರಿ. ಆದರೆ ಆಕೆ ಅದಕ್ಕೂ ಬಾಡಿಗೆ ಕೇಳ್ತಾಳೆ...."

"ಕೊಟ್ಟರಾಯ್ತು....ಎಷ್ಟು ಕೇಳಿಯಾರು?... ಆಕೆ ಕೃಪಣ ಹೆಂಗಸು... ಆಸೆ ಜಾಸ್ತಿ. ಮಂಗಳನ್ನ ಕರೆದೂ ಕರೆದು ಬಿಟ್ಟೀ ಕೆಲಸ ತೆಗೆಸ್ಕೊಳ್ತಿದಾಳೆ..... ನಾವೇನಾದ್ರೂ ಕೇಳಿದ್ರೆ ಜಗಳಕ್ಕೆ ಬರ್ತಾಳೆ..."

"ಸರಿ , ಹಾಗಾದ್ರೆ ಏನೂ ಬೇಡ ಬಿಡು. ಊರಿಗೆ ಹೋದ್ಮೇಲೇ ಅಲ್ಲೇ ನಾಮಕರಣ ಮಾಡ್ಕೊಂಡ್ರಾಯ್ತು....ನೀವುಗಳೂ ಅಲ್ಲಿಗೇ ಬನ್ನಿ

"ಮಾದಲ್ನೇ ಮೊಮ್ಮಗು ನಮಗೂ ಮಾಡಬೇಕೊಂತ ಆಸೆ... ನೋಡೋಣ ಹೇಗೊ ಆಗುತ್ತೇ...ಮಗು ಏಳುಕ್ಕೆ ಮೊದಲು ನಿನ್ನ ಗಂಡನಿಗೆ ಕಾಗ್ದ ಬರಿ" ಎಂದು ಆದೇಶ ವಿತ್ತಳು.....

ಸೀರೆಯ ಸೆರಗಿನಿಂದ ಮುಖಧ ಬೆವರನ್ನು ಒರೆಸಿಕೊಳ್ಳುತ್ತಾ ಮಂಗಳ ಒಳಗೆ ಬಂದಳು.'ಮುಗೀತೇನೇ ನಿನ್ನ ಅತ್ತೇ ಮನೆಯ ಚಾಕರಿ!" ಸರೋಜ ತಂಗಿಯನ್ನು ಚುಡಾಯಿಸಿದಳು.

"ಯಾಕೆ ನಿನಗೆ ಹೊಟ್ಟೆ ಉರಿದು ಹೋಗ್ತಿದೆಯಾ! ನಾನು ಮಗೂನ ನೋಡ್ಕೋತೀನಿ. ನೀನೇ ಹೊಗಿ ಸಹಾಯ ಮಾಡು. ಅತ್ತೆ ಎಂತೆಂಥ ಕಸೂತಿ ಬಟ್ಟೆಗಳನ್ನು ಇಟ್ಟುಕೊಂಡಿದ್ದಾರೆ ಗೊತ್ತಾ! ಕ್ರೋಷಾದಲ್ಲಿ ಏನೇನು ಹಾಕಿದಾರೆ ಗೊತ್ತಾ? ಒಂದಕ್ಕಿಂತ ಒಂದು ಚೆನ್ನಾಗಿದೆ. ನನಗೂ ಹೇಳಿಕೊಡ್ತಾರಂತೆ ಎಲ್ಲಾ ಅವರೇ ಹಾಕಿದ್ದಂತೆ...."

"ದಾರಕ್ಕೆ, ಬಟ್ಟೆಗೆ, ಎಷ್ಟು ಖರ್ಚಾಯಿತು ಅಂತ ಹೇಳಲಿಲ್ವಾ! "

"ಅದನ್ನೆಲ್ಲ ಅವರ ಅಪ್ಪನೇ ಮಗಳಿಗೆ ಅಂತ ತಂದು ಕೊಡ್ತಿದ್ರಂತೆ...ಬಗೆಬಗೆಯ ಮಣ್ಣಿನ ಮಣಿಗಳು, ರಸ್ತುಗುಂಡು, ಹೊಳೆಯುವ ಕೊಳವೆಗಳು ಎಲ್ಲ ಉಪಯೋಗಿಸಿ ತೋರಣಗಳನ್ನು ಪೋಣಿಸಿದಾರೆ. .. ತುಂಬಾ ಚೆನ್ನಾಗಿದೆ... ಬೊಂಬೆಗಳೂ ಅಷ್ಟೇ... ಎಷ್ಟೊಂದು ಬಗೆ ಇದೆ ಗೊತ್ತಾ? ಅವರ ತಾತನ ಕಾಲದ ಬೊಂಬೆಗಳು ಕೂಡಾ ಚೆನ್ನಾಗಿವೆ."

"ಹಾಗೆ ಒಪ್ಪವಾಗಿ ಇಟ್ಟುಕೊಂಡಿದಾರೆ. ದೊಡ್ಡಮನೆ, ಇಡುಕ್ಕೆ ಅನುಕೂಲ ವಾಗುವಂಥ ಪೆಟ್ಟಿಗೆಗಳು ಬಟ್ಟೇಲಿ ಸುತ್ತಿ ಸುತ್ತಿ ತಗುಲಿ ಹಾಳಾಗದಂತೆ ಇಡಲು ಗೋಪಾಲಯ್ಯ... ಆತನಿಗೆ ಅದೆಂಥ ಸಹನೆಯೊ! ಆಕೆ ಜೊತೆ ಏಗ್ತಾ ಇದಾರೆ....'

"ಬಿಡಮ್ಮ ಅವರನ್ನ ಯಾಕೆ ಆಡ್ಕೋಬೇಕು... ನವರಾತ್ರೀಲಿ ದಿನಾ ದೇವಿ ಪಾರಾಯಣ ಓದ್ತಾರಂತೆ ಲಲಿತಾರ್ಚನೆ ಮಾಡ್ತಾರಂತೆ. ಹಬ್ಬದ ಅಡಿಗೆ ಮಾಡ್ತಾರಂತೆ. ಚರ್ಪಿಗೆ ತಿಂಡಿ ಮಾಡಿಡ್ತಾರಂತೆ.... ನಂಗೆ ದಿನಾ ಬರುಕ್ಕೆ ಹೇಳಿದಾರೆ.....

"ನಿನ್ನ ಸಹಾಯ ಇಲ್ಲದೇ ಅದನ್ನೆಲ್ಲ ಹೇಗೆ ಮಾಡ್ತಾರೆ...? ಅಷ್ಟು ಹೊತ್ತಿಗೆ ದತ್ತ ಏನಾದ್ರೂ ಊರಿಗೆ ಬರ್ತಾರೇನೆ.....?"

"ಗೊತ್ತಿಲ್ಲಮ್ಮ ಬಂದರೆ ಬರ್ತಾರೆ..."ದುರ್ಗಾಷ್ಟಮಿ"ಗೆ "ಮಹಾನವಮಿಗೆ" ಕನ್ನಿಕೆಯರನ್ನು ಮುತ್ತೈದೆಯರನ್ನು ಕರೆದು ಪೂಜೆ ಮಾಡಿ ಊಟ ಹಾಕಿ, ತಾಂಬೂಲ ದಕ್ಷಿಣೆ ಉಡುಗೊರೆ ಎಲ್ಲಾ ಕೊಡ್ತಾರಂತೆ."

"ನಿಜವಾಗಿಯೂ? ಆಕೆ ಇಷ್ಟೆಲ್ಲಾ ಖರ್ಚು ಮಾಡ್ತಾರೇನೆ!"

"ಯಾಕಮ್ಮ ಮಾಡಬಾರದು!ಬೇರೆ ಖರ್ಚು ಏನಿದೆ?....

ಈ ಸಾರಿ, ಜಲಜನ್ನ ಎದುರು ಮನೆ ಲಲಿತನ್ನ ಹಾಗೇ ಹೊಸದಾಗಿ ಬಂದಿದಾರಲ್ಲ ಅವರ ಮನೆಯ ಹೆಣ್ಣು ಮಕ್ಕಳನ್ನು ಕರೆದು ಲಂಗದ ಬಟ್ಟೆ ಕೊಡ್ತಾರಂತೆ.

"ಒಟ್ನಲ್ಲಿ ಜಲಜೀ ಅದೃಷ್ಟ ಖುಲಾಯಿಸ್ತು. ನನ್ನ ಮಗಳನ್ನೂ ಕಳಿಸ್ತೀನಿ. " ಮಗುವನ್ನು ಮುದ್ದಿಸುತ್ತಾ ಸರೋಜ ನುಡಿದಳು.

"ಹೂಂ ರಾಜ ಮಹಾರಾಜರ ಮನೆಗಳಲ್ಲಿ ಹೀಗೆ ವೈಭವವಾಗಿ ದಸರಾ ಹಬ್ಬವನ್ನು ಆಚರಿಸುತ್ತಾರೆ.... ವರ್ಷಕ್ಕೆ ಒಮ್ಮೆಯಾದರೂ ಹೀಗೆ ಖರ್ಚು ಮಾಡ್ತಾರಲ್ಲ, ಆದರೆ ವಿಪರೀತ ಅಹಂಕಾರ... ಈ ಸಮಯದಲ್ಲಾದರೂ, ಮಗನ್ನ ಸೊಸೇನ ಕರೆಸ್ಕೊಂಡ್ರೆ.. ಆದೀತು. ಆಕೆಗೆ ವ್ಯಾಮೋಹವೇ ಇಲ್ಲ. ಪರರ ಮನೆಯ ಹುಡುಗನ್ನ ದತ್ತು ತಗೊಂಡು ಹೀಗೆ ಅನಾದರಣೆ ಮಾಡೋದಾ! "

"ಅವನೂ ಮಾಡಿದ್ದು ತಪ್ಪೇ ಅಲ್ವೇನಮ್ಮಾ'

"ಮಾತು ಎಲ್ಲಿಂದ ಎಲ್ಲಿಗೋ ಹೋಗ್ತಿದೆ... ಕಾಫಿ ಮಾಡ್ತೀನಿ ಕುಡಿಯೋಣ...."

"ಅತ್ತೆ ಕುಡಿಯೋಕೆ ಏನು ಕೊಟ್ರೇ?"

"ನಿಂಬೆ ಹಣ್ಣಿನ ಪಾನಕ ಹುಳಿ ಲೋಚು...." ಕೆಟ್ಟ ಮುಖ ಮಾಡಿದಳು.

"ಸಕ್ಕರೇನ ಚಮಚದಲ್ಲಿ ಅದ್ದಿ ತೋರಿಸಿದ್ರು ಅಂತ ಕಾಣುತ್ತೆ" ಮೂವರು ನಕ್ಕರು.

○ ○ ○

ಸಂಭ್ರಮದ ದಸರಾ ಗೋಪಾಲಯ್ಯನ ಮನೇಲಿ ಆರಂಭಗೊಂಡಿತು. ವಠಾರದ ವರಿಗೆಲ್ಲ ಸಡಗರವೋ ಸಡಗರ. ಎಲ್ಲರ ಮನೆಯ ಮುಂದೂ ಮಾವಿನ ತೋರಣವನ್ನು ಆಕೆಯೇ ಕಟ್ಟಿಸಿದಳು. ಜೋಷಿಮನೆಯವರು ಏನನ್ನಾದರೂ ಹೇಳುವ ಮೊದಲೇ ನುಡಿದಿದ್ದಳು. ರಾಧಾಬಾಯಿ ಹೋಗಿದ್ದು ಮುತ್ತೈದೆಯಾಗಿ ಹಬ್ಬ ಮಾಡುಕ್ಕೆ ಅಡ್ಡಿ ಏನಿಲ್ಲ. ಸುಧಾಳನ್ನು ಕರೆಸಿ. ನಮ್ಮ ಮನೆಯ ವೈಭವ ಹೇಗಿರುತ್ತೆ ಅಂತ ನೋಡ್ಲಿ." ಗತ್ತಿನಿಂದ ಹೇಳಿದ್ದಳು.

"ಅವರ ಮನೇಲಿ ಮೊದಲ ವರ್ಷದ ಹಬ್ಬ ಮಾಡಿಸ್ತಾರಂತೆ. ಇಲ್ಲಿ ಬಂದು ಏನ್ಮಾಡ್ತಾಳ ನಮ್ಮ ಸಪ್ಪೆ ವ್ಯಾರಿ ನೋಡ್ಕೊಂಡು.... ಮುಂದಿನ ವರ್ಷಕ್ಕೆ ಕರೆಸೋಣಂತೆ..." ಹಿರಿಯ ವಾರಗಿತ್ತಿ ಹೇಳಿದಾಗ, ಏಕೋ ಏನೋ ಲಕ್ಷ್ಮಿ ದೇವಮ್ಮ ಸುಮ್ಮನಾದಳು.

"ನಮ್ಮ ಸೋಸೀನ ನಿಮ್ಮ ಮನೀಗೆ ಬಿಟ್ಟು ಕೊಟ್ಟೇವಲ್ಲ ಲಕ್ಷ್ಮಿ ದೇವಮ್ಮ ಆಕಿ ಸಡಗರ ಹೇಳತೀರದು..."ತುಂಗಾಬಾಯಿ ನುಡಿದಳು.

"ಎಂದೂ ನೋಡಿ ಕಂಡಿಲ್ಲ. ಅದಕ್ಕೆ ಸಂಭ್ರಮ ಒಟ್ನಲ್ಲಿ ವಠಾರಕ್ಕೆ ವಠಾರವೇ ಸಂಭ್ರಮ ಪಡ್ಬೇಕು. "ಹೆಮ್ಮೆಯಿಂದ ಹೇಳಿಕೊಂಡಳು. ಆಕೆ ಹೋದ ಮೇಲೆ ತುಂಗಾ ಬಾಯಿ ಬಾಯಿ ತೆರೆದಳು.

"ನೋಡ್ರೀ ಅಕ್ಕಾ... ನಾವೆಲ್ಲಾ ಬಡವರು... ಈಕಿ ಮಾತ್ರ ಶ್ರೀಮಂತೆ ಅನ್ನೋಥರ ಮಾತಾಡ್ತಾರ... ಮಂಗಳನ್ನ ಕಳಿಸ್ಲೇ ಬಾರ್ದಿತ್ತು ನಾವು."

"ಹೋಗ್ಲಿ ಬಿಡೇ ತುಂಗಾ... ಆಕೆ ಒಂಥರಾ ಶ್ರೀಮಂತೆ. ನಾವೊಂದು ಥರಾ ಶ್ರೀಮಂತರು. ಆಕಿಗೂ ನಾಲ್ಕು ಮಕ್ಕಳಿದ್ದಿದ್ರೆ ಶ್ರೀಮಂತಿಕೆ ಖರ್ಚಾಗ್ತಿತ್ತು. ಅಹಂಕಾರ ಒಣಗ್ತಿತ್ತು."

"ಮಗ ಟೀಚರ್‌ನ ಲಗ್ನವಾದ ಅನ್ನೋ ನೆಪ ಮಾಡಿ, ಮನೆಯಿಂದ ಆಚೇನೇ ಹಾಕಿ ಬಿಟ್ಲು ಮಹಾತಾಯಿ... ಈಗ ಮುದುಕ ಮುದುಕಿ ಕುಂತ್ಕೊಂಡು ಹಬ್ಬ ಮಾಡ್ತಾರಂತೆ...."

"ತುಂಗಾ ಆಕಿ ಇಲ್ಲೇ ಸುಳಿದಾಡ್ತಿರ್ತಾಳ ಕೇಳಿಸೀತು... ನೋಡಿದ್ಯೋ ಇಲ್ಲವೋ ದಿಬ್ಬದ ಮನೆಯೋರ್‍ಗೆ ಆದ ಫಜೀತೀನ... ನಮಗೂ ಗ್ರಹಚಾರ ಕಾದೀತು. ಈ ವಠಾರದಲ್ಲಿ ಇರೋವರ್‍ನ್ನೂ ಒಳ್ಳೆಯೋರು ಅಂತ ಅನ್ನಿಸ್ಕೊಳ್ಬೇಕು. ಮಾರ್ನೌಮಿ ಹಬ್ಬಕ್ಕೆ ದತ್ತ ವಿನಾಯಕ ಇಬ್ರೂ ಬರ್ತಾರ...ನಡೀ ಒಂದಿಷ್ಟು ತಿಂಡಿ ಮಾಡಿ ಇಡೋಣ.

"ಇಬ್ಬರೂ ಒಳಗೆ ನಡೆದರು.

ಲಕ್ಷ್ಮಿ ದೇವಮ್ಮ ಹೇಳಿದ್ದಂತೆ, ದಸರಾ ಹಬ್ಬ ಸಂಭ್ರಮದಿಂದ ಪ್ರಾರಂಭವಾಗಿತ್ತು. ವಠಾರದವರೆಲ್ಲಾ ಆಕೆಯ ಮಾತಿಗೆ ಎದುರಾಡದೆ ಸಂಭ್ರಸದಲ್ಲಿ ಪಾಲ್ಗೊಂಡರು. ಅದರಲ್ಲೇ ನೆಮ್ಮದಿಇದೆ. ಎಂದು ಎಲ್ಲರೂ ಭಾವಿಸಿದ್ದರು...ಮೂರು ನಾಲ್ಕು ದಿನಗಳ ರಜದ ಮೇಲೆ , ದತ್ತ ಹಾಗೂ ವಿನಾಯಕ ಊರಿಗೆ ಬಂದಿದ್ದರು.

"ದೂರದ ಊರ್ನಿಂದ ನಿನ್ನ ಗಂಡ ಬಂದಾನ ... ಅವನ ಎದುರಿಗೆ ಇರವ್ವಾ... ಅವಗೂ ಖುಷಿ ಆಗ್ತದ.. ಆಕಿಗೆ ಹೇಳು... ಅರ್ಥ ಆಗ್ತದ.."ಮಂಗಳ ಸಂಕೋಚ ಗೊಂಡಳು ಆದರೂ ಹೇಳಿದಳು.

"ಸಹಾಯಕ್ಕೆ ವನಜ ಹೋಗ್ತಾಳೆ ಅತ್ತೆ... ಆಕೆ ದೇವೀ ಪಾರಾಯಣ ಓದ್ತಾರೆ. ಕೇಳಿಸ್ಕೊಂಡ್ರೆ ಒಳ್ಳೇದು ಅಂತಾರೆ. ನಿಮ್ಮ ಮಗನನ್ನು ಕಳಿಸಿ. ಅವರೂ ಕೇಳಿಸ್ಕೊಳ್ಳಲಿ. ಇಬ್ಬರೂ ಮುಖ ಮುಖ  ನೋಡಿಕೊಂಡರು.

"ವೈನೀ ನಾನೂ ಬರ್ಲಾ...ನಂಗೂ ಅಗದೀ ಜಲ್ದಿ ಲಗ್ನ ಆಗ ಬೇಕಾಗಿದೆ.'

ವಿನಾಯಕ ಮಂಗಳನನ್ನೇ ನೋಡುತ್ತಾ ಕೇಳಿದ. ತನ್ನದೇ ವಯಸ್ಸಿನವನು, ಅತ್ತಿಗೆ ಅಂತ ಕರೆದಾಗ ಮುಜುಗರವುಂಟಾಗಿತ್ತು. ಸುಮ್ಮನೇ ನಕ್ಕಾಳು.

"ಹೋಗು ಆದರೆ, ಧೋತರ ಉಟ್ಟು ಬರ್ಬೇಕು... ಪ್ಯಾಂಟು ಹಾಕುವಂತಿಲ್ಲ... ಸಿಗರೇಟು ಸೇದೋರಿಗೆ ಪ್ರವೇಶವಿಲ್ಲ ಅಂತ ಅತ್ತೆ ಹೇಳಿದ್ರು....? ಮಾರ್ತಾಂಡ ಕೇಳಿದ.

"ನೀ ತೆಪ್ಪಗಿರೋ ಮಂಗ್ಯಾ... ನಾನು ವೈನಿ ಹತ್ರ ಮಾತಾಡ್ತೆ.  ನೀವು ಹೇಳ್ರಿ ವೈನೀ... ಬರೀ ಅಣ್ಣ ಒಬ್ಬ ಸಾಕೋ ಹ್ಯಾಂಗ...."

"ಸಾಕು ಮಾಡು ವಿನೂ... ಆಕಿನೇನು ಕಾಡಿಸ್ತೀಯ... ದತ್ತ, ಮಂಗಳಾ ಇಬ್ಬರೂ ಹೋಗಿ ಬರ್ಲಿ.... ನೀ ಹೋಗಿ ಆಕಿ ಹತ್ರ ಬೈಸ್ಕೊಂಡು ಬರ್ತೀಯ "ಅಷ್ಟೇ. ತುಂಗಾ ಬಾಯಿ ನುಡಿದಳು.

"ನೀವು ಹೋಗಿ ಪೂಜಿ ಮುಗಿಸ್ಕೊಂಡು ಬರ್ರೀ ಮಂಗಳಾ...ನಂಗ ಬರೊ ಮನಸ್ಸಿಲ್ಲ. ಪ್ರಸಾದ ತಂದ್ಕೊಡಿ." ದತ್ತ ಕೈ ಕಟ್ಟಿ ಹೇಳಿದ. ಮಂಗಳ ಪೆಚ್ಚಾದಳು. ಲಕ್ಷ್ಮಿ ದೇವಮ್ಮನ ಮನೆಯಲ್ಲಿ ಆ ದಿನದ ಕಲಾಪ ಸ್ವಲ್ಪ ಹೆಚ್ಚು ಸಮಯವನ್ನೇ ತೆಗೆದುಕೊಂಡಿತು. ಕನ್ನಿಕೆಯರನ್ನು, ಮುತ್ತೈದೆಯರನ್ನು, ಕೂರಿಸಿ, ಪೂಜಿಸಿ, ಆರತಿ ಎತ್ತಿ ಬಾಗಿನಗಳನ್ನು ಕೊಟ್ಟು ಸತ್ಕರಿಸಿದಳು. ಪಾನಕ ಕೋಸಂಬರಿಯ ಉಪಚಾರವೂ ಆಯಿತು. ವನಜ ಸಹಾಯಕ್ಕೆ ನಿಂತಳು. ಜಲಜ ಕನ್ನಿಕೆಯಾಗಿ ಕುಳಿತಳು. ಮಂಗಳಾ ಆಕೆಯ ಜೊತೆಗೂ ಓಡಾಡಿದಳು. ಊಟ ಮುಗಿಸಿ, ಮನೆಗೆ ವಾಪಸ್ಸಾಗುವಾಗ ಮಧ್ಯಾಹ್ನ ಎರಡು ಗಂಟೆಯಾಗಿತ್ತು. ಜೋಷಿಯ ಮನೆಗೆ ಹೋಗದೇ, ತನ್ನ ಮನೆಗೆ ಬಂದಳು. ಅಲ್ಲಿ ಮೈದುನ ಇದಾನೆ. ಅವನ ಎದುರಿಗೆ ನಿಂತಿರಲೂ ಸಂಕೋಚವಾಗುತ್ತದೆ...ಇಲ್ಲಿ

ಹಬ್ಬಕ್ಕೆ ಭಾವ ಬಂದಿದಾರೆ. ಅಕ್ಕ ಭಾವನ ಮಾತುಗಳೇ ಮುಗಿದಿಲ್ಲ. ಮೊದಲೇ ಈ ಬಗ್ಗೆ ಯೋಚಿಸಿ, ಗೋಪಾಲಯ್ಯ ನನ್ನ ಕೇಳಿ ದಿಬ್ಬದ ಮನೆಯ ಬೀಗದ ಕೈಯನ್ನು ಕೇಳಿ ಇಸಕೊಂಡಿದ್ದಳು. ಶಂಕರನ ಕೈಲಿ, ಗುಟ್ಟಾಗಿ, ದತ್ತನಿಗೆ ಆ ಮನೆಗೆ ಬರುವಂತೆ ಹೇಳಿಕಳಿಸಿದಳು.

"ಭಾವ, ಅಕ್ಕ ಕರೀತಿದಾಳೆ.... ದಿಬ್ಬದ ಮನೆಯ ಹತ್ತಿರ ನಿಮಗಾಗಿ ಕಾಯ್ತಿದಾಳೆ"

ಸಂದೇಶವನ್ನು ಕಿವಿಯಲ್ಲಿ ಉಸುರಿದ. ದತ್ತ ತಬ್ಬಿಬ್ಬುಗೊಂಡನಾದರೂ, ಮಂಗಳ ತನ್ನೊಡನೆ ಏನೋ ಹೇಳಬೇಕಾಗಿದೆಯೆಂದು ಕೊಂಡು ಶಂಕರನೊಂದಿಗೆ ಹೊರಟ. ವಿನಾಯ ಅಣ್ಣನ ಚಲನ ವಲನಗಳ ಮೇಲೆ ಗಮನವನ್ನಿಟ್ಟಿದ್ದ.

ಶಂಕರ ತನ್ನ ಮನೆಗೆ ಹೋದ. ದತ್ತ ದಿಬ್ಬದ ಮನೆಗೆ ಬಂದ. ಆಗ ಮಂಗಳನಿಗೆ ಸಂಕೋಚವೆನಿಸಿತು. ಏನೆಂದು ಕೊಂಡನೋ ಏನೋ ಅಂತಂದುಕೊಂಡಳು. "ಶಂಕರ ಬಂದು ಕರೆದನ್ರೀ...ಇಲ್ಲೇನು ಮಾಡ್ಲಿಕ್ಕೆ ಹತ್ತೀದೀರಿ... ಈ ಮನೇಲಿದ್ದೋರು ಎಲ್ಲಿ?" ಕೇಳಿದ

"ಅವರು ಈಗ ಆ ಮನೇಲಿದಾರೆ... ನೀವು ಹೇಗಿದೀರಿ ಅಂತ ಕೇಳುಕ್ಕೆ ಕರೆಸಿದೆ. ನಿಮ್ಮ ಮನೇಲಿ ನಿಮ್ಮ ಹತ್ರ ಮಾತಾಡೋಕೆ ಮುಜುಗರವಾಗುತ್ತೆ."

"ನಾ ಚಲೋ ಇದೀನ್ರೀ.. ಅವ್ವ ಹೇಳ್ತಿದ್ಲು. ನೀವು ಕಸೂತಿ, ಕ್ರೋಷಾ ಎಲ್ಲ ಕಲೀತಿದೀರಂತೆ. ಚಲೋ ಆತು... ಸಮಯ ಕಳಿಲಿಕ್ಕೆ ಏನಾದ್ರೂ ಬೇಕ್ರಿ."

"ಆ ಅತ್ತೇ ನಂಗೆ ಎಲ್ಲಾ ಕಲಿಸಿ ಕೊಡ್ತಾರಂತೆ. ಮುಂದಿನ ಸಾರಿ ಬರುವಾಗ ನಂಗೆ ಒಂದಿಷ್ಟು ಉಲ್ಲನ್ ತಂದು ಕೊಡ್ತೀರಾ ! ಅಲ್ಲಿ ಕಡಿಮೆ ಬೆಲೆಗೆ ಸಿಗುತ್ತಂತೆ ಹಾಗಂತ ಅತ್ತೆ ಹೇಳಿದ್ರು ಇಲ್ಲಿ ಎಲ್ಲಾದಕ್ಕೂ ಬೆಲೆ ಜಾಸ್ತಿ.'

"ನಾ ರೊಕ್ಕ ಕೊಡ್ತೀನಿ.... ಇಲ್ಲೇ ತಗೊಂಡು ಕಲೀರಿ.... ಬಜಾರ್‌ನಲ್ಲಿ ಎಲ್ಲಾ ಸಿಗುತ್ತೆ. ನಾ ಬರೋದು ಇನ್ನು ತಡ ಆಗತ್ಯೇತ್ರಿ..."

" ಪರವಾಗಿಲ್ಲ ನಾನು ಅಪ್ಪನ ಹತ್ರ ದುಡ್ಡು ಇಸ್ಕೋತೀನಿ "ಹಾಗೆ ಹೇಳುವಾಗ ಅವಳ ಧ್ವನಿ ಇಳಿದಿತ್ತು ಎನ್ನುವುದನ್ನು ಗಮನಿಸಿದ.

ಇರ್ಲೀ ತಗೊಳ್ರೀ...ಇನ್ಮುಂದೆ ಎಲ್ಲಾದಕ್ಕೂ ನಿಮ್ಮ ತಂದೀನ ರೊಕ್ಕ ಕೇಳೋದು ಚಲೋ ಅಲ್ಲ... ನಿಮಗೆ ಸಂಕೋಚ ಬೇಡ್ರೀ...ನಾನು ಮತ್ತೆ ಕಳಿಸ್ತೀನಿ... ತಗೊಳ್ಳಿ ಎನ್ನುತ್ತಾ ಅವಳ ಕೈ ಹಿಡಿದು, ಹಣವನ್ನು ಅಂಗೈಗೆ ತುರುಕಿದ.

"ನಿಮಗೆ ಖರ್ಚು ಜಾಸ್ತಿ ಅನಿಸಿದ್ರೆ ಹೇಳ್ಬಿಡಿ. ನಾನು ಏನೂ ತಗಳ್ಳೋದಿಲ್ಲ."

"ಇಲ್ರೀ... ಹಂಗೇ ನಿಲ್ರೀ...ನಿಮಗೆ ಬೇಕಾದಾಗ ಕೇಳ್ರೀ..." ಕೈಯನ್ನು ವಿಶ್ವಾಸ ದಿಂದ ಅದುಮಿದಾಗ ಅವಳಿಗೆ ಅವನ ಬಗ್ಗೆ ಹೆಮ್ಮೆ ..ಎನಿಸಿತ್ತು.

"ನೀವು ಭಾಳ ಒಳ್ಳೆಯವರಿದ್ದೀರಿ"ಎಂದಳು ನಗುತ್ತಾ. ಅವನೂ ಮನಸಾರೆ ನಕ್ಕ.

"ಓ.. ನೀವೂ ನಮ್ಮ ಭಾಷ್ಯಾಗ ಮಾತಾಡಕ್ಕ ಹತ್ತೀರಲ್ಲೀ..." ಎಂದು ಹೇಳಿ ಅವಳನ್ನು ತನ್ನ ಭುಜಕ್ಕೆ ಒರಗಿಸಕೊಂಡ. ಅವಳು ಅವನಿಂದ ಸರಿದಳು ಅವನೂ ಪೆಚ್ಚಾದ. ನಾಳೆ ವಿಜಯದಶಮಿ ಹಬ್ಬ . ಊರಲ್ಲೆಲ್ಲಾ ಉತ್ಸವ ಮೆರವಣಿಗೆ ಇರ್ತದೆ. ನೋಡಿ ಬರೋಣ. ಬರ್ತೀರೇನು, " ಆಸೆಯಿಂದ ಕೇಳಿದ. ಅವಳಿಗೆ ಇಲ್ಲ ಎನ್ನ ಲಾಗಲಿಲ್ಲ.

"ಬನ್ನಿ ಮನೆಗೆ ಹೋಗೋಣ. ನಮ್ಮ ಭಾವ ಬಂದಿದ್ದಾರೆ. ಪರಿಚಯ ಮಾಡಿಸಿಕೊಡ್ತೀನಿ. ಅಕ್ಕನ ಮಗುವನ್ನು ನೀವು ನೋಡೇ ಇಲ್ಲ." ಇಬ್ಬರೂ ಅತ್ತ ಬಂದರು. ದತ್ತನನ್ನು ತನ್ನ ಭಾವನಿಗೆ ಪರಿಚಯ ಮಾಡಿಕೊಟ್ಟಳು. ಇವನು ಕೈ ಮುಗಿದ. ಭಾವ ಸೆಲ್ಯುಟ್ ಹೊಡೆದು ನಸುನಕ್ಕ. ಮಂಗಳ ಒಳಗೆ ಹೋಗಿ ಅಕ್ಕನ ಮಗುವನ್ನು ಎತ್ತಿ ಕೊಂಡು ಬಂದು ದತ್ತನಿಗೆ ತೋರಿಸಿದಳು.

"ಭಾಳ ಚೆಲುವಿ ಇದ್ದಾಳ್ರೀ ನಿಮ್ಮ ಮಗಳು ಹೆಸರೇನಿಟ್ಟೀರ್ರಿ...."

"ನಾಮಕರಣ ಮಾಡಿಲ್ಲ... ನಮ್ಮೂರ್‍ನಲ್ಲೇ ಮಾಡೋಣ ಅಂತ ಪತ್ರ ಬರೀತೀನಿ ನೀವೂ ಬರ್ಬೇಕು"

ವಿನಂತಿಸಿಕೊಂಡ.

"ಆಯ್ತು ಸೂಟಿ ಇದ್ರೆ ಬರ್ತೀನಿ" ಅಲ್ಲಿಗೆ ಅವರಿಬ್ಬರ ಸಂಭಾಷಣೆ ಮುಗಿದಿತ್ತು.

"ವಿನೂ , ಅಣ್ಣ ವಿಲ್ಹೋದ್ನೋ ಇಲ್ಲೇ ಕುಂತಿದ್ದ" ತಾಯಿ ಕೇಳದಳು.

"ವೈನಿ ಕೂಡಾ, ಆ ದಿಬ್ಬದ ಮನಿಗೆ ಹೋಗ್ಯಾನ... ಇಬ್ರೂ ಅಲ್ಲಿದಾರ" ಕಿಸಕ್ಕನೆ ನಕ್ಕ.

"ಹೋಗಿ ಕೂಗಿ ಬಾ... ಆ ಮನೀಗ್ಯಾಕ ಹೋಗ್ಯಾರ ಇಬ್ರೂ... ಆ ಮನಿ ಸರಿ ಇಲ್ಲ ರಾಧಾ ಜ್ವರ ಬಂದು ಖಾಯಿಲೆ ಮಲಗಿದ್ದು ಆ ಮನೀಲೇ ಜಲ್ದಿ ಹೋಗು" ತುಂಗಾ ಬಾಯಿ ಅರಚಿದಳು.

"ಏನಾಗ್ತದವ್ವ... ಖಾಸಾ ಮಾತಾಡ್ಲಿಕ್ಕ ಇಬ್ರೂ ಹೋಗ್ಯಾರ ..ನಮ್ಮನೀಲಿ ಬೇರೆ ಕೋಣೆ ಇಲ್ಲ. ವೈನಿ ಮನೇಲಿ ಜಾಗವೇ ಇಲ್ಲ..." ತಮಾಷೆ ಮಾಡಿ ನಕ್ಕ.

"ಮಾತು ಬೇಡ, ನಾ ಕರೆದೇನಿ ಅಂತ ಈಗ್ಲೇ ಹೇಳು..." ಆಕೆ ಅವಸರಿಸಿದಳು ಅವನು ಎದ್ದು ಮುಂಬಾಗಿಲಿಗೆ ಬಂದ.

"ಆಗಾ ನೋಡು ನೀ ಕಿರುಚಿದ್ದು ಆ ಮನೀ ತಂಕ ಹೋಗದೆ. ಇಬ್ರೂ ಹೆದ್ರಿ ಬಂದೇ ಬಿಟ್ರು.."

ತುಂಗಾಬಾಯಿ ಮುಂಬಾಗಿಲಿಗೆ ಬಂದಳು. ದತ್ತ ಮಂಗಳ ಒಂದಾಗಿ ಮನೆ ಬಾಗಿಲಿಗೆ ಬರುವವರರೆಗೆ ಕಾದಳು.

"ದತ್ತಾ... ಏನಾಗದ ನಿಂಗ? ಆ ಮನಿ ಲಕ್ಷಣ ಸರಿ ಇಲ್ಲ. ಅಲ್ಯಾಕೆ ಹೋಗಿದ್ರಿ.

ಇಬ್ರೂ ಇಲ್ಲೇ ನಿಲ್ರೀ.. ಕೆನ್ನೀರು ನೀವಾಳಿಸಿ ಚೆಲ್ತೀನಿ. " ದತ್ತ ಬೆರಗಾಗಿ ತಮ್ಮನ ಕಡೆ ನೋಡಿದ. ಮಂಗಳ ತಲೆ ಬಾಗಿಸಿದಳು.

"ಆ ಮನೀಲಿ ದೆವ್ವದ ಕಾಟ ಇದಾರೆ ಅಂತಾರಲ್ಲೋ ಅಣ್ಣ... ಅದಕ್ಕೆ ಅವ್ವ ಹೆದರ್‍ಯಾಳ... ಆಕಿ ಹೇಳೊವರ್ರೂ ನೀ ಒಳಗೆ ಬರೋ ಹಂಗಿಲ್ಲ ಅಲ್ಲೇ ನಿಲ್ಲು.

"ಏ ಹಂಗೇನಿಲ್ಲ. ನಾ ಅವ್ವಗ ಹೇಳ್ತೀವಿ..." ಎಂದು ಎರಡು ಹೆಜ್ಜೆ ಇಡು ವಷ್ಟರಲ್ಲಿ ತುಂಗಾಬಾಯಿ ಓಕುಳಿನೀರು ಮಾಡಿ ತಂದಿದ್ದಳು.

"ಹೂಂ ಇಬ್ರೂ ಒಟ್ಟಿಗೆ ನಿಲ್ರೀ..."ಎಂದು ಹೇಳಿ ಇಬ್ಬರನ್ನು ಅಕ್ಕ ಪಕ್ಕ ನಿಲ್ಲಿಸಿ, ಪಿಟಿ ಪಿಟಿ ಏನನ್ನೋ ಗೊಣಗುತ್ತಾ, ಎಡಗೈಯಲ್ಲಿ ಓಕುಳಿಯ ಚೊಂಬನ್ನು ಹಿಡಿದು. ಮೂರು ಸುತ್ತು ಪಾದದಿಂದ ತಲೆವರೆಗೆ ಬಲಕ್ಕೆ ನೀವಾಳಿಸಿ, ಓಡಾಡುವ ದಾರಿಯಲ್ಲಿ ಚೆಲ್ಲಿದಳು. ಇಬ್ಬರ ಕೆನ್ನೆಗಳನ್ನು ಬೆರಳುಗಳಿಂದ ಮುಟ್ಟಿ, ನೆಟ್ಟಿಗೆ ಮುರಿದಳು.

"ಅವ್ವಾ ಇದೇನು ಮಾಡ್ಲಿಕ್ಕೆ ಹತ್ತಿದೀ ಮಂದಿ ನಗೂದಿಲ್ಲೇನು ? ಕೇಳಿದ

"ನಗೂರ ಹಲ್ಲು ಕಾಣ್ತದ ಸುಮ್ನೆ ಒಳಗ್ಬನ್ನಿ... ನಿಮ್ಮಿಬ್ರಿಗೂ ಏನಾರ ಹೆಚ್ಚು ಕಡಿಮೆ ಆದರ ಏನ್ಮಾಡೋದು! ತನ್ನ ಆತಂಕವನ್ನು ವ್ಯಕ್ತ ಪಡಿಸಿದಳು. ವಿನಾಯಕ, ಮಂಗಳನ ಕೆಂಪಾದ ಮುಖವನ್ನು ನೋಡುತ್ತಿದ್ದ ದತ್ತ ಎಚ್ಚರಗೊಂಡ.

"ಏ ಹಾದಿ ಬಿಡೋ ಮಂಗ್ಯಾ... ಎನ್ನುತ್ತಾ ಅವನನ್ನು ಪಕ್ಕಕ್ಕೆ ಸರಿಸಿ ಮಂಗಳೆಯ ಕೈ ಹಿಡಿದು ಒಳಕ್ಕೆ ಎಳೆದುಕೊಂಡು ಹೋದ. ನಮ್ಮಿಬ್ರಿಗೂ ಕುಡೀಲಿಕ್ಕ ಚಾ ಮಾಡ್ಕೊಡು 'ಬಾಯಾರಿದ' ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಹೇಳಿದ.

"ಏನಪ್ಪಾ ಅಷ್ಟು ಮಾತಾಡಿದ್ರೇನತ್ರಾ"ವಿನಾಯಕ ಕೆಣಕಿದ.

"ನೀ ಸುಮ್ಗಿರು "ತಮ್ಮನ ಮೇಲೆ ಗದರಿದ.

"ಯಾಕಪ್ಪಾ ಕೋಪ. ನಾ ಏನಂದಿ ?.. ತಮಾಷಿ ಮಾಡ್ದಿ ... ವೈನೀ ನಿಮಗೂ ಬೇಸರ ಆಗಿದ್ರೆ ಮಾಫಿ ಮಾಡ್ರೀ "ಎಂದು ಕಿವಿಯನ್ನು ಮುಟ್ಟಿಕೊಂಡು ಹೇಳಿ ಅಲ್ಲಿ ನಿಲ್ಲದೇ ಆಚೆಗೆ ಹೋಗಿ ನಿಂತ ಮಂಗಳ ಹಾಯಾಗಿ ಉಸಿರಾಡಿದಳು.

ದಸರಾ ಮುಗಿದಿತ್ತು. ದತ್ತ ವಿನಾಯಕ ವಾಪಸ್ಸು ಹೊರಟು ಹೋಗಿದ್ದರು. ಗೋಪಾಲಯ್ಯ ಬೊಂಬೆಗಳನ್ನು ನಿಧಾನವಾಗಿ ಇಳಿಸಿ, ಎಚ್ಚರಿಕೆಯಿಂದ ಹಳೇ ಬಟ್ಟೆಗಳಲ್ಲಿ ಸುತ್ತಿ, ಪೆಟ್ಟಿಗೆಗಳನ್ನು ಜೋಡಿಸಿಟ್ಟ. ಅದೇ ಮೂರು ನಾಲ್ಕು ದಿನಗಳ ಕೆಲಸವಾಗಿತ್ತು. ಮೆಟ್ಟಿಲುಗಳನ್ನು ತೆಗೆದು, ಬಟ್ಟೆಗಳನ್ನು ಒಗೆದು ಬಿಸಿಲಿಗೆ ಹಾಕಿ ಒಣಗಿಸಿ, ಇಸ್ತ್ರಿ ಮಾಡಿ ಪೆಟ್ಟಿಗೆಗಳಲ್ಲಿಟ್ಟ. ಮಂಗಳಾ ಹಾಗೂ ವನಜ ಸಹಾಯಕ್ಕೆ ಬಂದಿದ್ದರು.

"ಇನ್ನೂ ಸಾಕಾಗ್ಲಿಲ್ವಾ ನಿಂಗೆ ಈ ಓಡಾಟ.... ಮುಗೀತೋ ಇಲ್ವೋ? ಈ ವನಜ, ಮನೇಲಿ ಒಂದು ಹುಲ್ಲು ಕಡ್ಡೀನ ಅತ್ತ ತೆಗೆದು ಇತ್ತ ಇಡುಲ್ಲ... ಅತ್ತೆ

ಮನೆಗೆ ಓಡಿ ಹೋಗ್ತಾಳೆ. ಓದು ಬರಹ ಏನೂ ಇಲ್ವಾ?...."

"ದಸರಾ ರಜ ಮುಗೀಲಿ... ಅವರು ಕರೆದ್ರೂ ನಾನು ಹೋಗುಲ್ಲ..."

"ಜಲಜಂಗೇನೋ ಲಂಗದ ಬಟ್ಟೆ ಸಿಕ್ತು. ನಿಂಗೆ ಓಡಾಡಿದ್ದಕ್ಕೆ ಏನು ಸಿಕ್ಕು?.... ಮಂಗಳಂಗೇನೋ ಮುತ್ತೈದೆ ಅಂತ ರವಿಕೆ ಖಣ ಕೊಟ್ಟಿದ್ದಾರೆ..."

"ನಂಗೆ ಎಲೆ ಅಡಿಕೆ ಜೊತೆ ಒಂದು ರೂಪಾಯಿಯ ನಾಣ್ಯ ಕೊಟ್ಟಿದ್ದಾರೆ. ಫಳ ಫಳ ಅಂತ ಹೊಳೀತಿದೆ... ಗೊತ್ತಾ?"

"ಒಂದು ರೂಪಾಯೀನಾ? ಅದನ್ನೇನು ಮಾಡ್ತೀ?"

"ಬಳೇನೋ, ಸರಾನೋ ತಗೋ ಅಂತ ಹೇಳಿದಾರೆ.... ನಾನು ಹಾಗೇ ಇಟ್ಕೊಂಡಿರ್ತೀನಿ. ಖರ್ಚು ಮಾಡುಲ್ಲ..."

" ಅತ್ತೆ ಕೊಟ್ಟ ಹಣ ಇಸ್ಕೊಂಡೆ. ಅವರ ಬುದ್ಧೀನೇ ಬಂದು ಬಿಡ್ತಾ ನಿನಗೆ."

"ಹಾಗದ್ರೆ ಎಲ್ರಿಗೂ ಅದೇ ಬುದ್ಧಿ ಬರ್ಬೇಕು ಅಲ್ವಾ?... ಬರಲಿ. ತಪ್ಪೇನಿದೆ?

"ಸರಿ... ಸರಿ... ಈ ವಠಾರದಲ್ಲಿರೋರೆಲ್ಲಾ ಅವರ ಬುದ್ಧೀನೇ ಕಲಿತ್ರೆ ಮುಗೀತು ಕತೆ.... ಮಂಗಳಾ, ಇವತ್ತು ನಿಮ್ಮ ಈ ಅತ್ತೆ ಮನೆಗೆ ಹೋಗ್ಲೇ ಇಲ್ವೇನೆ?....

"ಹೋದ್ರೆ ಬಿಡೋದೇ ಇಲ್ಲ. ಕೂತ್ಕೋ ಕೂತ್ಕೋ ಅಂತ ಬಲವಂತ ಮಾಡ್ತಾರೆ. ಅಲ್ಲಿ ಅವರೆದುರು ಕೂತು ಏನ್ಮಾಡ್ಲೀ....?' ಚಾ ಕುಡಿ ಅಂತ ಬಲವಂತ ಮಾಡ್ತಾರೆ...

"ಅಲ್ವಾ ಮತ್ತೆ...? ದತ್ತನಾದ್ರೂ ಇದ್ದಿದ್ರೆ, ಕೂತಿರಬಹುದಾಗಿತ್ತು... ಇನ್ಮೇಲೆ ಚಹಾನ ಅಭ್ಯಾಸ ಮಾಡ್ಕೋ. ಇಲ್ದಿದ್ರೆ ಅವರಿಗೆ ಬೇಸರ ಆಗುತ್ತೆ...

"ನನಗೆ ಚಹಾ ಸೇರುಲ್ಲ ಅಂತ ಅವರಿಗೆ ಗೊತ್ತು. ಅವರಿದ್ರೆ ಬಲವಂತ ಮಾಡುಲ್ಲ. ತಿಂಡಿ ಅಡಿಗೇನೂ ಅಷ್ಟೇ.... ಅದೇನೋ ರುಚಿ... ಸೇರೋದೇ ಇಲ್ಲ." ಮುಖ ಸಿಂಡರಿಸಿದಳು. ಉಳಿದವರು ನಕ್ಕರು.

"ಮತ್ತೇನೇ ಗತಿ? ತಿಂದು ಕುಡೀದೇ ಇರೋಕಾಗುತ್ತಾ? ಕೃಶವಾಗಿ ಹೋಗ್ತೀಯ."

"ಥೂ ಬಿಡ್ತು ಅನ್ನು... ರಾಧಾ ದಿನದಿನಕ್ಕೂ ಕೃಶವಾದದ್ದನ್ನ ನೆನೆಸ್ಕೊಂಡ್ರೆ... ವ್ಯಥೆ ಆಗುತ್ತೆ... ಎದುರಿಗೇ ಮನೆ ಇದೆ. ಬರ್ಲಿ ಏನು ಬೇಕೋ ಅದನ್ನು ತಿನ್ನಲಿ..." ಕ್ರಮೇಣ ಎಲ್ಲಾ ಸರಿ ಹೋಗುತ್ತೆ..." ತಾಯಿ ನುಡಿದಾಗ ಅಕ್ಕತಂಗಿಯರು ಮುಖ ಮುಖ ನೋಡಿಕೊಂಡು ನಕ್ಕರು.



ಗೋಪಾಲಯ್ಯ ದಸರಾ ಸಂಭ್ರಮವನ್ನು ಚಂದ್ರುಗೆ ವಿವರವಾಗಿ ಬರೆದು ತಿಳಿಸಿದ. ನಿನ್ನ ನೆನಪು ತುಂಬಾ ಕಾಡಿಸಿತು. ಚಂದ್ರೂ,.... ನೀವಿಬ್ಬರೂ ಬಂದಿದ್ದರೆ ತುಂಬಾ

ಚೆನ್ನಾಗಿರ್ತಿತ್ತು... ಆದರೆ ನಿಂಗೇ ಗೊತ್ತಲ್ಲ. ಕರೆಯುವ ಧೈರ್ಯ ನನಗಿರ್ಲಿಲ್ಲ... ಬರುವ ಮನಸ್ಸು ನಿನಗಿಲ್ಲ. ನಂಗೊತ್ತು."

ಹಾಗೇನಿಲ್ಲಪ್ಪಾ.... ನನಗೂ ನಿಮ್ಮ ನೆನಪು ಬರುತ್ತೆ. ಆ ಮನೆಯಲ್ಲಿ ನನಗೆ ನಿಮ್ಮದೇ ಬೆಂಬಲ ಇದ್ದುದು. ಆದರೆ ನಿಮ್ಮ ಸ್ಥಿತಿಯೂ ನನಗೆ ಅರ್ಥವಾಗುತ್ತೆ. ದೀಪಾವಳಿ ಹಬ್ಬಕ್ಕೆ ನೀವೇ ಬಂದು ಬಿಡಿ. ಅಮ್ಮ ಬರೋದಾದ್ರೆ ಅವರನ್ನು ಕರ್ಕೊಂಡ್ಬನ್ನಿ" ಚಂದ್ರು ಮರುತ್ತರ ಬರೆದಿದ್ದ. ಗೋಪಾಲಯ್ಯ ಪತ್ರ ವ್ಯವಹಾರದ ಬಗ್ಗೆ ಹೆಂಡತಿಗೆ ತಿಳಿಸಿರಲಿಲ್ಲ.

"ಹಾಗೇ ದತ್ತ ಹಾಗೂ ಮಂಗಳಾ ಮದುವೆ ನೆರವೇರಿದ್ದರ ಬಗ್ಗೆ ತಿಳಿಸಿದ್ದ. ಮಂಗಳ ನಿನ್ನ ಅಮ್ಮನಿಗೆ ಈಗ ಅಚ್ಚು ಮೆಚ್ಚಿನವಳಾಗಿದ್ದಾಳೆ. ದಸರಾ ಹಬ್ಬದಲ್ಲಿ ಬಂದು ತುಂಬಾ ಸಹಾಯ ಮಾಡಿದಳು." ಎಂದು ಹೊಗಳಿ ಬರೆದಿದ್ದ.

ಚಂದ್ರು ಪಂಕಜಂಗೆ, ಪತ್ರವನ್ನು ತೋರಿಸಿದ.... ಪಾಪ.... ಮಂಗಳಂಗೆ ಹೀಗೆ ಆಗಬಾರದಾಗಿತ್ತು. ಗೊತ್ತಾಗಿದ್ದ ಮದುವೆ ನಿಂತು ಹೋಯ್ತು... ಬಹುಶಃ ಅದೇ ಬೇಸರದಿಂದ ಈ ಮದುವೆಗೆ ಒಪ್ಪಿಕೊಂಡಿರಬಹುದು. ಮಂಗಳ ದುಡುಕಿ ಬಿಟ್ಟ ಳೇನೋ." ಎಂದ.

"ನನ್ನ ಮಾತಿಗೆ ಒಪ್ಪಿಕೊಂಡಿದ್ದರೆ, ಈ ದಿನ ಮಂಗಳ ನಿಮ್ಮ ಪತ್ನಿ ಆಗಿರು ತ್ತಿದ್ದಳು. ಅವಳೇ ಕೈಯಾರ ಈ ಸಂಬಂಧವನ್ನು ನಿರಾಕರಿಸಿದಳು... " ಪಂಕಜ, ಗಂಡನ ಕಡೆ ಓರೆ ನೋಟ ಬೀರಿದಳು.

"ಒಳ್ಳೇದೇ ಆಯ್ತು... ಇಲ್ದಿದ್ರೆ ನಂಗೆ ನೀವು ಎಲ್ಲಿ ಸಿಗ್ತಿದ್ರಿ ಟೀಚರ್?" ಎಂದು ಅವಳ ಗಲ್ಲವನ್ನು ಚಿವುಟಿದ.

"ನನ್ನಲ್ಲಿ ಅಂಥಾ ವಿಶೇಷತೆ ಏನು ಕಂಡ್ರೀ. ನಾನೆಂದೂ ಆ ರೀತಿ ವರ್ತಿಸಿರಲಿಲ್ಲ."

"ನಾವಿಬ್ರೂ ಡೀ-ಡೀ ಡಿಕ್ ಅಂತ ಡಿಕ್ಕಿ ಕೊಟ್ಟ ದಿನವೇ, ಬಹುಶಃ ಈ ವಿಶೇಷತೆಗೆ ಕಾರಣ ಇರಬಹುದು... ನಿಮಗೆ ಪೆಟ್ಟು ಮಾಡ್ದೆ ಅಂತ ಬೇಸರ ಆಯ್ತು... ಆಮೇಲೆ ಏನೇನೋ ಶುರುವಾಯ್ತು..."ನಗೆಯನ್ನು ಸೇರಿಸಿದ.

"ಆ ರಾತ್ರಿ ಏನೋ ನೆವ ಹೇಳಿ, ನಮ್ಮ ಮನೇಲಿ ಬಂದು ಮಲಗಿದ್ರಲ್ಲ, ನಿಮಗೆ ಎಷ್ಟು ಧೈರ್ಯ?.... ಸಧ್ಯ ವನಜಂಗೆ ಗೊತ್ತಾಗ್ಲಿಲ್ಲ. ನಾನು ಬದುಕಿದೆ...

"ನಿಮಗೆ ಎಷ್ಟು ಧೈರ್ಯ ? ನಾನು ಯುವಕ, ಬ್ರಹ್ಮಚಾರಿ ಅಂತ ತಿಳಿದೂ ನನ್ನನ್ನು ಮನಗೆ ಸೇರಿಸ್ಕೊಂಡ್ರೀ.... ಲಕ್ಷ್ಮೀ ದೇವಮ್ಮಂಗೆ ಏನಾದ್ರೂ ಗೊತ್ತಾಗಿದ್ದಿದ್ರೆ.... ಅವತ್ತೇ ನಮ್ಮಿಬ್ಬರ ಗ್ರಹಚಾರ ಬಿಡಿಸಿ ಬಿಡ್ತಿದ್ರು...

"ಅವರಿಗೆ ನಾನು ಒಪ್ಪಿಗೆ ಇಲ್ಲ ಅಂತ ತಿಳಿದೂ ನೀವು ನನ್ನನ್ನ ಮದುವೆಯಾದ್ರಲ್ಲ.... ಅವರಿಗೆ ಕೋಪ ಬರದೇ ಇರುತ್ತಾ?"

"ಬಂದರೆ ಬರಲಿ.... ಅಂತಲೇ ಹೀಗೆ ನಿರ್ಧಾರ ತಗೊಂಡೆ... ನಾನೇನು ಅವರ ಸ್ವಂತ ಮಗನಲ್ಲವಲ್ಲ ಹೆದರುಕ್ಕೆ?.... ಈಗ ಯಾವ ಬಂಧನವೂ ಇಲ್ಲ. ಹಾಯಾಗಿ ದೀನಿ..." ಎನ್ನುತ್ತಾ ಅವಳ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದ.

"ಈ ಪ್ರೀತಿ ಸದಾ ಹೀಗೇ ಇರುತ್ತಾ... ಒಂದು ವೇಳೆ ಅವರು ಬಂದು ಕರೆದರೆ, ನನ್ನನ್ನು ಬಿಟ್ಟು ಹೋಗಿ ಬಿಡುಲ್ಲವಲ್ಲ..." ಆತಂಕದಿಂದ ಪ್ರಶ್ನಿಸಿದಳು.

"ಖಂಡಿತಾ ಇಲ್ಲ... ಅವರು ಕರೆಯುವುದೂ ಇಲ್ಲ. ಕರೆದರೆ ನಾನು ಹೋಗೋದೂ ಇಲ್ಲ. ಆಕೆ ಹಠಮಾರಿ ಹೆಂಗಸು.... ನನಗೂ ಅಷ್ಟೇ ಹಠ ಇದೆ.... ಆದರೆ ಅಪ್ಪನ ಬಗ್ಗೆ ಕನಿಕರ ಮೂಡುತ್ತೆ... ಅವರು ಬಂದು ಇಲ್ಲಿ ನಮ್ಮ ಜೊತೆ ಇರೋದಾದ್ರೆ, ಜೀವನಪರ್ಯಂತ ನಾನು ಇಟ್ಕೊಳ್ತೀನಿ. ಆದರೆ ಅವರು ಬರುಲ್ಲ.... ಅವರು ಅಮ್ಮನಿಗೆ ಬಗ್ಗಿ ಹೋಗಿದಾರೆ... ಆಕೆಗೆ ನಿಷ್ಠೆಯಿಂದ ಇದಾರೆ.... ಅವರಿಗಾಗಿಯೇ ನಾನು ಎಲ್ಲವನ್ನು ಸಹಿಸಿಕೊಂಡು ಇದ್ದು ದು.... ಅದನ್ನೇ ಧಮ ಅಂತ ತಿಳಿದಿದಾರೆ. ಇಲ್ಲದಿದ್ದರೆ, ಎಂದೋ ದೇಶಾಂತರ ಹೊರಟು ಹೋಗ್ತಿದ್ದೆ." ಅವನ ಗಂಟಲು ಉಬ್ಬಿ ಬಂದಿತ್ತು. ಪಂಕಜ ಅವನಕಡೆ ವ್ಯಾಎಯಿಂದ ನೋಡಿದಳು.

○ ○ ○

ದತ್ತನಿಂದ ಮಂಗಳನಿಗೆ ಪತ್ರ ಬಂದಿತ್ತು. ಎರಡೆರಡು ಬಾರಿ ಓದಿಕೊಂಡಳು. ತನ್ನ ಬಡ್ತಿಗೆ ಶಿಫಾರಸ್ಸು ಸಿಕ್ಕಿದೆ. ಬೇರೆ ಕಡೆಗೆ ಪೋಸ್ಟಿಂಗ್ ಮಾಡ್ತಾರೆ. ಅಲ್ಲಿಗೆ ಹೋದರೆ, ಕುಟುಂಬದವರನ್ನು ಕರೆಸಿಕೊಳ್ಳಬಹುದು. ಮನೆ ಕೊಡ್ತಾರೆ.... ಆ ಸಮಯಕ್ಕಾಗಿ ಕಾಯುತ್ತಿದ್ದೇನೆ.... ರಾಧಾ ಇಲ್ಲ ಎನ್ನುವ ವಿಷಯ ಮಾತ್ರ ತಿಳಿಸೀದೀನಿ. ಮದುವೆಯಾಗಿರುವುದನ್ನು ತಿಳಿಸಿಲ್ಲ... ಹಾಗಾಗಿ ಮತ್ತೆ ಮದುವೆಯಾಗ್ತೀನಿ ಅನ್ನೋ ಸುದ್ಧಿಯನ್ನೂ ಈಗ ತಿಳಿಸಿದೀನಿ.... ಪೋಸ್ಟಿಂಗ್ ಆಗುವಾಗ ರಜ ಸಿಗುತ್ತೆ. ಆಗ ಮತ್ತೆ ಮದುವೆಯಾಗೋಣ... ಎಲ್ಲರಿಗೂ ತಿಳಿಸೋಣ..." ಅಂತ ಬರೆದಿದ್ದ. ಅವಳಿಗೆ ಖುಷಿಯೂ ಆಯಿತು ಆತಂಕವೂ ಆಯಿತು.

ಇದುವರೆಗೂ ಅವರ್‍ಯಾರಿಗೂ ತಿಳಿಸಿಲ್ಲ ಅಂದರೆ ಏನರ್ಥ? ಹಾಗಾದರೆ ಈ ಮದುವೆಗೆ ಬೆಲೆ ಇಲ್ಲವೆ ? ಮತ್ತೆ ಮದುವೆ ಅಂತಂದ್ರೆ ?... ಮುಹೂರ್ತ, ದಿನ, ಖರ್ಚು ವೆಚ್ಚ ಎಲ್ಲಾ ಬೀಳಬಹುದು. ಅಮ್ಮ ಏನಂತಾಳೋ ? ಅಪ್ಪ ಏನ್ಮಾಡ್ತಾರೋ... ಈಗಾಗಲೇ ಮದುವೆಯಾಗಿದೆ ಅಂದರೆ ಅವನಿಗೆ ಶಿಕ್ಷೆಯಾಗಬಹುದೇ ?.... ತಾನು ಅವನಿಗೆ ಪತ್ರ ಬರೆದರೆ ತಪ್ಪಾಗುತ್ತದೆಯೇ ?.... ಅವನು ಸಿಕ್ಕಿಬಿದ್ದರೇ.... ಅವನ ತಂದೆ ತಾಯಿಗೆ ಈ ವಿಷಯ ಗೊತ್ತಿಲ್ಲವೆ?.... ಆತಂಕದಿಂದ ಚಡಪಡಿಸಿದಳು. ಸರೋಜ ಗಮನಿಸಿದಳು.

"ಯಾಕೆ ? ಮಂಗಳಾ ಸಪ್ಪಗಾಗಿಬಿಟ್ಟೆ.... ಏನು ಬರೆದಿದಾರೆಯೇ ?...."

ಮಂಗಳಾ ಸಂಕ್ಷಿಪ್ತವಾಗಿ ತಿಳಿಸಿದಳು ಸರೋಜ ಧೈರ್ಯ ಹೇಳಿದಳು.

"ನಿನಗೆ ಅವನ ಮೇಲೆ ನಂಬಿಕೆ ಇದೆ ತಾನೆ ? ಅವನೇ ನೋಡ್ಕೋತಾನೆ... ಸುಮ್ಮನೇ ಉತ್ತರ ಬರಿ. ಹೆಚ್ಚು ಯೋಚಿಸ್ಬೇಡ... ಮತ್ತೆ ಮದುವೆ ಅಂತ ತಮಾಷೆಗೆ ಬರೆದಿರಬಹುದು. ಹೇಗೂ ಇನ್ನೊಂದು ಶಾಸ್ತ್ರ ಬಾಕಿ ಇದೆಯಲ್ಲ... ಅದೂ ಆಗ ಬೇಕಲ್ಲ." ತಂಗಿಯನ್ನು ಕೆಣಕಿದಳು. ಮಂಗಳ ಕೆಂಪಾಗಿದ್ದಳು. ಇದುವರೆಗೂ ಇಬ್ಬರೂ ಒಟ್ಟಿಗೆ ಇರುವ ಸಮಯವೇ ಒದಗಿರಲಿಲ್ಲ. ಅದಕ್ಕೆ ಸಂದರ್ಭವೂ ಸರಿಯಾಗಿರ ಲಿಲ್ಲ.... ಅಲ್ಲದೇ ಅವನೆಂದೂ ಆ ರೀತಿ ವರ್ತಿಸಿರಲಿಲ್ಲ. ಆ ಬಗ್ಗೆ ಮಾತನ್ನೂ ಆಡಿರ ಲಿಲ್ಲ...

ಅವರ ಮನೆ ಚಿಕ್ಕದು. ನಮ್ಮ ಮನೇಲಿ ಮನೆ ತುಂಬಾ ಮಕ್ಕಳು. ಒಂದು ದಿನವೂ ಒಟ್ಟಿಗೆ ಕುಳಿತಿದ್ದುದೇ ಇಲ್ಲ.... ಆಕಸ್ಮಿಕವಾಗಿ ಕೆಲವೊಮ್ಮೆ ಅವನು ಕೈ ಹಿಡಿದುದು ಉಂಟು... ಆದರೆ ಅದರಿಂದ ಯಾವ ಆಸೆಯೂ ಉದ್ಭವವಾಗಿರಲಿಲ್ಲ. ಮುಂದಿನ ಸಾರಿ ಬಂದಾಗ, ಅವನೊಂದಿಗೆ ಇರುವ ಅವಕಾಶ ಸಿಗುವಾಗ ಏನನ್ನಿಸಬಹುದು ? ಆ ಅನುಭವ ಹೇಗಿರಬಹುದು... ತಮ್ಮಿಬ್ಬರಿಗೂ ಪ್ರತ್ಯೇಕವಾಗಿ ಇರಲು ವ್ಯವಸ್ಥೆ ಯಾರು ಮಾಡ್ತಾರೆ... ಈ ಅನಿಸಿಕೆಗಳಿಂದ ರೋಮಾಂಚನಗೊಂಡಿದ್ದಳು.

"ಏ.... ಮಂಗ್ಯಾ.... ಏನು ಕನಸು ಕಾಣ್ಲಿಕ್ಕೆ ಹತ್ತೀಯೇ... ಅವ ಏನಾದ್ರೂ ಚೇಷ್ಟೆ ಮಾಡಿದ್ನೇನು?.... ಏನ್ಮಾಡಿದ್ದ ಹೇಳ್ತೀಯೇನು?" ಸರೋಜ ಆ ಧಾಟಿಯಲ್ಲಿ ಮಾತಾಡಿದಾಗ, ಮಂಗಳಾ ಕೆಂಪಾಗಿದ್ದಳು.

"ಹೋಗಕ್ಕಾ ಚುಡಾಯಿಸ್ಬೇಡ...."ಎಂದಳು.

"ನೀವಿಬ್ರೂ ದೂರ ದೂರ ಇದೀರಿ.... ನೋಡ್ತಿರಿ ಪ್ರೀತಿ ಎಷ್ಟು ಹೆಚ್ಚಾಗುತ್ತೆ ಅಂತ... ಅವನ ಪ್ರೀತಿಯಲ್ಲಿ ನೀನು ನಮ್ಮನ್ನೆಲ್ಲಾ ಮರತೇ ಬಿಡ್ತೀಯ ಅಷ್ಟೆ..."

"ಹಾಗಾದ್ರೆ ಅವರು ಇಷ್ಟು ಬೇಗ ರಾಧಾ ಬಾಯೀನ ಮರೆತು ಬಿಡ್ತಾರಾ...?"

ಮರೆಯುವ ಹಾಗೆ ನೀನು ನೋಡ್ಕೋಬೇಕು.... ನಿಮ್ಮಿಬ್ಬರ ಮಧ್ಯೆ ರಾಧಾಬಾಯಿ ನೆನಪು ಅವನಿಗಾಗಲಿ, ಚಂದ್ರನ ನೆನಪು ನಿನಗಾಗಲಿ ಬರಬಾರದು.... ಹಳೆಯದನ್ನು ಪೂರ್ಣವಾಗಿ ಮರೆತು ಹೊಸತನವನ್ನು ಮೆರೆಸಬೇಕು...."

" ಸಾದ್ಯವಾಗುತ್ತೇನೆ. ಅಕ್ಕ ನಾನು ಚಂದ್ರನ ಬಗ್ಗೆ ಅವನಿಗೆ ಏನೂ ಹೇಳಿಲ್ಲ. ಹೇಳುಕ್ಕಾಗುತ್ತಾ! ಹೇಳಿದ್ರೆ ಅವನಿಗೆ ನನ್ನ ಮೇಲೆ ನಂಬಿಕೆ ಹೊರಟು ಹೋದರೆ...!

"ನೀನು ಪವಿತ್ರವಾಗಿಯೇ ಇದೀಯ ಮಂಗಳಾ.. ನೀನು ಯಾರಿಗೂ ಹೆದರ ಬೇಕಾಗಿಲ್ಲ. ಆ ಪ್ರಕರಣವನ್ನು ನೀನು ಅವನಿಗೆ ಹೇಳಬೇಕಾಗಿಯೂ ಇಲ್ಲ. ಆ ವಿಷಯ ಅಮ್ಮಂಗೆ ಕೂಡಾ ಗೊತ್ತಿಲ್ಲ. ಅಂತ ಹೇಳ್ತೆ... ಚಂದ್ರನೇ ಇಲ್ಲವಲ್ಲ ಈಗ ...?"

"ಟೀಚರ್ ಪಂಕಜರಿಗೆ ಹೇಳಿ ಬಿಟ್ಟಿದೀನಿ ಅವರು ಚಂದ್ರುಗೆ ಹೇಳಿರ್ತಾರೆ. ಅವರು

ನನ್ನ ಬಗ್ಗೆ ಏನಂದು ಕೊಂಡಿರಬಹುದು!....ಚಂದ್ರು ದತ್ತಂಗೆ ಹೇಳಿಬಿಟ್ಟರೇ ? ಅದಕ್ಕೆ ಮೊದಲು ನಾನೇ ದತ್ತನಿಗೆ ಹೇಳಿ ಬಿಡ್ಲಾ.... ?" ಅಕ್ಕನ ಸಲಹೆಯನ್ನು ಕೇಳಿದಳು.

"ಬೇಡ ಅಂದ್ನಲ್ಲ ಯಾರ್ಗೂ ಹೇಳ್ಬೇಡ. ಈ ನೆನಪನ್ನು ಮನಸ್ಸಿಂದ ಕಿತ್ಹಾಕು ... ಇಲ್ಲಿದ್ರೆ ನೀನೂ ಸುಖವಾಗಿರುಕ್ಕೆ ಆಗುಲ್ಲ.. ಅವನೂ ಸುಖವಾಗಿರುಲ್ಲ....

"ಅತಂಕ ಆಗುತ್ತೆ ಕಣೇ ಅಕ್ಕಾ...."

"ಸರಿ ಹಾಗಾದರೆ ಪತ್ರದಲ್ಲಿ ಎಲ್ಲವನ್ನೂ ವಿವರವಾಗಿ ಬರೆದು ಬಿಡು ಮುಂದೆ ಏನಾಗುತ್ತೋ ಅದನ್ನು ಎದುರಿಸು ಆಗ ನನ್ನನ್ನ ಏನೂ ಕೇಳ್ಬೇಡ."

"ಒಂದು ವೇಳೆ ನೀನು ನನ್ನ ಜಾಗದಲ್ಲಿದ್ದಿದ್ದರೇ....'

"ನಿನ್ನ ಭಾವರಿಗೆ ಏನೂ ಹೇಳ್ತಿರಲಿಲ್ಲ... ಗಂಡಂದಿರು ಎಲ್ಲವನ್ನು ಹೆಂಡತಿಯರಿಗೆ ಹೇಳಿ ಬಿಡ್ತಾರಾ! ಅವರಲ್ಲೂ ಬೇಕೋ ಬೇಡವೋ ಅನೇಕ ರಹಸ್ಯಗಳಿರುತ್ತವೇ ಹಾಗೇ ಹೆಂಗಸರಲ್ಲೂ ರಹಸ್ಯಗಳಿದ್ದರೆ ಏನು ಮಾಡುಕ್ಕಾಗುತ್ತೆ...?"

"ಹಾಗಾದ್ರೆ ನೀನು ಯೋಚಿಸೋದೇ ಇಲ್ವಾ ? ನಿಂಗೆ ಆತಂಕವೇ ಆಗುಲ್ವಾ?"

"ಅದಕ್ಕೆಲ್ಲ ಸಮಯ ಎಲ್ಲಿದೆ..? ಅತ್ತೆ ಮಾವನ ಸೇವೆ, ಗಂಡನ ಆಸೆಯ ಪೂರೈಕೆ... ಈಗ ನೋಡು, ಈ ಚೋಟುದ್ದ ಮಗು , ಕಣ್ತುಂಬ ನಿದ್ದೆ ಮಾಡೋಕೂ ಬಿಡುವಿಲ್ಲ. ನಿದ್ದೆಯೂ ಇಲ್ಲ. ಕನಸೂ ಇಲ್ಲ... ಈಗ ಇವಳ ಸೇವೆ.... ನೀನೂ ಅಷ್ಟೇ ಬೇಗ ಬೇಗ ಮಕ್ಕಳನ್ನು ಹೆತ್ತು ಬಿಡು.... ಬೇರೆ ಆಲೋಚನೆಗಳಿಗೆ ಜಾಗವೇ ಇರುಲ್ಲ...?" ಮಂಗಳ ನಸು ನಾಚಿ ಸುಮ್ಮನಾದಳು.

ಮದುವೆಯಾಗಿ ಎರಡು ವರ್ಷ ಕಳೆದರೂ ರಾಧಾ ಬಾಯಿಗೆ ಮಕ್ಕಳಾಗಿರಲಿಲ್ಲ. ತನಗೂ ಮಕ್ಕಳಾಗದಿದ್ದರೆ....? ಈಗ ಈ ಸಂದೇಹ ಕಾಡಿತು... ಆದರೆ ಈಬಗ್ಗೆ ಹೇಗೆ ಯಾರನ್ನ ಕೇಳೋದು?.... ದತ್ತನ ನಿಕಟ ಪರಿಚಯವೇ ಇಲ್ಲ. ಅಲ್ಲದೇ ಅವನನ್ನು ಕೇಳುಕ್ಕಾಗುತ್ತಾ?

"ಬೇಡ ಅಂತ ಹೇಳಿದ್ರೂ ಅದೇನು ಯೋಚನೆ ಮಾಡ್ತೀಯಾ...? ಹೋಗು ಅತ್ತೇ ಮನೆಗೆ ಹೋಗಿ ಪಗಡೇನೋ, ಚೌಕಾ ಬಾರನೋ ಆಡು... ಕಸೂತಿ, ಕ್ರೋಷಾ ಕಲಿತ್ಕೋ ನಿಂಗೆ ಅದೇ ಸರಿ....

"ಸ್ವೆಟರ್ ಹಾಕೋದನ್ನ ಹೇಳಿಕೊಡ್ತಾರಂತೆ ಕಣೇ... ನಿನ್ನ ಮಗಳಿಗೆ ಒಂದು ಪುಟ್ಟ ಸ್ವೆಟರ್ ಕುಲಾವಿ, ಕಾಲುಚೀಲ ಎಲ್ಲವನ್ನು ಹಾಕಿ ಕೊಡ್ತೀನಿ. ಇವರು ದುಡ್ಡು ಕೊಟ್ಟಿದಾರೆ ನಾಳೇನೇ ವುಲ್ಲನ್ ತರ್ತೀವಿ... "ಅಲ್ಲಿಂದಲೂ ತರುಕ್ಕೆ ಹೇಳಿದೀನಿ."

"ಓ... ಈಗ್ಲಿಂದ ತಯಾರಿ ಅನ್ನೂ..." ಮತ್ತೇ ಚುಡಾಯಿಸಿದಳು.. ಮಂಗಳ ನಕ್ಕಳು.

"ಈ ಸಾರಿ ದಸರಾ ಹಬ್ಬ ತುಂಬಾ ಚೆನ್ನಾಗಿ ನೆರವೇರಿತು. ಯಾವ ವರ್ಷವೂ ನನಗೆ ಇಷ್ಟು ಸಮಾಧಾನವಾಗಿರಲಿಲ್ಲ" ಲಕ್ಷ್ಮಿ ದೇವಮ್ಮ ಸಂತೃಪ್ತಿಯಿಂದ ಹೇಳಿದಳು. ಗೋಪಾಲಯ್ಯ ನಂಬಿದವನಂತೆ ಅವಳ ಕಡೆ ನೋಡಿದ. ಮಂಗಳನಂತೆ ಸಹಾಯ ಮಾಡುವವರೂ ಯಾರು ಸಿಕ್ಕಿರಲಿಲ್ಲ. ನಾನೇ ಒದ್ದಾಡ್ತಿದ್ದೆ. ಮಂಗಳ ಒಳ್ಳೆಯ ಹುಡುಗಿ ಆದರೆ ? ಪಾಪ ಅವಳಿಗೆ ಅನ್ಯಾಯ ವಾಗಿ ಹೋಯ್ತು "ಲೊಚಗುಟ್ಟಿದಳು ಹೆಂಡತಿ ಯಲ್ಲಿ ಬದಲಾದ ಸ್ವಭಾವ ಇದೇನು ದೇವಿಯ ಮಹಿಮೆಯಾ? ಮಂಗಳನ ಒಲುಮೆಯೊ!"

"ಏನು ಹಾಗೇ ನೋಡ್ತೀದೀರಿ. ನನಗೂ ಒಳ್ಳೇದು ಯಾವುದು. ಕೆಟ್ಟದು ಯಾವುದು ಅಂತ ಗೊತ್ತಾಗುತ್ತೆ. ದತ್ತನೊಂದಿಗೆ ಮದುವೆ ನಡೆಯಬಾರದಾಗಿತ್ತು. ಗುಟ್ಟಾಗಿ ಯಾರಿಗೂ ತಿಳೀದಂತೆ ನೆರವೇರಿಸಿ ಬಿಟ್ಟರು. ನನಗೆ ಮೊದಲೇ ತಿಳಿದ್ದಿದ್ದರೆ, ಈ ಮದುವೇನ ಆಗ ಗೊಡಿಸುತ್ತಿರಲಿಲ್ಲ."

"ಅದಕ್ಕೇ ಹೇಳಲಿಲ್ಲ ಎಂದು ತನ್ನಾಲ್ಲೇ ಹೇಳಿಕೊಂಡ. ನಾನು ಮೊದಲೇ ಹೇಳಿದ್ದೇ. ಆಗ ಇವಳು ಒಪ್ಪಿಕೊಂಡಿದ್ದರೆ. ಚಂದ್ರು ಇವಳನ್ನೇ ಮದುವೆಯಾಗು ತ್ತಿದ್ದನೋ ಏನೋ?... ಚಂದ್ರು ಬಗ್ಗೆ ಇವಳಿಗೆ ಏನೂ ಇನ್ನಿಸೋದೇ ಇಲ್ವಾ ?" ಎಂದುಕೊಂಡ.

"ಯಾರ‍್ಯಾರ ಹಣೇಲಿ ಏನೇನು ಬರೆದಿದೆಯೋ?.. ಅದನ್ನು ಬದಲಾಯಿಸುಕ್ಕೆ ಆಗುಲ್ಲ. ಮೊದಲು ಗೊತ್ತಾಗಿದ್ದ ಮದುವೆ ನೇರವೇರಲಿಲ್ಲ... ರಹಸ್ಯವಾಗಿ ಮದುವೆ ನೆರವೇರಿತು. ಇದು ದೈವೇಚ್ಛೇ ಅಲ್ಲದೇ ಇನ್ನೇನು !"

" ನನಗೂ ಹಾಗೇ ಅನ್ನಿ,ಸುತ್ತೆ. ಈ ವಠಾರದ ಮನೆಗಳಿಗೆ ಎಷ್ಟೋ ಜನ ಬಾಡಿಗೆಗೆ ಬಂದರು, ಹೋದರು, ಇಂಥಾ ಅನುಭವ ನನಗೆ ಎಂದೂ ಆಗಿರಲಿಲ್ಲ. ಮಂಗಳಂಗೆ ಏನಾದ್ರೂ ಭಾರಿ ಉಡುಗೂರೆ ಕೊಡ್ಬೇಕು. ಅಂತ ಆಸೆ ಏನು ಕೊಡೋಣ...?

ಲಕ್ಷ್ಮಿ ದೇವಮ್ಮನಿಂದ ಗೋಪಾಲಯ್ಯ ಈ ಮಾತನ್ನೂ ನಿರೀಕ್ಷಿಸಿರಲಿಲ್ಲ. ಅದು ಅವಳ ಸ್ವಭಾವಕ್ಕೆ ತದ್ವಿರುದ್ಧವಾದದ್ದು. ಅಚ್ಚರಿಯಂದ ಬಾಯಿ ಬಿಟ್ಟ. ಅವಳು ಮತ್ತೆ ಅದೇ ಪ್ರಶ್ನೆಯನ್ನು ಕೇಳಿದಳು.

"ಏನು ಬೇಕಾದ್ರೂ ಕೊಡು ಲಕ್ಷ್ಮೀ ನಿನಗೆ ಸ್ವಾತಂತ್ರ್ಯವಿದೆ ಎಲ್ಲಾನಿಂದೇ "

"ನಮ್ಮ ಮನೆಯಲ್ಲಿ ತಲತಲಾಂತರದಿಂದ ಇರುವ, ಒಂದು ಹೆಬ್ಬೆರಳಿನ ಗಾತ್ರದ ಅಂಬೆಗಾಲಿನ ಕೃಷ್ಣನ ಬೆಳ್ಳಿಯ ವಿಗ್ರಹ ಇದೆ. ಅದನ್ನು ಮಂಗಳಂಗೆ ಕೊಟ್ಟು ಬಿಡ್ತೀವಿ. ಅವಳಿಗೊಬ್ಬ ಬಾಲಕೃಷ್ಣ ಬೇಗ ಹುಟ್ಟಾನೆ...."

" ಅದನ್ನು ಕೊಟ್ಟು ಬಿಡ್ತೀಯ ಯಾಕೆ?".....ಅಚ್ಚರಿ ಮೂಡಿತ್ತು.

"ಹೇಳಿದ್ನಲ್ಲ.....ಮಂಗಳಂಗೆ ಕೊಡಬೇಕು ಅನಿಸ್ತದೆ."

"ಅಲ್ಲ ಲಕ್ಷ್ಮೀ... ಆ ಮೇಲೆ ನಿನದೆ ವಾಪಸ್ಸು ಬೇಕು ಅಂತ ಅನ್ನಿಸಿದ್ರೆ ಕೊಡು ಅಂತ ಕೇಳುಕ್ಕೆ ಅಗುತ್ತಾ..?"

"ಕೇಳುಲ್ಲ ... ದೇವಿ ನನಗೆ ಅಪ್ಪಗೆ ಕೊಡಿಸಿದಾಳೆ."

"ಯಾವ ದೇವಿ ... " ಹೆಂಡತಿಯ ಮಾತು ವಿಚಿತ್ರವಾಗಿ ತೋರಿತ್ತು...

"ಇನ್ಯಾವ ದೇವಿ ? ನಾನು ಪೂಜೆ ಮಾಡ್ತೀನಲ್ಲ ಆ ದೇವಿ... ಈ ಸಾರಿ ದೇವಿ ಪಾರಾಯಣ ಓದಿ ಮಂಗಳ ಮಾಡಿದ ಮೇಲೆ. ನನಗೆ ಒಂದು ಕನಸು ಬಿತ್ತು. ಆ ಕನಸ್ನಲ್ಲಿ ನಾನು ಇಬ್ಬರು ಮುತ್ತೈದೆಯರಿಗೆ ತಟ್ಟೇಲಿ ಹಣ್ಣು ಹೂವುಗಳ ಜತೇಲಿ ಇನ್ನೂ ಏನನ್ನೋ ಕೊಡ್ತೀನಿ."

" ಏನನ್ನೋ ಅಂದ್ರೇ.... ಈ ಬೆಳ್ಳಿ ಕೃಷ್ಣನ್ನಾ. ಆ ಹೆಂಗಸು ಮಂಗಳಾನೇ ಅಂತ ಹೇಗೆ ಹೇಳ್ತೀಯ!"

"ಮಂಗಳಾನೆ ...ಇನ್ಯಾರು ಸಾಧ್ಯ ...?"

"ಚಂದ್ರು ಹೆಂಡತಿ ಇರಬಹುದು. ಎಂದು ಹೇಳಲು ಹಿಂಜರಿದ ಸರಿ ಹಾಗಾದ್ರೆ ಇನ್ನೊಂದು ಹೆಂಗಸು ಅಂದ್ಯಲ್ಲ ಯಾರಿರಬಹುದು.?"

"ಯಾರು ಅಂತ ಗೊತ್ತಾಗ್ಲಿಲ್ಲ. ಮತ್ತೇ ಆ ಕನಸು ಬೀಳಲೇ ಇಲ್ಲ. ಆದರೆ ನೆನೆಪಿನಲ್ಲಿ ಚೆನ್ನಾಗಿ ಉಳಿದಿದೆ. ಯಾರಿರಬಹುದು ಅಂತ ಯೋಚಿಸಿ ಯೋಚಿಸಿ ಸಾಕಕಾಯ್ತು. ಗೊತ್ತಾಗ್ಲೇ ಇಲ್ಲ. ಒಂದು ಮಂಗಳ ಇರಬಹುದು ಅಂತ ಅಂದ್ಕೊಂಡೆ."

"ನೀನು ಮಂಗಳನ ಬಗ್ಗೆ ಯೋಚಿಸ್ತೀಯ ಅದಕ್ಕೆ ಹಾಗೆನ್ನಿಸಿರಬಹುದು. ಇನ್ನೊಂದಿಷ್ಟು ದಿನ ತಡಿ. ಮತ್ತೆ ಆ ಕನಸ್ಸು ಬೀಳಬಹುದು. ಇಬ್ಬರು ಹೆಂಗಸರು ಯಾರು ಅಂತ ಗೊತ್ತಗಬಹುದ. ಅವಸರ ಪಡಬೇಡ... " ಸಲಹೆಯನ್ನಿತ್ತ.

"ಅದೂ ಸರಿ ಆ ಹೆಂಗಸು ಈ ಮಂಗಳ ಅಂತ ಅಂದ್ಕೊಂಡು ಬೆಳ್ಳಿ ಕೃಷ್ಣನನ್ನ ಕೊಟ್ಟು ಬಿಟ್ಟರೇ ... ಆಮೇಲೆ ಮತ್ತೆ ಕೇಳುಕ್ಕೆ ಆಗುತ್ತಾ ? ನಿಮಗೆ ಹೇಳಿದ್ದು ಒಳ್ಳೇ ದಾಯ್ತು ... ನಿಮಗೆ ಈ ಉಪಾಯ ಹೇಗೆ ಬಂತು....?"

"ನಿನ್ನ ಜೊತೆ ಇಷ್ಟು ವರ್ಷ ಸಂಸಾರ ಮಾಡಿದೀನಿ ಲಕ್ಷ್ಮಿ ನಿನ್ನ ಮನದ ಗೊಂದಲ ನನಗಲ್ಲದೇ ಇನ್ಯಾರಿಗೆ ಅರ್ಥವಾಗುತ್ತೇ" ನಿನ್ನ ಸ್ವಭಾವ ಏನು ಅಂತ ಗೊತ್ತು ನಂಗೆ.

"ಹಾಗಾದ್ರೆ ಏನು ಮಾಡ್ಲಿ! ಸುಮ್ಮನಿದ್ದು ಬಿಡ್ಲಾ?"

"ಸುಮ್ಮನೇಕೆ ಇರ್ತೀಯ ದಿನಕ್ಕೆ ಎರಡು ಸಾರಿ ದೇವರಿಗೆ ದೀಪ ಹಚ್ಚಿದ ಮೇಲೆ , ಆ ರಾತ್ರಿಯ ಆ ಕನಸು ಮತ್ತೆ ಬೀಳಲಿ ಅಂತ ಪ್ರಾರ್ಥನೆ ಮಾಡು. ಬಿದ್ದರೂ ಬೀಳ ಬಹುದು." ತಮಾಷೆಯಾಗಿ ಹೇಳಿದ ಅವಳು ಗಂಭೀರಳಾದಳು.

"ನಿಮಗೆ ತಮಾಷೆ .. ನೋಡ್ತಿರಿ ಒಂದಲ್ಲ ಒಂದು ರಾತ್ರಿ ಮತ್ತೆ ಅದೇ ಕನಸು ಬೀಳುತ್ತೆ. ಆ ಹೆಂಗಸರು ಯಾರು ಅಂತ ಗೊತ್ತಾಗೇ ಆಗುತ್ತೆ. ಇದು ಖಂಡಿತಾ "

" ನಿಜ ಲಕ್ಷ್ಮಿ ...ನೀನು ಪೂಜಿಸುವ ದೇವತೆ ನಿನಗೆ ಸೂಚನೆಯನ್ನು ಕೊಟ್ಟೇ ಕೊಡ್ತಾಳೆ ಆ ನಂಬಿಕೆ ನನಗಿದೆ. 'ಬೇರೇ ನನ್ನೋ ಯೋಚಿಸುತ್ತಾ ಇನ್ನೊಂದು ಅರ್ಥದಲ್ಲಿ ಹೇಳಿದ ಅವಳು ಕಣ್ಣು ಮುಚ್ಚಿ ಗಾಢವಾಗಿ ಆಲೋಚಿಸಿದಳು ಅವನು ಆಳವಾಗಿ ಅವಳನ್ನೇ ದಿಟ್ಟಿಸಿದ.

ಅಂಚೆಯವನು "ಪೋಸ್ಟ್' ಎಂದು ಕೂಗಿ, ಕಾಗದಗಳನ್ನು ವೆರಾಂಡದ ಕಿಟಿಕಿ ಯಲ್ಲಿಟ್ಟು ಹೊರಟು ಹೋಗಿದ್ದ ಗೋಪಾಲಯ್ಯ ಹೊರಗೆ ಹೋದವನು ಇನ್ನೂ ಬಂದಿರಲಿಲ್ಲ. ತುಳಸೀ ಪೂಜೆಗೆಂದು ಹೊರ ಬಂದಿದ್ದ ಲಕ್ಷ್ಮಿ ದೇವಮ್ಮ ಪೂಜೆ ಮುಗಿಸಿ ಕೊಂಡು ವಾಪಸ್ಸು ಬಂದಾಗ ಕಾಗದಗಳನ್ನು ಕಂಡಳು. ಪೂಜಾ ಸಾಮಾಗ್ರಿಗಳನ್ನು ಒಳಗೆ ಎತ್ತಿಟ್ಟು ಬಂದು ಕುತೂಹಲದಿಂದ ಕಾಗದಗಳನ್ನು ನೋಡಿದಳು. ರಾಮರಾಯರ ಹೆಸರಿಗೆ ಬಂದಿದ್ದ ಪತ್ರಗಳನ್ನು ಅಂಚೆಯವನು ಇಲ್ಲೇ ಇಟ್ಟು ಹೋಗಿದ್ದ. ಯಾರೋ ಹೊಸಬ ನಿರಬೇಕು ಎಂದು ಗೊಣಗಿಕೊಂಡು ಒಂದೊಂದನ್ನೇ ತೆಗೆದು ನೋಡಿದಳು. ಒಂದು ಮಂಗಳನಿಗೆ ಬಂದಿದ್ದ ಲಕೋಟೆ ಇತ್ತು. ಯಾರಿಂದ ಬಂದಿರಬಹುದು ಅಂತ ಕುತೂಹಲ ದಿಂದ ತಿರುಗಿಸಿ ನೋಡಿದಳು. "ಟೀಚರ್' ಎಂದು ಬರೆದಿತ್ತು. ಈ ಟೀಚರ್ ಯಾರಿರ ಬಹುದು ? ಇವಳು ಈ ಮನೆಗೆ ಬರುವ ಮೊದಲು ಕೆಲಸಕ್ಕೆ ಹೋಗುತ್ತಿ ದ್ದಳೋ ಏನೋ ತಿಳಿದುಕೊಳ್ಳಬೇಕೆಂಬ ಕುತೂಹಲ ಕುಣಿದಾಡಿತು. ಆದರೆ ಮನಸ್ಸು ಒಡಂಬಡ ಲಿಲ್ಲ... ಅವಳನ್ನೇ ಕರೆದು ಕೇಳ್ತೀನಿ. ಅವಳು ಹೇಳಲೇ ಬೇಕು. ಮುಚ್ಚಿಡುವಂಥದ್ದು ಏನಿದೆ ಎಂದುಕೊಂಡು ಹಿತ್ತಲ ಬಾಗಿಲ ಬಳಿ ನಿಂತು "ಮಗೂ ಮಗೂ 'ಎಂದು ಕರೆದಳು... 'ಅತ್ತೆ ಕರೀತಿದಾರೆ ಕಣೇ ಮಂಗಳಾ.. ಬಾಲು ಎಲ್ಲಿ?" ಸರೋಜ ಕೇಳಿದಳು.

"ಈಗ್ತಾನೇ ನೈವೇದ್ಯ, ಇಸ್ಕೊಂಡು ಬಂದ... ನಾನೂ ಹೋಗಿ ತುಳಸೀ ಪೂಜೆ ಮುಗಿಸ್ಕೊಂಡು ಬಂದೆ... ಏನಂತೆ.?" ಎಂದು ಕೊಂಡು ಆಚೆ ಬಂದಳು.

"ಸ್ವಲ್ಪ ಬಾ ಇಲ್ಲಿ 'ಸ್ವಲ್ಪ ಜೋರಾಗಿಯೇ ಕರೆದಳು. ಇವಳು ಆತ್ತ ಬಂದಳು. "ಮುಂಬಾಗಲ್ನಿಂದ ಬಾ ಹಾಗೆಲ್ಲಾ ಹಿಂಬಾಗಿಲ್ನಿಂದ ಬರ್ಬ್ಬಾದ್ದು " ಎಂದು ಗಡುಸಾಗಿ ಹೇಳಿ, ಒಳಕ್ಕೆ ಹೋಗಿದ್ದಳು. ಮಂಗಳಾ ಮುಂಬಾಗಿಲಿನಿಂದ ಒಳಕ್ಕೆ ಬಂದಳು. "

"ಪೋಸ್ಟ್ ಮ್ಯಾನ್ ನಾಲ್ಕೈದು ಕಾಗಾದಗಳನ್ನು ಕಿಟಕೀಲಿ ಇಟ್ಟು ಹೋಗಿದಾನೆ. ಯಾರದ್ದು ಅಂತ ನೋಡ್ತೀಯ? ನಮ್ಮನೇಗೆ ಬರೆಯೋರು ಯಾರಿದಾರೆ. ವಠಾರದ ಎಲ್ಲರ ಮನೆಯ ಕಾಗದಗಳನ್ನು ಇಲ್ಲಿ ಹಾಕಿರಬಹುದು ಮಂಗಳಾ ಒಂದೊಂದನ್ನೇ ತೆಗೆದು ವಿಳಾಸ ವನ್ನು ನೋಡಿದಳು... ಜೋಷಿ ಮನೆಯವರಿಗೆ ಎರಡು , ನಮ್ಮ ಮನೆಗೆ ಎರಡು, ನಿಮ್ಮ ಮನೆಗೆ ಒಂದು ಮೈಸೂರ್ನಿಂದ ಬಂದಿದೆ. "

"ನಾಣೀನೋ, ಮಾಧೂ ನೋ ಬರೆದಿರ್ಬೇಕು. ನಿಂಗೆ ದತ್ತನಿಂದ ಪತ್ರ ಬಂದಿದೆಯಾ..?"

" ಇಲ್ಲ ಅತ್ತೆ ಒಂದು ಅಪ್ಪನಿಗೆ, ಇನ್ನೊಂದು ನಂಗೆ ... ಅದ್ಯಾರೋ ಟೀಚರ್ ಅಂತ ಬರೆದಿದಾರೆ.... ಯಾರೂಂತ ಗೊತ್ತಾಗಿಲ್ಲ."

"ಒಡೆದು ಓದು... ಹಳೇ ಟೀಚರ್ ಯಾರಾದ್ರೂ ಇರಬಹುದು ನೀನು ಮುಂಚೆ ಟೀಚರ್ ಆಗಿ ಕೆಲ್ಸ ಮಾಡ್ತಿದ್ಯಾ?"

"ಇಲ್ಲಪ್ಪಾ. ನನ್ನ ಓದೇ ಮುಗಿದಿಲ್ಲ. ಕೆಲ್ಸ ಯಾರು ಕೊಡ್ತಾರೆ. ತಡೀರಿ ನೋಡ್ತೀನಿ. .." ಎನ್ನುತ್ತಾ ಬಿಡಿಸಿ ಓದಿದಳು. ಅವಳ ಮುಖದ ಬಣ್ಣ ಬದಲಾಗಿತ್ತು. ಕಳ್ಳ ನೋಟದಿಂದ ಆಕೆಯ ಕಡೆ ನೋಡಿದಳು. ಆಕೆ ಕಂಡು ಹಿಡಿದು ಬಿಟ್ಟಳು.

"ನಿನ್ನ ಗಂಡಂದೇ ಇರ್ಬೇಕು. ಏನು ಬರೆದಿದಾನೆ... ಹುಶಾರಾಗಿದಾನಂತಾ ?"

"ಅವರದ್ದಲ್ಲ ಅತ್ತೇ...."

"ಮತ್ತೆ ಯಾರದ್ದು ?..... ನಿನ್ನ ಮುಖ ಯಾಕೆ ಕೆಂಪಾಯಿತು ? ಹೇಳುಕ್ಕೆ ಇಷ್ಟವಿಲ್ಲದಿದ್ರೆ ಹೇಳ್ಬೇಡ ಬಿಡು. ನಾನು ಬಲವಂತ ಮಾಡುವುದಿಲ್ಲ..."

"ಇದು.... ಇದು.... ಆ ಟೀಚರ್.... ಪಂಕಜ ಬರೆದಿರೋ ಪತ್ರ..."

"ಪಂಕಜಾ.... ಯಾವ ಪಂಕಜ?" ಅರಿಯದವಳಂತೆ ಪ್ರಶ್ನಿಸಿದಳು.

"ಅದೇ ಇಲ್ಲಿ ಈ ವಠಾರದಲ್ಲಿ ವಾಸವಾಗಿದ್ರಲ್ಲ... ಆ ಪಂಕಜ..."

"ಓ... ಅವಳಾ ? ನಿನಗೆ ಪತ್ರ ಬರೆದು ಇಲ್ಲಿಯ ವಿಚಾರಗಳನ್ನು ತಿಳಿದುಕೊಳ್ತಾಳಾ?.... ನೀನು ನಂಗೆ ಹೇಳಿರಲೇ ಇಲ್ಲ.... ಏನೇನು ಬರಿದಿದೀಯ. ...?" ಗದರಿಸಿ ಕೇಳಿದಳು.

"ಇಲ್ಲ ಅತ್ತೇ ನಾನು ಅವರಿಗೆ ಎಂದೂ ಪತ್ರವನ್ನು ಬರದೇ ಇಲ್ಲ... ಅವರು ಇದೇ ಮೊದಲು ನನಗೆ ಪತ್ರ ಬರೆದಿರೋದು... ನಾನು ಸುಳ್ಳು ಹೇಳ್ತಿಲ್ಲ.." ಅಳುಬರುವಂತಾಗಿತ್ತು.

"ಸುಳ್ಳು ಹೇಳ್ತೀಯೋ ನಿಜ ಹೇಳ್ತೀಯೋ... ನನಗೆ ತಿಳಿದೇ ತಿಳಿಯುತ್ತೆ... ಹಾಗಾದ್ರೆ ಏನು ಬರೆದಿದಾಳೆ ಅಂತ ಹೇಳು..." ಅವಳು ಅಧೈರ್ಯಗೊಂಡಳು.

"ಯಾಕೆ ಮಂಗಳಾ, ನಂಗೇ ಮೋಸ ಮಾಡ್ತೀಯಾ?.... ನಾನು ನಿನ್ನನ್ನು ನಂಬಿದ್ದೆ. ಮೆಚ್ಚಿದ್ದೆ.... ನನ್ನ ಹತ್ರ ನಿನಗೆ ಬೇಕಾದ್ದನ್ನೆಲ್ಲ ಕಲಿತೆ... ನನಗೇ ದ್ರೋಹ !... ನಾನು ದೇವಿಯ ಆರಾಧಕಳು.... ನಂಗೆ ದ್ರೋಹ ಮಾಡಿದ್ರೆ ನಿಂಗೆ ಒಳ್ಳೆದಾಗುಲ್ಲ..." ಹೆದರಿಸಿದಳು.

"ಇಲ್ಲ ಅತ್ತೇ.... ನಾನು ಯಾರಿಗೂ ದ್ರೋಹ ಮಾಡಿಲ್ಲ.... ನಿಮ್ಮ ಮೇಲೆ ನನಗೆ ಅಪಾರ ಗೌರರವಿದೆ" ಎನ್ನುತ್ತಾ ಅತ್ತೇ ಬಿಟ್ಟಳು.

"ಹಾಗಾದ್ರೆ, ಅವಳು ಕಾಗದದಲ್ಲಿ ಏನು ಬರೆದಿದ್ದಾಳೆ ಅಂತ ನೀನು ನಂಗೆ ತಿಳಿಸ್ಲೇಬೇಕು."

"ಅವರು... ಅವರು ತಾಯಿಯಾಗ್ತಾ ಇದಾರಂತೆ... ನಂಗೂ, ನೀನೂ ಬೇಗ ತಾಯಿಯಾಗು ಅಂತ ಬರೆದಿದಾರೆ.... ನನ್ನ ಮದುವೆ ಆಗಿದೆ ಅಂತ ಅವರಿಗೆ ಹೇಗೆ ತಿಳೀತೋ ನಂಗೆ ಖಂಡಿತಾ ಗೊತ್ತಿಲ್ಲ.... ನನ್ನ ಮಾತನ್ನು ನಂಬಿ..." ಅವಳು ಮಾತಾಡುತ್ತಲೇ ಇದ್ದಳು. ಲಕ್ಷ್ಮೀದೇವಮ್ಮನಿಗೆ ಅವಳ ಉಳಿದ ಮಾತುಗಳ ಮೇಲೆ ಗಮನವಿರಲಿಲ್ಲ.

"ಪಂಕಜ ತಾಯಿಯಾಗುತ್ತಿದ್ದಾಳೆ. ಚಂದ್ರು ತಂದೆ ಆಗುತ್ತಿದ್ದಾನೆ..." ತಲೆ ಗಿರ್ರನೆ ತಿರುಗಿದಂತಾಯಿತು... ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು... ಮಂಗಳ ಹೆದರಿ ದಳು....

"ಏನಾಯ್ತು ಅತ್ತೇ.... ಮಾವನೂ ಮನೇಲಿಲ್ಲ, ಈಗೇನ್ಮಾಡ್ಲೀ..."

"ನೀನು ಮನೆಗೆ ಹೋಗು..." ಒರಟಾಗಿ ಹೇಳಿದಳು. ಮಂಗಳಾ ಹಾಗೇ ನಿಂತಳು.

"ಹೇಳಿದ್ದು ಕೇಳಿಸ್ಲಿಲ್ವಾ... ಸುಮ್ಮನೇ ಹೊರಟು ಹೋಗು... ಈಗ ಏನೂ ಕೇಳ್ಬೇಡ." ಮಂಗಳಾ ಕಣ್ಣುಗಳನ್ನು ಒರೆಸಿಕೊಂಡು ಅನುಮಾನಿಸುತ್ತಾ ಅಲ್ಲಿಂದ ಕದಲಿದಳು.... ಪಂಕಜನ್ನ ಈಕೆ ಇಷ್ಟಪಡುಲ್ಲ. ಆದರೆ ಈ ವಿಷಯವನ್ನು ಕೇಳಿ ಆಕೆ ಕೋಪಗೊಳ್ಳಲಿಲ್ಲ ಅಥವಾ ಬೇಸರವನ್ನೂ ವ್ಯಕ್ತಪಡಿಸಲಿಲ್ಲ. ಏನಾಯ್ತು ಈಕೆಗೆ....? ಮನಸ್ಸು ಗಲಿಬಿಲಿಗೊಂಡಿರುವುದಂತೂ ನಿಜ. ನಾನು ಆಮೇಲೆ ಮತ್ತೆ ಬರ್ತೀನಿ" ಎಂದುಕೊಳ್ಳುತ್ತಾ ತನ್ನ ಮನೆಗೆ ಬಂದಳು.

"ಅತ್ತೆ ಯಾಕೇ ಕರೆದಿದ್ದು ನಿನ್ನನ್ನ ?" ಸರೋಜ ಕುತೂಹಲದಿಂದ ಪ್ರಶ್ನಿಸಿದಳು.

"ವಿಚಿತ್ರವಾಗಿ ಆಡಿಬಿಟ್ರು" ಎನ್ನುತ್ತಾ ತಾಯಿಗೆ ಕೇಳಿಸದಂತೆ ಪಿಸುದನಿಯಲ್ಲಿ ಅಕ್ಕನೊಡನೆ ಎತ್ತವನ್ನೂ ಹೇಳಿದಳು.

"ಪಂಕಜ ತಾಯಿಯಾಗುತ್ತಿರುವ ಸುದ್ಧಿ ಆಕೆಗೆ ಇಷ್ಟವಾಗಿಲ್ಲ.... ಅಷ್ಟೇ..."

"ಆದರೆ, ಅವರನ್ನಾಗಲೀ, ಚಂದ್ರುವನ್ನಾಗಲೀ ಬೈಯಲಿಲ್ಲ, ನಂಗೆ ಅದೇ ಆಶ್ಚರ್ಯ ಆಘಾತವಾದವರಂತೆ ಕುಳಿತುಬಿಟ್ಟರು."

"ಆಘಾತವಾಗಿರಬಹುದು. ಈ ಸುದ್ಧಿ ಅನಿರೀಕ್ಷಿತ ಎನಿಸಿರಬಹುದು. ಭಾವನೆಗಳು ಕುಸಿದಿರಬಹುದು.... ಅವರಾಗಿಯೇ ಸರಿ ಮಾಡ್ಕೋಬೇಕು. ಆಕೆಗೆ ಯಾರೂ ಹೇಳುಕ್ಕಾಗುಲ್ಲ... ಹೇಳಿದರೂ ಆಕೆಗೆ ಇಷ್ಟವಾಗುವುದಿಲ್ಲ."

"ಈ ಪೋಸ್ಟ್ ಮ್ಯಾನ್, ನನಗೆ ಬಂದ ಕಾಗದವನ್ನು ಅವರ ಮನೆಗೆ ಯಾಕೆ ಹಾಕಿದನೋ...? ಅದರಿಂದಲೇ ಇಷ್ಟೆಲ್ಲಾ... ಎಂದೂ ಹೀಗೆ ಆಗಿರ್ಲಿಲ್ಲ. ಏನು ಕಾದಿದೆಯೋ!...?

"ಯಾಕೆ ಭಯ ಪಡ್ತೀಯ?.... ಹೇಗೂ ನೀನು ಇಲ್ಲೇ ಏನೂ ಇರೋಳಲ್ಲ. ದತ್ತನಿಗೆ ಬೇರೆ ಕಡೆಗೆ ವರ್ಗ ಆಗ್ತಿದ್ದ ಹಾಗೆ ಊರಿಗೆ ಹೊರಟು ಬಿಡ್ತೀಯಲ್ಲ..."

"ಆದರೆ ಆಕೆ ಈ ಎರಡೂ ಮನೆಗಳಿಗೆ ಏನಾದ್ರೂ ತೊಂದರೆ ಕೊಟ್ಟರೆ?

"ಹಾಗೆಲ್ಲಾ ಏನೂ ಆಗುಲ್ಲ. ದೇವರಿರೋದು ಯಾತಕ್ಕೆ ? ದೇವರನ್ನು ಬೇಡ್ಕೋ.... ಅವನು ಕೇಳ್ತಾನೆ ಅನ್ನೋ ನಂಬಿಕೆ ಅಲ್ವಾ...? ಆಪತ್ಕಾಲದಲ್ಲಿ ಅವನು ನಿನಗೆ ಸಹಾಯ ಮಾಡಲಿಲ್ವಾ? ಈ ಸಮಸ್ಯೆ ಅದಕ್ಕಿಂತ ದೊಡ್ಡದೇನಲ್ಲ..." ಸರೋಜ ಹಾಗೆ ಹೇಳಿದರೂ ಅವಳ ಆತಂಕ ಕಡಿಮೆ ಆಗಿರಲಿಲ್ಲ....

"ಯಾಕೆ ಲಕ್ಷ್ಮೀ ಹೀಗೆ ಗರ ಬಡಿದೋಳ ಥರ ಕೂತು ಬಿಟ್ಟಿದೀಯಲ್ಲ. ಏನಾಯ್ತು? ಗೋಪಾಲಯ್ಯ ಗಾಬರಿಯಿಂದ ಕೇಳಿದ. ಕೆಳಗಡೆ ಬಿದ್ದಿದ್ದ ಪತ್ರಗಳನ್ನು ಎತ್ತಿಕೊಂಡು ನೋಡಿದ. ಮಂಗಳ ತಾನು ಓದಿದ ಪತ್ರವನ್ನು ಗಾಬರಿಯಿಂದ ಅಲ್ಲೇ ಬಿಟ್ಟು ಹೋಗಿದ್ದಳು. ಒಡೆದುದರಿಂದ ಓದಿಕೊಂಡ. ಹಣೆಯ ಮೇಲೆ ನೆರಿಗೆಗಳು ಮೂಡಿದವು. ಲಕ್ಷ್ಮಿಯ ಕಡೆ ನೇರವಾಗಿ ನೋಡಲಾಗಿರಲಿಲ್ಲ..." ಇದು ಮಂಗಳಂಗೆ ಯಾರೋ ಬರೆದಿರುವ ಪತ್ರ..." ಎಂದ ಸ್ವಗತವಾಗಿ.

"ನಮಗೆ ತಿಳೀಲಿ ಅಂತ ಅವನ ಹೆಂಡ್ತಿ ಬೇಕೂಂತ ಬರೆದಿರುವ ಪತ್ರ."

"ನೀನ್ಯಾಕೆ ಓದೋಕೆ ಹೋದೆ ?" ಬೇಸರದಿಂದ ಕೇಳಿದ.

"ನಾನೇನು ಓದ್ಲಿಲ್ಲ... ಮಂಗಳಾನೇ ಓದಿ ಹೇಳಿದ್ದು. ನಿಮಗೂ ತುಂಬಾ ಸಂತೋಷ ಆಗ್ತಿರಬಹುದು ಅಲ್ವಾ?.... ಹಂಗಿಸಿದಳು.

"ಚಂದ್ರು ದೂರದವನೇನೂ ಅಲ್ಲಾ ಅಲ್ವಾ?...."

"ಅವನು ಅಪ್ಪ ಅಂತ ಕೂಗಲಿ ಅಂತ ಆ ಆಸೆ ತೀರಿಸ್ಕೊಂಡ್ರೀ... ಈಗ ಅವನ ಮಗು ತಾತಾ ಅಂತ ಕರೀಲಿ ಅಂತ ಬಯಸ್ತೀರಿ ಅಲ್ವಾ?..."

"ಹೀಗ್ಯಾಕೆ ಕಹಿಯಾಗಿ ಮಾತಾಡ್ತೀಯ ಲಕ್ಷ್ಮೀ... ಬೀದೀಲಿ ಹೋಗೋ ಎಷ್ಟೋ ಹುಡುಗ್ರು ನನ್ನನ್ನ ತಾತಾ ಅಂತ ಕರೀತಾರೆ.... ನನಗೆ ವಯಸ್ಸಾಗಿದೆ. ತಲೆಗೂದಲು ಬೆಳ್ಳಗಾಗಿದೆ..."

"ಯಾರೋ ತಾತಾ ಅಂತ ಕರೆಯೋಕು.... ಇವನ ಮಗು ಕರೆಯೋಕೂ ವ್ಯತ್ಯಾಸ ಇರುತ್ತೆ... ಈಗಲೂ ನೀವು ಅವನ ಸಂಪರ್ಕ ಇಟ್ಟುಕೊಂಡಿದೀರಿ ಅಲ್ವಾ?.... ಇಲ್ಲದಿದ್ದರೆ, ಮಂಗಳ ದತ್ತನನ್ನು ಮದುವೆಯಾದದ್ದು ಅವಳಿಗೆ ಹೇಗೆ ಗೊತ್ತಾಗ್ತಿತ್ತು...."

"ನಾನು ಮಾಧವಂಗೆ ಹೇಳಿದ್ದೆ... ಅವನು ತಿಳಿಸಿರಬಹುದು. ಅದರಲ್ಲಿ ಗುಟ್ಟೇನು?'

"ನನ್ನ ಹಿಂದೆ ಈ ವಠಾರದ ವಿಷಯಗಳು ನನಗೆ ತಿಳಿಯದಂತೆ ಬೇರೆ ಬೇರೆ ಊರುಗಳಿಗೆ ತಲುಪುತ್ತೆ.... ನನಗೆ ಕೋಪ ಬರದೇ ಇರುತ್ತಾ?....

"ಕೋಪ ಮಾಡ್ಕೊಂಡು ಏನ್ಮಾಡ್ತೀಯ ಲಕ್ಷ್ಮೀ.... ನೀನೇ ಹೇಳ್ಬೆ.... ದೇವಿ

ಪಾರಾಯಣ ಮಾಡಿದ್ಮೇಲೆ ನಿನ್ನ ಮನಸ್ಸು ಗೊಂದಲಗಳಿಂದ ಮುಕ್ತವಾಗಿದೆ...ಅಂತ."

"ಮಾತ್ಯಾಕ್ರೀ ಯಾಕೆ ಹೀಗಾಗ್ತಿದೆ?... ಈ ವಿಷಯ ನನ್ನ ಕಿವಿಗೆ ಬೀಳದೇ ಇದ್ದಿದ್ದರೆ ಚೆನ್ನಾಗಿತ್ತು... ನಾನು ಮಂಗಳಂಗೆ ಈ ಪತ್ರವನ್ನು ಓದು ಅಂತ ಬಲವಂತ ಮಾಡಬಾರ ದಾಗಿತ್ತು... ಅವಳು ನನ್ನ ಮಾತುಗಳಿಂದ ನೊಂದುಕೊಂಡು ಅಳುತ್ತಾ ಹೊರಟು ಹೋದಳು. ಈ ವಿಷಯ ತಿಳಿದದ್ದಕ್ಕೇ ಹೀಗಾದದ್ದು... ತಿಳಿದುಕೊಳ್ಳಲೇ ಬೇಕು ಅಂತ ಯಾಕೆ ಅನ್ನಿಸ್ತೋ..." ಯಾಕೋ ಏನೋ ಸರಿ ಹೋಗ್ತಿಲ್ಲ.

"ಬಹುಶಃ ಇದು ದೇವಿಯ ಸಂಕಲ್ಪ ಇರಬಹುದು... ನೆನಪಿಸ್ಕೋ... ಕನಸ್ನಲ್ಲಿ ಇಬ್ಬರು ಮುತ್ತೈದೆಯರು ನಿನ್ನ ಬಳಿಗೆ ಬಂದಂತೆ ಕಂಡೆ ಅಂತ ಹೇಳಿದ್ಯಲ್ಲಾ..."

"ಕನಸಿಗೂ ಈ ಕಾಗದಕ್ಕೂ ಏನು ಸಂಬಂಧ?" ರೇಗಿದಳು.

"ಸಂಬಂಧ ಇರಬಹುದು ಲಕ್ಷ್ಮೀ ನೀನೇ ಯೋಚಿಸು. ನೀನು ದೇವಿ ಪಾರಾಯಣವನ್ನು ಭಕ್ತಿಯಿಂದ ಓದಿದ್ದು ನಿಜತಾನೇ?.... ನಿನಗೆ ಕನಸು ಬಿದ್ದದ್ದೂ ನಿಜ ತಾನೇ? ಆ ಮೇಲೆ ಬೆಳ್ಳಿ ಕೃಷ್ಣನ್ನ ಮಂಗಳನಿಗೆ ಕೊಡ್ಬೇಕು ಅಂತ ನಿನಗೆ ಅನ್ನಿಸಿತು ಅಲ್ವಾ.... ಅದೇ ಸಮಯದಲ್ಲಿ ಈ ಸುದ್ಧಿ ನಿನಗೆ ತಿಳಿದಿದೆ.... ಇದು ನಿನ್ನ ದೇವಿ ಕಲ್ಪಿಸಿರುವ ಒಂದು ಸಂಕಲ್ಪ ಇರಬಹುದು... ಸಮಾಧಾನ ಮಾಡ್ಕೋ... ಗೊಂದಲ ಮಾಡ್ಕೋಬೇಡ..." ಅವನು ಬಳಿಯಲ್ಲಿ ನಿಂತು ಹೇಳಿದಾಗಲೂ ಅವಳಿಗೆ ಕಸಿವಿಸಿ ಕಡಿಮೆ ಆಗಿರಲಿಲ್ಲ.

"ಈ ಗೊಂದಲಗಳಿಗೆ ಏನು ಕಾರಣ ಅಂತ ಯಾರಾದ್ರೂ ಜ್ಯೋತಿಷಿಗಳನ್ನು ಕೇಳೋದಾದ್ರೆ ಕೇಳೋಣ... ಪರಿಹಾರ ಸಿಗಬಹುದು."

"ಪರಿಹಾರವನ್ನು ನಾನೇ ಕಂಡ್ಕೋಳ್ತೀನಿ.... ಇನ್ನು ನನಗೇ ಬಿಡಿ..." ಏನ್ಮಾಡ್ತೀಯ ಅಂತ ಅವನು ಕೇಳಲಿಲ್ಲ. ಯಾವಾಗಲೂ ಅಂತಿಮ ನಿರ್ಧಾರ ಇವಳದೇ. ಏನಾದರೂ ಮಾಡಲಿ. ಎಂದಿನಂತೆ ನಾನು ಸುಮ್ಮನಿದ್ದು ಬಿಡ್ತೀನಿ ಅಂತಂದುಕೊಂಡ. ಆದರೂ ಸ್ವಲ್ಪ ಮಟ್ಟಿಗೆ ಅಚ್ಚರಿಯಾಗಿತ್ತು... ಒಂದು ಗುಲಗಂಜಿಯಷ್ಟು ಬದಲಾಗಿ ದಾಳೆ.... ಹಾಗಾದರೆ, ಇದು ಇವಳು ಆರಾಧಿಸುವ ಆ ದೇವಿಯ ಮಹಿಮೆಯೇ ಇರಬೇಕು. ಆಕೆಯೇ ಇವಳಿಗೆ ದಾರಿಯನ್ನು ತೋರಿಸುತ್ತಾಳೆ ಅಂತಂದುಕೊಂಡ.

○ ○ ○

ಬೆಳಿಗ್ಗೆ ಏಳುವ ಹೊತ್ತಿಗೆ ಲಕ್ಷ್ಮಿದೇವಮ್ಮನಿಗೆ ಜ್ವರ ಸುಡುತ್ತಿತ್ತು. ಇರುಸು ಮುರಿಸಿ ನಿಂದ ನರಳುತ್ತಿದ್ದಳು. ಅವಳಿಗೆ ಹುಶಾರಿಲ್ಲವೆಂದು ಗೋಪಾಲನಿಗೆ ಅರಿವಾ ಯಿತು. ನೀನು ಎದ್ದು ಆಯಾಸ ಮಾಡ್ಕೋಬೇಡ.. ವಿಶ್ರಾಂತಿ ತಗೋ.... ನಾನೇ ಹಾಲು ಕಾಯಿಸಿ ಕಾಫಿ ಮಾಡಿಕೊಡ್ತೀನಿ..."

"ನಿಮಗೆ ಚೆನ್ನಾಗಿ ಮಾಡುಕ್ಕೆ ಬರುಲ್ಲ. ಮೈ ಕೈ ನೋವು ಕಡಿಮೆ ಆಗಲಿ ನಾನೇ

ಎದ್ದು ಮಾಡ್ತೀನಿ..." ಎಂದಳು.

"ಮಂಗಳನ್ನ ಕರೀಲಾ? ಅವಳು ಬಂದು ಮಾಡಿಕೊಡ್ತಾಳೆ..."

"ಬೇಡ ಎರಡು ಬಟ್ಟಲು ಕಾಫೀನ ಅವಳ ಮನೆಯಿಂದ್ಲೇ ತಂದುಕೊಡುಕ್ಕೆ ಹೇಳಿ" ಅಷ್ಟು ಹೇಳಿ ಕಣ್ಣು ಮುಚ್ಚಿ ಮಲಗಿದಳು. ಅವಳು ತಮಾಷೆ ಮಾಡಿದಳೆನೋ ಅಂತಂದುಕೊಂಡು ಒಂದು ಗಳಿಗೆ ಅನುಮಾನಿಸಿದ. ಲಕ್ಷ್ಮಿದೇವಮ್ಮನ ಸ್ವಭಾವ ಅವನಿಗೆ ತಿಳಿಯದೇನಲ್ಲ. ಮುಲಾಜಿಲ್ಲದೆ ಕಡ್ಡಿ ಎರಡು ತುಂಡು ಮಾಡಿದಂಥ ಮಾತುಗಳು. ತನ್ನ ನಿಲುವೇ ಸರಿ ಎಂದು ಸಮರ್ಥಿಸಿಕೊಳ್ಳುವ ಜಾಯಮಾನ.... ತಮಾಷೆಯ ಮಾತುಗಳು ಅವಳ ಬಾಯಲ್ಲಿ ಹೊರಡುವುದೇ ಅನುಮಾನ. ಅದರಲ್ಲೂ ಹುಶಾರಿಲ್ಲದೇ ಮಲಗಿರುವಾಗ?.... ಮೆಲ್ಲನೇ ಹೊರಬಂದ.... ಮುಂಬಾಗಿಲನ್ನು ಎಳೆದುಕೊಂಡು ಮಂಗಳನ ಮನೆಯ ಕಡೆಗೆ ಬಂದ.

ರಾಮರಾಯರು ಸ್ನಾನ ಮಾಡುತ್ತಿದ್ದರು. ಜಾನಕಿ ಅಡಿಗೆ ಮನೆಯಲ್ಲಿದ್ದಳು. ಸರೋಜ ಮಗುವನ್ನು ತೂಗುತ್ತಿದ್ದಳು. ಚಿಕ್ಕವರು ಕೆಲವರು ಎದ್ದು ಓದಿಕೊಳ್ಳುತ್ತಿದ್ದರು. ಶಂಕರಾ.... ಸಚ್ಚೀ.... ಗೋಪಾಲಯ್ಯ ಮೃದುವಾಗಿ ಕರೆದ. ಅಷ್ಟರಲ್ಲಿ ಪಕ್ಕದ ಓಣಿಯಿಂದ ಮಂಗಳ ಜಗುಲಿಯ ಬಳಿಗೆ ಬಂದಿದ್ದಳು. ಅವನನ್ನು ನೋಡಿ ಹಾಗೇ ನಿಂತಳು. ಅವಳ ಎದೆ ಹೊಡೆದು ಕೊಂಡಿತು. ಅತ್ತೆ ಹೇಳಿ ಕಳಿಸಿದಾರೆ... ಏನು ಕಾದಿದೆಯೋ...?"

"ಅಕ್ಕ ನಿಮ್ಮ ಹಿಂದೆಯೇ ನಿಂತಿದಾಳಲ್ಲ ಮಾವ..."ಶಂಕರ ನಗುತ್ತಾ ಹೇಳಿದ.

"ಅತ್ತೆ ಕರೀತಿದಾರ ಮಾವ?" ಉಗುಳು ನುಂಗಿ ಕೇಳಿದಳು.

"ಇಲ್ಲ... ಇಲ್ಲ... ನಾನೇ ಬಂದೆ. ಅವಳು ಮಲಗಿ ಬಿಟ್ಟಿದ್ದಾಳೆ. ಜ್ವರ ಬಂದಂತಿದೆ. ಎರಡು ಬಟ್ಟಲು ಕಾಫಿ ಮಾಡಿಕೊಡ್ತೀಯಾ?..." ಮಂಗಳ ಸರಾಗವಾಗಿ ಉಸಿರಾಡಿದಳು.

"ನೀವು ಮನೆಗೆ ಹೋಗಿ ಅತ್ತೆ ಜೊತೆ ಇರಿ ಮಾವ... ನಾನು ಶಂಕರನ ಕೈಯಲ್ಲಿ ಕಾಫೀ ಕಳಿಸ್ತೀನಿ..."

"ನೀನೇ ತಗೊಂಡು ಬಾಮ್ಮಾ... ಅವಳು ನಿನ್ನನ್ನು ಕೇಳ್ತಿದ್ಲು..." ಮತ್ತೆ ಅವಳ ಎದೆ ನಗಾರಿ ಬಾರಿಸಿತು... ಜ್ವರ ಬೇರೆ ಬಂದಿದೆ... ಹೋದರೆ ಹೇಗೋ? ಹೋಗದಿದ್ದರೆ ಹೇಗೋ?.... ಆತ ಹೊರಟು ಹೋಗಿದ್ದ. ದೇವರನ್ನು ನೆನೆಸುತ್ತಾ ಕಾಫಿಯನ್ನು ಬೆರೆಸಿ, ಥರ್ಮಾಸ್ ಫ್ಲಾಸ್ಕಿಗೆ ಹಾಕಿಕೊಂಡು ತಾಯಿಗೆ ಹೇಳಿ ಅವರ ಮನೆಯ ಕಡೆಗೆ ಬಂದಳು.

"ನೋಡೇ ಮಂಗಳಾ ಏನು ಮಾಡಿದ್ದಕ್ಕೋ. ಜ್ವರ ಬಂದ ಹಾಗಾಗಿದೆ. ಸ್ವಲ್ಪ ಬಚ್ಚಲು ಮನೆಗೆ ಹೋಗಿ ಬಂದು, ಕಾಫಿ ಕುಡಿತೀನಿ..."ಆಕೆಯ ಜತೆಗೆ ಮಂಗಳನೂ

ನಡೆದಳು. ಮುಖ ತೊಳೆದು ಬಂದ ಲಕ್ಷ್ಮಿದೇವಮ್ಮನಿಗೆ ಕಾಫಿಯನ್ನು ಬಟ್ಟಲಿಗೆ ಬಗ್ಗಿಸಿ ಕೊಟ್ಟಳು.

"ಬಾಯೆಲ್ಲಾ ಕಹಿಯಾಗಿದೆ ಕಾಫಿ ರುಚಿಸ್ತಾನೇ ಇಲ್ಲ. ಸ್ವಲ್ಪ ಸಾಕು..." ಎಂದು ಹೇಳಿ ಅರ್ಧ ಬಟ್ಟಲು ಕಾಫಿಯನ್ನು ಮಾತ್ರ ಕುಡಿದಳು.

"ಅತ್ತೇ ಎದ್ದು ಓಡಾಡ್ಬೇಡಿ... ನಿಮಗೆ ಆಯಾಸ ಆಗಿದೆ. ನಮ್ಮ ಮನೆಯಿಂದ ತಿಂಡಿ ಊಟ ತಂದು ಕೊಡ್ತೀನಿ..." ಬಾಯನ್ನು ಒರೆಸಿಕೊಂಡಳು. ಲಕ್ಷ್ಮಿದೇವಮ್ಮ.

"ಜೋಷಿ ಮನೆಯಿಂದ ತರ್ಬೇಡ... ರುಚಿಯೇ ಬೇರೆ... ಖಾರ ಜಾಸ್ತಿ... ನಿಮ್ಮ ತಾಯಿಯ  ಮನೆಯಿಂದ ತಂದುಕೊಡು." ಮಂಗಳ ಗೋಪಾಲಯ್ಯನ ಕಡೆ ನೋಡಿ ನಕ್ಕಳು.

"ನಗು ಯಾಕೆ ? ನಂಗೊತ್ತು ನಿಮ್ಮೆಲ್ಲರಿಗೂ ಮಾವ ಒಳ್ಳೆಯವರು. ನಾನು ಕೆಟ್ಟವಳು. ನಾನು ಕೆಟ್ಟೋಳಾ ಮಂಗಳಾ... ಖಡಾ ಖಂಡಿತವಾಗಿ ಮಾತಾಡ್ತೀನಿ ಅಷ್ಟೇ.... "ಖಂಡಿತವಾದಿ ಲೋಕವಿರೋಧಿ" ಅನ್ನೋ ಗಾದೆ ಮಾತಿದೆ ಗೊತ್ತಾ... ಹಾಗೆ ನಾನು."

"ಅತ್ತೇ ಮಾತಾಡಿದ್ರೆ ಜ್ವರ ಹೆಚ್ಚಾಗುತ್ತೆ...."

"ಹೆಚ್ಚು ಮಾತಾಡಿದ್ರೆ ಜ್ವರ ಬಂದಿದೆ ಅಂತ ಅರ್ಥ.... ನಿನ್ನ ಮಾವನ್ನ ಆಚೆಗೆ ಕಳಿಸು. ನಾನು ನಿನ್ನ ಹತ್ರ ಸ್ವಲ್ಪ ಮಾತಾಡ್ಬೇಕು..." ಅವಳ ಮುಖ ಗಂಭೀರವಾಯಿತು... ಗೋಪಾಲಯ್ಯ ತಾನಾಗಿಯೇ ಅಲ್ಲಿಂದ ಹೊರಟು ಹೋಗಿದ್ದ. "ನನಗಾಗಿ ನೀನೊಂದು ಕೆಲಸ ಮಾಡಬೇಕು." ಏನದು ಎಂದು ಕೇಳಲು ಅನುಮಾನಿಸಿದಳು. "ಚಂದ್ರುಗೆ ನೀನೊಂದು ಪತ್ರ ಬರೆಯಬೇಕು.... ನಾನು ಹೇಳ್ತೀನಿ... ಹಾಗೇ ಬರೆಯಬೇಕು...." ಪಿಳಿ ಪಿಳಿ ನೋಡಿದಳು.

"ಅದೇನೋ ಕಾಣೆ ನೀನೊಬ್ಬಳೇ ನನಗೆ ಹತ್ತಿರವಾದದ್ದು... ಗಂಡನನ್ನು ಒಂದು ಅಂತರದಲ್ಲೇ ಇಟ್ಟುಬಿಟ್ಟೆ.... ಚಂದ್ರು ಹತ್ತಿರವಾಗಲೇ ಇಲ್ಲ. ನೀನು ಅದ್ಹೇಗೋ ನನಗೆ ಇಷ್ಟವಾದೆ.... ಹೊಗಳಿದಳು. ಮಂಗಳನ ಆತಂಕ ಮತ್ತೂ ಹೆಚ್ಚಾಗಿತ್ತು. "ತಗೋ ಅಲ್ಲಿ ಕಾಗದ ಪೆನ್ನು ಕವರ್ರು ಎಲ್ಲಾ ಇದೆ ಪತ್ರ ಬರೆದು, ಮಾವನ ಹತ್ರ ವಿಳಾಸ ಬರೆಸಿ ಪೋಸ್ಟ್ ಮಾಡುಕ್ಕೆ ಹೇಳು." ಬೇರೆ ದಾರಿಯೇ ಇಲ್ಲದೇ ಮಂಗಳ ಹಾಗೇ ಮಾಡಿದಳು. ಗೋಪಾಲಯ್ಯ ಹುಬ್ಬೇರಿಸಿದನಾದರೂ ಒಳಗೊಳಗೇ ಸಮಾಧಾನ ವಾಗಿತ್ತು. ವಿಳಾಸ ಬರೆದು ತಾನೇ ಪೋಸ್ಟ್ ಮಾಡಲು ಹೊರಟ. ಇದ್ದಕ್ಕಿದ್ದಂತೆ ಲಕ್ಷ್ಮಿಯ ಆರೋಗ್ಯ ಹದಗೆಟ್ಟಿದೆಯೇ ಎಂಬ ಅನುಮಾನವೂ ಕಾಡಿತು.

"ಮಂಗಳಾ, ನಾನು ಬರೋವರೆಗೂ ನೀನು ಇಲ್ಲೇ ಇರು. ಡಾಕ್ಟ್ರನ್ನ ಏನಾದ್ರೂ ಕರ್‍ಕೊಂಡು ಬರ್ಬೇಕಾ ಅಂತ ಕೇಳು" ಆ ಮಾತು ಲಕ್ಷ್ಮಿಗೆ ಕೇಳಿಸಿತ್ತು.

"ನಂಗೇನು ಆಗಿಲ್ಲ... ನೀವು ಹೋಗಿ" ಕಳಿಸಿದಳು. ಮಂಗಳ ಅಲ್ಲೇ ನಿಂತಳು.

○ ○ ○

ಮನೆಯ ಮುಂದೆ ಜಟಕಾ ಬಂದು ನಿಂತಾಗ, ಲಕ್ಷ್ಮಿದೇವಮ್ಮ ಮಂಗಳನಿಗೆ ಹೇಳಿ ಕಳಿಸಿದಳು. ದಿಬ್ಬದ ಮನೆಯ ಬೀಗದ ಕೈಯನ್ನು ಅವಳ ಕೈಗಿತ್ತಳು.."ಮಂಗಳಾ ಇಬ್ಬರನ್ನು ಆ ಮನೆಗೆ ಕರೆದುಕೊಂಡು ಹೋಗು... ನಾನು ಅಲ್ಲಿಗೇ ಬರ್ತೀನಿ..."

"ಯಾಕತ್ತೇ.... ಈಗ ಮುಹೂರ್ತ ಚೆನ್ನಾಗಿಲ್ವಾ?"

"ಸುಮ್ನೇ ನಾನು ಹೇಳಿದ ಹಾಗೆ ಕೇಳು. ಪ್ರಶ್ನೆ ಕೇಳ್ಬೇಡ..." ಮಂಗಳಾ, ಗೋಪಾಲಯ್ಯ ಇಬ್ಬರೂ ಹೊರಬಂದು, ಚಂದ್ರು ಹಾಗೂ ಪಂಕಜಳನ್ನು ದಿಬ್ಬದ ಮನೆಗೆ ಕರೆದೊಯ್ದರು. ಅವರ ಹಿಂದೆಯೇ, ವಠಾರದ ಕೆಲವು ಹೆಂಗಸರು ಅವರೊಂದಿಗೆ ನಡೆದರು. ಲಕ್ಷ್ಮಿದೇವಮ್ಮ ಈ ಮೊದಲೇ ಸಿದ್ಧ ಮಾಡಿಟ್ಟುಕೊಂಡಿದ್ದ ಆರತಿಯ ತಟ್ಟೆಯನ್ನು ತೆಗೆದುಕೊಂಡು ಅಲ್ಲಿಗೆ ಬಂದಳು. ಮುಂಬಾಗಿಲ ಬಳಿ ಆರತಿ ಎತ್ತಿ ಒಳಕ್ಕೆ ಬರ ಮಾಡಿಕೊಂಡಳು. ಇಬ್ಬರೂ ದೂರದಿಂದ ನಮಸ್ಕರಿಸಿದರು." ಇನ್ಮುಂದೆ ನೀವಿಬ್ಬರೂ ಈ ಮನೇಲಿ ಇರ್ತೀರಿ.... ಪಾತ್ರೆ ಪಡಗ ಎಲ್ಲವನ್ನೂ ಇರಿಸಿದೀನಿ. ದವಸ ಧಾನ್ಯ ತರಿಸಿಟ್ಟಿದ್ದೀನಿ..." ಮಂಗಳಾ ಗೋಪಾಲಯ್ಯ ಮೌನವಾಗಿ ನಿಂತಿದ್ದರು.

"ಇದೇನಿದು ಹೊಸ ಬಂಧನ ? ಎಲ್ಲಾ ಮುಗಿದಿತ್ತಲ್ಲ..." ಚಂದ್ರು ಚಕಿತನಾಗಿ ಕೇಳಿದ.

"ಸ್ವಲ್ಪ ಬಾಕಿ ಇದೆ. ಅದನ್ನು ನೀನು ಪೂರೈಸಲೇಬೇಕು.."

"ಬಾಕಿ ಏನಿದೆ ?... ಎಲ್ಲಾ ಕಳಚಿಕೊಂಡು ಹೋಗಿದ್ದೆನಲ್ಲ..."

"ಋಣ! ಋಣ ಬಾಕಿ ಇದೆ..."

"ಲಕ್ಷ್ಮೀ ಏನು ಮಾತಾಡ್ತಿದೀಯ? ಯಾವ ಋಣ ಬಾಕಿ ಇದೆ?.... ಕೇಳಿಸ್ಕೊಂಡೋರು ಏನೊಂದ್ಕೊಂಡಾರು?" ಗೋಪಾಲಯ್ಯ ವಿಸ್ಮಯದಿಂದ ಕೇಳಿದ.

"ಯಾರೂ ಏನೂ ಅಂದ್ಕೊಳ್ಳಲ್ಲ... ಇದು ನನ್ನ ಮನೆಯ ವ್ಯವಹಾರ... ಇನ್ಮುಂದೆ ಈ ಮನೇಲಿ ಇವರಿಬ್ಬರೂ ವಾಸವಾಗಿರ್ತಾರೆ. ಇಲ್ಲ ಅನ್ನೋ ಧೈರ್ಯ ಇವರಿಬ್ಬರಿಗೂ ಇದೆಯಾ ಕೇಳಿ?.... ಘಟ್ಟಿಸಿ ಕೇಳಿದಳು.

"ಅಪ್ಪಾ ಏನಿದೆಲ್ಲ...? ಮತ್ತೆ ಮತ್ತೆ... ಬಂಧನ, ಋಣ.... ಇವೆಲ್ಲಾ ಯಾಕೆ?" ಗೋಪಾಲಯ್ಯ ಸುಮ್ಮನಿರು ಎನ್ನುವಂತೆ ಕಣ್ಣು ಸಂಜ್ಞೆ ಮಾಡಿದ... ಲಕ್ಷ್ಮಿದೇವಮ್ಮ ಮಂಗಳನ ಕಡೆ ತಿರುಗಿದಳು, " ನಾನು ಹೇಳಿರೋದನ್ನೆಲ್ಲಾ ಇವರಿಬ್ಬರಿಗೂ ಅರ್ಥವಾಗು ವಂತೆ ವಿವರಿಸಿ ಹೇಳು. ಆ ಕೆಲಸ ನಿನ್ನದು ನಾನಿನ್ನು ಬರ್ತೀನಿ."

"ಅಮ್ಮಾ ನಿಂತ್ಕೊಳ್ಳಿ" ಚಂದ್ರು ಅಧಿಕಾರವಾಣಿಯಿಂದ ಹೇಳಿದ. ನೀವು ಕರೆಸಿ ದಾಗ, ಸ್ವಲ್ಪ ಮಟ್ಟಿಗೆ ಸಮಾಧಾನವಾಗಿತ್ತು. ಆದರೆ ಈಗ ಗೊಂದಲ ಹೆಚ್ಚಾಗಿದೆ.

ನಾನು ಇಲ್ಲಿ ಈ ವಠಾರದಲ್ಲಿ ಇರಬೇಕು ಅಂತಿದ್ರೆ, ನನ್ನದೊಂದು ಷರತ್ತು... ಈ ಮನೆಗೆ ನನ್ನ ಕೈಲಾಗುವಷ್ಟು ಬಾಡಿಗೆಯನ್ನು ಕೊಡ್ತೀನಿ ಅದಕ್ಕೆ ನೀವು ಒಪ್ಕೊಂಡ್ರೆ ಮಾತ್ರ ಇರ್ತೀನಿ."

"ಇಲ್ಲದಿದ್ರೆ?... ಹೊರಟು ಹೋಗ್ತೀನಿ ಅನ್ನೋ ಧೈರ್ಯ ನಿನಗಿದೆಯಾ ನನ್ನ ಕಡೆ ನೋಡಿ ಹೇಳು... ಬಾಡಿಗೆಯನ್ನು ಕೊಡ್ಬೇಕು. ಬಡ್ಡಿಯನ್ನು ಕೊಡ್ಬೇಕು." ಅವನ ಗೊಂದಲ ಮತ್ತೂ ಹೆಚ್ಚಾಗಿತ್ತು.

"ಅಮ್ಮಾ ಏನು ಇದೆಲ್ಲಾ.... ನಾನೇನು ತಪ್ಪು ಮಾಡಿದೀನಿ? ನನ್ನಿಂದ ಏನು ಅಪೇಕ್ಷೆ ಪಡ್ತೀರಿ...? ನನ್ನಿಂದ ತಪ್ಪಾಗಿದ್ದರೆ ಕ್ಷಮಿಸಿ ಬಿಡಿ.... ನನ್ನನ್ನು ಬಿಟ್ಟುಬಿಡಿ... ಮತ್ತೆ ಮತ್ತೆ ಬಂಧನಕ್ಕೆ ಎಳೆಯಬೇಡಿ." ಕೈ ಮುಗಿದ.

"ಕ್ಷಮಿಸ್ತೀನಿ.... ನಾನು ಕೇಳಿದ್ದನ್ನು ನೀನು ನನಗೆ ಕೊಡ್ಬೇಕು... ನಿನ್ನ ಹೆಂಡತಿಗೆ ಹುಟ್ಟುವ ಮಗುವನ್ನು ನನಗೆ ಕೊಡ್ಬೇಕು... ಅದೇ ನನಗೆ ಬೇಕಾದದ್ದು. ದಢವಾಣಿ ಹೊರವಿದ್ದಿತ್ತು." ಅಲ್ಲಿದ್ದವರೆಲ್ಲ ದಂಗಾದರು. "ಇದೆಂಥಾ ಅಪೇಕ್ಷೆ?" ಚಂದ್ರು ಪಂಕಜ, ಕಕ್ಕಾಬಿಕ್ಕಿಯಾಗಿ ನಿಂತಿದ್ದರು. ಗೋಪಾಲಯ್ಯ ಒಪ್ಕೋ" ಎನ್ನುವಂತೆ ದೈನ್ಯದಿಂದ ನೋಡಿದ. ಚಂದ್ರು ಇಲ್ಲ ಎನ್ನಲಾಗದೇ ತಲೆ ತಗ್ಗಿಸಿದ... ಈ ಋಣ ಈ ಜನ್ಮದಲ್ಲಿ ತೀರುವುದಿಲ್ಲ. ಎಂದುಕೊಂಡ.

ಲಕ್ಷ್ಮಿದೇವಮ್ಮ ತನ್ನ ಮನೆಗೆ ಹೊರಟು ಹೋಗುವ ಮುನ್ನ ಮಂಗಳನಿಗೆ ಹೇಳಿದಳು."ನಿನ್ನ ಅತ್ತಿಗೆಗೆ ಏನಾದ್ರೂ ಬೇಕಾಗಿದ್ರೆ ನಿನ್ನ ಮುಖಾಂತರ ತಿಳಿಸಲಿ... ಯಾವುದಕ್ಕೂ ತೊಂದರೆ ಆಗಬಾರದು..." ಚಂದ್ರು ಪೆಚ್ಚಾಗಿದ್ದ.

"ಇಲ್ಲಮ್ಮ. ಇರೋದಾದ್ರೆ, ಇಲ್ಲಿ ಬೇರೆ ಬಾಡಿಗೆಯವರು ಇರುವಥರವೇ ಇರ್ತೀನಿ. ನನಗೆ ಯಾವ ಹೆಚ್ಚಿನ ಸೌಲಭ್ಯವೂ ಬೇಡ..." ಲಕ್ಷ್ಮಿದೇವಮ್ಮ ಹೊರಟು ಹೋಗಿದ್ದಳು.

"ಅಪ್ಪಾ... ಅಮ್ಮನ ಆರೋಗ್ಯ ಏನಾದ್ರೂ ಏರುಪೇರು ಆಗಿದೆಯಾ? ಸರಿಯಾದ ಡಾಕ್ಟರಿಗೆ ತೋರಿಸಿ" ಚಂದ್ರು ಕಳಕಳಿಯಿಂದ ಹೇಳಿದ.

"ಇಲ್ಲ... ಇನ್ಮುಂದೆ ಅವಳ ಆರೋಗ್ಯ ಸರಿ ಹೋಗುತ್ತೆ ಚಿಂತಿಸಬೇಡ" ಎಂದ ಮುಗುಳ್ನಗುತ್ತಾ.

"ಮಂಗಳ ಅಪ್ಪ ಏನು ಹೇಳ್ತಿದಾರೆ? ಅವರಿಗೆ ಹುಶಾರಿರಲಿಲ್ವಾ...?"

"ಒಂದೆರಡು ದಿನ ಜ್ವರ ಇತ್ತು... ಅಷ್ಟೇ..."

"ಜ್ವರಕ್ಕೆಲ್ಲ ಹೆದರುವವರಲ್ಲ ಅವರು."

"ಹೌದು... ಅವಳು ಜ್ವರಕ್ಕೆ ಹೆದುರವವಳಲ್ಲ... ಆದರೆ ತನಗೆ ಬಿದ್ದ ಒಂದು ಕನಸಿಗೆ ಹೆದರಿರಬಹುದು. ಪಾಪಪ್ರಜ್ಞೆ ಕಾಡಿರಬಹುದು. ಆದರೂ ಸ್ವಾಭಿಮಾನ ಹೆಚ್ಚು

ಆದರೆ ಇದರಿಂದ, ಇವಳ ನಿರ್ಧಾರದಿಂದ ನನಗೆ ಸಮಾಧಾನವಾಗಿದೆ... ನನಗೆ ನನ್ನ ಮೊಮ್ಮಕ್ಕಳ ಜೊತೆ ಆಡುವ ಅವಕಾಶ ಸಿಗ್ತಾ ಇದೆ..." ಪಂಕಜ ನಾಚಿದಳು.ಅವಳ ಸ್ವಭಾವ ನಿಮ್ಮಿಬ್ಬರಿಗೂ ಹೊಸದಲ್ಲ... ನಿಮ್ಮಗಳ ಮನಸ್ಸಿಗೆ ಬೇಸರವಾಗುವಂಥ ಪ್ರಸಂಗಗಳು ಎದುರಾಗಬಹುದು. ನನಗೋಸ್ಕರ, ನೀವು ಸಹಿಸಿಕೊಳ್ಳಿ.... ವಠಾರದವರೆಲ್ಲಾ ನಿಮ್ಮ ಕಡೆಗೆ ಇದಾರೆ.... ಆದರೆ ಮಂಗಳಂಗೆ ಇನ್ನು ಮುಂದೆ ಸ್ವಲ್ಪ ಕಷ್ಟ... ನಾಲ್ಕು ನಾಲ್ಕು ಮನೆಗಳಲ್ಲಿ ಓಡಾಡ್ಬೇಕು...." ಮಂಗಳ ನಸುನಕ್ಕಳು.... ಪಂಕಜಳ ಕೈ ಹಿಡಿದಳು.

"ಟೀಚರ್.... ನಾನು ಮಧ್ಯಸ್ಥಿಕೆ ವಹಿಸಿದೀನಿ... ದಯವಿಟ್ಟು ಕ್ಷಮಿಸಿ"

"ಯಾರನ್ನು ಆತ್ಮೀಯರಂತೆ ಕಾಣುತ್ತಿರಲಿಲ್ಲ.. ಅದ್ಹೇಗೆ ನೀವು ಅವರಿಗೆ ಹತ್ತಿರವಾದಿರಿ? ಅದೇ ನನಗೆ ಆಶ್ಚರ್ಯವಾಗ್ತಿದೆ."

"ಹೇಳಿದ್ನಲ್ಲ... ಈ ಸಾರಿಯ ದಸರಾ ಹಬ್ಬದ ವಿಶೇಷ ಇದೇ ದೇವಿ ಪಾರಾಯಣ ಓದುತ್ತಿದ್ದಳು. ದೇವಿ ಕನಸಿನಲ್ಲಿ ಬಂದಳು ಅಪ್ಪಣೆ ಕೊಡಿಸಿದಳು. ಇವಳು ಇದನ್ನೆಲ್ಲ ಕಾರ್ಯಗತ ಮಾಡಿದಳು." ಎಂದು ಕನಸನ್ನು ವಿವರಿಸಿದ.

"ನೀವು ಇದನ್ನೆಲ್ಲ ನಂಬ್ತೀರಾ ಅಪ್ಪಾ..." ಈ ನಾಟಕ ಎಲ್ಲಾ ಬೇಕಾಗಿತ್ತಾ?"

"ಹೇಗೆ ಹೇಳಲಿ ಚಂದ್ರು?.... ಆದರೆ ಒಂದನ್ನು ಒಪ್ಕೋತೀನಿ. ಇವಳಿಗೆ ಇಂಥಾ ಆರೋಗ್ಯಕರ ಕನಸುಗಳು ಬೀಳಲಿ. ದೇವಿ ಮತ್ತೆ ಮತ್ತೆ ಪ್ರೇರಣೆ ನೀಡಲಿ ಅಂತ ಪ್ರಾರ್ಥಿಸ್ತೀನಿ" ಚಂದ್ರು ಪೆಚ್ಚುನಗೆಯನ್ನು ನಕ್ಕ. "ಎಲ್ಲರೂ ಆಡೋದು ನಾಟಕಾನೇ ಅಲ್ವಾ ಚಂದ್ರೂ.... ನಾವು ನಾಟಕದ ಪಾತ್ರಧಾರಿಗಳು. ಸೂತ್ರಧಾರನೇ ಬೇರೆ...." ಗೊಂದಲವನ್ನು ಕಡಿಮೆ ಮಾಡುವಂತೆ ಮಾತನಾಡಿದ.

"ನಾನು ಹೋಗಿ ಎಲ್ಲರಿಗೂ ಕಾಫಿ ಮಾಡ್ಕೊಂಡು ತಿನ್ನೋಕೆ ಏನನ್ನಾದ್ರೂ ತರ್ತೀನಿ...' ಮಂಗಳ ಹೊರಟಳು.

"ನಾನೂ ನಿಮ್ಮ ಜತೇಲಿ ಬರ್ತೀನಿ. ಎಲ್ಲರನ್ನು ನೋಡಿದ ಹಾಗಾಗುತ್ತೆ..." ಪಂಕಜನೂ ಅವಳೊಂದಿಗೆ ಹೊರಟಳು. ಚಂದ್ರು ಗೋಪಾಲಯ್ಯ ಕುಳಿತರು. ಗೋಪಾಲಯ್ಯ ವಠಾರದ ವಿಷಯವನ್ನೆಲ್ಲಾ ಹೇಳಿದ. ಚಂದ್ರು ಸುಮ್ಮನೇ ಕೇಳಿಸಿಕೊಂಡ.

"ಅಪ್ಪಾ... ಅಮ್ಮಾ ತಮ್ಮ ಸ್ವಾರ್ಥಕ್ಕಾಗಿ ನಮ್ಮನ್ನು ಮತ್ತೆ ಕರೆಸಿಕೊಂಡಿದಾರೆ. ಆದರೆ ಪಂಕಜನ್ನ ನಿರಾದರಣೆ ಮಾಡಿದರೆ, ಸರಿಯಾಗುತ್ತೇನಪ್ಪಾ... ನಂಗೆ ಆತಂಕ ವಾಗುತ್ತೆ ಇಷ್ಟವಾಗುಲ್ಲ. "ಎಂದ.

"ಹಾಗೇನೂ ಆಗುಲ್ಲ. ಮಂಗಳ ಎಲ್ಲಾ ಸರಿ ಮಾಡ್ತಾಳೆ... ಈಗಲೂ ಅಷ್ಟೇ ಇಷ್ಟಕ್ಕೆಲ್ಲ ಆ ಹುಡುಗಿಯೇ ಕಾರಣ..." ಪಾಪ ಆ ಹುಡುಗಿಯ ಜೀವನದಲ್ಲೂ ಏನೇನೋ ನಡೆದು ಹೋಯ್ತು... ಆದರೂ ವಠಾರದಲ್ಲಿ ಗಲಗಲಿ ಅಂತ ಓಡಾಡ್ಕೊಂಡು

ಇದಾಳೆ... ನೋಡಿದ್ರೆ ಸಂತೋಷ ಆಗುತ್ತೆ... ಪಂಕಜ ಇಲ್ಲಿದ್ರೆ ಇಬ್ಬರೂ ಒಳ್ಳೆಯ ಸ್ನೇಹಿತೆಯರಾಗಿರ್ತಾರೆ..."

ಅಷ್ಟರಲ್ಲಿ ಸ್ನೇಹಿತೆಯರು ಕಾಫಿ ತಿಂಡಿಯೊಂದಿಗೆ ಹಿಂತಿರುಗಿದ್ದರು. ಕಾಫಿ ಕುಡಿದು ಮುಗಿಸಿ, ಗೋಪಾಲಯ್ಯ ಮಂಗಳನನ್ನು ಎಬ್ಬಿಸಿದ. "ಇವರಿಬ್ಬರೂ ವಿಶ್ರಾಂತಿ ತೆಗೆದು ಕೊಳ್ಳಲಿ... ಲಕ್ಷ್ಮಿ ಒಬ್ಬಳೇ ಏನು ಮಾಡ್ತಿದಾಳೋ ನಾನು ಹೋಗಿ ನೋಡ್ತೀನಿ... ನೀನೂ ಬರೋದಾದ್ರೆ ಬಾ..."

"ಇಲ್ಲ ಮಾವ ನಾನು ಮನೆಗೆ ಹೋಗ್ತೀನಿ .... ಕೆಲಸ ಇದೆ" ಎನ್ನುತ್ತಾ ತನ್ನ ಅತ್ತೆಯ ಮನೆಗೆ ಬಂದಳು. ಗೋಪಾಲಯ್ಯ ಮನೆಗೆ ಬಂದ ಅವನಿಗಾಗೀಯೇ ಕಾಯುತ್ತಿದ್ದವಳಂತೆ ಲಕ್ಷ್ಮಿ ಕೇಳಿದಳು.

"ಚಂದ್ರು ಇರೋಕೆ ಒಪ್ಕೊಂಡಿದಾನೆ ಅಲ್ವಾ?... ಹೇಳದೇ ಕೇಳದೇ ಹೋಗುಲ್ಲ ತಾನೇ..."

"ಹಾಗ್ಯಾಕೆ ಮಾಡ್ತಾನೆ? ಸಧ್ಯಕ್ಕಂತೂ ಇರ್ತಾನೆ... ಮಗು ಹುಟ್ಟುವವರೆಗಾದ್ರೂ ಇರ್ತಾನೆ..."

"ಮಗೂ ದೊಡ್ಡದಾಗೋವರ್ಗೂ ಅವರುಗಳು ಎಲ್ಲಿಗೂ ಹೋಗುವಂತಿಲ್ಲ. ಹಾಗೇ ನನಗೆ ಇನ್ನೊಂದು ಆಸೆ ಇದೆ..." "ಏನದು" ಎಂದು ಕೇಳಲು ಅಂಜಿದ.

"ಚಂದ್ರು ಹೆಂಡತಿಗೆ ಹೆಣ್ಣು ಮಗೂನೇ ಹುಟ್ಬೋದು... ಆ ಮಗುಗೆ ಬಾಲು ಜೊತೆ ಮದುವೆ ಮಾಡಿ, ಬಾಲೂನ ನಮ್ಮ ಮನೇಲೇ ಇಟ್ಕೋಳೋಣ...."

"ಗೋಪಾಲಯ್ಯ ಬೆಚ್ಚಿದ. ಇದೆಂಥಾ ಆಸೆ?.. ಈ ಪುನರಾವರ್ತನೆ ಬೇಕಾ? ... ಇವಳಿಗೆ ಆ ದೇವಿಯೇ ಆಸೆಗಳನ್ನು ಹುಟ್ಟಿಸುತ್ತಾಳೋ? ಅತವಾ ಇವಳೇ ದೇವಿಗೆ ತನ್ನ ಮನದಾಳದ ಆಸೆಯನ್ನು ತಿಳಿಸುತ್ತಾಳೋ.... ಈ ಮುಂದಾಲೋಚನೆ... ಸರಿಯೋ ತಪ್ಪೋ... ಇದನ್ನು ನನಗೆ ಹೇಳೋರ್‍ಯಾರು ?..." ತುಟಿ ಬಿಚ್ಚದೇ ಕುಳಿತ.

"ನಾನು ತುಳಸೀ ಪೂಜೆ ಮಾಡಿ ಬಂದು, ನಿಮಗೆ ತಿಂಡಿ ಮಾಡಿಕೊಡ್ತೀನಿ" ಎನ್ನುತ್ತ ಪೂಜಾ ಸಾಮಗ್ರಿಗಳನ್ನು ಹಿಡಿದು, ತುಳಸಿಯ ಸ್ತೋತ್ರವನ್ನು ಹೇಳಿಕೊಳ್ಳುತ್ತಾ ಹೊರಬಂದಳು. ಬಾಲು ಅವಳನ್ನು ಕಂಡು ಜಗುಲಿಯಿಂದ ಕೆಳಗಿಳಿದು ಹೊರಟ. ಮಂಗಳ ತಾನೂ ಬಂದು ಸೇರಿಕೊಂಡಳು, ಗಿಡಮರಗಳು ನಲಿದಾಡಿದವು... ಹಾಡಿದವು, ಎಂದಿನಂತೆ.



## ಶ್ರೀಮತಿ ಪದ್ಮಾ ಶ್ರೀಧರ್ ಪರಿಚಯ

ಶ್ರೀಮತಿ ಪದ್ಮಾಶ್ರೀಧರ್‌ರವರು ಕಾದಂಬರಿಯ ಕ್ಷೇತ್ರದಲ್ಲಿ ಪರಿಚಿತರು. ಕೌಟುಂಬಿಕ ಕಾದಂಬರಿಯ ಓದುಗರಿಗಾಗಿ, ಸಾಮಾಜಿಕ ಕಾದಂಬರಿಗಳನ್ನು ಬರೆದಿರುವರು. ವಾರಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಕಾದಂಬರಿಗಳು ಪ್ರಕಟಗೊಂಡಿವೆ. ಸುಮಾರು ೩೦ ಕಾದಂಬರಿಗಳನ್ನು ರಚಿಸಿರುವ ಪರಿಶ್ರಮ ಇವರದು.

**ಶ್ರೀಮತಿ ಪದ್ಮಾ ಶ್ರೀಧರ್**
**ಇವರ ೨೦೧೦ ಪ್ರಕಟನೆಗಳು**

೧. ನಿರೀಕ್ಷೆಯ ನೆರಳಲಿ– ಸಾಮಾಜಿಕ ಕಾದಂಬರಿ
೩೪೪ ಪುಟಗಳು– ರೂ. ೨೦೦/–

೨. ಬರೀ ನಾಟಕ ಅಲ್ಲ– ಕಥಾ ಸಂಕಲನ
೩೨೪ ಪುಟಗಳು– ರೂ. ೧೬೦/–

**೨೦೧೧ ಪ್ರಕಟಣೆಗಳು**

೧. ಮುಸ್ಸಂಜೆಯ ಮುನ್ನ–ಸಾಮಾಜಿಕ ಕಾದಂಬರಿ
೩೬೮ ಪುಟಗಳು– ರೂ. ೨೪೦/–

೨. ಪುನರಾವರ್ತನ– ಸಾಮಾಜಿಕ ಕಾದಂಬರಿ
೩೭೬ ಪುಟಗಳು– ರೂ. ೨೪೦/–

೩. ಬಿಂಬಗಳು ಸರಿದಾಗ– ಸಾಮಾಜಿಕ ಕಾದಂಬರಿ
೩೨೦ ಪುಟಗಳು– ರೂ. ೨೦೦/–

೨. ಪರಂಪರೆ– ನಾಟಕಗಳ ಸಂಗ್ರಹ
–ಕುಟುಂಬದ ೩ ತಲೆಮಾರಿನ ಲೇಖಕರೊಡನೆ
–೧೪೪ ಪುಟಗಳು– ರೂ. ೮೦/–

# ಓದುಗರ ಅಭಿಪ್ರಾಯಗಳು

## 'ಬಿಂಬಗಳು ಸರಿದಾಗ'

* **ಬಿಂಬಗಳು ಸರಿದಾಗ** ಒಂದು ಅತ್ಯುತ್ತಮ ಧಾರಾವಾಹಿಯಾಗಿತ್ತು. ಪ್ರಾರಂಭದಲ್ಲೇ ಆಸಕ್ತಿಯನ್ನು ಕೆರಳಿಸುತ್ತಾ ವಾರದಿಂದ ವಾರಕ್ಕೆ ಕುತೂಹಲ ಹೆಚ್ಚಿಸುತ್ತಾ ಓದುಗರನ್ನು ಆರ್ಕಸಿತು. ಕಥೆ ಇನ್ನಷ್ಟು ವಿಸ್ತರಿಸಿದ್ದರೆ ಚೆನ್ನಾಗಿತ್ತು. ಒಟ್ಟಾರೆ ಪದ್ಮ ಶ್ರೀಧರ್ ಅವರ ಧಾರಾವಾಹಿ ಉತ್ತಮವಾಗಿತ್ತು.

**– ಶ್ರೀಮತಿ ಉಷಾ, ಕು. ಶ್ವೇತಾ, ಸತ್ಯನಾರಾಯಣ, ಶ್ಯಾಮಲಾದೇವಿ,**
ಬೆಂಗಳೂರು

* ಪದ್ಮ ಶ್ರೀಧರ್ ಅವರ **ಬಿಂಬಗಳು ಸರಿದಾಗ** ಧಾರಾವಾಹಿ ೩೭ ಕಂತುಗಳಲ್ಲಿ ಪ್ರಕಟವಾಗಿ ಓದುಗರನ್ನು ತುಂಬಾ ಆರ್ಕಸಿತು. ಮಹೇಶ ಸುಜಿಯನ್ನು ಮದುವೆಯಾಗಿದ್ದು ಓದಿ ಸಂತೋಷವಾಯಿತು.

**– ಜಿ.ಎಂ. ಫರ್ನಾಂಡಿಸ್** ಅಥಣಿ

* ಮಂಗಳದಲ್ಲಿ ಹರಿದು ಬಂದ ಪದ್ಮ ಶ್ರೀಧರ್ ಅವರ **ಬಿಂಬಗಳು ಸರಿದಾಗ** ಧಾರಾವಾಹಿ ಅತ್ಯುತ್ತಮವಾಗಿತ್ತು. ಮಂಗಳ ಕೈಗೆ ಸಿಕ್ಕಿದೊಡನೆ ಮೊದಲು ಈ ಧಾರಾವಾಹಿ ಓದುತ್ತಿದ್ದೆ. ಕೊನೆಗೂ ಸುಜಯ ಮಹೇಶನ ಮದುವೆ ನೆರವೇರಿದ್ದು ತುಂಬಾ ಖುಯಾಬಿತು. ಇದು ವಾಸ್ತವಕ್ಕೆ ಹತ್ತಿರವಾದ ಕಥೆ. ಮುಗಿಯಿತು ಎಂದು ತಿಳಿದಾಗ ಬೇಸರವಾಯಿತು. ಇಂತಹ ಉತ್ತಮ ಧಾರಾವಾಹಿಗಳು ಮಂಗಳದಲ್ಲಿ ಹೆಚ್ಚಾಗಿ ಪ್ರಕಟವಾಗಲಿ.

**– ಸುಹದಾ, ಪಾಣೆ,** ಮಂಗಳೂರು

* ಪದ್ಮ ಶ್ರೀಧರ್ ಅವರ ಧಾರಾವಾಹಿ **ಬಿಂಬಗಳು ಸರಿದಾಗ** ತುಂಬಾ ಚೆನ್ನಾಗಿ ಮೂಡಿ ಬಂದಿದೆ. ಸುಜಯ ಮತ್ತು ಮಹೇಶ್ ಮದುವೆಯಾಗಿ ಮಹೇಶನ ಸಂಬಂಧಗಳು ಉಳಿದದ್ದು ಓದಿ ಖು ಉತು.

**– ಲೋಕೇಶ್ ಆಚಾರ್ಯ,** ಇಂದ್ರಾಜೆ.



ಆಡುವ ಕಂದನೊಂದು ಮನೆಯಂಗಳದಿ ಇರಲಿ ಎನ್ನುವುದು ಲಕ್ಷ್ಮೀದೇವಮ್ಮನ ಮನದಾಳದ ಬಯಕೆ. ಆದರೆ ಆ ಆಸೆಯನ್ನು ಬಾಯಿಬಿಟ್ಟು ಹೇಳಲಾಗದಷ್ಟೇ ಸ್ವಾಭಿಮಾನ, ದುರಭಿಮಾನದಿಂದ ತನ್ನ ನೇರವಾದ ಮಾತುಗಳಿಂದ ಇತರರನ್ನು ನೋಯಿಸಲು ಹಿಂಜರಿಯುತ್ತಿರಲಿಲ್ಲ. ಸಂಪ್ರದಾಯಸ್ಥಳಾದ ಈಕೆ ಪೂಜೆ ಪುನಸ್ಕಾರಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದರೂ, ಕೆಲವೊಮ್ಮೆ ಅಹಿತಕರ ಸನ್ನಿವೇಶಗಳು ಆಕೆಯನ್ನು ಕೆರಳಿಸುತ್ತಿದ್ದವು. ವಠಾರದ ಆರು ಮನೆಗಳ ಮಾಲೀಕಳಾಗಿದ್ದು, ಸುತ್ತಮುತ್ತ ಹತ್ತಾರು ಹೂ ಕಾಯಿಗಳನ್ನು ಬಿಡುವ ಗಿಡಗಳಿದ್ದರೂ, ಆಕೆ ಒಳಗೊಳಗೇ ತಾನು ಒಂಟಿ ಎಂದು ಕೊರಗುತ್ತಿದ್ದಳು. ಸ್ಫುರದ್ರೂಪಿಯಾದ ಆಕೆ, ನೋಡಿದವರು ಗೌರವ ಹುಟ್ಟಿಸುವಂತಿದ್ದಳು. ಆದರೆ ಹೃದಯವಂತಿಕೆ ಇರಲಿಲ್ಲ. ಜಿಪುಣತನದಿಂದ, ಒರಟು ಮಾತುಗಳಿಂದ ಎಲ್ಲರನ್ನೂ ದೂರವಿಡುತ್ತಿದ್ದ ಹೆಂಗಸು. ಎಲ್ಲರೂ ತನಗೆ ಬಾಗಿ ನಡೆಯಲಿ ಎಂದು ಬಯಸುವವಳು. ಗಂಡ ಗೋಪಾಲರಾಯ ಹೆಂಡತಿಯನ್ನು ಅನುಸರಿಸಿಕೊಂಡು ಹೋಗುವವನು. ಮಗ ಚಂದ್ರಮೌಳಿ, ದೂರವಾಗಿಯೇ ಇದ್ದವನು. ತಾಯಿ ಮಗನ ಅನುಬಂಧ ಬೆಳೆಯದೇ ಅಂತರ ಹೆಚ್ಚಾಗಿಯೇ ಹೋಯಿತು. ಮುಂದುವರೆದು, ಕಾದಂಬರಿಯ ಮುಕ್ತಾಯದವರೆಗೂ, ಹಾಗೆಯೇ ಉಳಿಯಿತೇ?

ಇದು ಕಾದಂಬರಿಯ ಕಥಾವಸ್ತು. ವಠಾರದ ಉಳಿದ ಮನೆಗಳಲ್ಲಿ ವಾಸವಾಗಿ ದ್ದವರು, ಕಾದಂಬರಿಯಲ್ಲಿ ಪೂರಕ ಪಾತ್ರಗಳಾಗಿ ರಚಿತಗೊಂಡಿದ್ದಾರೆ. ಕಾದಂಬರಿಯ ಮುಖ್ಯ ಪಾತ್ರ ಲಕ್ಷ್ಮೀದೇವಮ್ಮನೇ?

